C·120-4729

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

೨

## ಶ್ರೀಧರ್ಮಾರಣ್ಯಮಾಹಾತ್ಮ್ಯೆ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ




ಬೆಂಗಳೂರು ಪ್ರೆಸ್

...ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೭

Q23:226
33H6·12

CC-0. Jangamwadi Math Collection. Digitized by eGangotri

# ಶ್ರೀಸ್ಕಾಂದಮಹಾಪುರಾಣಂ

ಶ್ರೀಧರ್ಮಾರಣ್ಯಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

CC-0. Jangamwadi Math Collection. Digitized by eGangotri

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

ಬ್ರಹ್ಮಖಂಡ

೨

## ಶ್ರೀಧರ್ಮಾರಣ್ಯಮಾಹಾತ್ಮ್ಯ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ


DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೭

CC-0. Jangamwadi Math Collection. Digitized by eGangotri

# ಅರಿಕೆ

ಈ ಹನ್ನೆರಡನೆಯ ಸಂಪುಟದಲ್ಲಿ ಶ್ರೀಸ್ಕಾಂದಮಹಾಪುರಾಣದ ತೃತೀಯ ಮೂಲಖಂಡವಾದ ಬ್ರಹ್ಮಖಂಡದ ಎರಡನೆಯ ಭಾಗವಾದ ಧರ್ಮಾರಣ್ಯ ಮಾಹಾತ್ಮ್ಯವು ಉಪಕ್ರಮವಾಗಿ ಮುಗಿದಿರುತ್ತದೆ.

ಈ ಬ್ರಹ್ಮಖಂಡದ ಅನುವಾದಕಾರ್ಯದಲ್ಲಿ ನನ್ನ ಮಾನ್ಯಮಿತ್ರರಾದ ಸಾಹಿತ್ಯವಿದ್ವಾನ್ .ಶ್ರೀ॥ ಕೆ. ನರಸಿಂಹಾಚಾರ್ಯರವರು ಸಹಭಾಗಿಗಳು; ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರ ರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಽಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸ ಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ


DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BE NARES CITY

CC-0. Jangamwadi Math Collection. Digitized by eGangotri

# ವಿಷಯಾನುಕ್ರಮಣಿಕೆ



CC-0. Jangamwadi Math Collection. Digitized by eGangotri

ಪುಟ ಸಂಖ್ಯೆ



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

CC-0. Jangamwadi Math Collection. Digitized by eGangotri

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಧರ್ಮಾರಣ್ಯಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಪ್ರಥಮೋಽಧ್ಯಾಯಃ

ಯುಧಿಷ್ಠಿರ ಪ್ರಶ್ನವರ್ಣನಂ

ನೈಮಿಷೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ ।
ಸತ್ರಂ ಸ್ವರ್ಗಾಯ ಲೋಕಾಯ ಸಹಸ್ರಸಮಮಾಸತ ॥ ೧ ॥
ಏಕದಾ ಸೂತಮಾಯಾಂತಂ ದೃಷ್ಟ್ವಾ ತಂ ಶೌನಕಾದಯಃ ।
ಪರಂ ಹರ್ಷಂ ಸಮಾವಿಷ್ಟಾಃ ಪಪುರ್ನೇತ್ರೈಃ ಸುಚೇತಸಾ ।
ಚಿತ್ರಾಃ ಶ್ರೋತುಂ ಕಥಾಸ್ತತ್ರ ಪರಿವವ್ರುಸ್ತಪಸ್ವಿನಃ ॥ ೨ ॥

---

### ಕನ್ನಡದ ಅನುವಾದ

ಯುಧಿಷ್ಠಿರನ ಪ್ರಶ್ನವರ್ಣನೆ

೧. ಪರಮಾತ್ಮನ ಸಾನ್ನಿಧ್ಯದಿಂದ ಪವಿತ್ರಕ್ಷೇತ್ರವೆನಿಸಿದ ನೈಮಿಷಾರಣ್ಯದಲ್ಲಿ ಶೌನಕರೇ ಮೊದಲಾದ ಮುನಿಗಳು ಶಾಶ್ವತವಾದ ಮೋಕ್ಷಸುಖಕ್ಕಾಗಿ ಒಂದು ಸಾವಿರ ವರ್ಷ ನೆರವೇರಿಸುವ, ಅನೇಕ ಋತ್ವಿಜರು ಮಾಡುವ ಸತ್ರವೆಂಬ ಕರ್ಮವನ್ನುದ್ದೇಶಿಸಿ ಕುಳಿತರು.

೨. ಒಂದು ದಿನ ಅವರು ಬರುತ್ತಿರುವ ಸೂತಪುರಾಣಿಕನನ್ನು ಕಣ್ದಣಿವಂತೆ ನೋಡಿ ಪರಮಾನಂದಗೊಂಡು ಆ ಪುರಾಣಿಕನಿಂದ ಅದ್ಭುತವಾದ ಕಥೆಗಳನ್ನು ಒಮ್ಮನಸ್ಸಿನಿಂದ ಕೇಳಲು ಸುತ್ತುವರಿದರು.

CC-0. Jangamwadi Math Collection. Digitized by eGangotri

ಅಥ ತೇಷೂಪವಿಷ್ಟೇಷು ತಪಸ್ವಿಷು ಮಹಾತ್ಮಸು ।
ನಿರ್ದಿಷ್ಟಮಾಸನಂ ಭೇಜೇ ವಿನಯಾಲ್ಲೋಮಹರ್ಷಣಿಃ ॥ ೩ ॥
ಸುಖಾಸೀನಂ ಚ ತಂ ದೃಷ್ಟ್ವಾ ವಿಶ್ರಾಂತಮುಪಲಕ್ಷ್ಯ ಚ ।
ಅಥಾಽಪೃಚ್ಛಂಸ್ತ ಋಷಯಃ ಕಾಶ್ಚಿತ್ಪ್ರಾಸ್ತಾವಿಕೀಃ ಕಥಾಃ ॥ ೪ ॥
ಪುರಾಣಮಖಿಲಂ ತಾತ ಪುರಾ ತೇಽಧೀತವಾನ್ಪಿತಾ ।
ಕಚ್ಚಿತ್ತ್ವಯಾಽಪಿ ತತ್ಸರ್ವಂ ಅಧೀತಂ ಲೋಮಹರ್ಷಣೇ ॥ ೫ ॥
ಕಥಯಸ್ವ ಕಥಾಂ ಸೂತ ಪುಣ್ಯಾಂ ಪಾಪನಿಷೂದಿನೀಂ ।
ಶ್ರುತ್ವಾ ಯಾಂ ಯಾತಿ ವಿಲಯಂ ಪಾಪಂ ಜನ್ಮಶತೋದ್ಭವಂ ॥ ೬ ॥

ಸೂತ ಉವಾಚ :—

ಶ್ರೀಭಾರತ್ಯಂಘ್ರಿಯುಗಲಂ ಗಣನಾಥಪದದ್ವಯಂ ।
ಸರ್ವೇಷಾಂ ಚೈವ ದೇವಾನಾಂ ನಮಸ್ಕೃತ್ಯ ವದಾಮ್ಯಹಂ ॥ ೭ ॥
ಶಕ್ತೀಂಶ್ಚೈವ ವಸೂಂಶ್ಚೈವ ಗ್ರಹಾನ್ಯಜ್ಞಾಧಿದೇವತಾಃ ।
ನಮಸ್ಕೃತ್ಯ ಶುಭಾನ್ವಿಪ್ರಾನ್ಸವಿಮುಖ್ಯಾಂಶ್ಚ ಸರ್ವಶಃ ॥ ೮ ॥
ಅಭೀಷ್ಟದೇವತಾಶ್ಚೈವ ಪ್ರಣಮ್ಯ ಗುರುಸತ್ತಮಂ ।
ನಮಸ್ಕೃತ್ಯ ಶುಭಾನ್ದೇವಾನ್ರಾಮಾದೀಂಶ್ಚ ವಿಶೇಷತಃ ॥ ೯ ॥

---

೩. ಮಹಾತ್ಮರಾದ ಆ ತಪೋಧನರು ಕುಳಿತುಕೊಳ್ಳಲು ವಿನಯದಿಂದ ಸೂತನು ತನಗೆ ಸಿದ್ಧವಾದ ಆಸನವನ್ನು ಮಂಡಿಸಿದನು.

೪. ಬಳಿಕ ಆ ಮಹರ್ಷಿಗಳು ಪೀಠವನ್ನಲಂಕರಿಸಿದ ಸೂತನನ್ನೀಕ್ಷಿಸಿ ಬೇರೆ ಯಾವ ಅಡ್ಡಿಗಳೂ ಇಲ್ಲವೆಂಬುದನ್ನರಿತು ಪ್ರಸ್ತಾವಕ್ರಮದಿಂದ ಕೆಲವು ಕಥೆಗಳನ್ನು ಕೇಳಿದರು.

೫. ಅಯ್ಯಾ! ನಿಮ್ಮ ತಂದೆಯವರು ಎಲ್ಲ ಪುರಾಣಗಳನ್ನು ಓದಿರುವರು. ನೀನೂ ಅವೆಲ್ಲವನ್ನೂ ಓದಿರುವೆಯಲ್ಲವೆ?

೬. ಸೂತ! ಅನೇಕ ಜನ್ಮಗಳಿಂದುಂಟಾದ ಪಾಪಗಳನ್ನು ನೀಗಿಸುವ ಪವಿತ್ರವಾದ ಕಥೆಯನ್ನು ಹೇಳು.

೭. ಸೂತನು ಹೇಳಿದನು :— ಮುನಿವರ್ಯರೆ! ಶ್ರೀಭಾರತೀದೇವಿಯ, ಗಣೇಶನ ಮತ್ತು ಸಮಸ್ತ ದಿವಿಜರ ಅಡಿಗಳಿಗೆರಗಿ ಹೇಳುತ್ತೇನೆ.

೮–೧೦. ಶಕ್ತಿದೇವತೆಗಳನ್ನೂ, ಅಷ್ಟವಸುಗಳನ್ನೂ, ನವಗ್ರಹಗಳನ್ನೂ, ಯಜ್ಞದೇವತೆಗಳನ್ನೂ, ಶ್ರೋತ್ರಿಯರಾದ ಬ್ರಾಹ್ಮಣರನ್ನೂ, ಸಕಲ ಜ್ಞಾನಿ ವರೇಣ್ಯರನ್ನೂ, ಇಷ್ಟದೇವತೆಗಳನ್ನೂ, ಗುರುವರ್ಯರನ್ನೂ, ಯಾರ ನಾಮ ಸ್ಮರಣೆಯಿಂದ ತ್ರಿವಿಧವಾದ ಪಾಪವು ಕಳೆಯುವುದೋ ಅಂತಹ ಪವಿತ್ರರಾದ ರಾಮಾದಿ ದೇವತೆಗಳನ್ನೂ, ಸರ್ವನಿಯಾಮಕನಾದ ಧರ್ಮರಾಜನನ್ನೂ ಭಕ್ತಿ

CC-0. Jangamwadi Math Collection. Digitized by eGangotri

ಯಾನ್ಸ್ಮೃತ್ವಾ ತ್ರಿವಿಧೈಃ ಪಾಪೈರ್ಮುಚ್ಯತೇ ನಾಽತ್ರ ಸಂಶಯಃ ।
ತೇಷಾಂ ಪ್ರಸಾದಾದ್ವಕ್ಷ್ಯೇಽಹಂ ತೀರ್ಥಾನಾಂ ಫಲಮುತ್ತಮಂ ।
ಸರ್ವೇಷಾಂ ಚ ನಿಯಂತಾರಂ ಧರ್ಮಾತ್ಮಾನಂ ಪ್ರಣಮ್ಯ ಚ ॥ ೧೦ ॥
ಧರ್ಮಾರಣ್ಯಪತಿಸ್ತ್ರಿವಿಷ್ಟಪಪತಿರ್ನಿತ್ಯಂ ಭವಾನೀಪತಿಃ
ಪಾಯಾದ್ವಃ ಸ್ಥಿರಭೋಗಯೋಗಸುಲಭೋ ದೇವಃ ಸ ಧರ್ಮೇಶ್ವರಃ ।
ಸರ್ವೇಷಾಂ ಹೃದಯಾನಿ ಜೀವಕಲಯಾ ವ್ಯಾಪ್ಯ ಸ್ಥಿತಃ ಸರ್ವದಾ
ಧ್ಯಾತ್ವಾ ಯಂ ನ ಪುನರ್ವಿಶಂತಿ ಮನುಜಾಃ ಸಂಸಾರಕಾರಾಗೃಹಂ ॥೧೧॥
ಏಕದಾ ತು ಸ ಧರ್ಮೋ ವೈ ಜಗಾಮ ಬ್ರಹ್ಮಸಂಸದಿ ।
ತಾಂ ಸಭಾಂ ಸ ಸಮಾಲೋಕ್ಯ ಜ್ಞಾನನಿಷ್ಠೋಽಭವತ್ತದಾ ॥ ೧೨ ॥
ದೇವೈರ್ಮುನಿವರೈಃ ಕ್ರಾಂತಾಂ ಸಭಾಮಾಲೋಕ್ಯ ವಿಸ್ಮಿತಃ ।
ದೇವೈರ್ಯಕ್ಷೈಸ್ತಥಾ ನಾಗೈಃ ಪನ್ನಗೈಶ್ಚ ತಥಾಽಸುರೈಃ ॥ ೧೩ ॥
ಋಷಿಭಿಃ ಸಿದ್ಧಗಂಧರ್ವೈಃ ಸಮಾಕ್ರಾಂತೋಚಿತಾಸನಾ ।
ಸಸುಖಾ ಸಾ ಸಭಾ ಬ್ರಹ್ಮನ್ನಶೀತಾ ನ ಚ ಘರ್ಮದಾ ॥ ೧೪ ॥
ನ ಕ್ಷುಧಂ ನ ಪಿಪಾಸಾಂ ಚ ನ ಗ್ಲಾನಿಂ ಪ್ರಾಪ್ನುವಂತ್ಯುತ ।
ನಾನಾರೂಪೈರಿವ ಕೃತಾ ಮಣಿಭಿಃ ಸಾ ಸಭಾ ವರೈಃ ॥ ೧೫ ॥

---

ಯಿಂದ ಮಣಿದು ಅವರ ಅನುಗ್ರಹದಿಂದ ತೀರ್ಥಗಳ ಉತ್ಕೃಷ್ಟವಾದ ಫಲವನ್ನು ಹೇಳುವೆನು.

೧೧. ಯಾವ ಪರಶಿವನನ್ನು ಧ್ಯಾನಗೈದು ಮಾನವರು ಸಂಸಾರವೆಂಬ ಸೆರೆಮನೆಯನ್ನು ತಿರುಗಿ ಪ್ರವೇಶಿಸುವುದಿಲ್ಲವೊ, ಅಂತಹ ಧರ್ಮವೆಂಬ ಕಾಡಿಗೆ ಧೊರೆಯೂ, ಸ್ವರ್ಗದರಸೂ, ಭವಾನೀವಲ್ಲಭನೂ, ದೃಢವಾದ ಯೋಗಾಭ್ಯಾಸ ದಿಂದ ಹೊಂದಲು ಶಕ್ಯನೂ, ಎಲ್ಲರ ಹೃದಯವನ್ನೂ ಜೀವಾಂಶದಿಂದ ವ್ಯಾಪಿಸಿರು ವವನೂ ಆಗಿರುವ ಆ ಮಹಾದೇವನು ನಿಮ್ಮೆಲ್ಲರನ್ನೂ ಪೊರೆಯಲಿ.

೧೨–೧೩. ಒಂದಾನೊಂದು ವೇಳೆ ಆ ಯಮಧರ್ಮನು ಬ್ರಹ್ಮಸಭೆಗೆ ಹೋಗಿ ದೇವತೆಗಳಿಂದಲೂ, ಮುನಿಶ್ರೇಷ್ಠರಿಂದಲೂ, ಯಕ್ಷರಿಂದಲೂ, ಮನುಷ್ಯರಂತಿರುವ ಸರ್ಪಗಳಿಂದಲೂ, ಸಾಮಾನ್ಯ ಸರ್ಪಗಳಿಂದಲೂ, ಅಸುರ ರಿಂದಲೂ ಆಕ್ರಾಂತವಾಗಿರುವ ಆ ಸಭೆಯನ್ನು ನೋಡಿ ಆಶ್ಚರ್ಯಗೊಂಡು ಜ್ಞಾನನಿರತನಾದನು.

೧೪. ಮುನಿಗಳೂ, ಸಿದ್ಧರೂ, ಗಂಧರ್ವರೂ ಕುಳಿತಿರುವ ಆ ಸಭೆಯು ತಣ್ಣಗೂ ಬಿಸಿಯೂ ಆಗಿರದೆ ಸುಖಕರವಾಗಿದ್ದಿತು.

೧೫. ನಾನಾ ವಿಧವಾದ ಉತ್ತಮ ರತ್ನಗಳಿಂದ ನಿರ್ಮಿತವಾದಂತಿರುವ

CC-0. Jangamwadi Math Collection. Digitized by eGangotri

ಸ್ತಂಭೈಶ್ಚ ವಿಧೃತಾ ಸಾ ತು ಶಾಶ್ವತೀ ನ ಚ ಸಕ್ಷಯಾ ।
ದಿವ್ಯೈರ್ನಾನಾವಿಧೈರ್ಭಾವೈರ್ಭಾಸದ್ಭಿರಮಿತಪ್ರಭಾ ॥ ೧೬ ॥
ಅತಿಚಂದ್ರಂ ಚ ಸೂರ್ಯಂ ಚ ಶಿಖಿನಂ ಚ ಸ್ವಯಂಪ್ರಭಾ ।
ದೀಪ್ಯತೇ ನಾಕಪೃಷ್ಠಸ್ಥಾ ಭರ್ತ್ಸಯಂತೀವ ಭಾಸ್ಕರಂ ॥ ೧೭ ॥
ತಸ್ಯಾಂ ಸ ಭಗವಾಂಭಾಸ್ತಿ ವಿವಿಧಾನ್ದೇವಮಾನುಷಾನ್ ।
ಸ್ವಯಮೇಕೋಽನಿಶಂ ಬ್ರಹ್ಮಾ ಸರ್ವಲೋಕಪಿತಾಮಹಃ ॥ ೧೮ ॥
ಉಪತಿಷ್ಠಂತಿ ಚಾಽಪ್ಯೇನಂ ಪ್ರಜಾನಾಂ ಪತಯಃ ಪ್ರಭುಂ ।
ದಕ್ಷಃ ಪ್ರಚೇತಾಃ ಪುಲಹೋ ಮರೀಚಿಃ ಕಶ್ಯಪಃ ಪ್ರಭುಃ ॥ ೧೯ ॥
ಭೃಗುರತ್ರಿರ್ವಸಿಷ್ಠಶ್ಚ ಗೌತಮೋಽಥ ತಥಾಂಗಿರಾಃ ।
ಪುಲಸ್ತ್ಯಶ್ಚ ಕ್ರತುಶ್ಚೈವ ಪ್ರಹ್ಲಾದಃ ಕರ್ದಮಸ್ತಥಾ ॥ ೨೦ ॥
ಅಥರ್ವಾಂಗಿರಸಶ್ಚೈವ ವಾಲಖಿಲ್ಯಾ ಮರೀಚಿಪಾಃ ।
ಮನೋಽಂತರಿಕ್ಷಂ ವಿದ್ಯಾಶ್ಚ ವಾಯುಸ್ತೇಜೋ ಜಲಂ ಮಹೀ ॥ ೨೧ ॥
ಶಬ್ದಸ್ಪರ್ಶೌ ತಥಾ ರೂಪಂ ರಸೋ ಗಂಧಸ್ತಥೈವ ಚ ।
ಪ್ರಕೃತಿಶ್ಚ ವಿಕಾರಶ್ಚ ಸದಸತ್ಕಾರಣಂ ತಥಾ ॥ ೨೨ ॥
ಅಗಸ್ತ್ಯಶ್ಚ ಮಹಾತೇಜಾ ಮಾರ್ಕಂಡೇಯಶ್ಚ ವೀರ್ಯವಾನ್ ।
ಜಮದಗ್ನಿರ್ಭರದ್ವಾಜಃ ಸಂವರ್ತಶ್ಚ್ಯವನಸ್ತಥಾ ॥ ೨೩ ॥

---

ಆ ಸಭೆಯಲ್ಲಿ ಕುಳಿತಿರುವ ಜನರು ಹಸಿವು, ಬಾಯಾರಿಕೆ, ಬಳಲಿಕೆಯಿಂದ ದಣಿಯುತ್ತಿರಲಿಲ್ಲ.

೧೬. ಕಂಬಗಳ ಮೇಲೆ ನಿಂತಿರುವ ಹೊಳೆಯುವ ರಮ್ಯವಾದ ಬಗೆ ಬಗೆಯ ವಸ್ತುಗಳಿಂದ ಭಾಸಮಾನವಾದ ಆ ಸಭೆಯು ನಾಶವಿಲ್ಲದೆ ಸ್ಥಿರವಾದುದು.

೧೭. ತನ್ನಿಂದಲೇ ಕಂಗೊಳಿಸುವ ದೇವಲೋಕದಲ್ಲಿರುವ ಆ ಸಭೆಯು ಚಂದ್ರ, ಸೂರ್ಯ, ಅಗ್ನಿಗಳಿಗಿಂತ ಮಿಗಿಲಾಗಿ ಹೊಳೆಯುತ್ತ ಸೂರ್ಯದೇವನನ್ನು ಧಿಕ್ಕರಿಸುವಂತಿದ್ದಿತು.

೧೮. ಆ ಸಭೆಯಲ್ಲಿ ಷಡ್ಗುಣೈಶ್ವರ್ಯಗಳಿಂದೊಡಗೂಡಿದ ಸಕಲ ಲೋಕಗಳನ್ನು ಸೃಜಿಸುವ ಬ್ರಹ್ಮದೇವನು ತಾನೊಬ್ಬನೆ ಯಾವಾಗಲೂ ನಾನಾ ವಿಧ ದೇವತೆಗಳನ್ನೂ, ಮನುಷ್ಯರನ್ನೂ ಆಳುತ್ತಾನೆ.

೧೯–೨೭. ಈ ಬ್ರಹ್ಮದೇವನನ್ನು ದಕ್ಷ, ಪ್ರಚೇತಾ, ಪುಲಹ, ಮರೀಚಿ, ಕಶ್ಯಪ, ಭೃಗು, ಅತ್ರಿ, ವಸಿಷ್ಠ, ಗೌತಮ, ಅಂಗಿರಸ್ಸು, ಪುಲಸ್ತ್ಯ, ಕ್ರತು, ಪ್ರಹ್ಲಾದ, ಕರ್ದಮ ಎಂಬ ಪ್ರಜಾಪತಿಗಳೂ, ಅಥರ್ವ, ಆಂಗಿರಸರೂ, ವಾಲಖಿಲ್ಯರೂ, ಸೂರ್ಯನ ಕಿರಣಗಳಿಂದ ಜೀವಿಸುವ ಋಷಿಗಳೂ, ಮನಸ್ಸು, ಅಂತರಿಕ್ಷ, ವಿದ್ಯಾ, ವಾಯು, ತೇಜಸ್ಸು, ನೀರು, ಭೂಮಿಗಳೂ, ಶಬ್ದ,

CC-0. Jangamwadi Math Collection. Digitized by eGangotri

ದುರ್ವಾಸಾಶ್ಚ ಮಹಾಭಾಗಃ ಋಷ್ಯಶೃಂಗಶ್ಚ ಧಾರ್ಮಿಕಃ ।
ಸನತ್ಕುಮಾರೋ ಭಗವಾನ್ಯೋಗಾಚಾರ್ಯೋ ಮಹಾತಪಾಃ ॥ ೨೪ ॥
ಅಸಿತೋ ದೇವಲಶ್ಚೈವ ಜೈಗೀಷವ್ಯಶ್ಚ ತತ್ವವಿತ್ ।
ಆಯುರ್ವೇದಸ್ತಥಾಽಷ್ಟಾಂಗೋ ಗಾಂಧರ್ವಶ್ಚೈವ ತತ್ರ ಹಿ ॥ ೨೫ ॥
ಚಂದ್ರಮಾಃ ಸಹನಕ್ಷತ್ರೈರಾದಿತ್ಯಶ್ಚ ಗಭಸ್ತಿಮಾನ್ ।
ವಾಯುವಸ್ತಂತವಶ್ಚೈವ ಸಂಕಲ್ಪಃ ಪ್ರಾಣ ಏವ ಚ ॥ ೨೬ ॥
ಮೂರ್ತಿಮಂತೋ ಮಹಾತ್ಮಾನೋ ಮಹಾವ್ರತಪರಾಯಣಾಃ ।
ಏತೇ ಚಾಽನ್ಯೇ ಚ ಬಹವೋ ಬ್ರಹ್ಮಾಣಂ ಸಮುಪಾಸಿರೇ ॥ ೨೭ ॥
ಅರ್ಥೋ ಧರ್ಮಶ್ಚ ಕಾಮಶ್ಚ ಹರ್ಷೋ ದ್ವೇಷಸ್ತಮೋ ದಮಃ ।
ಆಯಾಂತಿ ತಸ್ಯಾಂ ಸಹಿತಾ ಗಂಧರ್ವಾಪ್ಸರಸಾಂ ಗಣಾಃ ॥ ೨೮ ॥
ಶುಕ್ರಾದ್ಯಾಶ್ಚ ಗ್ರಹಾಶ್ಚೈವ ಯೇ ಚಾಽನ್ಯೇ ತತ್ಸಮೀಪಗಾಃ ।
ಮಂತ್ರಾ ರಥಂತರಂ ಚೈವ ಹರಿಮಾನ್ವಸುಮಾನಪಿ ॥ ೨೯ ॥
ಮಹಿತೋ ವಿಶ್ವಕರ್ಮಾ ಚ ವಸವಶ್ಚೈವ ಸರ್ವಶಃ ।
ತಥಾ ಪಿತೃಗಣಾಃ ಸರ್ವೇ ಸರ್ವಾಣಿ ಚ ಹವೀಂಷ್ಯಥ ॥ ೩೦ ॥

---

ಸ್ಪರ್ಶ, ರೂಪ, ರಸ, ಗಂಧಗಳೂ, ಸದಸತ್ತಿಗೆ ಕಾರಣವಾದ ಪ್ರಕೃತಿವಿಕೃತಿಗಳೂ, ತೇಜಸ್ವಿಯಾದ ಅಗಸ್ತ್ಯ, ವೀರನಾದ ಮಾರ್ಕಂಡೇಯ, ಜಮದಗ್ನಿ, ಭರದ್ವಾಜ, ಸಂವರ್ತ, ಚ್ಯವನ, ಭಾಗ್ಯವಂತನಾದ ದುರ್ವಾಸ, ಧರ್ಮಿಷ್ಠನಾದ ಋಷ್ಯಶೃಂಗ, ಪೂಜ್ಯನಾದ ಸನತ್ಕುಮಾರ, ಅತ್ಯಂತ ತಪೋನಿಷ್ಠ ಯೋಗಾಚಾರ್ಯ, ಅಸಿತ, ದೇವಲ, ತತ್ತ್ವಜ್ಞಾನಿಯಾದ ಜೈಗೀಷವ್ಯರೆಂಬ ಮುನಿಗಳೂ, ಅಷ್ಟಾಂಗಗಳಿಂದ ಸೇರಿದ ಆಯುರ್ವೇದವೂ, ಸಂಗೀತ ಕಲೆಗಳೂ, ನಕ್ಷತ್ರ ಸಹಿತನಾದ ಚಂದ್ರ, ಕಾಂತಿಮಂತರಾದ ಸೂರ್ಯಗ್ರಹಗಳೂ, ವಾಯುಗಳೂ, ಸಂಕಲ್ಪ, ಪ್ರಾಣಗಳೂ ದೇಹಧಾರಿಗಳಾಗಿರುವರಲ್ಲದೆ ಇತರ ಬಹುಮಂದಿ ಮಹಾತ್ಮರೂ ಕಠಿನವ್ರತವನ್ನಾಚರಿಸುತ್ತ ಸೇವಿಸುತ್ತಿರುವರು.

೨೮. ಅರ್ಥ, ಧರ್ಮ, ಕಾಮಗಳೆಂಬ ಪುರುಷಾರ್ಥಗಳೂ, ಸಂತೋಷ, ದ್ವೇಷ, ಅಜ್ಞಾನ, ಇಂದ್ರಿಯನಿಗ್ರಹಗಳೂ, ಗಂಧರ್ವಾಪ್ಸರಸರೂ ಆ ಸಭೆಗೆ ಬರುತ್ತಾರೆ.

೨೯–೩೫. ಅವರ ಹತ್ತಿರವಿರುವ ಶುಕ್ರಾದಿ ಇತರ ಗ್ರಹಗಳೂ, ಮಂತ್ರಗಳೂ, ರಥಂತರವೆಂಬ ಸಾಮವೂ, ಪೂಜ್ಯನಾದ ವಿಶ್ವಕರ್ಮನೂ, ಸಕಲ ವಸುಗಳೂ, ಎಲ್ಲಾ ಪಿತೃಗಳೂ, ಎಲ್ಲಾ ಆಜ್ಯಾದಿ ಹವಿಸ್ಸುಗಳೂ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳೆಂಬ ನಾಲ್ಕು ವೇದಗಳೂ, ಸಕಲ ಶಾಸ್ತ್ರಗಳೂ, ಇತಿಹಾಸಗಳೂ, ಆಯುರ್ವೇದ, ಧನುರ್ವೇದ, ಗಾಂಧರ್ವವೇದ,

CC-0. Jangamwadi Math Collection. Digitized by eGangotri

ಋಗ್ವೇದಃ ಸಾಮವೇದಶ್ಚ ಯಜುರ್ವೇದಸ್ತಥೈವ ಚ ।
ಅಥರ್ವವೇದಶ್ಚ ತಥಾ ಸರ್ವಶಾಸ್ತ್ರಾಣಿ ಚೈವ ಹ ॥ ೩೧ ॥
ಇತಿಹಾಸೋಪವೇದಾಶ್ಚ ವೇದಾಂಗಾನಿ ಚ ಸರ್ವಶಃ ।
ಮೇಧಾ ಧೃತಿಃ ಸ್ಮೃತಿಶ್ಚೈವ ಪ್ರಜ್ಞಾ ಬುದ್ಧಿರ್ಯಶಃ ಸಮಾಃ ॥ ೩೨ ॥
ಕಾಲಚಕ್ರಂ ಚ ತದ್ದಿವ್ಯಂ ನಿತ್ಯಮಕ್ಷಯಮವ್ಯಯಂ ।
ಯಾವಂತ್ಯೋ ದೇವಪತ್ನ್ಯಶ್ಚ ಸರ್ವಾ ಏವ ಮನೋಜವಾಃ ॥ ೩೩ ॥
ಗಾರ್ಹಪತ್ಯಾ ನಾಕಚರಾಃ ಪಿತರೋ ಲೋಕವಿಶ್ರುತಾಃ ।
ಸೋಮಪಾ ಏಕಶೃಂಗಾಶ್ಚ ತಥಾ ಸರ್ವೇ ತಪಸ್ವಿನಃ ॥ ೩೪ ॥
ನಾಗಾಃ ಸುಪರ್ಣಾಃ ಪಶವಃ ಪಿತಾಮಹಮುಪಾಸತೇ ।
ಸ್ಥಾವರಾ ಜಂಗಮಾಶ್ಚಾಽಪಿ ಮಹಾಭೂತಾಸ್ತಥಾಽಪರೇ ॥ ೩೫ ॥
ಪುರಂದರಶ್ಚ ದೇವೇಂದ್ರೋ ವರುಣೋ ಧನದಸ್ತಥಾ ।
ಮಹಾದೇವಃ ಸಹೋಮೋಽತ್ರ ಸದಾ ಗಚ್ಛತಿ ಸರ್ವದಃ ॥ ೩೬ ॥
ಗಚ್ಛಂತಿ ಸರ್ವದಾ ದೇವಾ ನಾರಾಯಣಸ್ತಥರ್ಷಯಃ ।
ಋಷಯೋ ವಾಲಖಿಲ್ಯಾಶ್ಚ ಯೋನಿಜಾಽಯೋನಿಜಾಸ್ತಥಾ ॥ ೩೭ ॥
ಯತ್ಕಿಂಚಿತ್ತ್ರಿಷು ಲೋಕೇಷು ದೃಶ್ಯತೇ ಸ್ಥಾಣುಜಂಗಮಂ ।
ತಸ್ಯಾಂ ಸಹೋಪವಿಷ್ಟಾಯಾಂ ತತ್ರ ಜ್ಞಾತ್ವಾ ಸ ಧರ್ಮವಿತ್ ॥ ೩೮ ॥

---

ಶಸ್ತ್ರವೇದಗಳೆಂಬ ಉಪವೇದಗಳೂ, ಶಿಕ್ಷಾದಿ ಆರು ವೇದಾಂಗಗಳೂ, ಮೇಧಾ, ಧೃತಿ, ಸ್ಮೃತಿ, ಪ್ರಜ್ಞಾ, ಬುದ್ಧಿಗಳೆಂಬ ಮತಿಪ್ರಭೇದಗಳೂ, ಕೀರ್ತಿ, ಸಂವತ್ಸರ, ನಾಶ ಮತ್ತು ವ್ಯತ್ಯಾಸವನ್ನು ಹೊಂದದಿರುವ ನಿತ್ಯವಾದ ದಿವ್ಯಕಾಲಚಕ್ರವೂ, ಮನಸ್ಸಿನಂತೆ ವೇಗವುಳ್ಳ ಎಲ್ಲಾ ದೇವತೆಗಳ ಪತ್ನಿಯರೂ, ಗಾರ್ಹಪತ್ಯಾದಿ ಅಗ್ನಿಗಳೂ, ದೇವಲೋಕವಾಸಿಗಳಾದ ಪ್ರಸಿದ್ಧರಾದ ಪಿತೃದೇವತೆಗಳೂ, ಸೋಮರಸವನ್ನು ಸವಿದ ಒಂದೇ ವಿಧವಾದ ಚಿಹ್ನೆಯುಳ್ಳ ಎಲ್ಲ ದೇವತೆಗಳೂ, ಸರ್ಪಗಳೂ, ಗರುಡನ ಜಾತಿಯ ಪಕ್ಷಿಗಳೂ, ಪಶುಗಳೂ ಅಲ್ಲದೆ ಇತರ ಎಲ್ಲ ಸ್ಥಾವರಜಂಗಮಗಳೂ ಬ್ರಹ್ಮದೇವನನ್ನು ಸೇವಿಸುತ್ತವೆ.

೩೬. ದೇವರಾಜನಾದ ಶಕ್ರನೂ, ವರುಣನೂ, ಕುಬೇರನೂ, ಸಕಲವನ್ನೂ ಕೊಡುವ ಪಾರ್ವತೀಸಮೇತನಾದ ಮಹಾದೇವನೂ ಅಲ್ಲಿಗೆ ಯಾವಾಗಲೂ ಹೋಗುತ್ತಾರೆ.

೩೭. ದೇವತೆಗಳೂ, ಶ್ರೀಮನ್ನಾರಾಯಣನೂ, ಮುನಿಗಳೂ, ಯೋನಿಜ ಅಯೋನಿಜರಾದ ವಾಲಖಿಲ್ಯರೆಂಬ ಋಷಿಗಳೂ ಯಾವಾಗಲೂ ಅಲ್ಲಿಗೆ ಹೋಗುತ್ತಾರೆ.

೩೮–೩೯. ಧರ್ಮಜ್ಞನಾದ ಯಮಧರ್ಮರಾಜನು ಪ್ರಪಂಚದ ಸಕಲ

CC-0. Jangamwadi Math Collection. Digitized by eGangotri

ದೇವೈರ್ಮುನಿವರೈಃ ಕ್ರಾಂತಾಂ ಸಮಾಲೋಕ್ಯಾಽತಿವಿಸ್ಮಿತಃ ।
ಹರ್ಷೇಣ ಮಹತಾ ಯುಕ್ತೋ ರೋಮಾಂಚಿತತನೂರುಹಃ ॥ ೩೯ ॥
ತತ್ರ ಧರ್ಮೋ ಮಹಾತೇಜಾಃ ಕಥಾಂ ಪಾಪಪ್ರಣಾಶಿನೀಂ ।
ವಾಚ್ಯಮಾನಾಂ ತು ಶುಶ್ರಾವ ವ್ಯಾಸೇನಾಽಮಿತತೇಜಸಾ ॥ ೪೦ ॥
ಧರ್ಮಾಽರಣ್ಯಕಥಾಂ ದಿವ್ಯಾಂ ತಥೈವ ಸುಮನೋಹರಾಂ ।
ಧರ್ಮಾಽರ್ಥಕಾಮಮೋಕ್ಷಾಣಾಂ ಫಲದಾತ್ರೀಂ ತಥೈವ ಚ ॥ ೪೧ ॥
ಪುತ್ರಪೌತ್ರಪ್ರಪೌತ್ರಾದಿಫಲದಾತ್ರೀಂ ತಥೈವ ಚ ।
ಧಾರಣಾಚ್ಛ್ರವಣಾಚ್ಚಾಽಪಿ ಪಠನಾಚ್ಚಾಽವಲೋಕನಾತ್ ॥ ೪೨ ॥
ತಾಂ ನಿಶಮ್ಯ ಸುವಿಸ್ತೀರ್ಣಾಂ ಕಥಾಂ ಬ್ರಹ್ಮಾಂಡಸಂಭವಾಂ ।
ಪ್ರಮೋದೋತ್ಫುಲ್ಲನಯನೋ ಬ್ರಹ್ಮಾಣಮನುಮತ್ಯ ಚ ॥ ೪೩ ॥
ಕೃತಕಾರ್ಯೋಽಪಿ ಧರ್ಮಾತ್ಮಾ ಗಂತುಕಾಮಸ್ತದಾಽಭವತ್ ।
ನಮಸ್ಕೃತ್ಯ ತದಾ ಧರ್ಮೋ ಬ್ರಹ್ಮಾಣಂ ಸ ಪಿತಾಮಹಂ ॥ ೪೪ ॥
ಅನುಜ್ಞಾತಸ್ತದಾ ತೇನ ಗತೋಽಸೌ ಯಮಶಾಸನಂ ।
ಪಿತಾಮಹಪ್ರಸಾದಾಚ್ಚ ಶ್ರುತ್ವಾ ಪುಣ್ಯಪ್ರದಾಯಿನೀಂ ॥ ೪೫ ॥
ಧರ್ಮಾಽರಣ್ಯಕಥಾಂ ದಿವ್ಯಾಂ ಪವಿತ್ರಾಂ ಪಾಪನಾಶಿನೀಂ ।
ಸ ಗತೋಽನುಚರೈಃ ಸಾರ್ಧಂ ತತಃ ಸಂಯಮಿನೀಂ ಪ್ರತಿ ॥ ೪೬ ॥

---

ಸ್ಥಾವರಜಂಗಮಗಳೂ, ದೇವತೆಗಳೂ, ಮುನಿಗಳೂ ಒಟ್ಟುಸೇರಿದ ಆ ಸಭೆಯನ್ನು ಕಂಡು ಅತ್ಯಾಶ್ಚರ್ಯಗೊಂಡು ಬಹು ಸಂತೋಷದಿಂದ ರೋಮಾಂಚಗೊಂಡನು.

೪೦–೪೨. ಅಲ್ಲಿ ಮಹಾತೇಜಸ್ವಿಯಾದ ಧರ್ಮರಾಜನು ವ್ಯಾಸನು ಹೇಳುತ್ತಿರುವ ಪಾಪನಿವಾರಕವೂ, ಮನೋಹರವೂ, ಮನಸ್ಸಿನಲ್ಲಿಡುವುದು, ಕೇಳುವುದು, ಪಠಿಸುವುದು ಮತ್ತು ನೋಡುವುದು ಇವುಗಳಿಂದ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕುವಿಧ ಪುರುಷಾರ್ಥಗಳನ್ನು ನೀಡುವುದೂ, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಮೊದಲಾದ ಫಲಗಳನ್ನೀಯುವುದೂ ಆಗಿರುವ ಧರ್ಮಾರಣ್ಯದ ಕಥೆಯನ್ನು ಕೇಳಿದನು.

೪೩–೪೪. ಧರ್ಮರಾಜನು ಬ್ರಹ್ಮಲೋಕದಲ್ಲಿ ಹೇಳುತ್ತಿದ್ದ ಬಹು ದೊಡ್ಡದಾದ ಆ ಕಥೆಯನ್ನು ಕೇಳಿ ಆನಂದದಿಂದ ಅರಳಿದ ಕಣ್ಣುಳ್ಳವನಾಗಿ ತನ್ನ ಕಾರ್ಯವು ಮುಗಿದುದರಿಂದ ಬ್ರಹ್ಮದೇವನಿಗೆರಗಿ ಅವನ ಆಣತಿಯನ್ನು ಪಡೆದು ಹೊರಡಲಿಚ್ಛಿಸಿದನು.

೪೫–೪೬. ಪಿತಾಮಹನ ಅನುಗ್ರಹದಿಂದ ಪಾಪವನ್ನು ಕಳೆದು ಪುಣ್ಯವನ್ನೀಯುವ ಧರ್ಮಾರಣ್ಯದ ಕಥೆಯನ್ನು ಕೇಳಿದ ಧರ್ಮರಾಜನು ಆ ಬ್ರಹ್ಮನ ಅನುಮತಿಯಿಂದ ತನ್ನ ಸೇವಕರೊಡನೆ ಸಂಯಮಿನೀನಗರವನ್ನು ಸೇರಿದನು.

CC-0. Jangamwadi Math Collection. Digitized by eGangotri

ಅಮಾತ್ಯಾಽನುಚರೈಃ ಸಾರ್ಧಂ ಪ್ರವಿಷ್ಟಃ ಸ್ವಪುರಂ ಯಮಃ ।
ತತ್ರಾಂತರೇ ಮಹಾತೇಜಾ ನಾರದೋ ಮುನಿಪುಂಗವಃ ॥ ೪೭ ॥
ದುರ್ನಿರೀಕ್ಷ್ಯಃ ಕೃಪಾಯುಕ್ತಃ ಸಮದರ್ಶೀ ತಪೋನಿಧಿಃ ।
ತಪಸಾ ದಗ್ಧದೇಹೋಽಪಿ ವಿಷ್ಣುಭಕ್ತಿಪರಾಯಣಃ ॥ ೪೮ ॥
ಸರ್ವಗಃ ಸರ್ವವಿಚ್ಚೈವ ನಾರದಃ ಸರ್ವದಾ ಶುಚಿಃ ।
ವೇದಾಽಧ್ಯಯನಶೀಲಶ್ಚ ತ್ವಾಗತಸ್ತತ್ರ ಸಂಸದಿ ॥ ೪೯ ॥
ತಂ ದೃಷ್ಟ್ವಾ ಸಹಸಾ ಧರ್ಮೋ ಭಾರ್ಯಯಾ ಸೇವಕೈಃ ಸಹ ।
ಸಂಮುಖೋ ಹರ್ಷಸಂಯುಕ್ತೋ ಗಚ್ಛನ್ನೇವ ಸ ಸತ್ವರಃ ॥ ೫೦ ॥
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ಕುಲಂ ।
ಅದ್ಯ ಮೇ ಸಫಲೋ ಧರ್ಮಸ್ತ್ವಯ್ಯಾಯಾತೇ ತಪೋಧನೇ ॥ ೫೧ ॥
ಅರ್ಘ್ಯಪಾದ್ಯಾದಿವಿಧಿನಾ ಪೂಜಾಂ ಕೃತ್ವಾ ವಿಧಾನತಃ ।
ದಂಡವತ್ತಂ ಪ್ರಣಮ್ಯಾಽಥ ವಿಧಿನಾ ಚೋಪವೇಶಿತಃ ॥ ೫೨ ॥
ಆಸನೇ ಸ್ವೇ ಮಹಾದಿವ್ಯೇ ರತ್ನಕಾಂಚನಭೂಷಿತೇ ।
ಚಿತ್ರಾಽರ್ಪಿತಾ ಸಭಾ ಸರ್ವಾ ದೀಪಾ ನಿರ್ವಾತಗಾ ಇವ ॥ ೫೩ ॥
ವಿಧಾಯ ಕುಶಲಪ್ರಶ್ನಂ ಸ್ವಾಗತೇನಾಽಭಿನಂದ್ಯ ತಂ ।
ಪ್ರಹರ್ಷಮತುಲಂ ಲೇಭೇ ಧರ್ಮಾರಣ್ಯಕಥಾಂ ಸ್ಮರನ್ ॥ ೫೪ ॥

---

೪೭–೪೯. ಹೀಗೆ ಪರಿಜನರೊಡನೆ ಯಮಧರ್ಮರಾಜನು ತನ್ನ ಪಟ್ಟಣವನ್ನು ಸೇರಿ ಅಲ್ಲಿ ಸಭೆಯಲ್ಲಿ ಕುಳಿತಿರಲು ಅತಿ ತೇಜಸ್ವಿಯೂ, ದಯಾಳುವೂ, ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವವನೂ, ತಪಸ್ಸಿನಿಂದ ಕೃಶವಾದ ಶರೀರವುಳ್ಳವನೂ, ವಿಷ್ಣುಭಕ್ತಿನಿರತನೂ, ಸರ್ವಗಾಮಿಯೂ, ಸರ್ವಜ್ಞನೂ, ಸದಾ ಪವಿತ್ರನೂ, ವೇದಗಳನ್ನು ಪಠಿಸಮಾಡುವ ಸ್ವಭಾವವುಳ್ಳವನೂ ಆಗಿರುವ ನಾರದಮಹರ್ಷಿಯು ಅಲ್ಲಿಗೆ ಬಂದನು.

೫೦. ಕೂಡಲೆ ಧರ್ಮರಾಜನು ಅವನನ್ನು ನೋಡಿ ಹೆಂಡತಿ ಮತ್ತು ಸೇವಕರೊಡನೆ ಸಂತೋಷದಿಂದ ಎದುರುಗೊಂಡನು.

೫೧. "ಮುನಿವರ್ಯ! ನಿನ್ನ ಆಗಮನದಿಂದ ಈ ದಿನ ನನ್ನ ಜನ್ಮವೂ, ವಂಶವೂ, ಧರ್ಮಾನುಷ್ಠಾನವೂ ಸಾರ್ಥಕವಾದುವು" ಎಂದನು.

೫೨–೫೩. ಅರ್ಘ್ಯಪಾದ್ಯಾದಿ ಕ್ರಮದಿಂದ ಶಾಸ್ತ್ರರೀತಿಯಿಂದ ಪೂಜಿಸಿ ಸಾಷ್ಟಾಂಗ ನಮಸ್ಕಾರಮಾಡಿ ರತ್ನಗಳಿಂದ ಕೆತ್ತಿದ ತನ್ನ ದಿವ್ಯಾಸನದಲ್ಲಿ ಕುಳ್ಳಿರಿಸಿದನು. ಆಗ ಆ ಯಮನ ಪೂರ್ತಿ ಸಭೆಯು ಪಟದಲ್ಲಿ ಬರೆದ ಚಿತ್ರದಂತೆಯೂ, ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪಗಳಂತೆಯೂ ವಿರಾಜಿಸಿತು.

೫೪. ಯಮನು ಸುಖಾಗಮನವನ್ನು ಬಯಸಿ ಕುಶಲಪ್ರಶ್ನೆಯನ್ನು ಕೇಳಿದ

CC-0. Jangamwadi Math Collection. Digitized by eGangotri

ನಾರದಂ ಪೂಜಯಿತ್ವಾ ತು ಪ್ರಹೃಷ್ಟೇನಾಂತರಾತ್ಮನಾ ।
ಹರ್ಷಿತಂ ತು ಯಮಂ ದೃಷ್ಟ್ವಾ ನಾರದೋ ವಿಸ್ಮಿತಾನನಃ ॥ ೫೫ ॥
ಚಿಂತಯಾಮಾಸ ಮನಸಾ ಕಿಮಿದಂ ಹರ್ಷಿತೋ ಹರಿಃ ।
ಅತಿಹರ್ಷಂ ಚ ತಂ ದೃಷ್ಟ್ವಾ ಯಮರಾಜಸ್ವರೂಪಿಣಂ ।
ಆಶ್ಚರ್ಯಮನಸಂ ಚೈವ ನಾರದಃ ಪೃಷ್ಟವಾಂಸ್ತದಾ ॥ ೫೬ ॥

ನಾರದ ಉವಾಚ :—

ಕಿಂ ದೃಷ್ಟಂ ಭವತಾಶ್ಚರ್ಯಂ ಕಿಂ ವಾ ಲಬ್ಧಂ ಮಹತ್ಪದಂ ।
ದುಷ್ಟಸ್ತ್ವಂ ದುಷ್ಟಕರ್ಮಾ ಚ ದುಷ್ಟಾತ್ಮಾ ಕ್ರೋಧರೂಪಧೃಕ್ ॥ ೫೭ ॥
ಪಾಪಿನಾಂ ಯಮನಂ ಚೈವಮೇತದ್ರೂಪಂ ಮಹತ್ತರಂ ।
ಸೌಮ್ಯರೂಪಂ ಕಥಂ ಜಾತಮೇತನ್ಮೇ ಸಂಶಯಃ ಪ್ರಭೋ ॥ ೫೮ ॥
ಅದ್ಯ ತ್ವಂ ಹರ್ಷಸಂಯುಕ್ತೋ ದೃಶ್ಯಸೇ ಕೇನ ಹೇತುನಾ ।
ಕಥಯಸ್ವ ಮಹಾಕಾಯ ಹರ್ಷಸ್ಯೈವ ಹಿ ಕಾರಣಂ ॥ ೫೯ ॥

ಧರ್ಮರಾಜ ಉವಾಚ :—

ಶ್ರೂಯತಾಂ ಬ್ರಹ್ಮಪುತ್ರೈತತ್ಕಥಯಾಮಿ ನ ಸಂಶಯಃ ।
ಪುರಾಽಹಂ ಬ್ರಹ್ಮಸದನಂ ಗತವಾನಭಿವಂದಿತುಂ ॥ ೬೦ ॥

---

ಬಳಿಕ ತಾನು ಬ್ರಹ್ಮನ ಸಭೆಯಲ್ಲಿ ಶ್ರವಣಮಾಡಿದ ಧರ್ಮಾರಣ್ಯದ ಕಥೆಯನ್ನು ಜ್ಞಾಪಿಸಿಕೊಳ್ಳುತ್ತ ಪರಮಾನಂದವನ್ನು ಹೊಂದಿದನು.

೫೫. ನಾರದನು ತನ್ನನ್ನು ಸತ್ಕರಿಸಿ ಅತಿ ಸಂತೋಷಗೊಂಡ ಧರ್ಮರಾಜನನ್ನು ಕಂಡು ಆಶ್ಚರ್ಯಗೊಂಡನು.

೫೬. ಏತಕ್ಕೆ ಈ ಯಮನು ಇಷ್ಟೊಂದು ಸಂತೋಷಗೊಂಡಿದ್ದಾನೆಂದು ಮನಸ್ಸಿನಿಂದ ಆಲೋಚಿಸಿ ಆಶ್ಚರ್ಯಸಂತೋಷಗಳಿಂದುಬ್ಬಿದ ಧರ್ಮರಾಜನನ್ನು ಹೀಗೆ ಪ್ರಶ್ನಿಸಿದನು :—

೫೭–೫೮. ನಾರದನು ಕೇಳುತ್ತಾನೆ:—"ಧರ್ಮರಾಜ! ನೀನು ಅದ್ಭುತ ವಿಷಯವನ್ನು ಕೇಳಿದೆಯೋ? ಉನ್ನತಪದವಿಯನ್ನು ಪಡೆದೆಯೋ? ನೀನು ದುಷ್ಟನು. ಕೆಟ್ಟ ಕೆಲಸದವನು. ದುಷ್ಟಸ್ವಭಾವದವನು. ಸಿಟ್ಟಿನರೂಪದವನು. ನಿನ್ನೀ ಭಯಂಕರರೂಪವು ಪಾಪಿಗಳನ್ನು ದಂಡಿಸತಕ್ಕುದು. ಇಂತಹ ನಿನಗೆ ಸೌಮ್ಯರೂಪವು ಹೇಗೆಬಂದಿತು? ಸ್ವಾಮಿ! ನನಗೆ ಸಂಶಯವಾಗಿದೆಯಲ್ಲ.

೫೯. ನೀನು ಯಾವುದರಿಂದ ಸಂತೋಷಗೊಂಡಿರುವೆ? ಈ ಸಂತೋಷಕೆ ಕಾರಣವನ್ನು ತಿಳಿಸು."

೬೦. ಧರ್ಮರಾಜನು ಹೇಳಿದನು:— ಬ್ರಹ್ಮಸುತನಾದ ನಾರದನೆ!



CC-0. Jangamwadi Math Collection. Digitized by eGangotri

ತತ್ರಾಸೀನಃ ಸಭಾಮಧ್ಯೇ ಸರ್ವಲೋಕೈಕಪೂಜಿತೇ ।
ನಾನಾ ಕಥಾಃ ಶ್ರುತಾಸ್ತತ್ರ ಧರ್ಮವರ್ಗಸಮನ್ವಿತಾಃ ॥ ೬೧ ॥
ಕಥಾಃ ಪುಣ್ಯಾ ಧರ್ಮಯುತಾ ರಮ್ಯಾ ವ್ಯಾಸಮುಖಾಚ್ಛ್ರುತಾಃ ।
ಧರ್ಮಕಾಮಾರ್ಥಸಂಯುಕ್ತಾಃ ಸರ್ವಾಘೌಘವಿನಾಶಿನೀಃ ॥ ೬೨ ॥
ಯಾಃ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯಂತೇ ಬ್ರಹ್ಮಹತ್ಯಯಾ ।
ತಾರಯಂತೀಃ ಪಿತೃಗಣಾಂಛತಮೇಕೋತ್ತರಂ ಮುನೇ ॥ ೬೩ ॥

ನಾರದ ಉವಾಚ :—

ಕೀದೃಶೀ ತತ್ಕಥಾಮೇತಾಂ ಪ್ರಶಂಸ ಭವತಾ ಶ್ರುತಾಂ ।
ಕಥಾಂ ಯಮ ಮಹಾಬಾಹೋ ಶ್ರೋತುಕಾಮೋಽಸ್ಮ್ಯಹಂ ಚ ತಾಂ ॥

ಯಮ ಉವಾಚ :—

ಏಕದಾ ಬ್ರಹ್ಮಲೋಕೇಽಹಂ ನಮಸ್ಕರ್ತುಂ ಪಿತಾಮಹಂ ।
ಗತವಾನಸ್ಮಿ ತಂ ದೇಶಂ ಕಾರ್ಯಾಽಕಾರ್ಯವಿಚಾರಣೇ ॥ ೬೫ ॥
ಮಯಾ ತತ್ರಾಽದ್ಭುತಂ ದೃಷ್ಟಂ ಶ್ರುತಾ ಚ ಮುನಿಸತ್ತಮ ।
ಧರ್ಮಾಽರಣ್ಯಕಥಾ ದಿವ್ಯಾ ಕೃಷ್ಣದ್ವೈಪಾಯನೇರಿತಾ ॥ ೬೬ ॥

---

ಹೇಳುತ್ತೇನೆ; ಕೇಳು. ಸಂದೇಹಪಡಬೇಡ. ಹಿಂದೆ ನಾನು ಬ್ರಹ್ಮದೇವನನ್ನು ವಂದಿಸುವುದಕ್ಕೆ ಅವನ ಮನೆಗೆ ಹೋದೆನು.

೬೧–೬೨. ಅಲ್ಲಿ ಸಮಸ್ತ ಜಗತ್ತಿಗೂ ಪೂಜ್ಯವಾದ ಸಭೆಯ ನಡುವೆ ಕುಳಿತುಕೊಂಡು ಧರ್ಮಪೂರ್ಣಗಳಾದ ಬಗೆ ಬಗೆಯ ಕಥೆಗಳನ್ನು ಕೇಳಿದೆನು. ವ್ಯಾಸರಿಂದ ಕೇಳಿದ ಧರ್ಮಾದಿ ಪುರುಷಾರ್ಥಗಳಿಂದ ಕೂಡಿದ ಪವಿತ್ರವಾದ ಆ ದಿವ್ಯ ಕಥೆಗಳು ಶ್ರವಣಮಾಡುವವರ ಸಕಲ ದುರಿತಗಳನ್ನೂ ಕಳೆಯತಕ್ಕವು.

೬೩. ಮುನಿಯೆ! ಈ ಕಥೆಗಳನ್ನು ಕೇಳಿದವನು ತಾನು ಸಕಲ ಪಾಪಮುಕ್ತನಾಗುವುದಲ್ಲದೆ ನೂರೊಂದು ಪಿತೃಗಣಗಳನ್ನು ಬ್ರಹ್ಮಹತ್ಯೆಯಿಂದ ಉದ್ಧಾರ ಮಾಡುತ್ತಾನೆ.

೬೪. ನಾರದನು ಹೇಳಿದನು :—"ವೀರನಾದ ಧರ್ಮರಾಜನೆ! ನೀನು ಬ್ರಹ್ಮದೇವನ ಸಭೆಯಲ್ಲಿ ಕೇಳಿದ ಕಥೆಯು ಯಾವುದು? ಅದನ್ನು ನಾನು ಕೇಳಲು ಬಯಸುವೆನು."

೬೫–೬೬. ಯಮನು ಹೇಳುತ್ತಾನೆ :—ಮುನಿವರ! ಒಂದಾನೊಂದುವೇಳೆ ನಾನು ಬ್ರಹ್ಮದೇವನನ್ನು ನಮಸ್ಕರಿಸುವುದಕ್ಕೆ ಅವನ ಲೋಕಕ್ಕೆ ತೆರಳಿದೆನು. ಅಲ್ಲಿ ನಾನು ಕರ್ತವ್ಯಾಕರ್ತವ್ಯಗಳನ್ನು ವಿಚಾರಿಸುವಾಗ ಅದ್ಭುತ ವಿಷಯಗಳನ್ನು ನೋಡಿದೆನಲ್ಲದೆ ವ್ಯಾಸರು ಹೇಳಿದ ರಮ್ಯವಾದ ಧರ್ಮಾರಣ್ಯದ ಕಥೆಯನ್ನೂ ಕೇಳಿದೆನು.

CC-0. Jangamwadi Math Collection. Digitized by eGangotri

ಶ್ರುತ್ವಾ ಕಥಾಂ ಮಹಾಪುಣ್ಯಾಂ ಬ್ರಹ್ಮಸ್ವಪ್ರಹ್ಮಾಂಡಗಾಂ ಶುಭಾಂ ।
ಗುಣಪೂರ್ಣಾಂ ಸತ್ಯಯುಕ್ತಾಂ ತೇನ ಹರ್ಷೇಣ ಹರ್ಷಿತಃ ॥ ೬೭ ॥
ಅನ್ಯಚ್ಚೈವ ಮುನಿಶ್ರೇಷ್ಠ ತವಾಽಽಗಮನಕಾರಣಂ ।
ಶುಭಾಯ ಚ ಸುಖಾಯೈವ ಕ್ಷೇಮಾಯ ಚ ಜಯಾಯ ಹಿ ॥ ೬೮ ॥
ಅದ್ಯಾಽಸ್ಮಿ ಕೃತಕೃತ್ಯೋಽಹಮದ್ಯಾಽಹಂ ಸುಕೃತೀ ಮುನೇ ।
ಧರ್ಮೋ ನಾಮಾಽದ್ಯ ಜಾತೋಽಹಂ ತವ ಪದ್ಯುಗ್ಮದರ್ಶನಾತ್ ॥ ೬೯ ॥
ಪೂಜ್ಯೋಽಹಂ ಚ ಕೃತಾರ್ಥೋಽಹಂ ಧನ್ಯೋಽಹಂ ಚಾಽದ್ಯ ನಾರದ ।
ಯುಷ್ಮತ್ಪಾದಪ್ರಸಾದಾಚ್ಚ ಪೂಜ್ಯೋಽಹಂ ಭುವನತ್ರಯೇ ॥ ೭೦ ॥
ಸೂತ ಉವಾಚ :—
ಏವಂ ವಿಧೈರ್ವಚೋಭಿಶ್ಚ ತೋಷಿತೋ ಮುನಿಸತ್ತಮಃ ।
ಪಪ್ರಚ್ಛ ಪರಯಾ ಭಕ್ತ್ಯಾ ಧರ್ಮಾರಣ್ಯಕಥಾಂ ಶುಭಾಂ ॥ ೭೧ ॥
ನಾರದ ಉವಾಚ :—
ಶ್ರುತಾ ವ್ಯಾಸಮುಖಾದ್ಧರ್ಮ ಧರ್ಮಾರಣ್ಯಕಥಾ ಶುಭಾ ।
ತತ್ಸರ್ವಂ ಹಿ ಕಥಯ ಮೇ ವಿಸ್ತೀರ್ಣಂ ಚ ಯಥಾತಥಂ ॥ ೭೨ ॥

---

೬೭. ಬ್ರಾಹ್ಮಣೋತ್ತಮ! ಬ್ರಹ್ಮಲೋಕದ, ಗುಣಗಳಿಂದ ತುಂಬಿದ, ಸತ್ಯವಾದ, ಮಂಗಳಕರವಾದ ಆ ಪವಿತ್ರಕಥೆಯನ್ನು ಕೇಳಿ ಸಂತೋಷಗೊಂಡೆನು.

೬೮. ಮುನಿವರ್ಯ! ನಿನ್ನ ಆಗಮನವು ಮಂಗಳ, ಸೌಖ್ಯ, ಕ್ಷೇಮ, ಜಯಗಳಿಗೆ ಮತ್ತೊಂದು ಕಾರಣವು.

೬೯. ಇಂದು ನಾನು ನಿನ್ನ ಅಡಿಗಳೆರಡರ ಸಂದರ್ಶನದಿಂದ ಧನ್ಯನಾದೆ. ಇಂದು ನಾನು ಪುಣ್ಯವಂತನಾದೆ. ಇಂದು ನಾನು ಧರ್ಮನೆಂಬ ಹೆಸರನ್ನು ಅನ್ವರ್ಥವಾಗಿ ಪಡೆದೆ.

೭೦. ಓ ನಾರದಮುನಿಯೆ! ನಿನ್ನ ಪಾದಗಳ ಅನುಗ್ರಹದಿಂದ ನಾನು ಈ ದಿನ ಮೂರು ಲೋಕಗಳಲ್ಲಿ ಮಾನ್ಯನೂ, ಕೃತಕೃತ್ಯನೂ, ಪುಣ್ಯವಂತನೂ ಆದೆನು.

೭೧. ಇಂತಹ ನುಡಿಗಳಿಂದ ಸಂತೋಷಗೊಂಡ ನಾರದನು ಅತಿಭಕ್ತಿಯಿಂದ ಮಂಗಳಕರವಾದ ಆ ಧರ್ಮಾರಣ್ಯದ ಕಥೆಯನ್ನು ಕುರಿತು ಪ್ರಶ್ನಿಸಿದನು.

೭೨. ನಾರದನು ಕೇಳುತ್ತಾನೆ:—ಧರ್ಮರಾಜ! ನೀನು ವ್ಯಾಸರ ವದನದಿಂದ ಮಂಗಳಕರವಾದ ಧರ್ಮಾರಣ್ಯದ ಕಥೆಯನ್ನು ಕೇಳಿದೆಯಷ್ಟೆ. ಅದನ್ನೆಲ್ಲ ಕೇಳಿದಂತೆಯೇ ವಿಸ್ತಾರವಾಗಿ ನನಗೆ ಹೇಳು.

CC-0. Jangamwadi Math Collection. Digitized by eGangotri

ಯಮ ಉವಾಚ :—

ವ್ಯಗ್ರೋಽಹಂ ಸತತಂ ಬ್ರಹ್ಮನ್ಪ್ರಾಣಿನಾಂ ಸುಖದುಃಖಿನಾಂ ।
ತತ್ತತ್ಕರ್ಮಾನುಸಾರೇಣ ಗತಿಂ ದಾತುಂ ಸುಖೇತರಾಂ ॥ ೭೩ ॥
ತಥಾಽಪಿ ಸಾಧುಸಂಗೋ ಹಿ ಧರ್ಮಾಯೈವ ಪ್ರಜಾಯತೇ ।
ಇಹಲೋಕೇ ಪರತ್ರಾಽಪಿ ಕ್ಷೇಮಾಯ ಚ ಸುಖಾಯ ಚ ॥ ೭೪ ॥
ಬ್ರಹ್ಮಣಃ ಸನ್ನಿಧೌ ಯಚ್ಚ ಶ್ರುತಂ ವ್ಯಾಸಮುಖೇರಿತಂ ।
ತತ್ಸರ್ವಂ ಕಥಯಿಷ್ಯಾಮಿ ಮಾನುಷಾಣಾಂ ಹಿತಾಯ ವೈ ॥ ೭೫ ॥

ಸೂತ ಉವಾಚ :—

ಯಮೇನ ಕಥಿತಂ ಸರ್ವಂ ಯಚ್ಛ್ರುತಂ ಬ್ರಹ್ಮಸಂಸದಿ ।
ಆದಿಮಧ್ಯಾವಸಾನಂ ಚ ಸರ್ವಂ ನೈವಾತ್ರ ಸಂಶಯಃ ॥ ೭೬ ॥
ಕಲಿದ್ವಾಪರಯೋರ್ಮಧ್ಯೇ ಧರ್ಮಪುತ್ರಂ ಯುಧಿಷ್ಠಿರಂ ।
ಗತೋಽಸೌ ನಾರದೋ ಮರ್ತ್ಯೇ ರಾಜ್ಯಂ ಧರ್ಮಸುತಸ್ಯ ವೈ ॥ ೭೭ ॥
ಆಗತಃ ಶ್ರೀಹರೇರಂಶೋ ನಾರದಃ ಪ್ರತ್ಯದೃಶ್ಯತ ।
ಜ್ವಲಿತಾಗ್ನಿಪ್ರತೀಕಾಶೋ ಬಾಲಾರ್ಕಸದೃಶೇಕ್ಷಣಃ ॥ ೭೮ ॥
ಸವ್ಯಾಪವೃತ್ತಂ ವಿಪುಲಂ ಜಟಾಮಂಡಲಮುದ್ವಹನ್ ।
ಚಂದ್ರಾಂಶುಶುಕ್ಲವಸನೇ ವಸಾನೋ ರುಕ್ಮಭೂಷಣಃ ॥ ೭೯ ॥

---

೭೩. ಯಮನು ಹೇಳಿದನು :—ಬ್ರಾಹ್ಮಣೋತ್ತಮ! ನಾನು ಸುಖದುಃಖಾನುಭವಿಗಳಾದ ಪ್ರಾಣಿಗಳಿಗೆ ಯಾವಾಗಲೂ ಅವವುಗಳ ಆಯಾ ಕರ್ಮವನ್ನನುಸರಿಸಿ ಸುಖದುಃಖಾವಸ್ಥೆಯನ್ನು ನೀಡುವುದರಲ್ಲಿ ಆಸಕ್ತಿಯುಳ್ಳವನಾಗಿದ್ದೇನೆ.

೭೪–೭೫. ಹಾಗಾದರೂ ಒಳ್ಳೆಯವರ ಒಡನಾಟವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಧರ್ಮ, ಕ್ಷೇಮ, ಸುಖಗಳಿಗೆ ಕಾರಣವಾದುದರಿಂದ ನಾನು ಬಹ್ಮದೇವನ ಬಳಿ ವ್ಯಾಸರಿಂದ ಕೇಳಿದುದನ್ನೆಲ್ಲವನ್ನೂ ಮಾನವರ ಹಿತಕ್ಕಾಗಿ ನಿನಗೆ ಹೇಳುವೆನು.

೭೬. ಸೂತನು ಹೇಳಿದನು :—ಯಮನು ತಾನು ಬ್ರಹ್ಮಸಭೆಯಲ್ಲಿ ಕೇಳಿದ ಕಥೆಗಳನ್ನೆಲ್ಲ ಸಂಪೂರ್ಣವಾಗಿ ನಾರದನಿಗೆ ವಿವರಿಸಿದನು. ಈ ವಿಷಯದಲ್ಲಿ ಸಂದೇಹವಿಲ್ಲ.

೭೭. ನಾರದನಾದರೊ ಕಲಿ ಮತ್ತು ದ್ವಾಪರಯುಗಗಳ ನಡುವೆ ಭೂಲೋಕದಲ್ಲಿರುವ ಯಮಧರ್ಮನ ತನಯನಾದ ಯುಧಿಷ್ಠಿರನ ರಾಜ್ಯಕ್ಕೆ ಹೋದನು.

೭೮–೮೩. ಹೀಗೆ ಬಂದಿರುವ ಶ್ರೀವಿಷ್ಣುವಿನ ಅಂಶವಾದವನೂ, ಬಾಲಸೂರ್ಯನನ್ನು ಹೋಲುವ ಕಣ್ಣುಳ್ಳವನೂ, ಎಡಭಾಗದಲ್ಲಿ ಚದರಿದ ನೀಳವಾದ

CC-0. Jangamwadi Math Collection. Digitized by eGangotri

ವೀಣಾಂ ಗೃಹೀತ್ವಾ ಮಹತೀಂ ಕಕ್ಷಾಸಕ್ತಾಂ ಸಖೀಮಿವ ।
ಕೃಷ್ಣಾಽಜಿನೋತ್ತರಾಸಂಗೋ ಹೇಮಯಜ್ಞೋಪವೀತವಾನ್ ॥ ೮೦ ॥
ದಂಡೀ ಕಮಂಡಲುಕರಃ ಸಾಕ್ಷಾದ್ವಹ್ನಿರಿವಾಽಪರಃ ।
ಭೇತ್ತಾ ಜಗತಿ ಗುಹ್ಯಾನಾಂ ವಿಗ್ರಹಾಣಾಂ ಗುಹೋಪಮಃ ॥ ೮೧ ॥
ಮಹರ್ಷಿಗಣಸಂಸಿದ್ಧೋ ವಿದ್ವಾನ್ಗಾಂಧರ್ವವೇದವಿತ್ ।
ವೈರಕೇಲಿಕಲೋ ವಿಪ್ರೋ ಬ್ರಾಹ್ಮಃ ಕಲಿರಿವಾಽಪರಃ ॥ ೮೨ ॥
ದೇವಗಂಧರ್ವಲೋಕಾನಾಮಾದಿವಕ್ತಾ ಸುನಿಗ್ರಹಃ ।
ಗಾತಾ ಚತುರ್ಣಾಂ ವೇದಾನಾಮುದ್ಗಾತಾ ಹರಿಸದ್ಗುಣಾನ್ ॥ ೮೩ ॥
ಸ ನಾರದೋಽಥ ವಿಪ್ರರ್ಷಿರ್ಬ್ರಹ್ಮಲೋಕಚರೋಽವ್ಯಯಃ ।
ಆಗತೋಽಥ ಪುರೀಂ ಹರ್ಷಾದ್ಧರ್ಮರಾಜೇನ ಪಾಲಿತಾಂ ॥ ೮೪ ॥
ಅಥ ತತ್ರೋಪವಿಷ್ಟೇಷು ರಾಜನ್ಯೇಷು ಮಹಾತ್ಮಸು ।
ಮಹತ್ಸು ಚೋಪವಿಷ್ಟೇಷು ಗಂಧರ್ವೇಷು ಚ ತತ್ರ ವೈ ॥ ೮೫ ॥
ಲೋಕಾನನುಚರನ್ಸರ್ವಾನಾಗತಃ ಸ ಮಹರ್ಷಿರಾಟ್ ।
ನಾರದಃ ಸುಮಹಾತೇಜಾ ಋಷಿಭಿಃ ಸಹಿತಸ್ತದಾ ॥ ೮೬ ॥

---

ಜಟೆಯನ್ನು ಧರಿಸಿದವನೂ, ಬೆಳದಿಂಗಳಿನಂತಿರುವ ಬಿಳಿಯ ಬಟ್ಟೆಯನ್ನುಟ್ಟವನೂ, ಸುವರ್ಣದ ಒಡವೆಯುಳ್ಳವನೂ, ತನ್ನ ಗೆಳತಿಯಂತಿರುವ ಮಹತೀ ಎಂಬ ವೀಣೆಯನ್ನು ಕಂಕುಳಲ್ಲಿಟ್ಟವನೂ, ಕೃಷ್ಣಾಜಿನದ ಉತ್ತರೀಯಧಾರಿಯೂ, ಚಿನ್ನದ ಯಜ್ಞೋಪವೀತವನ್ನು ಧರಿಸಿದವನೂ, ಜಲಪಾತ್ರೆ ದಂಡಗಳನ್ನು ಕೈಯಲ್ಲಿ ಹಿಡಿದು ಬೇರೊಬ್ಬ ಅಗ್ನಿದೇವನಂತಿರುವವನೂ, ಪ್ರಪಂಚದ ಗುಟ್ಟನ್ನು ಹೊರಗೆಡಹುವವನೂ, ಯುದ್ಧವಿಷಯದಲ್ಲಿ ಕುಮಾರಸ್ವಾಮಿಯಂತಿರುವವನೂ, ಋಷಿಮಂಡಲದಲ್ಲಿ ಜ್ಞಾನಸಿದ್ಧಿಯುಳ್ಳವನೂ, ಪಂಡಿತನೂ, ಸಂಗೀತಕಲೆಯಲ್ಲಿ ನಿಷ್ಣಾತನೂ, ಪರಸ್ಪರ ಕಲಹದಲ್ಲಿ ಪ್ರೀತಿಯುಳ್ಳವನೂ, ಬೇರೊಬ್ಬ ಕಲಿಯಂತಿರುವವನೂ, ಬ್ರಹ್ಮಸುತನೂ, ದೇವಗಂಧರ್ವರ ಲೋಕಗಳಲ್ಲಿ ಪ್ರಥಮ ಭಾಷಣಕಾರನೂ, ಜಿತೇಂದ್ರಿಯನೂ, ನಾಲ್ಕು ವೇದಗಳನ್ನು ಗಾನಮಾಡುವವನೂ, ಶ್ರೀವಿಷ್ಣುವಿನ ಸದ್ಗುಣಗಳನ್ನು ಹಾಡುತ್ತಿರುವವನೂ ಆಗಿರುವ ಆ ನಾರದ ಮುನಿವರ್ಯನು ಉರಿಯುತ್ತಿರುವ ಬೆಂಕಿಯಂತೆ ಬೆಳಗುತ್ತಿದ್ದನು.

೮೪. ಬ್ರಹ್ಮಲೋಕವಿಹಾರಿಯಾಗಿ ವಿಕಾರಶೂನ್ಯನಾಗಿದ್ದ ಆ ನಾರದನು ಸಂತೋಷದಿಂದ ಯುಧಿಷ್ಠಿರನು ಆಳುತ್ತಿರುವ ಹಸ್ತಿನಾಪುರಿಗೆ ಬಿಜಯಂಗೈದನು.

೮೫–೮೬. ಅಲ್ಲಿ ಪ್ರಭಾವಶಾಲಿಗಳಾದ ಅರಸರೂ, ಮಹಾತ್ಮರೂ, ಗಂಧರ್ವರೂ ಕುಳಿತುಕೊಂಡಿರಲು ಅತ್ಯಂತವಾಗಿ ಶೋಭಿಸುತ್ತಿರುವ ಆ ನಾರದ ಮುನಿವರೇಣ್ಯನು ಇತರ ಮುನಿಗಳೊಡನೆ ಸಕಲ ಲೋಕಗಳಲ್ಲಿ ಸಂಚರಿಸುತ್ತ ಅಲ್ಲಿಗೈತಂದನು.

CC-0. Jangamwadi Math Collection. Digitized by eGangotri

ತಮಾಗತಮೃಷಿಂ ದೃಷ್ಟ್ವಾ ನಾರದಂ ಸರ್ವಧರ್ಮವಿತ್ ।
ಸಿಂಹಾಸನಾತ್ಸಮುತ್ಥಾಯ ಪ್ರಯಯೌ ಸಮ್ಮುಖಸ್ತದಾ ॥ ೮೭ ॥
ಅಭ್ಯವಾದಯತ ಪ್ರೀತ್ಯಾ ವಿನಯಾಽವನತಸ್ತದಾ ।
ತದರ್ಹಮಾಸನಂ ತಸ್ಮೈ ಸಂಪ್ರದಾಯ ಯಥಾವಿಧಿ ॥ ೮೮ ॥
ಗಾಂ ಚೈವ ಮಧುಪರ್ಕಂ ಚ ಸಂಪ್ರದಾಯಾಽರ್ಘಮೇವ ಚ ।
ಅರ್ಚಯಾಮಾಸ ರತ್ನೈಶ್ಚ ಸರ್ವಕಾಮೈಶ್ಚ ಧರ್ಮವಿತ್ ॥ ೮೯ ॥
ತುತೋಷ ಚ ಯಥಾವಚ್ಚ ಪೂಜಾಂ ಪ್ರಾಪ್ಯ ಚ ಧರ್ಮವಿತ್ ।
ಕುಶಲೀ ತ್ವಂ ಮಹಾಭಾಗ ತಪಸಃ ಕುಶಲಂ ತವ ॥ ೯೦ ॥
ನ ಕಶ್ಚಿದ್ಬಾಧತೇ ದುಷ್ಟೋ ದೈತ್ಯೋ ಹಿ ಸ್ವರ್ಗಭೂಪತಿಂ ।
ಮುನೇ ಕಲ್ಯಾಣರೂಪಸ್ತ್ವಂ ನಮಸ್ಕಾರ್ಯಃ ಸುರಾಽಸುರೈಃ ।
ಸರ್ವಗಃ ಸರ್ವವೇತ್ತಾ ಚ ಬ್ರಹ್ಮಪುತ್ರ ಕೃಪಾನಿಧೇ ॥ ೯೧ ॥

ನಾರದ ಉವಾಚ :—

ಸರ್ವತಃ ಕುಶಲಂ ಮೇಽದ್ಯ ಪ್ರಸಾದಾದ್ಬ್ರಹ್ಮಣಃ ಸದಾ ।
ಕುಶಲೀ ತ್ವಂ ಮಹಾಭಾಗ ಧರ್ಮಪುತ್ರ ಯುಧಿಷ್ಠಿರ ॥ ೯೨ ॥
ಭ್ರಾತೃಭಿಃ ಸಹ ರಾಜೇಂದ್ರ ಧರ್ಮೇಷು ರಮತೇ ಮನಃ ।
ದಾರೈಃ ಪುತ್ರೈಶ್ಚ ಭೃತ್ಯೈಶ್ಚ ಕುಶಲೈರ್ಗಜವಾಜಿಭಿಃ ॥ ೯೩ ॥

---

೮೭. ಸಕಲ ಧರ್ಮಗಳನ್ನರಿತ ಯುಧಿಷ್ಠಿರನು ಬಂದಿರುವ ಆ ಮುನಿವರ್ಯನನ್ನು ಕಂಡು ಸಿಂಹಾಸನದಿಂದೆದ್ದು ಎದುರುಗೊಂಡನು.

೮೮. ಅವನನ್ನು ಉಚಿತವಾದ ಆಸನದಲ್ಲಿ ಕುಳ್ಳಿರಿಸಿ ಸಂತೋಷದಿಂದ ವಿನೀತನಾಗಿ ಮಣಿದನು.

೮೯. ಆಕಳು, ಮಧುಪರ್ಕ, ಅರ್ಘ್ಯಗಳನ್ನೊಪ್ಪಿಸಿ ರತ್ನಗಳಿಂದಲೂ, ಎಲ್ಲ ಪ್ರಿಯವಸ್ತುಗಳಿಂದಲೂ ಪೂಜಿಸಿದನು.

೯೦–೯೧. ಶಾಸ್ತ್ರರೀತಿಯಿಂದ ಆ ಧರ್ಮಜನು ಮುನಿವರ್ಯನಿಗೆ ಪೂಜೆಯನ್ನು ಸಲ್ಲಿಸಿ ಹರ್ಷಗೊಂಡು ಮಹಾನುಭಾವ! ನಿನಗೆ ಕ್ಷೇಮವೆ? ತಪಸ್ಸು ಸಾಂಗವಾಗಿ ನಡೆಯುತ್ತಿರುವುದೇ? ಸರ್ವಜ್ಞನೂ, ಸರ್ವಗಾಮಿಯೂ ಆಗಿ ದಯಾಳುವಾದ ಓ ಚತುರ್ಮುಖಸುತ! ದೇವಾಸುರರಿಂದ ನೀನು ವಂದಿತನಾಗಿರುವೆ. ಈಗ ದೇವರಾಜನನ್ನು ಯಾವನೊಬ್ಬ ದುಷ್ಟದೈತ್ಯನೂ ಪೀಡಿಸುತ್ತಿಲ್ಲವಷ್ಟೆ.

೯೨. ನಾರದನು ಹೇಳುತ್ತಾನೆ :—ಧರ್ಮನಂದನ! ನಾನು ನಮ್ಮ ಪಿತೃಪಾದದ ಒಲುಮೆಯಿಂದ ಯಾವಾಗಲೂ ಎಲ್ಲೆಡೆಯಲ್ಲಿಯೂ ಕುಶಲಿಯು. ಮಹಾನುಭಾವ! ನೀನು ಸೌಖ್ಯವಾಗಿರುವೆಯೊ?

೯೩. ನರೇಂದ್ರ! ನೀನು ಕುಶಲಿಗಳಾದ ತಮ್ಮಂದಿರು, ಪತ್ನಿಯರು,

CC-0. Jangamwadi Math Collection. Digitized by eGangotri

ಔರಸಾನಿವ ಪುತ್ರಾಂಶ್ಚ ಪ್ರಜಾ ಧರ್ಮೇಣ ಧರ್ಮಜ ।
ಪಾಲಯಸಿ ತ್ವಂ ಕಿಮಾಶ್ಚರ್ಯಂ ತ್ವಯಾ ಧನ್ಯಾ ಹಿ ಸಾ ಪ್ರಜಾ ॥ ೯೪ ॥
ಪಾಲನಾತ್ಪೋಷಣಾನ್ನೄಣಾಂ ಧರ್ಮೋ ಭವತಿ ವೈ ಧ್ರುವಂ ।
ತತ್ತದ್ಧರ್ಮಸ್ಯ ಭೋಕ್ತಾ ತ್ವಮಿತ್ಯೇವಂ ಮನುರಬ್ರವೀತ್ ॥ ೯೫ ॥

ಯುಧಿಷ್ಠಿರ ಉವಾಚ :—

ಕುಶಲಂ ಮಮ ರಾಷ್ಟ್ರಂ ಚ ಭವತಾಮಂಘ್ರಿ ದರ್ಶನಾತ್ ।
ದರ್ಶನೇನ ಮಹಾಭಾಗ ಜಾತೋಽಹಂ ಗತಕಿಲ್ಬಿಷಃ ॥ ೯೬ ॥
ಧನ್ಯೋಽಹಂ ಕೃತಕೃತ್ಯೋಽಹಂ ಸಭಾಗ್ಯೋಽಹಂ ಧರಾತಲೇ ।
ಅದ್ಯಾಽಹಂ ಸುಕೃತೀ ಜಾತೋ ಬ್ರಹ್ಮಪುತ್ರೇ ಗೃಹಾಗತೇ ॥ ೯೭ ॥
ಕುತ ಆಗಮನಂ ಬ್ರಹ್ಮನ್ನದ್ಯ ತೇ ಮುನಿಸತ್ತಮ ।
ಅನುಗ್ರಹಾರ್ಥಂ ಸಾಧೂನಾಂ ಕಿಂ ವಾ ಕಾರ್ಯೇಣ ಕೇನ ಚ ॥ ೯೮ ॥

ನಾರದ ಉವಾಚ :—

ಆಗತೋಽಹಂ ನೃಪಶ್ರೇಷ್ಠ ಸಕಾಶಾಚ್ಛಮನಸ್ಯ ಚ ।
ವ್ಯಾಸೇನೋಕ್ತಾಂ ಬ್ರಹ್ಮಣೋಽಗ್ರೇ ಕಥಾಂ ಪೌರಾಣಿಕೀಂ ಶುಭಾಂ ॥ ೯೯ ॥

---

ಮಕ್ಕಳು, ಆಳುಗಳು, ಆನೆ ಕುದುರೆಗಳು ಇವುಗಳೊಡನೆ ಧರ್ಮದಲ್ಲಿ ಮನಸ್ಸನ್ನಿಟ್ಟಿರುವೆಯಷ್ಟೆ.

೯೪. ಧರ್ಮರಾಜ! ನೀನು ನಿನ್ನ ರಾಜ್ಯದ ಪ್ರಜೆಗಳನ್ನು ಹೊಟ್ಟೆಯಲ್ಲಿ ಜನಿಸಿದ ಮಕ್ಕಳಂತೆ ಕಾಪಾಡುತ್ತಿರುವೆ. ಆ ಪ್ರಜೆಗಳು ಪುಣ್ಯವಂತರೆಂದರೇನಾಶ್ಚರ್ಯ?

೯೫. ಧರ್ಮಶಾಸ್ತ್ರವನ್ನು ರಚಿಸಿರುವ ಮನುವು "ಪ್ರಜೆಗಳನ್ನು ಆಪತ್ತಿನಿಂದ ರಕ್ಷಿಸುವುದರಿಂದಲೂ, ಅನ್ನಬಟ್ಟೆಗಳನ್ನು ಕೊಟ್ಟು ಪೋಷಿಸುವುದರಿಂದಲೂ ಧರ್ಮಾರ್ಜನೆಯಾಗುವುದು. ಆ ಧರ್ಮದ ಫಲಗಳನ್ನು ರಾಜನು ಭುಜಿಸುವನು" ಎಂದು ಹೇಳಿದ್ದಾನೆ.

೯೬–೯೭. ಯುಧಿಷ್ಠಿರನು ಹೇಳುತ್ತಾನೆ:—ಮುನಿಯೆ! ನಿನ್ನ ಅಡಿಗಳ ಸ್ಪರ್ಶದಿಂದ ನನ್ನ ರಾಜ್ಯವು ಕ್ಷೇಮಗೊಂಡಿರುವುದು. ಪುಣ್ಯಶಾಲಿಯೆ! ನಿನ್ನ ಸಂದರ್ಶನದಿಂದ ನಾನು ಪಾಪವಿಲ್ಲದವನಾದೆನು. ಈಗ ಪಿತಾಮಹನ ಮಗನಾದ ನೀನು ನಮ್ಮ ಮನೆಗೆ ಆಗಮಿಸಿದ್ದರಿಂದ ನಾನು ಭೂಮಿಯಲ್ಲಿ ಪುಣ್ಯವಂತನೂ, ಕೃತಾರ್ಥನೂ, ಭಾಗ್ಯವಂತನೂ ಆದೆನು.

೯೮. ಬ್ರಹ್ಮಜ್ಞಾನಿಯಾದ ಓ ಮುನಿವರ್ಯನೆ! ನೀನು ಈಗ ಸಜ್ಜನರಿಗೆ ಅನುಗ್ರಹಮಾಡಲೋಸುಗ ಎಲ್ಲಿಂದ ಯಾವ ಕೆಲಸಕ್ಕಾಗಿ ಬಂದಿರುವೆ?

೯೯–೧೦೦. ನಾರದನು ಹೇಳುತ್ತಾನೆ:–ರಾಜೇಂದ್ರ! ನಾನು ಯಮಪುರಿಗೆ

CC-0. Jangamwadi Math Collection. Digitized by eGangotri

ಧರ್ಮಾರಣ್ಯಾಶ್ರಿತಾಂ ದಿವ್ಯಾಂ ಸರ್ವಸಂತಾಪಹಾರಿಣೀಂ ।
ಯಾಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ಬ್ರಹ್ಮಹತ್ಯಯಾ॥ ೧೦೦ ॥
ಹತ್ಯಾಽಯುತಪ್ರಶಮನೀಂ ತಾಪತ್ರಯವಿನಾಶಿನೀಂ ।
ಯಾಂ ವೈ ಶ್ರುತ್ವಾಽತಿಭಕ್ತ್ಯಾ ಚ ಕಠಿನೋ ಮೃದುತಾಂ ಭಜೇತ್ ॥೧೦೧॥
ಧರ್ಮರಾಜೇನ ತಾಂ ಶ್ರುತ್ವಾ ಮಮಾಗ್ರೇ ಚ ನಿವೇದಿತಾಂ ।
ತಮಪೃಚ್ಛದಮೇಯಾತ್ಮಾ ಕಥಾಂ ಧರ್ಮವಿನೋದಿನೀಂ ॥ ೧೦೨ ॥

ಯುಧಿಷ್ಠಿರ ಉವಾಚ :—

ಧರ್ಮಾರಣ್ಯಾಶ್ರಿತಾಂ ಪುಣ್ಯಾಂ ಕಥಾಂ ಮೇ ದ್ವಿಜಸತ್ತಮ ।
ಕಥಯಸ್ವ ಪ್ರಸಾದೇನ ಲೋಕಾನಾಂ ಹಿತಕಾಮ್ಯಯಾ ॥ ೧೦೩ ॥

ನಾರದ ಉವಾಚ :—

ಸ್ನಾನಕಾಲೋಽಯಮಸ್ಮಾಕಂ ನ ಕಥಾಽವಸರೋ ಮಮ ।
ಪರಂ ತು ಶ್ರೂಯತಾಂ ರಾಜನ್ನುಪದೇಶಂ ದದಾಮ್ಯಹಂ ॥ ೧೦೪ ॥
ಮಾಸಾನಾಮುತ್ತಮೋ ಮಾಘಃ ಸ್ನಾನದಾನಾದಿಕೇ ತಥಾ ।
ತಸ್ಮಿನ್ಮಾಘೇ ಚ ಯಃ ಸ್ನಾತಿ ಸರ್ವಪಾಪೈಃ ಪ್ರಮುಚ್ಯತೇ ॥ ೧೦೫ ॥
ಸ್ನಾನಾರ್ಥಂ ಯಾಹಿ ಶೀಘ್ರಂ ತ್ವಂ ಗಂಗಾಯಾಂ ನೃಪತೇಽಧುನಾ ।
ವ್ಯಾಸಸ್ಯಾಗಮನಂ ಚಾಽದ್ಯ ಭವಿಷ್ಯತಿ ನೃಪೋತ್ತಮ ॥ ೧೦೬ ॥

---

ತೆರಳಿದ್ದೆನು. ಅಲ್ಲಿ ಪಿತಾಮಹನ ಮುಂದೆ ವ್ಯಾಸರು ಹೇಳಿದ ಸಕಲ ಕಷ್ಟಗಳನ್ನು ನೀಗಿಸುವುದೂ, ಬ್ರಹ್ಮಹತ್ಯಾದಿ ಸಕಲ ದುರಿತಗಳನ್ನು ಹೋಗಲಾಡಿಸುವುದೂ, ಆಧ್ಯಾತ್ಮಿಕಾದಿ ತಾಪತ್ರಯಗಳನ್ನು ಹರಣಮಾಡುವುದೂ, ಅತಿ ಭಕ್ತಿಯಿಂದ ಕೇಳುವ ಕಠಿನನನ್ನೂ ಸೌಮ್ಯನನ್ನಾಗಿ ಮಾಡುವುದೂ ಆಗಿರುವ ಧರ್ಮಾರಣ್ಯದ ದಿವ್ಯಕಥೆಯನ್ನು ಧರ್ಮರಾಜನಿಂದ (ಯಮನಿಂದ) ಕೇಳಿ ಇಲ್ಲಿಗೆ ಬಂದೆನು. ಆಗ ಧರ್ಮಜನು ಆ ಪುಣ್ಯಕಥೆಯನ್ನು ತನಗೆ ಹೇಳಬೇಕೆಂದು ವಿಜ್ಞಾಪಿಸಿದನು.

೧೦೩. ಯುಧಿಷ್ಠಿರನು ಕೇಳುತ್ತಾನೆ:—ದ್ವಿಜವರ್ಯ! ಜನರ ಹಿತದೃಷ್ಟಿಯಿಂದ ಕೃಪೆಮಾಡಿ ಧರ್ಮಾರಣ್ಯದ ಪವಿತ್ರಕಥೆಯನ್ನು ಹೇಳು.

೧೦೪. ನಾರದನು ಹೇಳುತ್ತಾನೆ:—ಅರಸ! ಇದು ನನಗೆ ಸ್ನಾನಸಮಯವು. ಕಥೆಯನ್ನು ಹೇಳುವ ಸಮಯವಲ್ಲ. ಆದರೆ ನಾನು ನಿನಗೆ ಉಪದೇಶಮಾಡುವೆನು; ಕೇಳು.

೧೦೫. ಸ್ನಾನದಾನಗಳಿಗೆ ಮಾಸಗಳಲ್ಲೆಲ್ಲ ಮಾಘಮಾಸವು ಉತ್ತಮವು. ಆ ಮಾಸದಲ್ಲಿ ಮಿಂದವನ ಪಾಪಗಳೆಲ್ಲ ನೀಗುವುವು.

೧೦೬. ರಾಜೇಂದ್ರ! ನೀನು ಈಗ ಜಾಗ್ರತೆಯಾಗಿ ಸ್ನಾನಕ್ಕೋಸ್ಕರ ಗಂಗೆಗೆ ತೆರಳು. ಈ ದಿನ ವ್ಯಾಸರು ಅಲ್ಲಿಗೆ ಬರುವರು.

CC-0. Jangamwadi Math Collection. Digitized by eGangotri

ತಂ ಪೃಚ್ಛಸ್ವ ಮಹಾಭಾಗ ಶ್ರಾವಯಿಷ್ಯತಿ ತೇ ಶುಭಂ ।
ತೀರ್ಥಾನಾಂ ಚೈವ ಸರ್ವೇಷಾಂ ಫಲಂ ಪುಣ್ಯಂ ಯದದ್ಭುತಂ ॥ ೧೦೭ ॥
ಭೂತಂ ಭವ್ಯಂ ಭವಿಷ್ಯಂ ಚ ಉತ್ತಮಾಧಮಮಧ್ಯಮಾಃ ।
ವಾಚಯಿಷ್ಯತಿ ತತ್ಸರ್ವಮಿತಿಹಾಸಸಮುದ್ಭವಂ ॥ ೧೦೮ ॥
ಧರ್ಮಾರಣ್ಯಸ್ಯ ಸಕಲಂ ವೃತ್ತಂ ಯದ್ಯತ್ಪುರಾತನಂ ।
ವ್ಯಾಸಃ ಸತ್ಯವತೀಪುತ್ರೋ ವದಿಷ್ಯತಿ ಚ ತೇಽಖಿಲಂ ॥ ೧೦೯ ॥

ಸೂತ ಉವಾಚ :—

ಏವಮುಕ್ತ್ವಾ ವಿಧೇಃ ಪುತ್ರಸ್ತತ್ರೈವಾಂತರಧೀಯತ ।
ತಸ್ಮಿನ್ಗತೇ ಸ ನೃಪತಿಃ ಕ್ರೀಡತೇ ಸಚಿವೈಃ ಸಹ ॥ ೧೧೦ ॥
ಏತಸ್ಮಿನ್ನಂತರೇ ತತ್ರ ಪ್ರಾಪ್ತಃ ಸತ್ಯವತೀಸುತಃ ।
ವಿಜ್ಞಾಪಯಾಮಾಸ ತದಾ ವಿದುರಃ ಪಾಂಡವಸ್ಯ ಹಿ ॥ ೧೧೧ ॥

ಸೂತ ಉವಾಚ :—

ಆಗತಂ ತು ಮುನಿಂ ಶ್ರುತ್ವಾ ಸರ್ವೇ ಹರ್ಷಸಮಾಕುಲಾಃ ।
ಸಮುತ್ತಸ್ಥುರ್ಹಿ ಭೀಮಾದ್ಯಾಃ ಸಹ ಧರ್ಮೇಣ ಸರ್ವಶಃ ॥ ೧೧೨ ॥
ತದಾ ಹಿ ಸನ್ಮುಖೋ ಭೂತ್ವಾ ಮುಮುದೇ ನತಕಂಧರಃ ।
ದಂಡವತ್ತಂ ಪ್ರಣಮ್ಯಾಥ ಭ್ರಾತೃಭಿಃ ಸಹಿತಸ್ತದಾ ॥ ೧೧೩ ॥

---

೧೦೭. ಪುಣ್ಯಶಾಲಿಯಾದ ದೊರೆಯೆ! ನೀನು ಆ ವ್ಯಾಸರನ್ನು ಕೇಳು. ಅವರು ನಿನಗೆ ಎಲ್ಲ ತೀರ್ಥಗಳ ಆಶ್ಚರ್ಯಕರವೂ ಪವಿತ್ರವೂ ಆಗಿರುವ ಫಲವನ್ನು ತಿಳಿಸುವರು.

೧೦೮. ಉತ್ತಮ, ಮಧ್ಯಮ, ಅಧಮ ಜೀವಿಗಳಿಗೆ ಇತಿಹಾಸದಲ್ಲಿ ಹೇಳಿರುವ ಭೂತ, ವರ್ತಮಾನ, ಭವಿಷ್ಯತ್ಕಾಲಗಳ ಸರ್ವಫಲವನ್ನೂ ಹೇಳುವರು.

೧೦೯. ಸತ್ಯವತೀತನಯರಾದ ಆ ವ್ಯಾಸರು ಧರ್ಮಾರಣ್ಯದ ಎಲ್ಲ ಪುರಾತನ ಸಮಾಚಾರಗಳನ್ನೂ ನಿನಗೆ ಹೇಳುವರು.

೧೧೦. ಸೂತನು ಹೇಳುತ್ತಾನೆ:—ಬ್ರಹ್ಮತನಯನಾದ ನಾರದನು ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಅವನು ಹೊರಟುಹೋದ ಬಳಿಕ ಆ ಯುಧಿಷ್ಠಿರನು ಮಂತ್ರಿಗಳೊಡನೆ ವಿನೋದಪಡುತ್ತಿದ್ದನು.

೧೧೧. ಈ ಮಧ್ಯದಲ್ಲಿ ಅಲ್ಲಿಗೆ ಸತ್ಯವತೀಪುತ್ರರಾದ ವ್ಯಾಸರು ಬರಲು ವಿದುರನು ಪಾಂಡುತನಯನಾದ ಧರ್ಮಜನಿಗೆ ಈ ವಿಷಯವನ್ನುಸುರಿದನು.

೧೧೨. ಸೂತನು ಹೇಳುತ್ತಾನೆ:—ವ್ಯಾಸಮುನೀಶ್ವರನು ಬಂದಿರುವುದನ್ನು ಕೇಳಿ ಧರ್ಮಜನೊಡನೆ ಭೀಮಾದಿಗಳೆಲ್ಲರೂ ಸಂತೋಷದಿಂದ ಮೇಲಕ್ಕೆದ್ದರು.

೧೧೩. ಆಗ ಯುಧಿಷ್ಠಿರನು ನಮ್ರನಾಗಿ ಅವನನ್ನು ಎದುರುಗೊಂಡು ಸಹೋದರರೊಡನೆ ಸಾಷ್ಟಾಂಗ ಪ್ರಣಾಮಮಾಡಿದನು.

CC-0. Jangamwadi Math Collection. Digitized by eGangotri

ಮಧುಪರ್ಕೇಣ ವಿಧಿನಾ ಪೂಜಾಂ ಕೃತ್ವಾ ಸುಶೋಭನಾಂ ।
ಸಿಂಹಾಸನೇ ಸಮಾವೇಶ್ಯ ಪಪ್ರಚ್ಛಾನಾಮಯಂ ತದಾ ॥ ೧೧೪ ॥
ತತಃ ಪುಣ್ಯಾಂ ಕಥಾಂ ದಿವ್ಯಾಂ ಶ್ರಾವಯಾಮಾಸ ಧರ್ಮವಿತ್ ।
ಕಥಾಂತೇ ಮುನಿಶಾರ್ದೂಲಂ ವಚನಂ ಚೇದಮಬ್ರವೀತ್ ॥ ೧೧೫ ॥

ಯುಧಿಷ್ಠಿರ ಉವಾಚ:—

ತ್ವತ್ಪ್ರಸಾದಾನ್ಮಯಾ ಬ್ರಹ್ಮನ್ಛ್ರುತಾಸ್ತು ಪ್ರವರಾಃ ಕಥಾಃ ।
ಆಪದ್ಧರ್ಮಾ ರಾಜಧರ್ಮಾ ಮೋಕ್ಷಧರ್ಮಾ ಹ್ಯನೇಕಶಃ ॥ ೧೧೬ ॥
ಪುರಾಣಾನಾಂ ಚ ಧರ್ಮಾಶ್ಚ ವ್ರತಾನಿ ಬಹುಶಸ್ತಥಾ ।
ತೀರ್ಥಾನ್ಯನೇಕರೂಪಾಣಿ ಸರ್ವಾಣ್ಯಾಯತನಾನಿ ಚ ॥ ೧೧೭ ॥
ಇದಾನೀಂ ಶ್ರೋತುಮಿಚ್ಛಾಮಿ ಧರ್ಮಾರಣ್ಯಕಥಾಂ ಶುಭಾಂ ।
ಶ್ರುತ್ವಾ ಯಾಂ ಹಿ ವಿನಶ್ಯೇತ ಪಾಪಂ ಬ್ರಹ್ಮವಧಾದಿಕಂ ॥ ೧೧೮ ॥
ಧರ್ಮಾಽರಣ್ಯಸ್ಥ ತೀರ್ಥಾನಾಂ ಶ್ರೋತುಮಿಚ್ಛಾಮಿ ತತ್ವತಃ ।
ಕಸ್ಯೇದಂ ಸ್ಥಾಪಿತಂ ಸ್ಥಾನಂ ಕಸ್ಮಾದೇತದ್ವಿನಿರ್ಮಿತಂ ॥ ೧೧೯ ॥
ರಕ್ಷಿತಂ ಪಾಲಿತಂ ಕೇನ ಕಸ್ಮಿನ್ಕಾಲೇಽಥ ನಿರ್ಮಿತಂ ।
ಕಿಂ ಕಿಂ ತ್ವತ್ರಾಽಭವತ್ಪೂರ್ವಂ ಶಂಸೈತತ್ಪೃಚ್ಛತೋ ಮಮ ॥ ೧೨೦ ॥

---

೧೧೪. ಮಧುಪರ್ಕಕ್ರಮದಿಂದ ಮಂಗಳಕರವಾದ ಪೂಜೆಗೈದು ಸಿಂಹಾಸನದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆ ಮಾಡಿದನು.

೧೧೫. ತರುವಾಯ ಧರ್ಮಜ್ಞನಾದ ವ್ಯಾಸನು ಪವಿತ್ರವಾಗಿಯೂ ಮನೋಹರವಾಗಿಯೂ ಇರುವ ಕಥೆಯನ್ನು ಹೇಳಿದನು. ಧರ್ಮಜನು ಕಥೆಯ ಕೊನೆಯಲ್ಲಿ ಮುನಿವರ್ಯನಾದ ವ್ಯಾಸನನ್ನು ಕುರಿತು ಇಂತೆಂದನು.

೧೧೬–೧೧೭. ಯುಧಿಷ್ಠಿರನು ಕೇಳುತ್ತಾನೆ:— ಮುನಿವರ್ಯ! ನಿನ್ನ ಅನುಗ್ರಹದಿಂದ ಉತ್ತಮ ಕಥೆಗಳನ್ನೂ, ಆಪತ್ಕಾಲದ ಧರ್ಮಗಳನ್ನೂ, ರಾಜರ ಧರ್ಮಗಳನ್ನೂ, ಮೋಕ್ಷಧರ್ಮಗಳನ್ನೂ, ಅನೇಕ ವಿಧಗಳಾದ ಪುರಾಣ ಧರ್ಮಗಳನ್ನೂ, ಬಗೆ ಬಗೆಯ ವ್ರತಗಳನ್ನೂ, ನಾನಾ ವಿಧವಾದ ತೀರ್ಥಗಳನ್ನೂ ಎಲ್ಲ ದೇವಾಲಯಗಳನ್ನೂ ತಿಳಿದುಕೊಂಡೆನು.

೧೧೮. ಕೇಳಿದ ಮಾತ್ರದಿಂದ ಬ್ರಹ್ಮಹತ್ಯಾದಿ ಪಾಪಗಳನ್ನು ಪರಿಹರಿಸುವ ಧರ್ಮಾರಣ್ಯದ ಶುಭಕಥೆಯನ್ನು ಈಗ ಕೇಳಬಯಸುವೆನು.

೧೧೯. ಧರ್ಮಾರಣ್ಯದಲ್ಲಿರುವ ತೀರ್ಥಗಳ ನಿಜಸ್ವರೂಪವನ್ನೂ, ಈ ಸ್ಥಳವು ಏತಕ್ಕೆ ಸ್ಥಾಪಿತವಾಗಿದೆ, ಯಾವುದರಿಂದ ನಿರ್ಮಿತವಾಗಿದೆಯೆಂಬುದನ್ನೂ ಕೇಳಲಿಚ್ಛಿಸುವೆನು.

೧೨೦–೧೨೧. ಯಾರು ಯಾವಾಗ ಇದನ್ನು ಕಾಪಾಡಿದರು? ಇಲ್ಲಿ ಹಿಂದೆ

CC-0. Jangamwadi Math Collection. Digitized by eGangotri

ಭೂತಂ ಭವ್ಯಂ ಭವಿಷ್ಯಚ್ಚ ತಸ್ಮಿನ್ಸ್ಥಾನೇ ಚ ಯದ್ಭವೇತ್ ।
ತತ್ಸರ್ವಂ ಕಥಯಸ್ವಾದ್ಯ ತೀರ್ಥಾನಾಂ ಚ ಯಥಾ ಸ್ಥಿತಿಃ ॥ ೧೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಯುಧಿಷ್ಠಿರ ಪ್ರಶ್ನವರ್ಣನಂ" ನಾಮ ಪ್ರಥಮೋಽಧ್ಯಾಯಃ

---

ಏನಿದ್ದಿತು? ಈಗ ಏನಿದೆ? ಮುಂದೆ ಏನಾಗುವುದು. ತೀರ್ಥಗಳು ಹೇಗಿವೆ? ಇವೆಲ್ಲವನ್ನು ಈಗ ನನಗೆ ತಿಳಿಸು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಯುಧಿಷ್ಠಿರನ ಪ್ರಶ್ನವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದ್ವಿತಿಯೋಽಧ್ಯಾಯಃ

### ಯುಧಿಷ್ಠಿರ ಪ್ರಶ್ನವರ್ಣನಂ

ವ್ಯಾಸ ಉವಾಚ :—

ಪೃಥ್ವೀಪುರಂಧ್ರ್ಯಾಸ್ತಿಲಕಂ ಲಲಾಟೇ
ಲಕ್ಷ್ಮೀಲತಾಯಾಃ ಸ್ಫುಟಮಾಲವಾಲಂ ।
ವಾಗ್ದೇವತಾಯಾ ಜಲಕೇಲಿರಮ್ಯಂ
ನೋಹೇರಕಂ ಸಂಪ್ರತಿ ವರ್ಣಯಾಮಿ ॥ ೧ ॥
ಸಾಧು ಪೃಷ್ಟಂ ತ್ವಯಾ ರಾಜನ್ವಾರಾಣಸ್ಯಧಿಕಾಽಧಿಕಂ ।
ಧರ್ಮಾರಣ್ಯಂ ನೃಪಶ್ರೇಷ್ಠ ಶೃಣುಷ್ವಾವಹಿತೋ ಭೃಶಂ ॥ ೨ ॥
ಸರ್ವತೀರ್ಥಾನಿ ತತ್ರೈವ ಊಷರಂ ತೇನ ಕಥ್ಯತೇ ।
ಬ್ರಹ್ಮವಿಷ್ಣುಮಹೇಶಾದ್ಯೈರಿಂದ್ರಾದ್ಯೈಃ ಪರಿಸೇವಿತಂ ॥ ೩ ॥
ಲೋಕಪಾಲೈಶ್ಚ ದಿಕ್ಪಾಲೈರ್ಮಾತೃಭಿಃ ಶಿವಶಕ್ತಿಭಿಃ ।
ಗಂಧರ್ವೈಶ್ಚಾಽಪ್ಸರೋಭಿಶ್ಚ ಸೇವಿತಂ ಯಜ್ಞಕರ್ಮಭಿಃ ॥ ೪ ॥
ಭೂತವೇತಾಲಶಾಕಿನೀಗ್ರಹದೇವಾಽಧಿದೇವತೈಃ ।
ಋತುಭಿರ್ಮಾಸಪಕ್ಷೈಶ್ಚ ಸೇವ್ಯಮಾನಂ ಸುರಾಽಸುರೈಃ ॥ ೫ ॥

---

### ಕನ್ನಡದ ಅನುವಾದ

#### ಯುಧಿಷ್ಠಿರನ ಪ್ರಶ್ನವರ್ಣನ

೧. ವ್ಯಾಸನು ಹೇಳುತ್ತಾನೆ:—ಈಗ ಭೂಮಿದೇವಿಯೆಂಬ ಸಾಧ್ವೀಮಣಿಯ ಹಣೆಯ ತಿಲಕವೂ, ಐಶ್ವರ್ಯವೆಂಬ ಬಳ್ಳಿಗೆ ಸರಿಕೂಡಿದ ಪಾತಿಯೂ, ವಾಗ್ದೇವಿಯ ಜಲಕ್ರೀಡೆಯಿಂದ ಮನೋಹರವೂ ಆಗಿರುವ ನೋಹೇರಕವೆಂಬ ತೀರ್ಥವನ್ನು ಬಣ್ಣಿಸುವೆನು.

೨. ನೃಪವರ್ಯ! ನೀನು ಕಾಶೀಕ್ಷೇತ್ರಕ್ಕಿಂತ ಮಿಗಿಲಾದ ಧರ್ಮಾರಣ್ಯವನ್ನು ಕುರಿತು ಪ್ರಶ್ನಿಸಿದುದು ಒಳ್ಳಿತಾಯಿತು. ಈಗ ಅತ್ಯಂತ ಸಾವಧಾನದಿಂದ ಶ್ರವಣಮಾಡು.

೩–೭. ಎಲ್ಲ ತೀರ್ಥಗಳೂ ಇಲ್ಲಿಯೇ ಇವೆ. ಆದ್ದರಿಂದ ಇದನ್ನು ಊಷರವೆಂದು ಕರೆಯುತ್ತಾರೆ. ಇದನ್ನು ಬ್ರಹ್ಮ, ವಿಷ್ಣು, ಮಹೇಶ್ವರರೆ ಮೊದಲಾದವರೂ, ಇಂದ್ರಾದಿ ದಿವಿಜರೂ, ಲೋಕಪಾಲಕರೂ, ದಿಕ್ಪಾಲಕರೂ, ಪರಮೇಶ್ವರನ ಶಕ್ತಿರೂಪರಾದ ಬ್ರಾಹ್ಮ್ಯಾದಿ ಸಪ್ತಮಾತೃಕೆಯರೂ, ಗಂಧರ್ವರೂ, ಅಪ್ಸರಸರೂ, ಯಜ್ಞಕರ್ಮಗಳೂ, ಭೂತ, ಭೇತಾಳ, ಶಾಕಿನಿಗಳೆಂಬ ಗ್ರಹದೇವತೆ ಮತ್ತು ಅಧಿದೇವತೆಗಳೂ, ಋತುಗಳೂ, ಮಾಸಗಳೂ, ಪಕ್ಷಗಳೂ, ದೇವದಾನವರೂ,

CC-0. Jangamwadi Math Collection. Digitized by eGangotri

ತದಾದ್ಯಂ ಚ ನೃಪ ಸ್ಥಾನಂ ಸರ್ವಸೌಖ್ಯಪ್ರದಂ ತಥಾ ।
ಯಜ್ಞೈಶ್ಚ ಬಹುಭಿಶ್ಚೈವ ಸೇವಿತಂ ಮುನಿಸತ್ತಮೈಃ ॥ ೬ ॥
ಸಿಂಹವ್ಯಾಘ್ರೈರ್ದ್ವಿಪೈಶ್ಚೈವ ಪಕ್ಷಿಭಿರ್ವಿವಿಧೈಸ್ತಥಾ ।
ಗೋಮಹಿಷ್ಯಾದಿಭಿಶ್ಚೈವ ಸಾರಸೈರ್ಮೃಗಶೂಕರೈಃ ॥ ೭ ॥
ಸೇವಿತಂ ನೃಪಶಾರ್ದೂಲ ಶ್ವಾಪದೈರ್ವಿವಿಧೈರಪಿ ।
ತತ್ರ ಯೇ ನಿಧನಂ ಪ್ರಾಪ್ತಾಃ ಪಕ್ಷಿಣಃ ಕೀಟಕಾದಯಃ ॥ ೮ ॥
ಪಶವಃ ಶ್ವಾಪದಾಶ್ಚೈವ ಜಲಸ್ಥಲಚರಾಶ್ಚ ಯೇ ।
ಖೇಚರಾ ಭೂಚರಾಶ್ಚೈವ ಡಾಕಿನ್ಯೋ ರಾಕ್ಷಸಾಸ್ತಥಾ ॥ ೯ ॥
ಏಕೋತ್ತರಶತೈಃ ಸಾರ್ಧಂ ಮುಕ್ತಿಸ್ತೇಷಾಂ ಹಿ ಶಾಶ್ವತೀ ।
ತೇ ಸರ್ವೇ ವಿಷ್ಣುಲೋಕಾಂಶ್ಚ ಪ್ರಯಾಂತ್ಯೇವ ನ ಸಂಶಯಃ ॥ ೧೦ ॥
ಸಂತಾರಯತಿ ಪೂರ್ವಜ್ಞಾನ್ದಶ ಪೂರ್ವಾನ್ದಶಾಽಪರಾನ್ ।
ಯಃ ಪವ್ರೀಹಿತಿಲೈಃ ಸರ್ಪಿರ್ಬಿಲ್ವಪತ್ರೈಶ್ಚ ದೂರ್ವಯಾ ॥ ೧೧ ॥
ಗುಡೈಶ್ಚೈವೋದಕೈರ್ವಾಽಥ ತತ್ರ ಪಿಂಡಂ ಕರೋತಿ ಯಃ ।
ಉದ್ಧರೇತ್ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಂ ॥ ೧೨ ॥

---

ಸೇವಿಸುತ್ತಿದ್ದಾರೆ. ಮುನಿಶ್ರೇಷ್ಠರು ಇಲ್ಲಿ ಅನೇಕ ಯಜ್ಞಗಳನ್ನು ಮಾಡಿದ್ದಾರೆ. ಮತ್ತು ಇದನ್ನು ಸಿಂಹಗಳೂ, ಹುಲಿಗಳೂ, ಆನೆಗಳೂ, ಬಗೆ ಬಗೆಯ ಹಕ್ಕಿಗಳೂ, ಹಸುಗಳೂ, ಎಮ್ಮೆ ಮೊದಲಾದವುಗಳೂ, ಕೊಕ್ಕರೆಗಳೂ, ಜಿಂಕೆಗಳೂ, ಹಂದಿಗಳೂ ಸೇವಿಸುವುದರಿಂದ ಇದು ಸಮಸ್ತ ಸೌಖ್ಯಗಳನ್ನೀಯುವ ಮೊದಲನೆಯ ಸ್ಥಾನವು.

೮–೧೦. ರಾಜವರ! ನಾನಾ ವಿಧವಾದ ಹಿಂಸ್ರಪ್ರಾಣಿಗಳಿಂದ ಸೇವಿತವಾದ ಈ ಸ್ಥಳದಲ್ಲಿ ಹಕ್ಕಿಗಳಾಗಲಿ, ಹುಳು ಹುಪ್ಪಟೆ ಮೊದಲಾದವುಗಳಾಗಲಿ, ಪಶುಗಳಾಗಲಿ, ಸಿಂಹ ಮೊದಲಾದ ಮೃಗಗಳಾಗಲಿ, ಜಲ ಮತ್ತು ಭೂಮಿಯಲ್ಲಿ ವಾಸಿಸುವ ಪ್ರಾಣಿಗಳಾಗಲಿ, ಆಕಾಶದಲ್ಲಿ ಮತ್ತು ಭೂಮಿಯಲ್ಲಿ ಸಂಚರಿಸುವ ಡಾಕಿನ್ಯಾದಿ ಭೂತಗಳಾಗಲಿ, ರಾಕ್ಷಸರಾಗಲಿ ಮೃತಿಯೊಂದಿದರೆ ಅವರೆಲ್ಲರೂ ತಮ್ಮ ಹಿಂದಿನ ನೂರೊಂದು ಜನರೊಡನೆ ಮುಕ್ತರಾಗಿ ವಿಷ್ಣುಲೋಕವಾದ ವೈಕುಂಠಕ್ಕೆ ತೆರಳುವರು. ಇದರಲ್ಲಿ ಸಂಶಯವಿಲ್ಲ.

೧೧–೧೨. ಯಾರು ಭತ್ತ, ಎಳ್ಳು, ತುಪ್ಪ, ಬಿಲ್ವಪತ್ರೆ, ಗರಿಕೆ, ಬೆಲ್ಲ, ನೀರು ಇವುಗಳಿಂದ ಇಲ್ಲಿ ಪಿತೃಗಳಿಗೆ ತರ್ಪಣಗಳನ್ನು ಪ್ರದಾನಮಾಡುವರೊ ಅವರು ತಮ್ಮ ಹಿಂದಿನ ಮತ್ತು ಮುಂದಿನ ಹತ್ತುತಲೆ ಪಿತೃಗಳನ್ನೂ, ಏಳು ಗೋತ್ರದವರನ್ನೂ, ನೂರೊಂದು ವಂಶದವರನ್ನೂ ಉದ್ಧಾರಮಾಡುವರು.

CC-0. Jangamwadi Math Collection. Digitized by eGangotri

ವೃಕ್ಷೈರನೇಕಧಾ ಯುಕ್ತಂ ಲತಾಗುಲ್ಮೈಃ ಸುಶೋಭಿತಂ ।
ಸದಾ ಪುಣ್ಯಪ್ರದಂ ತಚ್ಚ ಸದಾ ಫಲಸಮನ್ವಿತಂ ॥ ೧೩ ॥
ನಿರ್ವೈರಂ ನಿರ್ಭಯಂ ಚೈವ ಧರ್ಮಾರಣ್ಯಂ ಚ ಭೂಪತೇ ।
ಗೋವ್ಯಾಘ್ರೈಃ ಕ್ರೀಡ್ಯತೇ ತತ್ರ ತಥಾ ಮಾರ್ಜಾರಮೂಷಕೈಃ ॥ ೧೪ ॥
ಭೇಕೋಽಹಿ ನಾ ಕ್ರೀಡತೇ ಚ ಮಾನುಷಾ ರಾಕ್ಷಸೈಃ ಸಹ ।
ನಿರ್ಭಯಂ ವಸತೇ ತತ್ರ ಧರ್ಮಾರಣ್ಯಂ ಚ ಭೂತಲೇ ॥ ೧೫ ॥
ಮಹಾನಂದಮಯಂ ದಿವ್ಯಂ ಪಾವನಾತ್ಪಾವನಂ ಪರಂ ।
ಕಲಕಂಠಃ ಕಲೋತ್ಕಂಠಮಸುಗುಂಜತಿ ಕುಂಜರಃ ॥ ೧೬ ॥
ಧ್ಯಾನಸ್ಥಃ ಶ್ರೋಷ್ಯತಿ ತದಾ ಪಾರಾವತ್ಯೇತಿವಾರ್ಯತೇ ।
ಕೇಕಃ ಕೋಕೀಂ ಪರಿತ್ಯಜ್ಯ ಮೌನಂ ತಿಷ್ಠತಿ ತದ್ಭಯಾತ್ ॥ ೧೭ ॥
ಚಕೋರಶ್ಚಂದ್ರಿಕಾಭೋಕ್ತಾ ನಕ್ತವ್ರತಮಿವಾಸ್ಥಿತಃ ।
ಪಠಂತಿ ಸಾರಿಕಾಃ ಸಾರಂ ಶುಕಂ ಸಂಬೋಧಯತ್ಯಹೋ ॥ ೧೮ ॥
ಅಪಾರವಾರಸಂಸಾರಸಿಂಧುಪಾರಪ್ರದಃ ಶಿವಃ ।
ಆಲಸ್ಯೇನಾಽಪಿ ಯೋ ಯಾಯಾದ್ಗೃಹಾದ್ಧರ್ಮವನಂ ಯಯೌ ॥ ೧೯ ॥

---

೧೩. ಅನೇಕ ಜಾತಿಯ ಮರಗಳುಳ್ಳುದೂ, ಲತೆಗಳ ಪೊದೆಗಳಿಂದ ಅಲಂಕೃತವಾದುದೂ ಆಗಿರುವ ಆ ಧರ್ಮಾರಣ್ಯವು ಯಾವಾಗಲೂ ಪುಣ್ಯವನ್ನು ಕೊಡುವುದು; ಫಲಗಳಿಂದ ಕೂಡಿರುವುದು.

೧೪–೧೫. ರಾಜನೆ! ಧರ್ಮಾರಣ್ಯದಲ್ಲಿ ದ್ವೇಷವೂ, ಭಯವೂ, ಇರುವುದಿಲ್ಲ. ಅಲ್ಲಿ ಹಸುಗಳು ಹುಲಿಗಳೊಡನೆಯೂ, ಬೆಕ್ಕುಗಳು ಇಲಿಗಳೊಡನೆಯೂ, ಕಪ್ಪೆಯು ಸರ್ಪದೊಡನೆಯೂ, ಮನುಷ್ಯರು ರಾಕ್ಷಸರೊಡನೆಯೂ ಆಡುತ್ತ ಭಯವಿಲ್ಲದೆ ವಾಸಿಸುತ್ತಾರೆ.

೧೬. ಆ ಧರ್ಮಾರಣ್ಯವು ಅತ್ಯಂತ ಆನಂದಪ್ರದವೂ, ಅತಿ ಪವಿತ್ರವೂ ಆದುದು. ಅಲ್ಲಿ ನವಿಲು ಪೊದೆಯಲ್ಲಿದ್ದು ಇಂಪಾಗಿ ಕೂಗುವುದು.

೧೭. ಧ್ಯಾನಾಸಕ್ತನಾದ ಮುನಿಯು ಕೇಳುವನೆಂದು ಕಪೋತಿಯು ಸುಮ್ಮನಿರುವುದು. ಚಕ್ರವಾಕವು ಆ ಧ್ಯಾನಾಸಕ್ತನ ಹೆದರಿಕೆಯಿಂದ ತನ್ನ ಪತ್ನಿಯನ್ನಗಲಿ ಮೌನವಾಗಿರುವುದು.

೧೮. ಬೆಳದಿಂಗಳನ್ನು ಕುಡಿಯುವ ಚಕೋರವು ರಾತ್ರಿವ್ರತವನ್ನು ಹೊಂದಿರುವಂತಿರುವುದು. ಸಾರಿಕೆಗಳು (ಗೊರವಂಕಗಳು) ಇಂಪಾಗಿ ಮಾತಾಡುತ್ತ ಗಿಳಿಯನ್ನು ಸಂಬೋಧಿಸುವುವು.

೧೯–೨೧. ಪರಮೇಶ್ವರನು ಅಲ್ಲಿ ನೆಲೆಗೊಂಡಿರುವುದರಿಂದ ಅವನು ಸಂಸಾರಸಾಗರವನ್ನು ದಾಟಿಸುವನು. ಯಾವನಾದರೂ ಮನೆಯಿಂದ

CC-0. Jangamwadi Math Collection. Digitized by eGangotri

ಅಶ್ವಮೇಧಾಽಧಿಕೋ ಧರ್ಮಸ್ತಸ್ಯ ಸ್ಯಾಚ್ಚ ಪದೇಪದೇ ।
ಶಾಪಾಽನುಗ್ರಹಸಂಯುಕ್ತಾ ಬ್ರಾಹ್ಮಣಾಸ್ತತ್ರ ಸಂತಿ ವೈ ॥ ೨೦ ॥
ಅಷ್ಟಾದಶಸಹಸ್ರಾಣಿ ಪುಣ್ಯಕಾರ್ಯೇಷು ನಿರ್ಮಿತಾಃ ।
ಷಟ್ತ್ರಿಂಶತ್ತು ಸಹಸ್ರಾಣಿ ಭೃತ್ಯಾಸ್ತೇ ವಣಿಜೋ ಭುವಿ ॥ ೨೧ ॥
ದ್ವಿಜಭಕ್ತಿಸಮಾಯುಕ್ತಾ ಬ್ರಹ್ಮಣ್ಯಾಸ್ತೇ ತ್ವಯೋನಿಜಾಃ ।
ಪುರಾಣಜ್ಞಾಃ ಸದಾಚಾರಾ ಧಾರ್ಮಿಕಾಃ ಶುದ್ಧಬುದ್ಧಯಃ ।
ಸ್ವರ್ಗೇ ದೇವಾಃ ಪ್ರಶಂಸಂತಿ ಧರ್ಮಾಽರಣ್ಯನಿವಾಸಿನಃ ॥ ೨೨ ॥

ಯುಧಿಷ್ಠಿರ ಉವಾಚ :—

ಧರ್ಮಾಽರಣ್ಯೇತಿ ತ್ರಿದಶೈಃ ಕದಾ ನಾಮ ಪ್ರತಿಷ್ಠಿತಂ ।
ಪಾವನಂ ಭೂತಲೇ ಜಾತಂ ಕಸ್ಮಾತ್ತೇನ ವಿನಿರ್ಮಿತಂ ॥ ೨೩ ॥
ತೀರ್ಥಭೂತಂ ಹಿ ಕಸ್ಮಾಚ್ಚ ಕಾರಣಾತ್ತದ್ವದಸ್ವ ಮೇ ।
ಬ್ರಾಹ್ಮಣಾಃ ಕತಿಸಂಖ್ಯಾಕಾಃ ಕೇನ ವೈ ಸ್ಥಾಪಿತಾಃ ಪುರಾ ॥ ೨೪ ॥
ಅಷ್ಟಾದಶಸಹಸ್ರಾಣಿ ಕಿಮರ್ಥಂ ಸ್ಥಾಪಿತಾನಿ ವೈ ।
ಕಸ್ಮಿನ್ವಂಶೇ ಸಮುತ್ಪನ್ನಾ ಬ್ರಾಹ್ಮಣಾ ಬ್ರಹ್ಮಸತ್ತಮಾಃ ॥ ೨೫ ॥

---

ಅನಾದರದಿಂದಾಗಲಿ ಆ ಧರ್ಮಾರಣ್ಯಕ್ಕೆ ಹೋದರೆ ಅವನಿಗೆ ಪ್ರತಿಹೆಜ್ಜೆಯಲ್ಲಿಯೂ ಅಶ್ವಮೇಧಯಾಗ ಮಾಡುವುದಕ್ಕಿಂತ ಹೆಚ್ಚಾದ ಧರ್ಮವು ಲಭಿಸುವುದು. ಅಲ್ಲಿ ಶಾಪವನ್ನು ಕೊಡುವುದರಲ್ಲಿಯೂ ಅನುಗ್ರಹಮಾಡುವುದರಲ್ಲಿಯೂ ಸಮರ್ಥರಾದ ಪುಣ್ಯಕಾರ್ಯಗಳಲ್ಲಿ ನಿರತರಾದ ಹದಿನೆಂಟುಸಾವಿರ ಬ್ರಾಹ್ಮಣರಿದ್ದಾರೆ. ಮತ್ತು ಅವರಿಗೆ ಸೇವಕರಾದ ಮೂವತ್ತಾರುಸಾವಿರ ವರ್ತಕರಿರುವರು.

೨೨. ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಬ್ರಹ್ಮನಿಷ್ಠರೂ, ಅಯೋನಿಜರೂ, ಪುರಾಣವನ್ನರಿತವರೂ, ಒಳ್ಳೆಯ ನಡತೆಯುಳ್ಳವರೂ, ಧರ್ಮಬುದ್ಧಿಯುಳ್ಳವರೂ, ಶುದ್ಧಜ್ಞಾನವುಳ್ಳವರೂ ಆಗಿರುವ ಆ ಧರ್ಮಾರಣ್ಯವಾಸಿಗಳನ್ನು ಸ್ವರ್ಗಲೋಕದಲ್ಲಿ ದೇವತೆಗಳೂ ಹೊಗಳುತ್ತಾರೆ.

೨೩. ಯುಧಿಷ್ಠಿರನು ಕೇಳುತ್ತಾನೆ:—ದೇವತೆಗಳು ಯಾವಾಗ ಅದಕ್ಕೆ ಧರ್ಮಾರಣ್ಯವೆಂಬ ಹೆಸರನ್ನಿಟ್ಟರು? ಯಾವುದರಿಂದ ಭೂಮಿಯಲ್ಲಿ ಅದು ಪವಿತ್ರವಾಯಿತು? ಯಾರು ಅದನ್ನು ಸೃಜಿಸಿದರು?

೨೪. ಯಾವ ಕಾರಣದಿಂದ ಅದು ತೀರ್ಥವಾಯಿತು? ಎಷ್ಟುಜನ ಬ್ರಾಹ್ಮಣರನ್ನು ಹಿಂದೆ ಯಾರು ಅಲ್ಲಿ ಇಟ್ಟರು? ಅದನ್ನು ನನಗೆ ಹೇಳು.

೨೫–೨೯. ಹದಿನೆಂಟುಸಾವಿರ ಬ್ರಾಹ್ಮಣರನ್ನು ಏಕೆ ಅಲ್ಲಿ ನೆಲಸುವಂತೆ ಮಾಡಿದರು? ಸಕಲವಿದ್ಯೆಗಳಲ್ಲಿ ಕುಶಲರೂ, ವೇದವೇದಾಂಗಗಳನ್ನು ಸಂಪೂರ್ಣ

CC-0. Jangamwadi Math Collection. Digitized by eGangotri

ಸರ್ವವಿದ್ಯಾಸು ನಿಷ್ಣಾತಾ ವೇದವೇದಾಂಗಪಾರಗಾಃ ।
ಋಗ್ವೇದೇಷು ಚ ನಿಷ್ಣಾತಾ ಯಜುರ್ವೇದಕೃತಶ್ರಮಾಃ ॥ ೨೬ ॥
ಸಾಮವೇದಾಂಗಪಾರಜ್ಞಾಸ್ತ್ರೈವಿದ್ಯಾ ಧರ್ಮವಿತ್ತಮಾಃ ।
ತಪೋನಿಷ್ಠಾಃ ಶುಭಾಚಾರಾಃ ಸತ್ಯವ್ರತಪರಾಯಣಾಃ ॥ ೨೭ ॥
ಮಾಸೋಪವಾಸೈಃ ಕೃಶಿತಾಸ್ತಥಾ ಚಾಂದ್ರಾಯಣಾದಿಭಿಃ ।
ಸದಾಚಾರಾಶ್ಚ ಬ್ರಹ್ಮಣ್ಯಾಃ ಕೇನ ನಿತ್ಯೋಪಜೀವಿನಃ ।
ತತ್ಸರ್ವಮಾದಿತಃ ಕೃತ್ಸ್ನಂ ಬ್ರೂಹಿ ಮೇ ವದತಾಂ ವರ ॥ ೨೮ ॥
ದಾನವಾಸ್ತತ್ರ ದೈತ್ಯೇಯಾ ಭೂತವೇತಾಲಸಂಭವಾಃ ।
ರಾಕ್ಷಸಾಶ್ಚ ಪಿಶಾಚಾಶ್ಚ ಉದ್ವೇಜಂತೇ ಕಥಂ ನ ತಾನ್ ॥ ೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಯುಧಿಷ್ಠಿರ ಪ್ರಶ್ನವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

ವಾಗಿ ಅಧ್ಯಯನಮಾಡಿದವರೂ, ಋಗ್ವೇದಾದಿ ಮೂರು ವೇದಗಳ ಸಾರವನ್ನು ಬಲ್ಲವರೂ, ಧರ್ಮಜ್ಞರೂ, ಒಳ್ಳೆನಡತೆಯುಳ್ಳವರೂ, ತಪಸ್ವಿಗಳೂ, ಸತ್ಯ ಮತ್ತು ನಿಯಮಪರರೂ, ಒಂದು ತಿಂಗಳು ಉಪವಾಸ ಮಾಡುವುದರಿಂದಲೂ, ಚಾಂದ್ರಾಯಣಾದಿವ್ರತಗಳಿಂದಲೂ ಕೃಶಾಂಗರೂ, ಬ್ರಹ್ಮಜ್ಞಾನಿಗಳೂ ಆಗಿರುವ ಈ ಬ್ರಾಹ್ಮಣೋತ್ತಮರು ಯಾವ ವಂಶದಲ್ಲಿ ಜನಿಸಿದರು? ಪ್ರತಿದಿನವೂ ಇವರು ಯಾವುದರಿಂದ ಜೀವನಮಾಡುವರು? ಅವರನ್ನು ಅಲ್ಲಿರುವ ದಾನವರೂ, ದೈತ್ಯರೂ, ಭೂತಗಳೂ, ಬೇತಾಳಗಳೂ, ರಾಕ್ಷಸರೂ, ಪಿಶಾಚಗಳೂ ಏತಕ್ಕೆ ಹೆದರಿಸುವುದಿಲ್ಲ? ವಾಗ್ಮಿಯಾದ ವ್ಯಾಸನೆ! ಇದನ್ನೆಲ್ಲ ಸಂಪೂರ್ಣವಾಗಿ ಮೊದಲಿನಿಂದ ನನಗೆ ತಿಳಿಸು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಯುಧಿಷ್ಠಿರನ ಪ್ರಶ್ನವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಇಂದ್ರಭಯ ಕಥನಂ

ವ್ಯಾಸ ಉವಾಚ :—

ಶ್ರೂಯತಾಂ ನೃಪಶಾರ್ದೂಲ ಕಥಾಂ ಪೌರಾಣಿಕೀಂ ಶುಭಾಂ ।
ಯಾಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾಽತ್ರ ಸಂಶಯಃ ॥ ೧ ॥
ಏಕದಾ ಧರ್ಮರಾಜೋ ವೈ ತಪಸ್ತೇಪೇ ಸುದುಷ್ಕರಂ ।
ಬ್ರಹ್ಮವಿಷ್ಣುಮಹೇಶಾದ್ಯೈರ್ಜಲವರ್ಷಾತಪಾದಿಷಾಟ್ ॥ ೨ ॥
ಆದೌ ತ್ರೇತಾಯುಗೇ ರಾಜನ್ವರ್ಷಾಣಾಮಯುತತ್ರಯಂ ।
ಮಧ್ಯೇವನಂ ತಪಸ್ಯಂತಮಶೋಕತರುಮೂಲಗಂ ॥ ೩ ॥
ಶುಷ್ಕಸ್ನಾಯುಪಿನದ್ಧಾಸ್ಥಿಸಂಚಯಂ ನಿಶ್ಚಲಾಕೃತಿಂ ।
ವಲ್ಮೀಕಕೀಟಕಾಕೋಟಿಶೋಷಿತಾಽಶೇಷಶೋಣಿತಂ ॥ ೪ ॥
ನಿರ್ಮಾಂಸಕೀಕಸಚಯಂ ಸ್ಫಟಿಕೋಪಲನಿಶ್ಚಲಂ ।
ಶಂಖಕುಂದೇಂದುತುಹಿನಮಹಾಶಂಖಲಸಚ್ಛ್ರಿಯಂ ॥ ೫ ॥

---

## ಕನ್ನಡದ ಅನುವಾದ

### ಇಂದ್ರಭಯ ಕಥನ

೧. ವ್ಯಾಸನು ಹೇಳುತ್ತಾನೆ:—ನೃಪೇಂದ್ರ! ಪುರಾತನವಾದ ಈ ಶುಭ ಕಥೆಯನ್ನು ಕೇಳು. ಇದನ್ನು ಕೇಳಿದವನು ಈ ಲೋಕದಲ್ಲಿ ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಸಂದೇಹವಿಲ್ಲ.

೨. ಒಂದಾನೊಂದು ವೇಳೆ ಯಮಧರ್ಮನು ಬ್ರಹ್ಮ, ವಿಷ್ಣು, ಮಹೇಶ್ವರರೇ ಮೊದಲಾದ ದೇವತೆಗಳಿಂದಲೂ ಮಾಡಲಾಗದ ಘೋರ ತಪಸ್ಸನ್ನು ಮಳೆ ಬಿಸಿಲು ಮೊದಲಾದವುಗಳನ್ನು ಸಹಿಸಿಕೊಂಡು ಆಚರಿಸಿದನು.

೩–೧೨. ಅರಸ! ತ್ರೇತಾಯುಗದ ಮೊದಲುಭಾಗದಲ್ಲಿ ಮೂರು ಆಯುತ ವರ್ಷಗಳಕಾಲ (ಮೂವತ್ತುಸಾವಿರವರ್ಷ) ಕಾಡಿನ ನಡುವೆ ಅಶೋಕವೃಕ್ಷದ ತಳದಲ್ಲಿ ತಪಸ್ಸನ್ನು ಮಾಡುತ್ತಿರುವ, ಒಣಗಿದ ನರಗಳಿಂದ ಬಿಗಿಯಲ್ಪಟ್ಟ ಅಸ್ಥಿಪಂಜರವುಳ್ಳವನೂ, ನಿಶ್ಚಲನೂ, ಕೋಟ್ಯಂತರ ಗೆದ್ದಲು ಹುಳುಗಳಿಂದ ಒಣಗಿಸಲ್ಪಟ್ಟ ಸಕಲ ರಕ್ತವುಳ್ಳವನೂ, ಮಾಂಸವಿಲ್ಲದ ಮೂಳೆಗಳುಳ್ಳವನೂ, ಸ್ಫಟಿಕಮಣಿಯಂತೆ ನಿಶ್ಚಲನೂ, ಶಂಖ, ಮಲ್ಲಿಗೆ ಹೂವು, ಹಿಮಗಳಂತೆ ಶುಭ್ರ ಕಾಂತಿಯುಳ್ಳವನೂ, ಸತ್ವಗುಣದಿಂದ ಪ್ರಾಣಧಾರಣಮಾಡಿಕೊಂಡಿರುವವನೂ, ಆಯುಸ್ಸು ಇರುವುದರಿಂದ ಮಾತ್ರ ಜೀವಿಸಿರುವವನೂ, ಉಸಿರಾಡುವುದರಿಂದ

CC-0. Jangamwadi Math Collection. Digitized by eGangotri

ಸತ್ವಾವಲಂಬಿತಪ್ರಾಣಮಾಯುಃಶೇಷೇಣ ರಕ್ಷಿತಂ ।
ನಿಃಶ್ವಾಸೋಚ್ಛ್ವಾಸಪವನವೃತ್ತಿಸೂಚಿತಜೀವಿತಂ ॥ ೬ ॥
ನಿಮೇಷೋನ್ಮೇಷಸಂಚಾರಪಿಶುನೀಕೃತಜಂತುಕಂ ।
ಪಿಶಂಗಿತಸ್ಫುರದ್ರಶ್ಮಿನೇತ್ರದೀಪಿತದಿಙ್ಮುಖಂ ॥ ೭ ॥
ತತ್ತಪೋಽಗ್ನಿಶಿಖಾದಾವಚುಂಬಿತಮ್ಲಾನಕಾನನಂ ।
ತಚ್ಛಾಂತ್ಯುದಸುಧಾವರ್ಷಸಂಸಿಕ್ತಾಽಖಿಲಭೂರುಹಂ ॥ ೮ ॥
ಸಾಕ್ಷಾತ್ತಪಸ್ಯಂತಮಿವ ತಪೋ ಧೃತ್ವಾ ನರಾಕೃತಿಂ ।
ನಿರಾಕೃತಿಂ ನಿರಾಕಾಂಕ್ಷಂ ಕೃತ್ವಾ ಭಕ್ತಿಂ ಚ ಕಾಂಚನಾಂ ॥ ೯ ॥
ಕುರಂಗಶಾವೈರ್ಗಣಶೋ ಭ್ರಮದ್ಭಿಃ ಪರಿವಾರಿತಂ ।
ನಿನಾದಭೀಷಣಾಸ್ಯೈಶ್ಚ ವನಜೈಃ ಪರಿರಕ್ಷಿತಂ ॥ ೧೦ ॥
ಏತಾದೃಶಂ ಮಹಾಭೀಮಂ ದೃಷ್ಟ್ವಾ ದೇವಾಃ ಸವಾಸವಾಃ ।
ಧ್ಯಾಯಂತಂ ಚ ಮಹಾದೇವಂ ಸರ್ವೇಷಾಂ ಚಾಽಭಯಪ್ರದಂ ॥ ೧೧ ॥
ಬ್ರಹ್ಮಾದ್ಯಾ ದೈವತಾಃ ಸರ್ವೇ ಕೈಲಾಸಂ ಪ್ರತಿ ಜಗ್ಮಿರೇ ।
ಪಾರಿಜಾತತರುಚ್ಛಾಯಾಮಾಸೀನಂ ಚ ಸಹೋಮಯಾ ॥ ೧೨ ॥
ನಂದಿಭೃಂಗಿರ್ಮಹಾಕಾಲಸ್ತಥಾಽನ್ಯೇ ಚ ಮಹಾಗಣಾಃ ।
ಸ್ಕಂದಸ್ವಾಮೀ ಚ ಭಗವಾನ್ಗಣಪಶ್ಚ ತಥೈವ ಚ ।
ತತ್ರ ದೇವಾಃ ಸಬ್ರಹ್ಮಾದ್ಯಾಃ ಸ್ವಸ್ವಸ್ಥಾನೇಷು ತಸ್ಥಿರೇ ॥ ೧೩ ॥

---

ತಿಳಿಯುವ ಜೀವವುಳ್ಳವನೂ, ಕಣ್ಣಿನ ರೆಪ್ಪೆ ಹಾಕುವುದರಿಂದ ಪ್ರಾಣಿಯೆಂದು ತಿಳಿಯಲು ಯೋಗ್ಯನೂ, ಹಳದಿ ಬಣ್ಣದ ಕಾಂತಿಯುಳ್ಳ ಕಣ್ಣುಗಳಿಂದ ಪ್ರಕಾಶಗೊಳಿಸುವ ದಿಕ್ಕುಗಳುಳ್ಳವನೂ, ತನ್ನ ತಪಸ್ಸಿನ ಅಗ್ನಿಜ್ವಾಲೆಯಿಂದ ಬಾಡಿದ ಕಾಡುಗಳುಳ್ಳವನೂ, ಕಾಡು ತಣಿಯಲು ನೀರಿನ ಮಳೆಯನ್ನು ಸುರಿಸಿ ಅದರಿಂದ ನೆನೆಯಿಸಿದ ಎಲ್ಲ ಮರಗಳುಳ್ಳವನೂ, ಅನಿರ್ವಚನೀಯ ಭಕ್ತಿಯಿಂದ ಯಾವದೊಂದು ಫಲಾಪೇಕ್ಷೆಯಿಲ್ಲದೆ ತಪಸ್ಸೇ ಮನುಷ್ಯದೇಹಧಾರಿಯಾಗಿ ತಪಸ್ಸನ್ನು ಆಚರಿಸುವುದೊ ಎಂಬಂತಿರುವವನೂ, ಹಿಂಡು ಹಿಂಡಾಗಿ ಜಿಂಕೆ ಮರಿಗಳಿಂದ ಸುತ್ತುವರಿಯಲ್ಪಟ್ಟವನೂ, ಭಯಂಕರವಾಗಿ ಘರ್ಜಿಸುತ್ತಿರುವ ಕಾಡಿನ ಪ್ರಾಣಿಗಳಿಂದ ರಕ್ಷಿತನೂ, ಸಮಸ್ತರಿಗೂ ಅಭಯದಾನ ಮಾಡುವ ಮಹಾದೇವನ ಧ್ಯಾನದಲ್ಲಿ ಮಗ್ನನೂ ಆಗಿರುವ ಭಯಂಕರನಾದ ಧರ್ಮರಾಜನನ್ನು ಬ್ರಹ್ಮಾದಿ ದೇವತೆಗಳು ಕಂಡು ಕೈಲಾಸಕ್ಕೆ ತೆರಳಿ, ಅಲ್ಲಿ ದೇವಿಯೊಡನೆ ಪಾರಿಜಾತ ಮರದ ನೆರಳಲ್ಲಿ ಸುಖಾಸೀನನಾದ ಮಹಾದೇವನನ್ನು ಸಮೀಪಿಸಿದರು.

೧೩. ಅಲ್ಲಿ ನಂದಿ, ಭೃಂಗಿ, ಮಹಾಕಾಲ ಮೊದಲಾದ ಮಹಾಗಣಗಳೂ,

CC-0. Jangamwadi Math Collection. Digitized by eGangotri

ಬ್ರಹ್ಮೋವಾಚ :—

ನಮೋಽಸ್ತ್ವನಂತರೂಪಾಯ ನೀಲಕಂಠ ನಮೋಽಸ್ತುತೇ ।
ಅವಿಜ್ಞಾತಸ್ವರೂಪಾಯ ಕೈವಲ್ಯಾಯಾಽಮೃತಾಯ ಚ ॥ ೧೪ ॥
ನಾಽಂತಂ ದೇವಾ ವಿಜಾನಂತಿ ಯಸ್ಯ ತಸ್ಮೈ ನಮೋ ನಮಃ ।
ಯಂ ನ ವಾಚಃ ಪ್ರಶಂಸಂತಿ ನಮಸ್ತಸ್ಮೈ ಚಿದಾತ್ಮನೇ ॥ ೧೫ ॥
ಯೋಗಿನೋ ಯಂ ಹೃದಃಕೋಶೇ ಪ್ರಣಿಧಾನೇನ ನಿಶ್ಚಲಾಃ ।
ಜ್ಯೋತೀರೂಪಂ ಪ್ರಪಶ್ಯಂತಿ ತಸ್ಮೈ ಶ್ರೀಬ್ರಹ್ಮಣೇ ನಮಃ ॥ ೧೬ ॥
ಕಾಲಾತ್ಪರಾಯ ಕಾಲಾಯ ಸ್ವೇಚ್ಛಯಾ ಪುರುಷಾಯ ಚ ।
ಗುಣತ್ರಯಸ್ವರೂಪಾಯ ನಮಃ ಪ್ರಕೃತಿರೂಪಿಣೇ ॥ ೧೭ ॥
ವಿಷ್ಣವೇ ಸತ್ತ್ವರೂಪಾಯ ರಜೋರೂಪಾಯ ವೇಧಸೇ ।
ತಮೋರೂಪಾಯ ರುದ್ರಾಯ ಸ್ಥಿತಿಸರ್ಗಾಽಂತಕಾರಿಣೇ ॥ ೧೮ ॥
ನಮೋ ಬುದ್ಧಿಸ್ವರೂಪಾಯ ತ್ರಿಧಾಽಹಂಕಾರರೂಪಿಣೇ ।
ಪಂಚತನ್ಮಾತ್ರರೂಪಾಯ ನಮಃ ಪ್ರಕೃತಿರೂಪಿಣೇ ॥ ೧೯ ॥

---

ಕುಮಾರಸ್ವಾಮಿಯೂ, ಗಣೇಶನೂ ಇದ್ದರು. ಈ ಬ್ರಹ್ಮಾದಿ ದೇವತೆಗಳೂ ಅಲ್ಲಿ ಹೋಗಿ ಕುಳಿತರು.

೧೪. ಬ್ರಹ್ಮನು ಹೇಳುತ್ತಾನೆ:— ನಾನಾ ರೂಪನೂ, ತಿಳಿಯಲಾಗದ ಸ್ವರೂಪವುಳ್ಳವನೂ, ನಿರ್ವಿಕಲ್ಪನೂ, ಶಾಶ್ವತನೂ ಆಗಿರುವ ಓ ಮಹಾದೇವ! ನಿನ್ನನ್ನು ವಂದಿಸುವೆನು.

೧೫. ಜ್ಞಾನಸ್ವರೂಪನೂ, ವಾಚಾಮಗೋಚರನೂ, ದೇವತೆಗಳೂ ತಿಳಿಯದ ಅವಸಾನವುಳ್ಳವನೂ ಆಗಿರುವ ನಿನಗೆ ನಮಸ್ಕಾರವು.

೧೬. ಯೋಗಿಗಳು ನಿಶ್ಚಲಧ್ಯಾನದಿಂದ ಹೃದಯಕಮಲದಲ್ಲಿ ಕಾಣುತ್ತಿರುವ ಪ್ರಕಾಶರೂಪನಾದ ಪರಮೇಶ್ವರ! ನಿನಗೆ ನಮಸ್ಕಾರವು.

೧೭. ಕಾಲಕ್ಕಿಂತ ಬೇರೆಯವನೂ, ಕಾಲರೂಪನೂ, ಇಷ್ಟದಂತೆ ದೇಹವನ್ನು ಧರಿಸುವವನೂ, ತ್ರಿಗುಣಸ್ವರೂಪನೂ, ಪ್ರಕೃತಿರೂಪಿಯೂ ಆಗಿರುವ ನೀಲಕಂಠ! ನಿನಗೆ ನಮಸ್ಕಾರವು.

೧೮. ಸತ್ವಗುಣರೂಪನಾದ ವಿಷ್ಣುವಾಗಿ ಪ್ರಪಂಚವನ್ನು ಪಾಲಿಸುವ, ರಜೋಗುಣರೂಪನಾದ ಬ್ರಹ್ಮನಾಗಿ ಸೃಷ್ಟಿಸುವ, ತಮೋಗುಣರೂಪನಾದ ರುದ್ರನಾಗಿ ನಾಶಗೊಳಿಸುವ ಓ ಮಹಾದೇವ! ನಿನಗೆ ನಮಸ್ಕಾರವು.

೧೯. ಬುದ್ಧಿಸ್ವರೂಪನೂ, ತ್ರಿವಿಧಾಹಂಕಾರರೂಪನೂ, ಪೃಥಿವ್ಯಾದಿ ಪಂಚತನ್ಮಾತ್ರರೂಪನೂ, ಪ್ರಕೃತಿಸ್ವರೂಪನೂ ಆಗಿರುವ ಮಹೇಶ್ವರ! ನಿನಗೆ ನಮಸ್ಕಾರವು.

CC-0. Jangamwadi Math Collection. Digitized by eGangotri

ನಮೋ ನಮಃ ಸ್ವರೂಪಾಯ ಪಂಚಬುದ್ಧೀಂದ್ರಿಯಾತ್ಮನೇ ।
ಕ್ಷಿತ್ಯಾದಿ ಪಂಚರೂಪಾಯ ನಮಸ್ತೇ ವಿಷಯಾತ್ಮನೇ ॥ ೨೦ ॥
ನಮೋ ಬ್ರಹ್ಮಾಂಡರೂಪಾಯ ತದಂತರ್ವರ್ತಿನೇ ನಮಃ ।
ಅರ್ವಾಚೀನಪರಾಚೀನವಿಶ್ವರೂಪಾಯ ತೇ ನಮಃ ॥ ೨೧ ॥
ಅನಿತ್ಯನಿತ್ಯರೂಪಾಯ ಸದಸತ್ಪತಯೇ ನಮಃ ।
ನಮಸ್ತೇ ಭಕ್ತಕೃಪಯಾ ಸ್ವೇಚ್ಛಾವಿಷ್ಕೃತವಿಗ್ರಹ ॥ ೨೨ ॥
ತವ ನಿಶ್ವಸಿತಂ ವೇದಾಸ್ತವ ವೇದೋಽಖಿಲಂ ಜಗತ್ ।
ವಿಶ್ವಾ ಭೂತಾನಿ ತೇ ಪಾದಃ ಶಿರೋ ದ್ಯೌಸ್ಸಮವರ್ತತ ॥ ೨೩ ॥
ನಾಭ್ಯಾ ಆಸೀದಂತರಿಕ್ಷಂ ಲೋಮಾನಿ ಚ ವನಸ್ಪತಿಃ ।
ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯಸ್ತವ ಪ್ರಭೋ ॥ ೨೪ ॥

ತ್ವಮೇವ ಸರ್ವಂ ತ್ವಯಿ ದೇವ ಸರ್ವಂ
ಸರ್ವಸ್ತುತಿಸ್ತವ್ಯ ಇಹ ತ್ವಮೇವ ।
ಈಶ ತ್ವಯಾ ವ್ಯಾಪ್ತಮಿದಂ ಹಿ ಸರ್ವಂ
ನಮೋಽಸ್ತು ಭೂಯೋಽಪಿ ನಮೋ ನಮಸ್ತೇ ॥ ೨೫ ॥

---

೨೦. ಮನಸ್ಸು, ಪಂಚೇಂದ್ರಿಯಗಳು, ಬುದ್ಧಿ, ಭೂಮ್ಯಾದಿ ಪಂಚಭೂತಗಳು, ರೂಪಾದಿ ವಿಷಯಗಳು ಇವುಗಳ ಸ್ವರೂಪನಾದ ಮಹಾದೇವ! ನಿನಗೆ ನಮಸ್ಕಾರವು.

೨೧. ಬ್ರಹ್ಮಾಂಡರೂಪನೂ, ಆ ಬ್ರಂಹ್ಮಾಂಡದೊಳಗಡಗಿರುವವನೂ, ಇಂದಿನ ಮತ್ತು ಹಿಂದಿನ ಪ್ರಪಂಚಗಳ ಸ್ವರೂಪನೂ ಆಗಿರುವ ಮಹಾದೇವ! ನಿನಗೆ ನಮಸ್ಕಾರವು.

೨೨. ನಿತ್ಯಾನಿತ್ಯಸ್ವರೂಪನೂ, ಸತ್ ಮತ್ತು ಅಸದ್ರೂಪವಾದ ವಸ್ತುಗಳಿಗೆ ಒಡೆಯನೂ, ಭಕ್ತರಮೇಲಿನ ದಯೆಯಿಂದ ತನ್ನಿಷ್ಟದಂತೆ ತನ್ನ ಮೂರ್ತಿಯನ್ನು ತೋರಿಸುವವನೂ ಆಗಿರುವ ನೀಲಕಂಠ! ನಿನಗೆ ನಮಸ್ಕಾರವು.

೨೩. ನಿನ್ನ ಉಸಿರೇ ವೇದಗಳು. ನಿನ್ನ ವೇದಗಳೇ ಸಕಲ ಪ್ರಪಂಚಗಳು. ನಿನ್ನ ಪಾದವೇ ಸಕಲ ಪ್ರಾಣಿಗಳು. ನಿನ್ನ ತಲೆಯೇ ಆಕಾಶವಾಗಿದೆ.

೨೪. ಸ್ವಾಮಿ! ನಿನ್ನ ಹೊಕ್ಕಳಿನಿಂದ ಅಂತರಿಕ್ಷವೂ, ರೋಮಗಳಿಂದ ವೃಕ್ಷಗಳೂ, ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ ಹುಟ್ಟಿದರು.

೨೫. ಈಶ್ವರ! ಎಲ್ಲವೂ ನೀನೇ. ನಿನ್ನಲ್ಲಿಯೇ ಎಲ್ಲವೂ ಇರುವುವು. ಸ್ತೋತ್ರವೂ, ಸ್ತೋತ್ರಮಾಡಿಸಿಕೊಳ್ಳುವವನೂ ನೀನೇ. ಈ ಸಮಸ್ತ ಜಗತ್ತುಗಳಲ್ಲಿಯೂ ನೀನು ಅಂತರ್ಯಾಮಿಯಾಗಿರುವೆ. ನಿನಗೆ ಪುನಃ ಪುನಃ ನಮಸ್ಕಾರವು.

CC-0. Jangamwadi Math Collection. Digitized by eGangotri

ಇತಿ ಸ್ತುತ್ವಾ ಮಹಾದೇವಂ ನಿಪೇತುರ್ದಂಡವತ್ಕ್ಷಿತೌ ।
ಪ್ರತ್ಯುವಾಚ ತದಾ ಶಂಭುರ್ವರದೋऽಸ್ಮಿ ಕಿಮಿಚ್ಛಥ ॥ ೨೬ ॥

ಮಹಾದೇವ ಉವಾಚ :—

ಕಥಂ ವ್ಯಗ್ರಾಃ ಸುರಾಃ ಸರ್ವೇ ಬೃಹಸ್ಪತಿಪುರೋಗಮಾಃ ।
ತತ್ಸಮಾಚಕ್ಷ್ವ ಮಾಂ ಬ್ರಹ್ಮನ್ಭವತಾಂ ದುಃಖಕಾರಣಂ ॥ ೨೭ ॥

ಬ್ರಹ್ಮೋವಾಚ :—

ನೀಲಕಂಠ ಮಹಾದೇವ ದುಃಖನಾಶಾऽಭಯಪ್ರದ ।
ಶೃಣು ತ್ವಂ ದುಃಖಮಸ್ಮಾಕಂ ಭವತೋ ಯದ್ವದಾಮ್ಯಹಂ ॥ ೨೮ ॥
ಧರ್ಮರಾಜೋऽಪಿ ಧರ್ಮಾತ್ಮಾ ತಪಸ್ತೇಪೇ ಸುದುಃಸಹಂ ।
ಕಿಮಿಚ್ಛತಿ ನ ಜಾನೇऽಸೌ ದೇವಾನಾಂ ಪದಮುತ್ತಮಂ ॥ ೨೯ ॥
ತೇನ ತ್ರಸ್ತಾಸ್ತತ್ತಪಸಾ ಸರ್ವ ಇಂದ್ರಪುರೋಗಮಾಃ ।
ಭವತೋಂಘ್ರೌ ಚಿರೇಣೈವ ಮನಸ್ತೇನ ಸಮರ್ಪಿತಂ ।
ತಮುತ್ಥಾಪಯ ದೇವೇಶ ಕಿಮಿಚ್ಛತಿ ಸ ಧರ್ಮರಾಟ್ ॥ ೩೦ ॥

ಈಶ್ವರ ಉವಾಚ :—

ಭವತಾಂ ನಾऽಸ್ತಿ ನು ಭಯಂ ಧರ್ಮಾತ್ಸತ್ಯಂ ಬ್ರವೀಮ್ಯಹಂ ॥ ೩೧ ॥

---

೨೬. ಹೀಗೆ ಬ್ರಹ್ಮಾದಿ ದಿವಿಜರು ಮಹಾದೇವನನ್ನು ಸ್ತುತಿಸಿ ನೆಲದ ಮೇಲೆ ಸಾಷ್ಟಾಂಗ ಪ್ರಣಾಮಂಗೈದರು. ಆಗ ಪರಮೇಶ್ವರನು "ನಿಮಗೆ ವರದಾನಮಾಡಲು ಉದ್ಯುಕ್ತನಾಗಿದ್ದೇನೆ. ನಿಮ್ಮ ಅಭೀಪ್ಸಿತವೇನು?" ಎಂದು ಕೇಳಿದನು.

೨೭. ಮಹಾದೇವನು ಕೇಳುತ್ತಾನೆ:—ಪಿತಾಮಹ! ಬೃಹಸ್ಪತಿ ಮೊದಲಾದ ಸಕಲ ದೇವತೆಗಳು ತವಕಿಸುತ್ತಿದ್ದಾರಷ್ಟೆ. ನಿಮ್ಮ ದುಃಖಕ್ಕೆ ಕಾರಣವೇನು? ಹೇಳು.

೨೮. ಬ್ರಹ್ಮನು ಹೇಳುತ್ತಾನೆ:— ಮಹಾದೇವ! ನಮ್ಮ ದುಃಖವನ್ನು ನಿವಾರಿಸಲು ನೀನು ಅಭಯದಾನ ಮಾಡಿದ್ದೀಯೆ. ನಿನಗೆ ನಮ್ಮ ದುಃಖವನ್ನು ತಿಳಿಸುವೆನು, ಕೇಳು.

೨೯–೩೦. ಧರ್ಮಾತ್ಮನಾದ ಯಮಧರ್ಮನು ಘೋರತಪಸ್ಸನ್ನು ಮಾಡುತ್ತಿದ್ದಾನೆ. ಇವನು ದೇವತೆಗಳ ಉತ್ತಮ ಪದವಿಯನ್ನು ಬಯಸುವನೊ ಏನೊ ನಾನರಿಯೆ. ಅವನ ಆ ತಪಸ್ಸಿನಿಂದ ಚಲಿತರಾದ ಇಂದ್ರಾದಿ ದೇವತೆಗಳು ಬಹು ಕಾಲದಿಂದ ನಿನ್ನಡಿಯಲ್ಲಿ ಮನಸ್ಸನ್ನಿಟ್ಟಿರುವರು. ಶಂಭೊ! ಆ ಧರ್ಮನು ಬಯಸುವುದನ್ನು ಅವನಿಗಿತ್ತು ಅವನನ್ನು ತಪಸ್ಸಿನಿಂದ ಎಚ್ಚರಗೊಳಿಸು.

೩೧. ಈಶ್ವರನು ಹೇಳುತ್ತಾನೆ:—ನಿಜವಾಗಿ ಹೇಳುತ್ತೇನೆ. ನಿಮಗೆ ಆ ಧರ್ಮನಿಂದ ಹೆದರಿಕೆಯಿಲ್ಲ.

CC-0. Jangamwadi Math Collection. Digitized by eGangotri

ತತ ಉತ್ಥಾಯ ತೇ ಸರ್ವೇ ದೇವಾಃ ಸಹದಿವೌಕಸಃ ।
ರುದ್ರಂ ಪ್ರದಕ್ಷಿಣೀಕೃತ್ಯ ನಮಸ್ಕೃತ್ವಾ ಪುನಃ ಪುನಃ ॥ ೩೨ ॥
ಇಂದ್ರೇಣ ಸಹಿತಾಃ ಸರ್ವೇ ಕೈಲಾಸಾತ್ಪುನರಾಗತಾಃ ।
ಸ್ವಸ್ವಸ್ಥಾನೇ ತದಾ ಶೀಘ್ರಂ ಗತಾಃ ಸರ್ವೇ ದಿವೌಕಸಃ ॥ ೩೩ ॥
ಇಂದ್ರೋಽಪಿ ವೈ ಸುಧರ್ಮಾಯಾಂ ಗತವಾನ್ಪ್ರಭುರೀಶ್ವರಃ ।
ನ ನಿದ್ರಾಂ ಲಬ್ಧವಾಂಸ್ತತ್ರ ನ ಸುಖಂ ನ ಚ ನಿರ್ವೃತಿಂ ॥ ೩೪ ॥
ಮನಸಾ ಚಿಂತಯಾಮಾಸ ವಿಘ್ನಂ ಮೇ ಸಮುಪಸ್ಥಿತಂ ।
ಅವಾಪ ಮಹತೀಂ ಚಿಂತಾಂ ತದಾ ದೇವಃ ಶಚೀಪತಿಃ ॥ ೩೫ ॥
ಮಮ ಸ್ಥಾನಂ ಪರಾಹರ್ತುಂ ತಪಸ್ತೇಪೇ ಸುದುಶ್ಚರಂ ।
ಸರ್ವಾನ್ದೇವಾನ್ಸಮಾಹೂಯ ಇದಂ ವಚನಮಬ್ರವೀತ್ ॥ ೩೬ ॥

ಇಂದ್ರ ಉವಾಚ :—

ಶೃಣ್ವಂತು ದೇವತಾಃ ಸರ್ವಾ ಮಮ ದುಃಖಸ್ಯ ಕಾರಣಂ ।
ದುಃಖೇನ ಮಮ ಯಲ್ಲಬ್ಧಂ ತತ್ಕಿಂ ವಾ ಪ್ರಾರ್ಥಯೇದ್ಯಮಃ ।
ಬೃಹಸ್ಪತಿಃ ಸಮಾಲೋಕ್ಯ ಸರ್ವಾನ್ದೇವಾನಥಾಽಬ್ರವೀತ್ ॥ ೩೭ ॥

ಬೃಹಸ್ಪತಿರುವಾಚ :—

ತಪಸೇ ನಾಽಸ್ತಿ ಸಾಮರ್ಥ್ಯಂ ವಿಘ್ನಂ ಕರ್ತುಂ ದಿವೌಕಸಃ ।
ಉರ್ವಶ್ಯಾದ್ಯಾಃ ಸಮಾಹೂಯ ಸಂಪ್ರೇಷ್ಯಂತಾಂ ಚ ತತ್ರ ವೈ ॥ ೩೮ ॥

---

೩೨–೩೩. ಬಳಿಕ ದೇವಲೋಕವಾಸಿಗಳಾದ ದೇವತೆಗಳೆಲ್ಲ ಇಂದ್ರನೊಡನೆ ರುದ್ರನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಅನೇಕಬಾರಿ ಮಾಡಿ ಕೈಲಾಸದಿಂದ ಜಾಗ್ರತೆಯಾಗಿ ತಮ್ಮತಮ್ಮ ಸ್ಥಳಗಳಿಗೆ ಹಿಂದಿರುಗಿದರು.

೩೪–೩೬. ದೇವೇಶ್ವರನಾದ ಇಂದ್ರನು ಸುಧರ್ಮಾ ಎಂಬ ತನ್ನ ಸಭೆಯನ್ನು ಸೇರಿ ಅಲ್ಲಿ ನಿದ್ರೆಯನ್ನೂ, ಸೌಖ್ಯವನ್ನೂ, ಮನಸ್ಸಿಗೆ ನೆಮ್ಮದಿಯನ್ನೂ ಹೊಂದಲಿಲ್ಲ. ಶಚೀಪತಿಯಾದ ಶಕ್ರನು ಆಗ ತನಗೆ ವಿಘ್ನವು ಸಂಭವಿಸಿತೆಂದು ಆಲೋಚಿಸಿದನು. ಅಂತೆಯೇ ಈ ಧರ್ಮನು ನನ್ನ ಪದವಿಯನ್ನು ಅಪಹರಿಸುವುದಕ್ಕಾಗಿ ಘೋರತಪಸ್ಸನ್ನಾಚರಿಸಿರುವನೆಂದು ಚಿಂತಾಕ್ರಾಂತನಾದನು. ಆದ್ದರಿಂದ ಸಕಲ ದೇವತೆಗಳನ್ನೂ ಕರೆದು ಈ ಮಾತನ್ನುಸುರಿದನು.

೩೭. ಇಂದ್ರನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ಕೇಳಿ. ನಾನು ಕಷ್ಟಪಟ್ಟು ಸಂಪಾದಿಸಿದ ಈ ದೇವರಾಜಪದವಿಯನ್ನು ಯಮನು ಅಪಹರಿಸುವನೆಂದು ಬಹಳ ದುಃಖಪಡುತ್ತಿದ್ದೇನೆ." ಶಕ್ರನು ಹೀಗೆ ಹೇಳಲು ಬೃಹಸ್ಪತ್ಯಾಚಾರ್ಯನು ಎಲ್ಲ ದೇವತೆಗಳನ್ನು ಈಕ್ಷಿಸಿ ಇಂತೆಂದನು.

೩೮. ಬೃಹಸ್ಪತಿಯು ಹೇಳುತ್ತಾನೆ:—"ದೇವತೆಗಳಿರಾ! ಧರ್ಮನ

CC-0. Jangamwadi Math Collection. Digitized by eGangotri

ತಾಸಾಮಾಕಾರಣಾರ್ಥಾಯ ಪ್ರತಿದ್ವಾರಂ ಪ್ರತಸ್ಥಿವಾನ್ ।
ಸ ಗತ್ವಾ ತಾಃ ಸಮಾದಾಯ ಸಭಾಯಾಂ ಶೀಘ್ರಮಾಯಯೌ ॥ ೩೯ ॥
ಆಗತಾಸ್ತಾ ಹರಿಃ ಪ್ರಾಹ ಮಹತ್ಕಾರ್ಯಮುಪಸ್ಥಿತಂ ।
ಗಚ್ಛಂತು ತ್ವರಿತಾಃ ಸರ್ವಾ ಧರ್ಮಾರಣ್ಯಂ ಪ್ರತಿ ದ್ರುತಂ ॥ ೪೦ ॥
ಯತ್ರ ವೈ ಧರ್ಮರಾಜೋಽಸೌ ತಪಶ್ಚಕ್ರೇ ಸುದುಷ್ಕರಂ ।
ಹಾಸ್ಯಭಾವಕಟಾಕ್ಷೈಶ್ಚ ಗೀತನೃತ್ಯಾದಿಭಿಸ್ತಥಾ ॥ ೪೧ ॥
ತಂ ಲೋಭಯಧ್ವಂ ಯಮಿನಂ ತಪಃಸ್ಥಾನಾಚ್ಚ್ಯುತಿರ್ಭವೇತ್ ।
ದೇವಸ್ಯ ವಚನಂ ಶ್ರುತ್ವಾ ತಥಾ ಅಪ್ಸರಸಾಂ ಗಣಾಃ ॥ ೪೨ ॥
ಮಿಥಃ ಸಂರೇಭಿರೇ ಕರ್ತುಂ ವಿಚಾರ್ಯ ಚ ಪರಸ್ಪರಂ ।
ಧರ್ಮಾರಣ್ಯಂ ಪ್ರತಸ್ಥೇಽಸಾವುರ್ವಶೀ ಸ್ವರ್ವರಾಂಗನಾ ॥ ೪೩ ॥
ತುಷ್ಟುವುಃ ಪುಷ್ಪವರ್ಷಾಂಶ್ಚ ಸಸೃಜುಸ್ತಚ್ಛಿರಸ್ಯಮೂ ।
ತತಸ್ತು ದೇವೈರ್ವಿಪ್ರೈಶ್ಚ ಸ್ತೂಯಮಾನಾ ಸಮಂತತಃ ॥ ೪೪ ॥
ನಿರ್ಯಯೌ ಪರಮಪ್ರೀತ್ಯಾ ವನಂ ಪರಮಪಾವನಂ ।
ಬಿಲ್ವಾರ್ಕಖದಿರಾಕೀರ್ಣಂ ಕಪಿತ್ಥಧವಸಂಕುಲಂ ॥ ೪೫ ॥

---

ತಪಸ್ಸನ್ನು ಕೆಡಿಸಲು ಸಾಮರ್ಥ್ಯವಿಲ್ಲವೆ? ಉರ್ವಶ್ಯಾದಿ ಅಪ್ಸರಸ್ತ್ರೀಯರನ್ನು ಕರೆದು ಆ ಧರ್ಮನೆಡೆಗೆ ಕಳುಹಿಸಿರಿ.''

೩೯. ಆ ಉರ್ವಶೀ ಮೊದಲಾದವರನ್ನು ಕರೆತರುವುದಕ್ಕಾಗಿ ಹೊರಟ ಬೃಹಸ್ಪತಿಯು ಆ ಸ್ತ್ರೀಯರನ್ನು ಕರೆದುಕೊಂಡು ಸಭೆಗೆ ಜಾಗ್ರತೆಯಾಗಿ ಬಂದನು.

೪೦. ಆ ಸ್ತ್ರೀಯರು ಬರಲು ದೇವೇಂದ್ರನು ಅವರನ್ನು ಕುರಿತು, "ದೊಡ್ಡ ದೊಂದು ಕೆಲಸವು ಒದಗಿದೆ. ನೀವು ಶೀಘ್ರವಾಗಿ ಧರ್ಮಾರಣ್ಯಕ್ಕೆ ಹೊರಡಿ.

೪೧–೪೩. ಧರ್ಮಾರಣ್ಯದಲ್ಲಿ ಧರ್ಮನು ಘೋರತಪಸ್ಸನ್ನು ಮಾಡುತ್ತಿದ್ದಾನೆ. ಜಿತೇಂದ್ರಿಯನಾದ ಅವನನ್ನು ನಿಮ್ಮ ಹಾವಭಾವಕಟಾಕ್ಷಗಳಿಂದಲೂ, ಗೀತನರ್ತನಾದಿಗಳಿಂದಲೂ ಮೋಹಗೊಳಿಸಿ ತಪೋವಿಮುಖನನ್ನಾಗಿ ಮಾಡಿರಿ'' ಎಂದನು. ಶಕ್ರನು ಇಂತು ಆಜ್ಞಾಪಿಸಲು ಆ ಅಪ್ಸರಸ್ತ್ರೀಯರು ಅವನ ಮಾತನ್ನು ಕೇಳಿ ಪರಸ್ಪರ ಆಲೋಚಿಸಿ ಧರ್ಮಾರಣ್ಯಕ್ಕೆ ಉರ್ವಶಿಯನ್ನು ಕಳುಹಿದರು.

೪೪–೫೧. ಈ ಅಪ್ಸರಸ್ತ್ರೀಯರು ಆ ಉರ್ವಶಿಯನ್ನು ಸ್ತುತಿಸಿ ಮಸ್ತಕದಲ್ಲಿ ಹೂಮಳೆಗರೆದರು. ಬಳಿಕ ದೇವತೆಗಳೂ ದ್ವಿಜರೂ ಎಲ್ಲೆಡೆಯಲ್ಲಿಯೂ ಹೊಗಳಲು ಸಂತೋಷಗೊಂಡ ಉರ್ವಶಿಯು ಅಪ್ಸರಸ್ತ್ರೀಯರೊಡನೆ ಬಿಲ್ವ, ಎಕ್ಕೆ, ಖದಿರ, ಬೇಲ, ಧವವೆಂಬ ವೃಕ್ಷಗಳಿಂದ ಶೋಭಾಯಮಾನವೂ.

CC-0. Jangamwadi Math Collection. Digitized by eGangotri

ನ ಸೂರ್ಯೋ ಭಾತಿ ತತ್ರೈವ ಮಹಾಂಧಕಾರಸಂಯುತಂ ।
ನಿರ್ಜನಂ ನಿರ್ಮನುಷ್ಯಂ ಚ ಬಹುಯೋಜನಮಾಯತಂ ॥ ೪೬ ॥
ಮೃಗೈಃ ಸಿಂಹೈರ್ವೃತಂ ಘೋರೈರನ್ಯೈಶ್ಚಾಽಪಿ ವನೇಚರೈಃ ।
ಪುಷ್ಪಿತೈಃ ಪಾದಪೈಃ ಕೀರ್ಣಂ ಸುಮನೋಹರಶಾದ್ವಲಂ ॥ ೪೭ ॥
ವಿಪುಲಂ ಮಧುರಾನಾದೈರ್ನಾದಿತಂ ವಿಹಗೈಸ್ತಥಾ ।
ಪುಂಸ್ಕೋಕಿಲ ನಿನಾದಾಢ್ಯಂ ಝಿಲ್ಲೀಕ ಗಣನಾದಿತಂ ॥ ೪೮ ॥
ಪ್ರವೃದ್ಧವಿಕಟೈರ್ವೃಕ್ಷೈಃ ಸುಖಚ್ಛಾಯೈಃ ಸಮಾವೃತಂ ।
ವೃಕ್ಷೈರಾಚ್ಛಾದಿತತಲಂ ಲಕ್ಷ್ಮ್ಯಾ ಪರಮಯಾ ಯುತಂ ॥ ೪೯ ॥
ನಾಽಪುಷ್ಪಃ ಪಾದಪಃ ಕಶ್ಚಿನ್ನಾಽಫಲೋ ನಾಽಪಿ ಕಂಟಕೀ ।
ಷಟ್ಪದೈರಪ್ಯನಾಕೀರ್ಣಂ ನಾಽಸ್ಮಿನ್ವೈ ಕಾನನೇ ಭವೇತ್ ॥ ೫೦ ॥
ವಿಹಂಗೈರ್ನಾದಿತಂ ಪುಷ್ಪೈರಲಂಕೃತಮತೀವ ಹಿ ।
ಸರ್ವರ್ತುಕುಸುಮೈರ್ವೃಕ್ಷೈಃ ಸುಖಚ್ಛಾಯೈಃ ಸಮಾವೃತಂ ॥ ೫೧ ॥
ಮಾರುತಾಕಲಿತಾಸ್ತತ್ರ ದ್ರುಮಾಃ ಕುಸುಮಶಾಖಿನಃ ।
ಪುಷ್ಪವೃಷ್ಟಿಂ ವಿಚಿತ್ರಾಂ ತು ವಿಸೃಜಂತಿ ಚ ಪಾದಪಾಃ ॥ ೫೨ ॥
ದಿವಸ್ಪೃಶೋಽಥ ಸಂತುಷ್ಟಾಃ ಪಕ್ಷಿಭಿರ್ಮಧುರಸ್ವನೈಃ ।
ವಿರೇಜುಃ ಪಾದಪಾಸ್ತತ್ರ ಸುಗಂಧಕುಸುಮೈರ್ವೃತಾಃ ॥ ೫೩ ॥

---

ಸೂರ್ಯನ ಬಿಸಿಲು ಬೀಳದಿರುವುದರಿಂದ ಹೆಗ್ಗತ್ತಲೆಯುಳ್ಳುದೂ, ನಿರ್ಜನವೂ, ಅನೇಕಗಾವುದ ವಿಶಾಲವೂ, ಜಿಂಕೆ, ಹಿಂಸ್ರಸಿಂಹಗಳು, ಇತರ ವನಜಂತುಗಳು—ಇವುಗಳುಳ್ಳುದೂ, ಹೂಬಿಟ್ಟಿರುವ ಮರಗಳುಳ್ಳುದೂ, ರಮ್ಯವಾದ ಹುಲ್ಲು ಮೈದಾನವುಳ್ಳುದೂ, ಇಂಪಾಗಿ ದನಿಗೈವ ಹಕ್ಕಿಗಳ ಧ್ವನಿಯುಳ್ಳುದೂ, ಗಂಡುಕೋಗಿಲೆ ಮತ್ತು ಝಿಲ್ಲಿ ಎಂಬ ಹುಳುಗಳ ಸ್ವರಗಳಿಂದ ರಮ್ಯವಾದುದೂ, ಉನ್ನತವಾಗಿ ಬೆಳೆದು ನೆರಳನ್ನೀಯುವ ಮರಗಳುಳ್ಳುದೂ, ಮರಗಳಿಂದ ಮುಟ್ಟಿದ ಆಕಾಶತಳವುಳ್ಳುದೂ, ಅತಿ ಪ್ರಕಾಶಮಾನವಾದುದೂ, ಹೂವು ಹಣ್ಣು ದುಂಬಿಗಳಿಂದಲಂಕೃತವಾಗಿ ಮುಳ್ಳಿಲ್ಲದ ಮರಗಳುಳ್ಳುದೂ, ಸಕಲ ಋತುಗಳಲ್ಲಿಯೂ ಹೂವುಗಳನ್ನು ಬಿಡುವ ವೃಕ್ಷಗಳಿಂದ ಶೋಭಿತವೂ ಆಗಿರುವ ಆ ಧರ್ಮಾರಣ್ಯಕ್ಕೆ ಹೊರಟಳು.

೫೨. ಅಲ್ಲಿ ಹೂಮರಗಳು ಗಾಳಿಯಿಂದ ಚಲಿಸುತ್ತ ಅದ್ಭುತವಾದ ಹೂಮಳೆಗರೆಯುತ್ತಿದ್ದುವು.

೫೩. ಸ್ವರ್ಗಸ್ಪರ್ಶಿಗಳಾದ ಪಾದಪಗಳು ಪಕ್ಷಿಗಳ ಇಂಪಾದ ಕೂಗಿನಿಂದ ರಮ್ಯಗಳಾಗಿ ಸುವಾಸನೆಯಾದ ಹೂವುಗಳಿಂದ ವಿರಾಜಿಸುತ್ತಿದ್ದುವು.

CC-0. Jangamwadi Math Collection. Digitized by eGangotri

ತಿಷ್ಠಂತಿ ಚ ಪ್ರನಾಲೇಷು ಪುಷ್ಪಭಾರಾವನಾದಿಷು ।
ರುವಂತಿ ಮಧುರಾಲಾಪಾಃ ಷಟ್ಪದಾ ಮಧುಲಿಪ್ಸವಃ ॥ ೫೪ ॥
ತತ್ರ ಪ್ರದೇಶಾಂಶ್ಚ ಬಹೂನಾನೋದಾಂಕುರಮಂಡಿತಾನ್ ।
ಲತಾಗೃಹಪರಿಕ್ಷಿಪ್ತಾನ್ಮನಸಃ ಪ್ರೀತಿವರ್ಧನಾನ್ ॥ ೫೫ ॥
ಸಂಪಶ್ಯಂತೀ ಮಹಾತೇಜಾ ಬಭೂವ ಮುದಿತಾ ತದಾ ।
ಪರಸ್ಪರಾಶ್ಲಿಷ್ಟಶಾಖೈಃ ಪಾದಪೈಃ ಕುಸುಮಾಚಿತೈಃ ॥ ೫೬ ॥
ಅಶೋಭತ ವನಂ ತತ್ತು ಮಹೇಂದ್ರಧ್ವಜಸನ್ನಿಭೈಃ ।
ಸುಖಶೀತಸುಗಂಧೀ ಚ ಪುಷ್ಪರೇಣುವಹೋಽನಿಲಃ ॥ ೫೭ ॥
ಏವಂಗುಣಸಮಾಯುಕ್ತಂ ಸಾ ದದರ್ಶ ವನಂ ತದಾ ।
ತದಾ ಸೂರ್ಯೋದ್ಭವಾಂ ತತ್ರ ಪವಿತ್ರಾಂ ಪರಿಶೋಭಿತಾಂ ॥ ೫೮ ॥
ಆಶ್ರಮಪ್ರವರಂ ತತ್ರ ದದರ್ಶ ಚ ಮನೋರಮಂ ।
ಯತಿಭಿರ್ವಾಲಖಿಲ್ಯೈಶ್ಚ ವೃತ್ತಂ ಮುನಿಗಣಾವೃತಂ ॥ ೫೯ ॥
ಅಗ್ನ್ಯಾಗಾರೈಶ್ಚ ಬಹುಭಿರ್ವೃಕ್ಷಶಾಖಾಽವಲಂಬಿತೈಃ ।
ಧೂಮ್ರಪಾನಕಣೈಸ್ತತ್ರ ದಿಗ್ವಾಸೋಯತಿಭಿಸ್ತಥಾ ॥ ೬೦ ॥
ಪಾಲ್ಯಾ ವನ್ಯಾ ಮೃಗಾಸ್ತತ್ರ ಸೌಮ್ಯಾ ಭೂಯೋ ಬಭೂವಿರೇ ।
ಮಾರ್ಜಾರಾ ಮೂಷಕೈಸ್ತತ್ರ ಸರ್ಪೈಶ್ಚ ನಕುಲಾಸ್ತಥಾ ॥ ೬೧ ॥

---

೫೪. ಅಲ್ಲಿ ವೃಕ್ಷಗಳಲ್ಲಿರುವ ಚಿಗುರುಗಳೊಡಗೂಡಿ ಹೂಗೊಂಚಲುಗಳಲ್ಲಿ ದುಂಬಿಗಳು ಮಕರಂದದಾಶೆಯಿಂದ ಇಂಪಾಗಿ ಝೇಂಕರಿಸುತ್ತಿದ್ದುವು.

೫೫–೫೮. ಅಲ್ಲಿ ಅವಳು ಘಮಘಮಿಸುವ ಲತಾಗೃಹಗಳುಳ್ಳ, ಮನಸ್ಸಿಗೆ ಅತ್ಯಾನಂದವನ್ನುಂಟುಮಾಡುವ ಸ್ಥಳಗಳನ್ನು ಕಂಡು ಪರಮಾನಂದಗೊಂಡಳು. ಪರಸ್ಪರ ಸಂಮಿಳಿತಗಳಾದ ಕೊಂಬೆಗಳುಳ್ಳ ಇಂದ್ರನ ಧ್ವಜದಂತಿರುವ ಮರಗಳಿಂದ ರಮ್ಯವಾಗಿಯೂ, ಶೈತ್ಯ, ಸೌರಭ್ಯ, ಮಾಂದ್ಯಗಳಿಂದೊಪ್ಪಿ ಬೀಸುವ ಗಾಳಿಯಿಂದ ಸುವಾಸನೆಯಾಗಿಯೂ ಇರುವ ಕಾಡನ್ನೂ, ಪವಿತ್ರವಾದ ನರ್ಮದಾ ನದಿಯನ್ನೂ ಕಂಡಳು.

೫೯–೬೦. ಮತ್ತು ವಾಲಖಿಲ್ಯಯತಿಗಳಿಂದಲೂ, ಮುನಿವರ್ಯರಿಂದಲೂ, ಅನೇಕ ಯಜ್ಞಶಾಲೆಗಳಿಂದಲೂ, ಮರಗಳ ಕೊಂಬೆಗಳಲ್ಲಿ ಜೋಲುತ್ತಿರುವ ಹೊಗೆಗಳಿಂದಲೂ, ದಿಗಂಬರ ಸನ್ಯಾಸಿಗಳಿಂದಲೂ ಕಂಗೊಳಿಸುತ್ತಿರುವ ಒಂದು ಆಶ್ರಮವನ್ನು ಕಂಡಳು.

೬೧–೬೩. ಅಲ್ಲಿ ಗೃಹಪೋಷಿತಗಳಾದ ಮೃಗಗಳಂತೆ ಕಾಡುಮೃಗಗಳು ಸೌಮ್ಯವಾಗಿದ್ದುವು. ಬೆಕ್ಕುಗಳು ಇಲಿಗಳೊಡನೆಯೂ, ಮುಂಗಸಿಗಳು ಸರ್ಪಗಳೊಡನೆಯೂ, ಸಿಂಹಗಳು ಜಿಂಕೆಮರಿಗಳೊಡನೆಯೂ, ಸಾಧುಗಳಾಗಿ



CC-0. Jangamwadi Math Collection. Digitized by eGangotri

ಮೃಗಶಾವೈಸ್ತಥಾ ಸಿಂಹಾಃ ಸತ್ವರೂಪಾ ಬಭೂವಿರೇ ।
ಪರಸ್ಪರಂ ಚಿಕ್ರೀಡುಸ್ತೇ ಯಥಾ ಚೈವ ಸಹೋದರಾಃ ।
ದೂರಾದ್ದದರ್ಶ ಚ ವನಂ ತತ್ರ ದೇವೋಽಬ್ರವೀತ್ತದಾ ॥ ೬೨ ॥

ಇಂದ್ರ ಉವಾಚ :—

ಅಯಂ ಚ ಖಲು ಧರ್ಮರಾಟ್ ತಪಸ್ಯುಗ್ರೇಽವತಿಷ್ಠತೇ ।
ಮಮ ರಾಜ್ಯಾಭಿಕಾಂಕ್ಷೋಽಸಾವತೋಽರ್ಥೇ ಯತ್ಯತಾಮಿಹ ॥ ೬೩ ॥
ತಪೋವಿಘ್ನಂ ಪ್ರಕುರ್ವಂತು ಮಮಾಜ್ಞಾ ತತ್ರ ಗಮ್ಯತಾಂ ।
ಇಂದ್ರಸ್ಯ ವಚನಂ ಶ್ರುತ್ವಾ ಉರ್ವಶೀ ಚ ತಿಲೋತ್ತಮಾ ॥ ೬೪ ॥
ಸುಕೇಶೀ ಮಂಜುಘೋಷಾ ಚ ಘೃತಾಚೀ ಮೇನಕಾ ತಥಾ ।
ವಿಶ್ವಾಚೀ ಚೈವ ರಂಭಾ ಚ ಪ್ರಮ್ಲೋಚಾ ಚಾರುಭಾಷಿಣೀ ॥ ೬೫ ॥
ಪೂರ್ವಚಿತ್ತಿಃ ಸುರೂಪಾ ಚ ಅನುಮ್ಲೋಚಾ ಯಶಸ್ವಿನೀ ।
ಏತಾಶ್ಚಾಽನ್ಯಾಶ್ಚ ಬಹುಶಸ್ತತ್ರ ಸಂಸ್ಥಾ ವ್ಯಚಿಂತಯನ್ ॥ ೬೬ ॥
ಪರಸ್ಪರಂ ವಿಲೋಕ್ಯೈವ ಶಂಕಮಾನಾ ಭಯೇನ ಹಿ ।
ಯಮಶ್ಚೈವ ತಥಾ ಶಕ್ರ ಉಭಾವಾಯತನಂ ಹಿ ನಃ ॥ ೬೭ ॥
ಏವಂ ವಿಚಾರ್ಯ ಬಹುಧಾ ವರ್ಧನೀನಾಮ ಭಾರತ ।
ಸರ್ವಾಸಾಮಪ್ಸರಸಾಂ ಶ್ರೇಷ್ಠಾ ಸರ್ವಾಭರಣಭೂಷಿತಾ ॥ ೬೮ ॥

---

ಸಹೋದರರಂತೆ ಆಡುತ್ತಿದ್ದುವು. ಆಗ ಅವನನ್ನು ದೂರದಿಂದ ನೋಡಿ ದೇವ ರಾಜನು ಇಂತೆಂದನು.

೬೩. ಇಂದ್ರನು ಹೇಳುತ್ತಾನೆ:— ಈ ಧರ್ಮರಾಜನು ನನ್ನ ದೇವರಾಜ್ಯ ದಾಶೆಯಿಂದ ಉಗ್ರತಪವಂಗೈಯುತ್ತಿರುವನು. ಅದಕ್ಕಾಗಿ ನೀವು ಈ ರೀತಿ ಪ್ರಯತ್ನಿಸಬೇಕು.

೬೪-೬೭. ನೀವೆಲ್ಲ ಸೇರಿ ಅವನ ತಪಸ್ಸನ್ನು ಕೆಡಿಸಬೇಕು. ನಾನು ಅಪ್ಪಣೆಮಾಡುತ್ತೇನೆ. ನೀವು ಅವನೆಡೆಗೆ ನಡೆಯಿರಿ. ಇಂದ್ರನ ಮಾತನ್ನು ಉರ್ವಶೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ, ಘೃತಾಚೀ, ಮೇನಕಾ, ವಿಶ್ವಾಚೀ, ರಂಭಾ, ಇಂಪಾಗಿ ಮಾತಾಡುವ ಪ್ರಮ್ಲೋಚಾ, ಸುಂದರಿಯಾದ ಪೂರ್ವಚಿತ್ತಿ, ಕೀರ್ತಿಮತಿಯಾದ ಅನುಮ್ಲೋಚಾ ಇವರೂ, ಅಲ್ಲಿರುವ ಇನ್ನೂ ಬೇರೆಯವರೂ ಸೇರಿ ಒಬ್ಬರನ್ನೊಬ್ಬರು ನೋಡಿ ಕಳವಳ ಗೊಳ್ಳುತ್ತ, "ಯಮಧರ್ಮನೂ ಇಂದ್ರನೂ ಇವರಿಬ್ಬರೂ ನಮಗೆ ಆಶ್ರಯದಾತ ರಲ್ಲವೆ" ಎಂದು ಚಿಂತಿಸತೊಡಗಿದರು.

೬೮-೬೯. ಹೀಗೆ ಬಹುವಾಗಿ ಆಲೋಚಿಸಿ ಸಮಸ್ತಾಪ್ಸರಸ್ತ್ರೀಯರಲ್ಲಿ ಉತ್ತಮಳಾದ ಎಲ್ಲಾ ಆಭರಣಗಳಿಂದಲಂಕೃತಳಾಗಿರುವ ವರ್ಧನೀ ಎಂಬವಳು

CC-0. Jangamwadi Math Collection. Digitized by eGangotri

ಉವಾಚೈವೋರ್ವಶೀ ತತ್ರ ಕಿಂ ಖಿದ್ಯಸಿ ಶುಭಾನನೇ ।
ದೇವಾನಾಂ ಕಾರ್ಯಸಿದ್ಧ್ಯರ್ಥಂ ಮಾಯಾರೂಪಬಲೇನ ಚ ।
ವರ್ಣಧರ್ಮೋ ಯಥಾ ಭೂಯಾತ್ಕರಿಷ್ಯೇ ಪಾಕಶಾಸನ ॥ ೬೯ ॥

ಇಂದ್ರ ಉವಾಚ :—

ಸಾಧು ಸಾಧು ಮಹಾಭಾಗೇ ವರ್ಧನೀನಾಮ ಸುವ್ರತಾ ।
ಶೀಘ್ರಂ ಗಚ್ಛ ಸ್ವಯಂ ಭದ್ರೇ ಕುರು ಕಾರ್ಯಂ ಕೃಶೋದರಿ ॥ ೭೦ ॥
ಧೀರಾಣಾಮವನೇ ಶಕ್ತಾ ನಾಽನ್ಯಾ ಸುಭ್ರು ತ್ವಯಾ ವಿನಾ ।
ವರ್ಧನೀ ಚ ತಥೇತ್ಯುಕ್ತ್ವಾ ಗತಾ ಯತ್ರ ಸ ಧರ್ಮರಾಟ್ ॥ ೭೧ ॥
ಮಹತಾ ಭೂಷಣೇನೈವ ರೂಪಂ ಕೃತ್ವಾ ಮನೋರಮಂ ।
ಕುಂಕುಮೈಃ ಕಜ್ಜಲೈರ್ವಸ್ತ್ರೈರ್ಭೂಷಣೈಶ್ಚೈವ ಭೂಷಿತಾ ॥ ೭೨ ॥
ಕುಸುಮಂ ಚ ತಥಾ ವಸ್ತ್ರಂ ಕಿಂಕಿಣೀಕಟಿರಾಜಿತಾ ।
ಝುಣತ್ಕಾರೈಸ್ತಥಾ ಕಷ್ಟೈರ್ಭೂಷಿತಾ ಚ ಪದದ್ವಯೇ ॥ ೭೩ ॥
ನಾನಾಭೂಷಣಭೂಷಾಢ್ಯಾ ನಾನಾಚಂದನಚರ್ಚಿತಾ ।
ನಾನಾಕುಸುಮಮಾಲಾಢ್ಯಾ ದುಕೂಲೇನಾವೃತಾ ಶುಭಾ ॥ ೭೪ ॥
ಪ್ರಗೃಹ್ಯ ವೀಣಾಂ ಸಂಶುದ್ಧಾಂ ಕರೇ ಸರ್ವಾಂಗಸುಂದರೀ ।
ನರ್ತನಂ ತ್ರಿವಿಧಂ ತತ್ರ ಚಕ್ರೇ ಲೋಕಮನೋರಮಂ ॥ ೭೫ ॥
ತಾರಸ್ವರೇಣ ಮಧುರೈರ್ವಂಶನಾದೇನ ಮಿಶ್ರಿತಂ ॥ ೭೬ ॥

---

"ಉರ್ವಶಿ! ಏತಕ್ಕೆ ವ್ಯಥೆಪಡುತ್ತಿರುವೆ" ಎಂದು ಹೇಳಿ, "ದೇವರಾಜ! ದೇವತೆಗಳ ಕಾರ್ಯಸಾಧನೆಗಾಗಿ ಮಾಯಾರೂಪದ ಸಾಮರ್ಥ್ಯದಿಂದ ಜಾತಿ ಧರ್ಮವು ಕೆಡದಂತೆ ಮಾಡುವೆನು" ಎಂದು ನುಡಿದಳು.

೭೦–೭೧. ಇಂದ್ರನು ಹೇಳುತ್ತಾನೆ:— ಪುಣ್ಯಶಾಲಿನಿಯಾದ ವರ್ಧನಿ! ಒಳ್ಳೆಯದು. ವೀರರನ್ನು ಬಗ್ಗಿಸುವುದರಲ್ಲಿ ನಿನ್ನನ್ನು ಬಿಟ್ಟರೆ ಬೇರೆಯವರು ಶಕ್ತರಲ್ಲ. ಸುಂದರಿ! ಬೇಗನೆ ಹೊರಡು. ನಮ್ಮ ಕಾರ್ಯವನ್ನು ನೆರವೇರಿಸು. ಎಂದು ಇಂದ್ರನು ಆಜ್ಞೆಯನ್ನೀಯಲು ವರ್ಧನಿಯು ಅದನ್ನು ಒಪ್ಪಿ ಧರ್ಮ ನಿದ್ದೆಡೆಗೆ ಹೋದಳು.

೭೨–೭೬. ಅವಳು ಒಳ್ಳೆ ಒಡವೆಗಳಿಂದ ಸುಂದರ ರೂಪವನ್ನು ಧರಿಸಿ ಕುಂಕುಮ, ಕಾಡಿಗೆ, ವಸ್ತ್ರ, ಇವುಗಳಿಂದ ಅಲಂಕೃತಳೂ, ಹೂವು ಮುಡಿದವಳೂ, ಸೊಂಟದಲ್ಲಿ ಕಿರುಗೆಜ್ಜೆಯಿಂದ ವಿರಾಜಿತಳೂ, ಕಾಲುಗಳಲ್ಲಿ ನೂಪುರಗಳ ಧ್ವನಿಯುಳ್ಳವಳೂ ಆಗಿ ಗಂಧವನ್ನು ಬಳಿದುಕೊಂಡು, ಕೊರಳಲ್ಲಿ ಪುಷ್ಪಮಾಲೆಯನ್ನು ಧರಿಸಿ, ದುಕೂಲವನ್ನುಟ್ಟು ಕೈಯಲ್ಲಿ ವೀಣೆಯನ್ನು ಪಿಡಿದು ಉಚ್ಚವಾದ ವೇಣುನಾದದಿಂದಲೂ, ಸ್ವರದ ಆರೋಹಾವರೋಹ ಮತ್ತು

CC-0. Jangamwadi Math Collection. Digitized by eGangotri

ಮೂರ್ಛನಾತಾಲಸಂಯುಕ್ತಂ ತಂತ್ರೀಲಯಸಮನ್ವಿತಂ ।
ಕ್ಷಣೇನ ಸಹಸಾ ದೇವೋ ಧರ್ಮರಾಜೋ ಜಿತಾತ್ಮವಾನ್ ।
ವಿಮನಾಃ ಸ ತದಾ ಜಾತೋ ಧರ್ಮರಾಜೋ ನೃಪಾತ್ಮಜ ॥ ೭೭ ॥

ಯುಧಿಷ್ಠಿರ ಉವಾಚ :—

ಆಶ್ಚರ್ಯಂ ಪರಮಂ ಬ್ರಹ್ಮನ್ ಜಾತಂ ಮೇ ಬ್ರಹ್ಮಸತ್ತಮ ।
ಕಥಂ ಬ್ರಹ್ಮೋಪಪನ್ನಸ್ಯ ತಪಶ್ಛೇದೋ ಬಭೂವ ಹ ॥ ೭೮ ॥
ಧರ್ಮೇ ಧರಾ ಚ ನಾಕಶ್ಚ ಧರ್ಮೇ ಪಾತಾಲಮೇವ ಚ ।
ಧರ್ಮೇ ಚಂದ್ರಾರ್ಕಮಾಪಶ್ಚ ಧರ್ಮೇ ಚ ಪವನೋಽನಲಃ ॥ ೭೯ ॥
ಧರ್ಮೇ ಚೈವಾಖಿಲಂ ವಿಶ್ವಂ ಸ ಧರ್ಮೋ ವ್ಯಗ್ರತಾಂ ಕಥಂ ।
ಗತಃ ಸ್ವಾಮಿಂಸ್ತದ್ವೈಯಗ್ರ್ಯಂ ತಥ್ಯಂ ಕಥಯ ಸುವ್ರತ ॥ ೮೦ ॥

ವ್ಯಾಸ ಉವಾಚ :—

ಪತನಂ ಸಾಹಸಾನಾಂ ಚ ನರಕಸ್ಯೈವ ಕಾರಣಂ ।
ಯೋನಿಕುಂಡಮಿದಂ ಸೃಷ್ಟಂ ಕುಂಭೀಪಾಕಸಮಂ ಭುವಿ ॥ ೮೧ ॥
ನೇತ್ರರಜ್ಜ್ವಾ ದೃಢಂ ಬದ್ಧ್ವಾ ಧರ್ಷಯಂತಿ ಮನಸ್ವಿನಃ ।
ಕುಚರೂಪೈರ್ಮಹಾದಂಡೈಸ್ತಾಡ್ಯಮಾನಮಚೇತಸಂ ॥ ೮೨ ॥
ಕೃತ್ವಾ ವೈ ಪಾತಯಂತ್ಯಾಶು ನರಕಂ ನೃಪಸತ್ತಮ ।
ಮೋಹನಂ ಸರ್ವಭೂತಾನಾಂ ನಾರೀ ಚೈವಂ ವಿನಿರ್ಮಿತಾ ॥ ೮೩ ॥

---

ತಾಳಲಯಗಳಿಂದಲೂ ಸೇರಿ ತ್ರಿವಿಧವಾದ ನರ್ತನಮಾಡಿದಳು. ಯುಧಿಷ್ಠಿರ! ಕೂಡಲೆ ಜಿತೇಂದ್ರಿಯನಾದ ಧರ್ಮರಾಜನು ಚಂಚಲಚಿತ್ತನಾದನು.

೭೮–೮೦. ಯುಧಿಷ್ಠಿರನು ಕೇಳುತ್ತಾನೆ:—ಬ್ರಹ್ಮನಿಷ್ಠನಾದ ವ್ಯಾಸನೆ! ಬ್ರಹ್ಮಜ್ಞಾನಿಯಾದ ಧರ್ಮರಾಜನ ತಪಸ್ಸು ಹೇಗೆ ಕೆಟ್ಟಿತು? ನನಗೆ ಬಹಳ ಆಶ್ಚರ್ಯವಾಗಿದೆಯಲ್ಲ. ಆ ಯಮಧರ್ಮನಲ್ಲಿಯೇ ಭೂಮಿ, ಸ್ವರ್ಗ, ಪಾತಾಳ, ಚಂದ್ರಸೂರ್ಯರು, ಜಲ, ವಾಯು, ಅಗ್ನಿಗಳೂ, ಸಮಸ್ತಲೋಕಗಳೂ ಅಧೀನವಾಗಿರುವುವು. ಸ್ವಾಮಿ! ಅಂತಹ ಧರ್ಮನು ಹೇಗೆ ಚಂಚಲನಾದನು? ಅವನಿಗುಂಟಾದ ಚಿತ್ತಚಾಂಚಲ್ಯವು ನಿಜವಾದುದೆ? ನನಗೆ ತಿಳಿಸು.

೮೧. ವ್ಯಾಸನು ಹೇಳುತ್ತಾನೆ:—ಲೋಕದಲ್ಲಿ ಸಾಹಸಿಕರ ಅಧೋಗತಿಗೂ ನರಕಕ್ಕೂ ಕಾರಣವಾದ ಕುಂಭೀಪಾಕ ನರಕವನ್ನು ಹೋಲುವುದಾಗಿ ಈ ಯೋನಿಕುಂಡವು ನಿರ್ಮಿತವಾಗಿದೆ.

೮೨–೮೩. ನೃಪೇಂದ್ರ! ಸಕಲಪ್ರಾಣಿಗಳನ್ನು ಮೋಹಪಾಶಕ್ಕೆ ಸಿಕ್ಕಿಸುವುದಕ್ಕಾಗಿ ನಿರ್ಮಿತಳಾದ ನಾರಿಯು ಜ್ಞಾನಿಯನ್ನೂ ತನ್ನ ನಯನಗಳೆಂಬ ಹಗ್ಗಗಳಿಂದ ಬಿಗಿದು, ಕುಚಗಳೆಂಬ ದಂಡಗಳಿಂದ ಬಡಿದು, ಮೂಢನನ್ನಾಗಿಸಿ ನರಕಕ್ಕೆ ತಳ್ಳುವಳು.

CC-0. Jangamwadi Math Collection. Digitized by eGangotri

ತಾವದ್ಧಂತ ಮನಃ ಸ್ಥೈರ್ಯಂ ಶ್ರುತಂ ಸತ್ಯಮನಾಕುಲಂ ।
ಯಾವನ್ಮತ್ತಾಂಗನಾಗ್ರೇ ನ ವಾಗುರೇವ ಸುಚೇತಸಾಂ ॥ ೮೪ ॥
ತಾವತ್ತಪೋಽಭಿವೃದ್ಧಿಸ್ತು ತಾವದ್ದಾನಂ ದಯಾ ದಮಃ ।
ತಾವತ್ಸ್ವಾಧ್ಯಾಯಂ ವೃತ್ತಂ ಚ ತಾವಚ್ಛೌಚಂ ಧೃತಂ ವ್ರತಂ ॥ ೮೫ ॥
ಯಾವತ್ತ್ರಸ್ತಮೃಗೀದೃಷ್ಟಿಂ ಚಪಲಾಂ ನ ವಿಲೋಕಯೇತ್ ।
ತಾವನ್ಮಾತಾ ಪಿತಾ ತಾವದ್ಭ್ರಾತಾ ತಾವತ್ಸುಹೃಜ್ಜನಃ ॥ ೮೬ ॥
ತಾವಲ್ಲಜ್ಜಾ ಭಯಂ ತಾವತ್ಸ್ವಾಚಾರಸ್ತಾವದೇವ ಹಿ ।
ಜ್ಞಾನಮೌದಾರ್ಯಮೈಶ್ವರ್ಯಂ ತಾವದೇವ ಹಿ ಭಾಸತೇ ।
ಯಾವನ್ಮತ್ತಾಂಗನಾಪಾಶೈಃ ಪಾತಿತೋ ನೈವ ಬಂಧನೈಃ ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಇಂದ್ರಭಯಕಥನಂ"ನಾಮ ತೃತೀಯೋಽಧ್ಯಾಯಃ

---

೮೪. ಕಾಮದಿಂದ ಮದಿಸಿದ ಅಂಗನೆಯು ಜ್ಞಾನಿಗಳ ಮುಂದೆ ಬಲೆಯಂತೆ ನಿಲ್ಲದಿರುವವರೆಗೆ ಮಾತ್ರ ಅವರ ಮನಸ್ಸು ಸ್ಥಿರವಾಗಿರುವುದು. ವಿದ್ಯೆ, ಸತ್ಯಗಳು ಸರಿಯಾಗಿರುವುವು.

೮೫–೮೭. ಜ್ಞಾನಿಯು ಚಕಿತಹರಿಣದಂತೆ ನೇತ್ರಗಳುಳ್ಳ ಚಪಲೆಯಾದ ನಾರಿಯನ್ನು ನೋಡುವವರೆಗೆ ಅವನ ತಪಸ್ಸು ಹೆಚ್ಚುವುದು. ದಾನ, ದಯೆ, ಇಂದ್ರಿಯನಿಗ್ರಹ, ವೇದಾಧ್ಯಯನ, ಶುದ್ಧತೆ, ಧೈರ್ಯ, ವ್ರತಗಳು ಕೆಡದಿರುವುವು. ಮತ್ತು ಮತ್ತಾಂಗನೆಯೆಂಬ ಹಗ್ಗದ ಕಟ್ಟುಗಳಿಗೆ ಸಿಲುಕಿಬೀಳುವವರೆಗೆ ಅವನಿಗೆ ತಾಯಿ, ತಂದೆ, ಅಣ್ಣ, ತಮ್ಮ, ಸ್ನೇಹಿತ, ನಾಚಿಕೆ, ಭಯ, ಸದಾಚಾರ, ಜ್ಞಾನ, ಔದಾರ್ಯ, ಐಶ್ವರ್ಯ ಇವುಗಳಲ್ಲಿ ದೃಷ್ಟಿಯಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಇಂದ್ರಭಯಕಥನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ಚತುರ್ಥೋಽಧ್ಯಾಯಃ

## ಕ್ಷೇತ್ರಸ್ಥಾಪನಂ

ವ್ಯಾಸ ಉವಾಚ :—

ಅತಃ ಪರಂ ಪ್ರವಕ್ಷ್ಯಾಮಿ ಧರ್ಮರಾಜಸ್ಯ ಚೇಷ್ಟಿತಂ ।
ಯಚ್ಛ್ರುತ್ವಾ ಯಮದೂತಾನಾಂ ನ ಭಯಂ ವಿದ್ಯತೇ ಕ್ವಚಿತ್ ॥ ೧ ॥
ಧರ್ಮರಾಜೇನ ಸಾ ದೃಷ್ಟ್ವಾ ವರ್ಧನೀ ಚ ವರಾಽಪ್ಸರಾ ।
ಮಹತ್ಯರಣ್ಯೇ ಕಾ ಹ್ಯೇಷಾ ಸುಂದರಾಂಗ್ಯತಿಸುಂದರೀ ॥ ೨ ॥
ನಿರ್ಮಾನುಷವನಂ ಚೇದಂ ಸಿಂಹವ್ಯಾಘ್ರಭಯಾನಕಂ ।
ಆಶ್ಚರ್ಯಂ ಪರಮಂ ಜ್ಞಾತ್ವಾ ಧರ್ಮರಾಜೋಽಬ್ರವೀದಿದಂ ॥ ೩ ॥

ಧರ್ಮರಾಜ ಉವಾಚ :—

ಕಸ್ಮಾತ್ತ್ವಂ ಮಾನಿನಿ ಹ್ಯೇಕಾ ವನೇ ಚರಸಿ ನಿರ್ಜನೇ ।
ಕಸ್ಮಾತ್ಸ್ಥಾನಾತ್ಸಮಾಯಾತಾ ಕಸ್ಯ ಪತ್ನೀ ಸುಶೋಭನೇ ॥ ೪ ॥
ಸುತಾ ತ್ವಂ ಕಸ್ಯ ವಾಮೋರು ಅತಿರೂಪವತೀ ಶುಭಾ ।
ಮಾನುಷೀ ವಾಽಥ ಗಂಧರ್ವೀ ಅಮರೀ ವಾಽಥ ಕಿನ್ನರೀ ॥ ೫ ॥

---

## ಕನ್ನಡದ ಅನುವಾದ

### ಕ್ಷೇತ್ರಸ್ಥಾಪನ

೧. ವ್ಯಾಸನು ಹೇಳುತ್ತಾನೆ :—ಇನ್ನುಮುಂದೆ ಧರ್ಮರಾಜನ ಕೆಲಸವನ್ನು ಹೇಳುವೆನು. ಇದನ್ನು ಕೇಳಿದ ಮನುಜರಿಗೆ ಯಮದೂತರ ಭಯವಿರುವುದಿಲ್ಲ.

೨-೩. ಧರ್ಮರಾಜನು ನರ್ತನಮಾಡುತ್ತಿರುವ ವರ್ಧನಿಯೆಂಬ ಅಪ್ಸರ ಸ್ತ್ರೀಯನ್ನು ಕಂಡು, ಸಿಂಹಾದಿ ಘಾತುಕ ಮೃಗಗಳಿಂದ ಭಯಂಕರವಾದ ಈ ನಿರ್ಜನಾರಣ್ಯದಲ್ಲಿ ಬಂದಿರುವ ಸುಂದರಿಯಾದ ಅಂಗನೆ ಯಾರಿವಳು? ಎಂದು ಆಶ್ಚರ್ಯಗೊಂಡು ಅವಳನ್ನು ಕುರಿತು ಹೀಗೆ ನುಡಿದನು.

೪. ಓ ಸ್ತ್ರೀಯೆ! ಜನರಿಲ್ಲದ ಈ ಗೊಂಡಾರಣ್ಯದಲ್ಲಿ ನೀನು ಒಬ್ಬಂಟಿಗಳಾಗಿ ಏಕೆ ಸಂಚರಿಸುತ್ತೀಯೆ! ನೀನು ಎಲ್ಲಿಂದ ಇಲ್ಲಿಗೆ ಬಂದೆ? ಸುಂದರಿ! ನೀನು ಯಾರ ಹೆಂಡತಿ?

೫. ಅತಿಸುಂದರಿಯಾದ ಅಂಗನೆಯೆ! ನೀನು ಯಾರ ಮಗಳು? ಮನುಷ್ಯಳೊ? ಗಂಧರ್ವಳೊ? ದೇವತೆಯೊ? ಕಿನ್ನರಸ್ತ್ರೀಯೊ?

CC-0. Jangamwadi Math Collection. Digitized by eGangotri

ಅಪ್ಸರಾ ಪಕ್ಷಿಣೀ ವಾಽಥ ಅಥವಾ ವನದೇವತಾ ।
ರಾಕ್ಷಸೀ ವಾ ಖೇಚರೀ ವಾ ಕಸ್ಯ ಭಾರ್ಯಾ ಚ ತದ್ವದ ॥ ೬ ॥
ಸತ್ಯಂ ಚ ವದ ಮೇ ಸುಭ್ರೂರಿತ್ಯಾಹಾಽರ್ಕಸುತಸ್ತದಾ ।
ಕಿಮಿಚ್ಛಸಿ ತ್ವಯಾ ಭದ್ರೇ ಕಿಂ ಕಾರ್ಯಂ ವಾ ವದಾಽತ್ರ ವೈ ॥ ೭ ॥
ಯದಿಚ್ಛಸಿ ತ್ವಂ ವಾಮೋರು ದದಾಮಿ ತವ ವಾಂಛಿತಂ ॥ ೮ ॥

ವರ್ಧನ್ಯುವಾಚ :—

ಧರ್ಮೇ ತಿಷ್ಠತಿ ಸರ್ವಂ ವೈ ಸ್ಥಾವರಂ ಜಂಗಮಂ ವಿಭೋ ।
ಸ ಧರ್ಮೋ ದುಷ್ಕರಂ ಕರ್ಮ ಕಸ್ಮಾತ್ತ್ವಂ ಕುರುಷೇಽನಘ ॥ ೯ ॥

ಯಮ ಉವಾಚ :—

ಈಶಾನಸ್ಯ ಚ ಯದ್ರೂಪಂ ದ್ರಷ್ಟುಮಿಚ್ಛಾಮಿ ಭಾಮಿನಿ ।
ತೇನಾಽಹಂ ತಪಸಾ ಯುಕ್ತಃ ಶಿವಯಾ ಸಹ ಶಂಕರಂ ॥ ೧೦ ॥
ಯಶಃ ಪ್ರಾಪ್ಸ್ಯೇ ಸುಖಂ ಪ್ರಾಪ್ಸ್ಯೇ ಕರೋಮಿ ಚ ಸುದುಷ್ಕರಂ ।
ಯುಗೇ ಯುಗೇ ಮಮ ಖ್ಯಾತಿರ್ಭವೇದಿತಿ ಮತಿರ್ಮಮ ॥ ೧೧ ॥
ಕಲ್ಪೇ ಕಲ್ಪೇ ಮಹಾಕಲ್ಪೇ ಭೂಯಃ ಖ್ಯಾತಿರ್ಭವೇದಿತಿ ।
ಏತಸ್ಮಾತ್ಕಾರಣಾತ್ಸುಭ್ರೂಸ್ತಪ್ಯತೇ ಪರಮಂ ತಪಃ ॥ ೧೨ ॥

---

೬. ಅಪ್ಸರೆಯೊ? ಪಕ್ಷಿಜಾತಿಯ ಹೆಂಗಸೊ? ಈ ಕಾಡಿನ ದೇವತೆಯೊ? ರಾಕ್ಷಸಿಯೊ? ಆಕಾಶಚಾರಿಗಳ ಹೆಂಗಸೊ? ಯಾರ ಹೆಂಡತಿಯೆಂಬುದನ್ನುಹೇಳು.

೭–೮. ನಿನಗೆ ಏನು ಬೇಕು? ಇಲ್ಲಿ ನಿನಗೇನು ಕೆಲಸವಿದೆ? ಸುಂದರಿ! ನೀನು ಬಯಸಿದ್ದನ್ನೀಯುವೆನು. ನಿಜವಾಗಿ ಹೇಳು ಎಂದು ಧರ್ಮರಾಜನು ಕೇಳಿದನು.

೯. ವರ್ಧನಿಯು ಕೇಳುತ್ತಾಳೆ:—ಈ ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚವು ಧರ್ಮಾಧೀನವಾದುದು. ಆ ಧರ್ಮಾನುಷ್ಠಾನವು ಬಹಳ ತೊಡಕಿನದು. ನೀನು ಏತಕ್ಕೆ ಅದನ್ನು ಮಾಡುತ್ತಿದ್ದೀಯೆ?

೧೦. ಯಮನು ಹೇಳುತ್ತಾನೆ:—ಅಂಗನೆ! ನಾನು ಪಾರ್ವತೀಸಹಿತನಾದ ಪರಮೇಶ್ವರನ ರೂಪವನ್ನು ನೋಡಲಿಚ್ಛಿಸುವೆನು. ಅದಕ್ಕಾಗಿ ತಪಸ್ಸನ್ನು ಮಾಡುತ್ತಿದ್ದೇನೆ.

೧೧. ಕೀರ್ತಿಯನ್ನೂ, ಸುಖವನ್ನೂ ಗಳಿಸುವೆನೆಂದು ತಪಸ್ಸನ್ನು ಮಾಡುತ್ತಿರುವೆನು. ನನಗೆ ಎಲ್ಲಾ ಯುಗಗಳಲ್ಲಿಯೂ ಪ್ರಸಿದ್ಧನಾಗಬೇಕೆಂಬ ಆಶೆಯಿದೆ.

೧೨. ಎಲ್ಲಾ ಕಲ್ಪಗಳಲ್ಲಿಯೂ, ಮಹಾಕಲ್ಪದಲ್ಲಿಯೂ ಪ್ರಸಿದ್ಧನಾಗಬೇಕೆಂಬ ಅಭಿಲಾಷೆಯಿಂದ ಈ ದುಷ್ಕರ ತಪಸ್ಸನ್ನು ಮಾಡುವೆನು.

CC-0. Jangamwadi Math Collection. Digitized by eGangotri

ಕಸ್ಮಾತ್ತ್ವಮಾಗತಾ ಭದ್ರೇ ಕಥಯಸ್ವ ಯಥಾ ತಥಾ ।
ಕಿಂ ಕಾರ್ಯಂ ತಸ್ಯ ಹೇತುಶ್ಚ ಸತ್ಯಮಾಖ್ಯಾತುಮರ್ಹಸಿ ॥ ೧೩ ॥

ವರ್ಧಿನ್ಯುವಾಚ :—

ತಪಸ್ಯೈವ ತ್ವಯಾ ಧರ್ಮ ಭಯಭೀತೋ ದಿವಸ್ಪತಿಃ ।
ತೇನಾಽಹಂ ಚೋದಿತಾ ಚಾಽತ್ರ ತಪೋವಿಘ್ನಸ್ಯ ಕಾಂಕ್ಷಯಾ ॥ ೧೪ ॥
ಇಂದ್ರಾಸನಭಯಾದ್ಭೀತಾ ಹರಿಣಾ ಹರಿಸನ್ನಿಧೌ ।
ಪ್ರೇಷಿತಾಽಹಂ ಮಹಾಭಾಗ ಸತ್ಯಂ ಹಿ ಪ್ರವದಾಮ್ಯಹಂ ॥ ೧೫ ॥

ಸೂತ ಉವಾಚ :—

ಸತ್ಯವಾಕ್ಯೇನ ಚ ತದಾ ತೋಷಿತೋ ರವಿನಂದನಃ ।
ಉವಾಚೈನಾಂ ಮಹಾಭಾಗ್ಯೋ ವರದೋಽಹಂ ಪ್ರಯಚ್ಛ ಮೇ ॥ ೧೬ ॥
ಯಮೋಽಹಂ ಸರ್ವಭೂತಾನಾಂ ದುಷ್ಟಾನಾಂ ಕರ್ಮಕಾರಿಣಾಂ ।
ಧರ್ಮರೂಪೋ ಹಿ ಸರ್ವೇಷಾಂ ಮನುಜಾನಾಂ ಜಿತಾತ್ಮನಾಂ ॥ ೧೭ ॥
ಸ ಧರ್ಮೋಽಹಂ ವರಾರೋಹೇ ದದಾಮಿ ತವ ದುರ್ಲಭಂ ।
ತತ್ಸರ್ವಂ ಪ್ರಾರ್ಥಯ ತ್ವಂ ಮೇ ಶೀಘ್ರಂ ಚಾಽಪ್ಸರಸಾಂ ವರೇ ॥ ೧೮ ॥

---

೧೩. ಎಲೈ ಶುಭಾಂಗನೆಯೆ! ನೀನು ಏತಕ್ಕೆ ಇಲ್ಲಿಗೆ ಬಂದಿರುವೆ? ಯಾವ ಕೆಲಸವಾಗಬೇಕಾಗಿದೆ? ಎಲ್ಲವನ್ನೂ ನಿಜವಾಗಿ ತಿಳಿಸು.

೧೪. ವರ್ಧನಿಯು ಹೇಳುತ್ತಾಳೆ:—ಧರ್ಮರಾಜ! ದೇವೇಂದ್ರನು ನಿನ್ನ ತಪಸ್ಸಿನಿಂದ ಭಯಗೊಂಡು ಆ ತಪಸ್ಸಿನ ಭಂಗಕ್ಕಾಗಿ ನನ್ನನ್ನು ನಿನ್ನೆಡೆಗೆ ಕಳುಹಿಸಿದನು.

೧೫. ಎಲೈ ಮಹಾಭಾಗ! ದೇವರಾಜನು ನೀನು ಅವನ ಪದವಿಯನ್ನು ಕಿತ್ತುಕೊಳ್ಳುವೆಯೆಂಬ ಭಯದಿಂದ ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ಇದು ನಿಜವಾದ ಮಾತು.

೧೬. ಸೂತನು ಹೇಳುತ್ತಾನೆ:—ಅವಳ ಸತ್ಯವಾದ ಮಾತಿನಿಂದ ತುಷ್ಟನಾದ ಯಮನು ಅವಳನ್ನು ಕುರಿತು ನಾನು ನಿನಗೆ ವರವನ್ನು ಕೊಡಲು ಬಯಸುವೆ ನೆಂದನು.

೧೭–೧೮. ಎಲೈ ಅಪ್ಸರಮಣಿಯೆ! ನಾನು ಲೋಕದಲ್ಲಿ ದುಷ್ಕರ್ಮವನ್ನು ಮಾಡುವ ಎಲ್ಲಾ ಜೀವಿಗಳಿಗೂ, ಜಿತಮನಸ್ಸುಳ್ಳ ಎಲ್ಲ ಮನುಷ್ಯರಿಗೂ ಧರ್ಮ ರೂಪನು. ಅಂತಹ ನಾನು ನಿನಗೆ ದುರ್ಲಭವಾದ ವರವನ್ನು ಕೊಡುವೆನು. ಅದನ್ನೆಲ್ಲ ನೀನು ಶೀಘ್ರವಾಗಿ ಕೇಳಿಕೊ.

CC-0. Jangamwadi Math Collection. Digitized by eGangotri

ವರ್ಧನ್ಯುವಾಚ :—

ಇಂದ್ರಸ್ಥಾನೇ ಸದಾ ರಮ್ಯೇ ಸುಸ್ಥಿರತ್ವಂ ಪ್ರಯಚ್ಛ ಮೇ ।
ಸ್ವಾಮಿನ್ಧರ್ಮಭೃತಾಂ ಶ್ರೇಷ್ಠ ಲೋಕಾನಾಂ ಚ ಹಿತಾಯ ವೈ ॥ ೧೯ ॥

ಯಮ ಉವಾಚ :—

ಏವಮಸ್ತ್ವಿತಿ ತಾಂ ಪ್ರಾಹ ಚಾಽನ್ಯಂ ವರಯ ಸತ್ವರಂ ।
ದದಾಮಿ ವರಮುತ್ಕೃಷ್ಟಂ ಗಾನೇನ ತೋಷಿತೋಽಸ್ಮ್ಯಹಂ ॥ ೨೦ ॥

ವರ್ಧನ್ಯುವಾಚ :—

ಅಸ್ಮಿನ್ಸ್ಥಾನೇ ಮಹಾಕ್ಷೇತ್ರೇ ಮಮ ತೀರ್ಥಂ ಮಹಾಮತೇ ।
ಭೂಯಾಚ್ಚ ಸರ್ವಪಾಪಘ್ನಂ ಮನ್ನಾಮ್ನೇತಿ ಚ ವಿಶ್ರುತಂ ॥ ೨೧ ॥
ತತ್ರ ದತ್ತಂ ಹುತಂ ತಪ್ತಂ ಪಠಿತಂ ವಾಽಕ್ಷಯಂ ಭವೇತ್ ।
ಪಂಚರಾತ್ರಂ ನಿಷೇವೇತ ವರ್ಧಮಾನಂ ಸರೋವರಂ ॥ ೨೨ ॥
ಪೂರ್ವಜಾಸ್ತಸ್ಯ ತುಷ್ಯೇರಂಸ್ತರ್ಪ್ಯಮಾನಾ ದಿನೇ ದಿನೇ ।
ತಥೇತ್ಯುಕ್ತ್ವಾ ತು ತಾಂ ಧರ್ಮೋ ಮೌನಮಾಚಷ್ಟ ಸಂಸ್ಥಿತಃ ।
ತ್ರಿಃಪರಿಕ್ರಮ್ಯ ತಂ ಧರ್ಮಂ ನಮಸ್ಕೃತ್ಯ ದಿವಂ ಯಯೌ ॥ ೨೩ ॥

ವರ್ಧನ್ಯುವಾಚ :—

ಮಾ ಭಯಂ ಕುರು ದೇವೇಶ ಯಮಸ್ಯಾಽರ್ಕಸುತಸ್ಯ ಚ ।
ಅಯಂ ಸ್ವಾರ್ಥಪರೋ ಧರ್ಮಂ ಯಶಸೇ ಚ ಸಮಾಚರೇತ್ ॥ ೨೪ ॥

---

೧೯. ವರ್ಧನಿಯು ಹೇಳುತ್ತಾಳೆ:— ಧರ್ಮಿಷ್ಠರಲ್ಲಿ ವರಿಷ್ಠನಾದ ಧರ್ಮರಾಜ! ಸಕಲಲೋಕಗಳ ಹಿತದೃಷ್ಟಿಯಿಂದ ಯಾವಾಗಲೂ ಮನೋಹರವಾದ ಇಂದ್ರಪದವಿಯು ದೃಢವಾಗಿರುವಂತೆ ವರವನ್ನು ನೀಡು.

೨೦. ಯಮನು ಹೇಳುತ್ತಾನೆ:—ಹಾಗೆಯೇ ಆಗಲಿ. ನಿನ್ನ ಹಾಡಿನಿಂದ ಸಂತೋಷಗೊಂಡಿದ್ದೇನೆ. ಇನ್ನೂ ಉತ್ತಮವಾದ ಬೇರೆ ವರವನ್ನು ಕೇಳು; ಕೊಡುತ್ತೇನೆ.

೨೧—೨೩. ವರ್ಧನಿಯು ಹೇಳುತ್ತಾಳೆ:—'ಈ ಮಹಾಕ್ಷೇತ್ರದಲ್ಲಿ ನನ್ನ ಹೆಸರಿನಿಂದ ಪ್ರಸಿದ್ಧವಾದ ಸಕಲಪಾಪಗಳನ್ನು ನೀಗಿಸುವ ಒಂದು ಕ್ಷೇತ್ರವಾಗಲಿ. ಇಲ್ಲಿ ಮಾಡಿದ ದಾನ, ಹೋಮ, ತಪಸ್ಸು, ಅಧ್ಯಯನಗಳು ಅಕ್ಷಯವಾಗಲಿ. ಈ ವರ್ಧಮಾನ ಸರೋವರವನ್ನು ಐದು ರಾತ್ರಿ ಸೇವಿಸಿ ಪ್ರತಿದಿನವೂ ತರ್ಪಣಂಗೈದ ಮನುಜನ ಹಿಂದಿನ ಪಿತೃಗಳು ಸಂತುಷ್ಟರಾಗಲಿ' ಎಂದು ವರ್ಧನಿಯು ಬೇಡಿಕೊಳ್ಳಲು, ಧರ್ಮನು ಹಾಗೆಯೇ ಆಗಲೆಂದು ಹೇಳಿ ಮೌನಗೊಂಡನು. ಅವಳು ಅವನಿಗೆ ಮೂರು ಪ್ರದಕ್ಷಿಣೆಗಳನ್ನೂ, ನಮಸ್ಕಾರವನ್ನೂ ಮಾಡಿ ದೇವಲೋಕಕ್ಕೆ ಹೊರಟಳು.

೨೪. ವರ್ಧನಿಯು ಹೇಳುತ್ತಾಳೆ:—ದೇವರಾಜ! ಈ ಧರ್ಮರಾಜನು



CC-0. Jangamwadi Math Collection. Digitized by eGangotri

ವ್ಯಾಸ ಉವಾಚ :—

ವರ್ಧನೀ ಪೂಜಿತಾ ತೇನ ಶಕ್ರೇಣ ಚ ಶುಭಾನನಾ ।
ಸಾಧು ಸಾಧು ಮಹಾಭಾಗೇ ದೇವಕಾರ್ಯಂ ಕೃತಂ ತ್ವಯಾ ॥ ೨೫ ॥
ನಿರ್ಭಯತ್ವಂ ವರಾರೋಹೇ ಸುಖವಾಸಶ್ಚ ತೇ ಸದಾ ।
ಯಶಃ ಸೌಖ್ಯಂ ಶ್ರಿಯಂ ರಮ್ಯಾಂ ಪ್ರಾಪ್ಸ್ಯಸಿ ತ್ವಂ ಶುಭಾನನೇ ॥ ೨೬ ॥
ತಥೇತಿ ದೇವಾಸ್ತಾಮೂಚುರ್ನಿರ್ಭಯಾನಂದಚೇತಸಾ ।
ನಮಸ್ಕೃತ್ಯ ಚ ಶಕ್ರಂ ಸಾ ಗತಾ ಸ್ಥಾನಂ ಸ್ವಕಂ ಶುಭಂ ॥ ೨೭ ॥

ಸೂತ ಉವಾಚ :—

ಗತೇಽಪ್ಸರಸಿ ರಾಜೇಂದ್ರ ಧರ್ಮಸ್ತಸ್ಥೌ ಯಥಾವಿಧಿ ।
ತಪಸ್ತೇಪೇ ಮಹಾಘೋರಂ ವಿಶ್ವಸ್ಯೋದ್ವೇಗದಾಯಕಂ ॥ ೨೮ ॥
ಪಂಚಾಗ್ನಿಸಾಧನಂ ಶುಕ್ರೇ ಮಾಸಿ ಸೂರ್ಯೇಣ ತಾಪಿತೇ ।
ಚಕ್ರೇ ಸುದುಸ್ಸಹಂ ರಾಜನ್ದೇವೈರಪಿ ದುರಾಸದಂ ॥ ೨೯ ॥
ತತೋ ವರ್ಷಶತೇ ಪೂರ್ಣೇ ಅಂತಕೋ ಮೌನಮಾಸ್ಥಿತಃ ।
ಕಾಷ್ಠಭೂತ ಇವಾತಸ್ಥೌ ವಲ್ಮೀಕಶತಸಂವೃತಃ ॥ ೩೦ ॥
ನಾನಾಪಕ್ಷಿಗಣೈಸ್ತತ್ರ ಕೃತನೀಡೈಃ ಸ ಧರ್ಮರಾಟ್ ।
ಉಪವಿಷ್ಟೋ ವ್ರತಂ ರಾಜನ್ದೃಶ್ಯತೇ ನೈವ ಕುತ್ರಚಿತ್ ॥ ೩೧ ॥

---

ತನ್ನ ಪ್ರಯೋಜನವಾದ ಕೀರ್ತಿಗಾಗಿ ತಪಸ್ಸನ್ನು ಮಾಡುತ್ತಿರುವುದರಿಂದ ನೀನು ಅವನಿಗೆ ಹೆದರಬೇಡ.

೨೫–೨೬. ವ್ಯಾಸನು ಹೇಳುತ್ತಾನೆ:—ದೇವೇಂದ್ರನು ಆ ಸುಂದರಿಯಾದ ವರ್ಧನಿಯನ್ನು ಪೂಜಿಸಿ ಇಂತೆಂದನು :— ಪುಣ್ಯಾತ್ಮಳೆ! ನೀನು ದೇವತೆಗಳ ಕೆಲಸವನ್ನು ಮಾಡಿರುವೆ. ನೀನು ಯಾವಾಗಲೂ ನಿರ್ಭಯಳಾಗಿ ಸುಖದಿಂದಿರು. ನಿನಗೆ ಕೀರ್ತಿ, ಸೌಖ್ಯ, ಸಂಪತ್ತುಗಳು ಲಭಿಸುವುವು.

೨೭. ದೇವತೆಗಳೂ ಹಾಗೆಯೇ ಅವಳಿಗೆ ಹೇಳಿದರು. ಅವಳು ಸಂತುಷ್ಟ ಚಿತ್ತಳಾಗಿ ಇಂದ್ರನನ್ನು ವಂದಿಸಿ ತನ್ನ ಶುಭಸ್ಥಾನಕ್ಕೆ ತೆರಳಿದಳು.

೨೮–೨೯. ಸೂತನು ಹೇಳುತ್ತಾನೆ :—ಆ ವರ್ಧನಿಯು ಹೊರಡಲು ಧರ್ಮ ರಾಜನು ಜ್ಯೇಷ್ಠಮಾಸದಲ್ಲಿ ಸೂರ್ಯನು ತಪಿಸುತ್ತಿರಲು ಕ್ರಮದಂತೆ ಸಕಲ ಪ್ರಪಂಚಕ್ಕೆ ಭಯವನ್ನುಂಟುಮಾಡುವ ದೇವತೆಗಳೂ ಮಾಡಲಾಗದ ಘೋರ ತಪಸ್ಸನ್ನು ಪಂಚಾಗ್ನಿಮಧ್ಯದಲ್ಲಿ ಆಚರಿಸಿದನು.

೩೦. ಅನಂತರ ನೂರು ವರ್ಷಗಳು ಕಳೆಯಲು ಯಮನು ಅನೇಕ ಹುತ್ತ ಗಳಿಂದ ಮುಚ್ಚಲ್ಪಟ್ಟು ಕಟ್ಟಿಗೆಯಂತಾಗಿ ಮೌನಗೊಂಡನು.

೩೧. ಅನೇಕ ಪಕ್ಷಿಗಳು ಅವನಮೇಲೆ ಗೂಡುಗಳನ್ನು ಕಟ್ಟಿದ್ದುದರಿಂದ ಅವನು ಕುಳಿತ ಸ್ಥಳವೇ ಎಲ್ಲಿಯೂ ತಿಳಿಯುತ್ತಿರಲಿಲ್ಲ.

CC-0. Jangamwadi Math Collection. Digitized by eGangotri

ಸಂಸ್ಮರಂತೋಽಥ ದೇವೇಶಮುಮಾಪತಿಮನಿಂದಿತಂ ।
ತತೋ ದೇವಾಃ ಸಗಂಧರ್ವಾ ಯಕ್ಷಾಶ್ಚೋದ್ವಿಗ್ನಮಾನಸಾಃ ।
ಕೈಲಾಸಶಿಖರಂ ಭೂಯ ಆಜಗ್ಮುಃ ಶಿವಸನ್ನಿಧೌ ॥ ೩೨ ॥

ದೇವಾ ಊಚುಃ:—

ತ್ರಾಹಿ ತ್ರಾಹಿ ಮಹಾದೇವ ಶ್ರೀಕಂಠ ಜಗತಃ ಪತೇ ।
ತ್ರಾಹಿ ನೋ ಭೂತಭವ್ಯೇಶ ತ್ರಾಹಿ ನೋ ವೃಷಭಧ್ವಜ ।
ದಯಾಲುಸ್ತ್ವಂ ಕೃಪಾನಾಥ ನಿರ್ವಿಘ್ನಂ ಕುರು ಶಂಕರ ॥ ೩೩ ॥

ಈಶ್ವರ ಉವಾಚ:—

ಕೇನಾಽಪರಾಧಿತಾ ದೇವಾಃ ಕೇನ ವಾ ಮಾನಮರ್ದಿತಾಃ ।
ಮರ್ತ್ಯೇ ಸ್ವರ್ಗೇಽಥ ವಾ ನಾಗೇ ಶೀಘ್ರಂ ಕಥಯತಾಽಚಿರಂ ॥ ೩೪ ॥
ಅನೇನೈವ ತ್ರಿಶೂಲೇನ ಖಟ್ವಾಂಗೇನಾಽಥ ವಾ ಪುನಃ ।
ಅಥ ಪಾಶುಪತೇನೈವ ನಿಹನಿಷ್ಯಾಮಿ ತಂ ರಣೇ ।
ಶೀಘ್ರಂ ವೈ ವದತಾಽಸ್ಮಾಕಮತ್ರಾಗಮನಕಾರಣಂ ॥ ೩೫ ॥

ದೇವಾ ಊಚುಃ:—

ಕೃಪಾಸಿಂಧೋ ಹಿ ದೇವೇಶ ಜಗದಾನಂದಕಾರಕ ।
ನ ಭಯಂ ಮಾನುಷಾದದ್ಯ ನ ನಾಗಾದ್ದೇವದಾನವಾತ್ ॥ ೩೬ ॥

---

೩೨. ತರುವಾಯ ದೇವತೆಗಳೂ, ಗಂಧರ್ವರೂ, ಯಕ್ಷರೂ ಭಯಗೊಂಡು ನಿರವದ್ಯನಾದ ಪರಶಿವನನ್ನು ನೆನೆಯುತ್ತ ತಿರುಗಿ ಕೈಲಾಸ ಶಿಖರದಲ್ಲಿರುವ ಅವನೆಡೆಗೆ ಬಂದರು.

೩೩. ದೇವತೆಗಳು ಹೇಳುತ್ತಾರೆ:—ಮಹಾದೇವ! ನಮ್ಮನ್ನು ಸಲಹು. ಶ್ರೀಕಂಠ! ಜಗದೊಡೆಯ! ಕಾಪಾಡು. ತ್ರಿಕಾಲದ ಆಗುಹೋಗುಗಳಿಗೆ ಕಾರಣನಾದ ಶಂಭೋ! ರಕ್ಷಿಸು. ಶಂಕರ! ನೀನು ದಯಾಲುವು. ನಮಗೆ ತೊಂದರೆಯಿಲ್ಲದಂತೆ ಮಾಡು.

೩೪–೩೫. ಈಶ್ವರನು ಹೇಳುತ್ತಾನೆ:—ದೇವತೆಗಳೆ! ನೀವು ಏತಕ್ಕೆ ಇಲ್ಲಿಗೆ ಬಂದಿರುವಿರಿ? ನಿಮಗೆ ಯಾವನು ಅಪರಾಧಮಾಡಿದನು? ಯಾವನು ಅವಮಾನ ಮಾಡಿದನು? ಶೀಘ್ರವಾಗಿ ಹೇಳಿ. ಈ ತ್ರಿಶೂಲದಿಂದಾಗಲಿ, ಖಟ್ವಾಂಗದಿಂದಾಗಲಿ, ಪಾಶುಪತಾಸ್ತ್ರದಿಂದಾಗಲಿ ಅವನನ್ನು ಯುದ್ಧದಲ್ಲಿ ವಧಿಸುವೆನು. ಕೂಡಲೆ ಹೇಳಿ.

೩೬. ದೇವತೆಗಳು ಹೇಳುತ್ತಾರೆ:—ಪ್ರಪಂಚಕ್ಕೆ ಆನಂದವನ್ನುಂಟುಮಾಡುವ ದಯಾಲುವಾದ ಪರಮೇಶ್ವರ! ನಮಗೆ ಈಗ ಮನುಷ್ಯರಿಂದಾಗಲಿ, ಸರ್ಪಗಳಿಂದಾಗಲಿ, ದೇವತೆಗಳಿಂದಾಗಲಿ, ದಾನವರಿಂದಾಗಲಿ ಭಯವಿಲ್ಲ.

CC-0. Jangamwadi Math Collection. Digitized by eGangotri

ಮರ್ತ್ಯಲೋಕೇ ಮಹಾದೇವ ಪ್ರೇತನಾಥೋ ಮಹಾಕೃತಿಃ ।
ಆತ್ಮಕಾರ್ಯಂ ಮಹಾಘೋರಂ ಕ್ಲೇಶಯೇದಿತಿ ನಿಶ್ಚಯಃ ॥ ೩೭ ॥
ಉಗ್ರೇಣ ತಪಸಾ ಕೃತ್ವಾ ಕ್ಲಿಶ್ಯದಾತ್ಮಾಸಮಾತ್ಮನಾ ।
ತೇನಾತ್ರ ವಯಮುದ್ವಿಗ್ನಾ ದೇವಾಃ ಸರ್ವೇ ಸದಾಶಿವ ।
ಶರಣಂ ತ್ವಾಮನುಪ್ರಾಪ್ತಾ ಯದಿಚ್ಛಸಿ ಕುರುಷ್ವ ತತ್ ॥ ೩೮ ॥

ಸೂತ ಉವಾಚ :—

ದೇವಾನಾಂ ವಚನಂ ಶ್ರುತ್ವಾ ವೃಷಾರೂಢೋ ವೃಷಧ್ವಜಃ ।
ಆಯುಧಾನ್ಪರಿಸಂಗೃಹ್ಯ ಕವಚಂ ಸುಮನೋಹರಂ ।
ಗತವಾನಥ ತಂ ದೇಶಂ ಯತ್ರ ಧರ್ಮೋ ವ್ಯವಸ್ಥಿತಃ ॥ ೩೯ ॥

ಈಶ್ವರ ಉವಾಚ :—

ಅನೇನ ತಪಸಾ ಧರ್ಮ ಸಂತುಷ್ಟಂ ಮಮ ಮಾನಸಂ ।
ವರಂ ಬ್ರೂಹಿ ವರಂ ಬ್ರೂಹಿ ವರಂ ಬ್ರೂಹೀತ್ಯುವಾಚ ಹ ॥ ೪೦ ॥
ಇಚ್ಛಸೇ ತ್ವಂ ಯಥಾ ಕಾಮಾನ್ಯಥಾ ತೇ ಮನಸಿ ಸ್ಥಿತಾನ್ ।
ಯಂ ಯಂ ಪ್ರಾರ್ಥಯಸೇ ಭದ್ರ ದದಾಮಿ ತವ ಸಾಂಪ್ರತಂ ॥ ೪೧ ॥

ಸೂತ ಉವಾಚ :—

ಏವಂ ಸಂಭಾಷಮಾಣಂ ತು ದೃಷ್ಟ್ವಾ ದೇವಂ ಮಹೇಶ್ವರಂ ।
ವಲ್ಮೀಕಾದುತ್ಥಿತೋ ರಾಜನ್ಗೃಹೀತ್ವಾ ಕರಸಂಪುಟಂ ।
ತುಷ್ಟಾವ ವಚನೈಃ ಶುದ್ಧೈರ್ಲೋಕನಾಥಮರಿಂದಮಂ ॥ ೪೨ ॥

---

೩೭–೩೮. ಭೂಲೋಕದಲ್ಲಿ ಯಮಧರ್ಮನು ದೊಡ್ಡ ಆಕಾರವುಳ್ಳವನಾಗಿ ಘೋರ ತಪಸ್ಸನ್ನು ಮಾಡುತ್ತ ತನ್ನ ದೇಹವನ್ನು ದಂಡಿಸುತ್ತ ನಮ್ಮ ಕೆಲಸವನ್ನು ಹಾಳುಮಾಡುತ್ತಾನೆಂದು ನಾವು ಭಯಗೊಂಡು ನಿನ್ನೆಡೆಗೆ ಬಂದು ಮರೆಹೊಕ್ಕಿದ್ದೇವೆ. ನಿನ್ನಿಷ್ಟದಂತೆ ಮಾಡು.

೩೯. ಸೂತನು ಹೇಳುತ್ತಾನೆ:—ಪರಮೇಶ್ವರನು ದೇವತೆಗಳ ಮಾತನ್ನು ಕೇಳಿ ಬಸವನನ್ನೇರಿ ಸುಂದರವಾದ ಅಂಗಿಯನ್ನು ತೊಟ್ಟು ಆಯುಧಗಳನ್ನು ಪಿಡಿದು ಧರ್ಮರಾಜನಿದ್ದೆಡೆಗೆ ತೆರಳಿದನು.

೪೦. ಪರಮೇಶ್ವರನು ಹೇಳುತ್ತಾನೆ:—ಧರ್ಮರಾಜ! ಈ ತಪಸ್ಸಿನಿಂದ ನನ್ನ ಮನಸ್ಸು ಸಂತೋಷಗೊಂಡಿದೆ. ವರವನ್ನು ಕೇಳು ಎಂದು ಮೂರು ಸಾರಿ ಹೇಳಿದನು.

೪೧. ಮಂಗಳಕರನೆ! ಯಾವ ಇಷ್ಟಾರ್ಥವನ್ನು ಅಪೇಕ್ಷಿಸುವೆ? ನಿನ್ನ ಮನಸ್ಸಿನಲ್ಲೇನಿದೆ? ನೀನು ಬೇಡಿದ್ದನ್ನೆಲ್ಲ ಈಗ ನಿನಗೀಯುವೆನು.

೪೨. ಸೂತನು ಹೇಳುತ್ತಾನೆ:—ಹೀಗೆ ಮಾತಾಡುತ್ತಿರುವ ಆ ಮಹೇಶ್ವರ

CC-0. Jangamwadi Math Collection. Digitized by eGangotri

ಧರ್ಮ ಉವಾಚ :—

ಈಶ್ವರಾಯ ನಮಸ್ತುಭ್ಯಂ ನಮಸ್ತೇ ಯೋಗರೂಪಿಣೇ ।
ನಮಸ್ತೇ ತೇಜೋರೂಪಾಯ ನೀಲಕಂಠ ನಮೋऽಸ್ತು ತೇ ॥ ೫೩ ॥
ಧ್ಯಾತೃಣಾಮನುರೂಪಾಯ ಭಕ್ತಿಗಮ್ಯಾಯ ತೇ ನಮಃ ।
ನಮಸ್ತೇ ಬ್ರಹ್ಮರೂಪಾಯ ವಿಷ್ಣುರೂಪ ನಮೋऽಸ್ತು ತೇ ॥ ೫೪ ॥
ನಮಃ ಸ್ಥೂಲಾಯ ಸೂಕ್ಷ್ಮಾಯ ಅಣುರೂಪಾಯ ವೈ ನಮಃ ।
ನಮಸ್ತೇ ಕಾಮರೂಪಾಯ ಸೃಷ್ಟಿಸ್ಥಿತ್ಯಂತಕಾರಿಣೇ ॥ ೫೫ ॥
ನಮೋ ನಿತ್ಯಾಯ ಸೌಮ್ಯಾಯ ಮೃಡಾಯ ಹರಯೇ ನಮಃ ।
ಆತಪಾಯ ನಮಸ್ತುಭ್ಯಂ ನಮಃ ಶೀತಕರಾಯ ಚ ॥ ೫೬ ॥
ಸೃಷ್ಟಿರೂಪ ನಮಸ್ತುಭ್ಯಂ ಲೋಕಪಾಲ ನಮೋऽಸ್ತು ತೇ ।
ನಮ ಉಗ್ರಾಯ ಭೀಮಾಯ ಶಾಂತರೂಪಾಯ ತೇ ನಮಃ ॥ ೫೭ ॥
ನಮಶ್ಚಾऽನಂತರೂಪಾಯ ವಿಶ್ವರೂಪಾಯ ತೇ ನಮಃ ।
ನಮೋ ಭಸ್ಮಾಂಗಲಿಪ್ತಾಯ ನಮಸ್ತೇ ಚಂದ್ರಶೇಖರ ।
ನಮೋऽಸ್ತು ಪಂಚವಕ್ತ್ರಾಯ ತ್ರಿನೇತ್ರಾಯ ನಮೋऽಸ್ತು ತೇ ॥ ೫೮ ॥

---

ನನ್ನು ನೋಡಿ ಧರ್ಮರಾಜನು ಹುತ್ತದಿಂದೆದ್ದು ಕೈಮುಗಿದುಕೊಂಡು ಪವಿತ್ರಗಳಾದ ನುಡಿಗಳಿಂದ ಶತ್ರುಸಂಹಾರಕನಾದ ಮಹೇಶ್ವರನನ್ನು ಹೀಗೆ ಸ್ತುತಿಸಿದನು.

೫೩. ಧರ್ಮರಾಜನು ಹೇಳುತ್ತಾನೆ:—ಅಣಿಮಾದಿ ಅಷ್ಟೈಶ್ವರ್ಯವುಳ್ಳವನೂ, ಯೋಗರೂಪನೂ, ಪ್ರಕಾಶಮಯನೂ ಆಗಿರುವ ನೀಲಕಂಠ! ನಿನಗೆ ನಮಸ್ಕಾರ.

೫೪. ಧ್ಯಾನಗೈಯ್ಯುವವರಿಗೆ ಅನುಕೂಲನೂ, ಭಕ್ತಿಯಿಂದ ತಿಳಿಯಲು ಶಕ್ಯನೂ, ಬ್ರಹ್ಮವಿಷ್ಣುರೂಪನೂ ಆಗಿರುವ ನಿನಗೆ ನಮಸ್ಕಾರ.

೫೫. ಸ್ಥೂಲರೂಪನೂ, ಸೂಕ್ಷ್ಮರೂಪನೂ, ಅಣುರೂಪನೂ, ಸ್ವೇಚ್ಛಾರೂಪಿಯೂ, ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೂ ಆಗಿರುವ ನಿನಗೆ ನಮಸ್ಕಾರ.

೫೬. ನಿತ್ಯನೂ, ಸೌಮ್ಯನೂ, ಸುಖಕರನೂ, ಭಕ್ತರ ಪಾಪವನ್ನು ಅಪಹರಿಸುವವನೂ, ಚಂದ್ರಸೂರ್ಯರೂಪನೂ ಆಗಿರುವ ನಿನಗೆ ನಮಸ್ಕಾರ.

೫೭. ಸೃಷ್ಟಿಸ್ವರೂಪನೂ, ಲೋಕಪಾಲಕನೂ, ಕಠಿನನೂ, ಭಯಂಕರನೂ, ಶಾಂತನೂ ಆಗಿರುವ ನಿನಗೆ ನಮಸ್ಕಾರ.

೫೮. ಲೆಕ್ಕವಿಲ್ಲದ ರೂಪಗಳುಳ್ಳವನೂ, ಪ್ರಪಂಚಸ್ವರೂಪನೂ, ವಿಭೂತಿಯಿಂದ ಲಿಪ್ತವಾದ ಅಂಗವುಳ್ಳವನೂ, ಚಂದ್ರಮೌಲಿಯೂ, ಐದುಮುಖಗಳುಳ್ಳವನೂ, ಮುಕ್ಕಣ್ಣನೂ ಆಗಿರುವ ನಿನಗೆ ನಮಸ್ಕಾರ.

CC-0. Jangamwadi Math Collection. Digitized by eGangotri

ನಮಸ್ತೇ ವ್ಯಾಲಭೂಷಾಯ ಕಕ್ಷಾಪಟಧರಾಯ ಚ ।
ನಮೋಽಂಧಕವಿನಾಶಾಯ ದಕ್ಷಪಾಪಾಽಪಹಾರಿಣೇ ।
ಕಾಮನಿರ್ದಾಹಿನೇ ತುಭ್ಯಂ ತ್ರಿಪುರಾರೇ ನಮೋಽಸ್ತು ತೇ ॥ ೪೯ ॥
ಚತ್ವಾರಿಂಶಚ್ಚ ನಾಮಾನಿ ಮಯೋಕ್ತಾನಿ ಚ ಯಃ ಪಠೇತ್ ।
ಶುಚಿರ್ಭೂತ್ವಾ ತ್ರಿಕಾಲಂ ತು ಪಠೇದ್ವಾ ಶೃಣುಯಾದಪಿ ॥ ೫೦ ॥
ಗೋಘ್ನಶ್ಚೈವ ಕೃತಘ್ನಶ್ಚ ಸುರಾಪೋ ಗುರುತಲ್ಪಗಃ ।
ಬ್ರಹ್ಮಹಾ ಹೇಮಹಾರೀ ಚ ಹ್ಯಥವಾ ವೃಷಲೀಪತಿಃ ॥ ೫೧ ॥
ಸ್ತ್ರೀಬಾಲಘಾತಕಶ್ಚೈವ ಪಾಪೀ ಚಾಽನೃತಭಾಷಣಃ ।
ಅನಾಚಾರೀ ತಥಾ ಸ್ತೇಯೀ ಪರದಾರಾಽಭಿಗಸ್ತಥಾ ॥ ೫೨ ॥
ಪರಾಽಪವಾದೀ ದ್ವೇಷೀ ಚ ವೃತ್ತಿಲೋಪಕರಸ್ತಥಾ ।
ಅಕಾರ್ಯಕಾರೀ ಕೃತ್ಯಘ್ನೋ ಬ್ರಹ್ಮದ್ವಿಡ್ವಾಡವಾಽಧಮಃ ।
ಮುಚ್ಯತೇ ಸರ್ವಪಾಪೇಭ್ಯಃ ಕೈಲಾಸಂ ಸ ಚ ಗಚ್ಛತಿ ॥ ೫೩ ॥

ಸೂತ ಉವಾಚ :—

ಇತ್ಯೇವಂ ಬಹುಭಿರ್ವಾಕ್ಯೈರ್ಧರ್ಮರಾಜೇನ ವೈ ಮುಹುಃ ।
ಈಡಿತೋಽಪಿ ಮಹದ್ಭಕ್ತ್ಯಾ ಪ್ರಣಮ್ಯ ಶಿರಸಾ ಸ್ವಯಂ ॥ ೫೪ ॥
ತುಷ್ಟಃ ಶಂಭುಸ್ತದಾ ತಸ್ಮಾ ಉವಾಚೇದಂ ವಚಃ ಶುಭಂ ।
ವರಂ ವೃಣು ಮಹಾಭಾಗ ಯತ್ತೇ ಮನಸಿ ವರ್ತತೇ ॥ ೫೫ ॥

---

೪೯. ಉರಗಭೂಷಣನೂ, ಅಂಧಕಾಸುರಹಂತಕನೂ, ದಕ್ಷಬ್ರಹ್ಮನ ಪಾಪನಿವಾರಕನೂ, ಮನ್ಮಥನನ್ನು ಭಸ್ಮಮಾಡಿದವನೂ, ತ್ರಿಪುರಧ್ವಂಸಕನೂ ಆಗಿರುವ ನಿನಗೆ ನಮಸ್ಕಾರ.

೫೦—೫೩. ನಾನು ಈಗ ಉಸುರಿದ ನಲವತ್ತು ನಾಮಗಳನ್ನು ಶುಚಿಯಾಗಿ ಬೆಳಗ್ಗೆ ಮಧ್ಯಾಹ್ನ ಸಾಯಂಕಾಲ ಹೇಳುವ ಅಥವಾ ಕೇಳುವ ನರನು, ಗೋಹತ್ಯ ಮಾಡಿದವನೂ, ಕೃತಘ್ನನೂ, ಹೆಂಡಕುಡಿದವನೂ, ಗುರುಪತ್ನೀಗಾಮಿಯೂ, ಬ್ರಾಹ್ಮಣನನ್ನು ಕೊಂದವನೂ, ಚಿನ್ನವನ್ನು ಕದ್ದವನೂ, ಶೂದ್ರಸ್ತ್ರೀಯ ಗಂಡನೂ, ಹೆಂಗಸು ಮಕ್ಕಳುಗಳನ್ನು ಕೊಂದವನೂ, ಪಾಪಿಯೂ, ಸುಳ್ಳಾಡುವವನೂ, ದುರ್ನಡತೆಯುಳ್ಳವನೂ, ಕಳ್ಳನೂ, ಪರಸ್ತ್ರೀಗಮನಮಾಡಿದವನೂ, ಇತರರ ಅಪವಾದವನ್ನು ಹೇಳುವವನೂ, ದ್ವೇಷವುಳ್ಳವನೂ, ಮತ್ತೊಬ್ಬನ ಜೀವನ ವನ್ನು ಹಾಳುಮಾಡಿದವನೂ, ಕೆಟ್ಟಕೆಲಸವನ್ನು ಮಾಡಿದವನೂ, ಕಾರ್ಯ ಧ್ವಂಸಿಯೂ, ಬ್ರಾಹ್ಮಣದ್ವೇಷಿಯೂ, ನೀಚಬ್ರಾಹ್ಮಣನೂ ಆಗಿದ್ದರೂ ಸಕಲ ಪಾಪಗಳಿಂದ ಮುಕ್ತನಾಗಿ ಕೈಲಾಸಕ್ಕೆ ಹೋಗುತ್ತಾನೆ.

೫೪—೫೫. ಸೂತನು ಹೇಳುತ್ತಾನೆ:—ಹೀಗೆ ಧರ್ಮರಾಜನು ಅನೇಕ ಮಾತು

CC-0. Jangamwadi Math Collection. Digitized by eGangotri

ಯಮ ಉವಾಚ :—

ಯದಿ ತುಷ್ಟೋಽಸಿ ದೇವೇಶ ದಯಾಂ ಕೃತ್ವಾ ಮಮೋಪರಿ ।
ತಂ ಕುರುಷ್ವ ಮಹಾಭಾಗ ತ್ರೈಲೋಕ್ಯಂ ಸಚರಾಚರಂ ॥ ೫೬ ॥
ಮನ್ನಾಮ್ನಾ ಸ್ಥಾನಮೇತದ್ಧಿ ಖ್ಯಾತಂ ಲೋಕೇ ಭವೇದಿತಿ ।
ಅಚ್ಛೇದ್ಯಂ ಚಾಽಪ್ಯಭೇದ್ಯಂ ಚ ಪುಣ್ಯಂ ಪಾಪಪ್ರಣಾಶನಂ ॥ ೫೭ ॥
ಸ್ಥಾನಂ ಕುರು ಮಹಾದೇವ ಯದಿ ತುಷ್ಟೋಽಸಿ ಮೇ ಭವಾನ್ ।
ಶಿವೇನ ಸ್ಥಾನಕಂ ದತ್ತಂ ಕಾಶೀತುಲ್ಯಂ ತದಾ ನೃಪ ।
ತದ್ದತ್ವಾ ಚ ಪುನಃ ಪ್ರಾಹ ಅನ್ಯಂ ವರಯ ಸತ್ತಮ ॥ ೫೮ ॥

ಧರ್ಮ ಉವಾಚ :—

ಯದಿ ತುಷ್ಟೋಽಸಿ ದೇವೇಶ ದಯಾಂ ಕೃತ್ವಾ ಮಮೋಪರಿ ।
ತಂ ಕುರುಷ್ವ ಮಹಾಭಾಗ ತ್ರೈಲೋಕ್ಯಂ ಸ ಚರಾಚರಂ ।
ವರೇಣ್ಯೈವಂ ಯಥಾಖ್ಯಾತಿಂ ಗಮಿಷ್ಯಾಮಿ ಯುಗೇ ಯುಗೇ ॥ ೫೯ ॥

ಈಶ್ವರ ಉವಾಚ :—

ಬ್ರೂಹಿ ಕೀನಾಶ ತತ್ಸರ್ವಂ ಪ್ರಕರೋಮಿ ತವೇಪ್ಸಿತಂ ।
ತಪಸಾ ತೋಷಿತೋಽಹಂ ತ್ವೈ ದದಾಮಿ ವರಮೀಪ್ಸಿತಂ ॥ ೬೦ ॥

ಯಮ ಉವಾಚ :—

ಯದಿ ಮೇ ವಾಂಛಿತಂ ದೇವ ದದಾಸಿ ತರ್ಹಿ ಶಂಕರ ।
ಅಸ್ಮಿನ್ಸ್ಥಾನೇ ಮಹಾಕ್ಷೇತ್ರೇ ಮನ್ನಾಮ್ನಾ ಭವ ಸರ್ವದಾ ॥ ೬೧ ॥

---

ಗಳಿಂದ ಸ್ತುತಿಸಿ ಅತಿ ಭಕ್ತಿಯಿಂದ ನಮಿಸಲು, ಸಂತೋಷಗೊಂಡ ಪರಮೇಶ್ವರನು 'ನಿನಗಿಷ್ಟವಾದ ವರವನ್ನು ಕೇಳಿಕೊ' ಎಂದು ಸವಿನುಡಿಯನ್ನಾಡಿದನು.

೫೬–೫೮. ಯಮನು ಹೇಳುತ್ತಾನೆ:—ಮಹೇಶ್ವರ! ನೀನು ತುಷ್ಟನಾಗಿದ್ದರೆ ನನ್ನಮೇಲೆ ದಯೆಮಾಡಿ ಈ ಸ್ಥಳವು ಮೂರುಲೋಕದಲ್ಲಿ ನನ್ನ ಹೆಸರಿನಿಂದ ಪ್ರಸಿದ್ಧವಾಗುವಂತೆಯೂ, ಯಾರಿಂದಲೂ ಹಾಳುಮಾಡಲಾಗದಂತೆಯೂ, ಪವಿತ್ರವಾಗುವಂತೆಯೂ, ಪಾಪನಿವಾರಕವಾಗುವಂತೆಯೂ ಮಾಡು ಎಂದನು. ಆಗ ಶಂಭುವು ಕಾಶಿಗೆ ಸಮಾನವಾದ ಆ ಸ್ಥಳವನ್ನು ಕೊಟ್ಟು ಬೇರೆ ವರವನ್ನು ಕೇಳಿಕೊ ಎಂದು ತಿರುಗಿ ಹೇಳಿದನು.

೫೯. ಧರ್ಮರಾಜನು ಹೇಳುತ್ತಾನೆ:—ದೇವೇಶ! ನೀನು ಸಂತೋಷಗೊಂಡಿದ್ದರೆ ನನ್ನಮೇಲೆ ದಯೆಯಿಟ್ಟು ಪ್ರತಿ ಯುಗಗಳಲ್ಲಿಯೂ ನಿನ್ನೀವರದಿಂದ ನಾನು ಮೂರುಲೋಕಗಳಲ್ಲಿಯೂ ಪ್ರಸಿದ್ಧನಾಗುವಂತೆ ಮಾಡು.

೬೦. ಈಶ್ವರನು ಹೇಳುತ್ತಾನೆ:–ಯಮಧರ್ಮ! ನಿನ್ನ ವರದಿಂದ ಆನಂದಗೊಂಡಿದ್ದೇನೆ. ನಿನ್ನ ಅಭೀಪ್ಸಿತಗಳನ್ನೆಲ್ಲ ಹೇಳು. ಅವುಗಳನ್ನೆಲ್ಲ ಕೊಡುವೆನು.

೬೧. ಯಮನು ಹೇಳುತ್ತಾನೆ:–ಶಂಕರ! ನೀನು ನನ್ನ ಇಷ್ಟಾರ್ಥಗಳನ್ನೆಲ್ಲ ಕೊಡುವುದಾದರೆ ಈ ಸ್ಥಳದಲ್ಲಿ ನನ್ನ ಹೆಸರಿನಿಂದ ನೀನು ಯಾವಾಗಲೂ ನೆಲೆಸು.

CC-0. Jangamwadi Math Collection. Digitized by eGangotri

ಧರ್ಮಾಽರಣ್ಯಮಿತಿ ಖ್ಯಾತಿಸ್ತ್ರೈಲೋಕ್ಯೇ ಸಚರಾಚರೇ ।
ಯಥಾ ಸಂಜಾಯತೇ ದೇವ ತಥಾ ಕುರು ಮಹೇಶ್ವರ ॥ ೬೨ ॥

ಈಶ್ವರ ಉವಾಚ :—

ಧರ್ಮಾಽರಣ್ಯಮಿದಂ ಖ್ಯಾತಂ ಸದಾ ಭೂಯಾದ್ಯುಗೇ ಯುಗೇ ।
ತ್ವನ್ನಾಮ್ನಾ ಸ್ಥಾಪಿತಂ ದೇವ ಖ್ಯಾತಿಮೇತದ್ಗಮಿಷ್ಯತಿ ।
ಅಥಾಽನ್ಯದಪಿ ಯತ್ಕಿಂಚಿತ್ಕರೋಮ್ಯೇವ ವದಸ್ವ ತತ್ ॥ ೬೩ ॥

ಯಮ ಉವಾಚ :—

ಯೋಜನದ್ವಯವಿಸ್ತೀರ್ಣಂ ಮನ್ನಾಮ್ನಾ ತೀರ್ಥಮುತ್ತಮಂ ।
ಮುಕ್ತೇಶ್ಚ ಶಾಶ್ವತಂ ಸ್ಥಾನಂ ಪಾವನಂ ಸರ್ವದೇಹಿನಾಂ ॥ ೬೪ ॥
ಮಕ್ಷಿಕಾಃ ಕೀಟಕಾಶ್ಚೈವ ಪಶುಪಕ್ಷಿಮೃಗಾದಯಃ ।
ಪತಂಗಾ ಭೂತವೇತಾಲಾ ಪಿಶಾಚೋರಗರಾಕ್ಷಸಾಃ ॥ ೬೫ ॥
ನಾರೀ ವಾಽಥ ನರೋ ವಾಽಥ ಮತ್ಕ್ಷೇತ್ರೇ ಧರ್ಮಸಂಜ್ಞಕೇ ।
ತ್ಯಜತೇ ಯಃ ಪ್ರಿಯಾನ್ಪ್ರಾಣಾನ್ಮುಕ್ತಿರ್ಭವತು ಶಾಶ್ವತೀ ॥ ೬೬ ॥
ಏವಮಸ್ತ್ವಿತಿ ಸರ್ವೇಽಪಿ ದೇವಾ ಬ್ರಹ್ಮಾದಯಸ್ತಥಾ ।
ಪುಷ್ಪವೃಷ್ಟಿಂ ಪ್ರಕುರ್ವಾಣಾಃ ಪರಂ ಹರ್ಷಮವಾಪ್ನುಯುಃ ॥ ೬೭ ॥
ದೇವದುಂದುಭಯೋ ನೇದುರ್ಗಂಧರ್ವಪತಯೋ ಜಗುಃ ।
ವವುಃ ಪುಣ್ಯಾಸ್ತಥಾ ವಾತಾ ನನೃತುಶ್ಚಾಽಪ್ಸರೋಗಣಾಃ ॥ ೬೮ ॥

---

೬೨. ಮಹೇಶ್ವರ! ಚರಾಚರಾತ್ಮಕವಾದ ಮೂರು ಲೋಕಗಳಲ್ಲಿ ಈ ಸ್ಥಳವು ಧರ್ಮಾರಣ್ಯವೆಂದು ಪ್ರಸಿದ್ಧವಾಗಲಿ. ಆ ರೀತಿ ನೀನು ಅನುಗ್ರಹಿಸು.

೬೩. ಈಶ್ವರನು ಹೇಳುತ್ತಾನೆ:—ಧರ್ಮರಾಜ! ಪ್ರತಿಯುಗದಲ್ಲಿಯೂ ಈ ಸ್ಥಳವು ಧರ್ಮಾರಣ್ಯವೆಂದು ಪ್ರಸಿದ್ಧವಾಗಲಿ. ನಿನ್ನ ಹೆಸರಿನಿಂದ ಸ್ಥಾಪಿತವಾದ ಈ ಕ್ಷೇತ್ರವು ಪ್ರಪಂಚದಲ್ಲಿ ವಿಖ್ಯಾತವಾಗುವುದು. ಮತ್ತೊಂದನ್ನೂ ನಿನಗೆ ಮಾಡಬೇಕೆಂದಿದ್ದೇನೆ. ಅದನ್ನು ಹೇಳು.

೬೪-೬೬. ಯಮನು ಹೇಳುತ್ತಾನೆ:— ಎರಡು ಗಾವುದ ವಿಶಾಲವಾದ ಈ ನನ್ನ ತೀರ್ಥವು ಸಕಲ ಪ್ರಾಣಿಗಳಿಗೆ ಪವಿತ್ರವಾದ ಶಾಶ್ವತ ಮೋಕ್ಷಸ್ಥಾನವಾಗಲಿ. ನೊಣಗಳೂ, ಹುಳುಗಳೂ, ಪಶುಗಳೂ, ಪಕ್ಷಿಗಳೂ, ಮೃಗಗಳೂ, ಮಿಡಿತೆಗಳೂ, ಭೂತ ಬೇತಾಳಗಳೂ, ಪಿಶಾಚಗಳೂ, ಹಾವುಗಳೂ, ರಾಕ್ಷಸರೂ, ಹೆಂಗಸರೂ, ಗಂಡಸರೂ, ಯಾರೇ ಆಗಲಿ, ಈ ನನ್ನ ಧರ್ಮವೆಂಬ ಕ್ಷೇತ್ರದಲ್ಲಿ ಪ್ರಿಯವಾದ ಪ್ರಾಣವನ್ನು ಬಿಟ್ಟರೆ ಸ್ಥಿರವಾದ ಮೋಕ್ಷವು ಲಭಿಸಲಿ.

೬೭. ಹೀಗೆಯೇ ಆಗಲೆಂದು ಶಿವನೂ, ಬ್ರಹ್ಮಾದಿ ದೇವತೆಗಳೂ ಹೇಳಿ ಹೂಮಳೆಗರೆದು ಅತ್ಯಾನಂದಭರಿತರಾದರು.

೬೮. ದೇವತೆಗಳ ನಗಾರಿಗಳು ಮೊಳಗಿದುವು. ಗಂಧರ್ವಶ್ರೇಷ್ಠರು

CC-0. Jangamwadi Math Collection. Digitized by eGangotri

ಸೂತ ಉವಾಚ :—

ಯಮೇನ ತಪಸಾ ಭಕ್ತ್ಯಾ ತೋಷಿತೋ ಹಿ ಸದಾಶಿವಃ ।
ಉವಾಚ ವಚನಂ ದೇವಂ ರಮ್ಯಂ ಸಾಧು ಮನೋರಮಂ ॥ ೬೯ ॥
ಅನುಜ್ಞಾಂ ದೇಹಿ ಮೇ ತಾತ ಯಥಾ ಗಚ್ಛಾಮಿ ಸತ್ವರಂ ।
ಕೈಲಾಸಂ ಪರ್ವತಶ್ರೇಷ್ಠಂ ದೇವಾನಾಂ ಹಿತಕಾಮ್ಯಯಾ ॥ ೨೦ ॥

ಯಮ ಉವಾಚ :—

ನ ಮೇ ಸ್ಥಾನಂ ಪರಿತ್ಯಕ್ತುಂ ತ್ವಯಾ ಯುಕ್ತಂ ಮಹೇಶ್ವರ ।
ಕೈಲಾಸಾದಧಿಕಂ ದೇವ ಜಾಯತೇ ವಚನಾದಿದಂ ॥ ೨೧ ॥

ಶಿವ ಉವಾಚ :—

ಸಾಧು ಪ್ರೋಕ್ತಂ ತ್ವಯಾ ಯುಕ್ತಮೇಕಾಂಶೇನಾಽತ್ರ ಮೇ ಸ್ಥಿತಿಃ ।
ನ ಮಯಾ ತ್ಯಜಿತಂ ಸಾಧು ಸ್ಥಾನಂ ತವ ಸುನಿರ್ಮಲಂ ॥ ೨೨ ॥
ವಿಶ್ವೇಶ್ವರಂ ಮಹಾಲಿಂಗಂ ಮನ್ನಾಮ್ನಾಽತ್ರ ಭವಿಷ್ಯತಿ ।
ಏವಮುಕ್ತ್ವಾ ಮಹಾದೇವಸ್ತತ್ರೈವಾಂತರಧೀಯತ ॥ ೨೩ ॥
ಶಿವಸ್ಯ ವಚನಾತ್ತತ್ರ ತದಾ ಲಿಂಗಂ ತದದ್ಭುತಂ ।
ತಂ ದೃಷ್ಟ್ವಾ ಚ ಸುರೈಸ್ತತ್ರ ಯಥಾ ನಾಮಾಽನುಕೀರ್ತನಂ ॥ ೨೪ ॥

---

ಹಾಡಿದರು. ಗಾಳಿಯು ಸುಖವಾಗಿ ಬೀಸಿತು. ಅಪ್ಸರಸ್ತ್ರೀಯರು ನರ್ತನ ಮಾಡಿದರು.

೬೯–೨೦. ಸೂತನು ಹೇಳುತ್ತಾನೆ:—ಯಮನ ತಪಸ್ಸಿಗೂ, ಭಕ್ತಿಗೂ ಮೆಚ್ಚಿದ ಸದಾಶಿವನು ಮಗು! ದೇವತೆಗಳಿಗೆ ಹಿತವನ್ನು ಮಾಡಲು ಕೈಲಾಸ ಪರ್ವತಕ್ಕೆ ಶೀಘ್ರವಾಗಿ ನಾನು ತೆರಳಲು ಅನುಮತಿಯನ್ನು ಕೊಡು ಎಂದು ಹಿತವಾದ ಮಾತನ್ನಾಡಿದನು.

೨೧. ಯಮನು ಹೇಳುತ್ತಾನೆ:—ಮಹೇಶ್ವರ! ನೀನು ಈ ನನ್ನ ಕ್ಷೇತ್ರವನ್ನು ಬಿಟ್ಟುಹೋಗಲುಚಿತವಲ್ಲ. ನಿನ್ನ ಮಾತಿನಂತೆ ಈ ಸ್ಥಳವು ಕೈಲಾಸಕ್ಕಿಂತ ಮಿಗಿಲಾಗುವುದು.

೨೨. ಶಿವನು ಹೇಳುತ್ತಾನೆ:—ಯಮಧರ್ಮ! ನೀನು ಚೆನ್ನಾಗಿ ಹೇಳಿದೆ. ಒಂದಂಶದಿಂದ ನಾನು ಇಲ್ಲಿರುವುದು ಯೋಗ್ಯವಾದುದು. ನಿನ್ನೀ ನಿರ್ಮಲವಾದ ಸ್ಥಳವನ್ನು ನಾನು ಬಿಡಲಿಲ್ಲ.

೨೩. ವಿಶ್ವೇಶ್ವರವೆಂಬ ಮಹಾಲಿಂಗವು ಇಲ್ಲಿ ನನ್ನ ಹೆಸರಿನಿಂದಿರುವುದು ಎಂದು ಹೇಳಿ ಮಹೇಶ್ವರನು ಅಲ್ಲಿಯೇ ಮಾಯವಾದನು.

೨೪–೨೫. ಶಿವನ ಮಾತಿನಂತೆ ಅದ್ಭುತವಾದ ಆ ಮಹಾಲಿಂಗವು ಅಲ್ಲಿ ಉದ್ಭವಿಸಲು ದೇವತೆಗಳೆಲ್ಲ ಆ ಧರ್ಮಾರಣ್ಯದಲ್ಲಿ ತಮ್ಮ ತಮ್ಮ ಹೆಸರಿನಿಂದ ಒಂದೊಂದು ಲಿಂಗವನ್ನು ಸ್ಥಾಪಿಸಿದರು.

CC-0. Jangamwadi Math Collection. Digitized by eGangotri

ಸ್ವಂ ಸ್ವಂ ಲಿಂಗಂ ತದಾ ಸೃಷ್ಟಂ ಧರ್ಮಾರಣ್ಯೇ ಸುರೋತ್ತಮೈಃ ।
ಯಸ್ಯ ದೇವಸ್ಯ ಯಲ್ಲಿಂಗಂ ತನ್ನಾಮ್ನಾ ಪರಿಕೀರ್ತಿತಂ ॥ ೭೫ ॥

ಸೂತ ಉವಾಚ :—

ಧರ್ಮೇಣ ಸ್ಥಾಪಿತಂ ಲಿಂಗಂ ಧರ್ಮೇಶ್ವರಮುಪಸ್ಥಿತಂ ।
ಸ್ಮರಣಾತ್ಪೂಜನಾತ್ತಸ್ಯ ಸರ್ವಪಾಪೈಃ ಪ್ರಮುಚ್ಯತೇ ॥ ೭೬ ॥
ಯದ್ಬ್ರಹ್ಮ ಯೋಗಿನಾಂ ಗಮ್ಯಂ ಸರ್ವೇಷಾಂ ಹೃದಯೇ ಸ್ಥಿತಂ ।
ತಿಷ್ಠತೇ ಯಸ್ಯ ಲಿಂಗಂ ತು ಸ್ವಯಂಭುವಮಿತಿ ಸ್ಥಿತಂ ॥ ೭೭ ॥
ಭೂತನಾಥಂ ಚ ಸಂಪೂಜ್ಯ ವ್ಯಾಧಿಭಿರ್ಮುಚ್ಯತೇ ಜನಃ ।
ಧರ್ಮವಾಪೀಂ ತತಶ್ಚೈವ ಚಕ್ರೇ ತತ್ರ ಮನೋರಮಾಂ ॥ ೭೮ ॥
ಆಹೃತ್ಯ ಕೋಟಿತೀರ್ಥಾನಾಂ ಜಲಂ ವಾಪ್ಯಾಂ ಮುಮೋಚ ಹ ।
ಯಮತೀರ್ಥಸ್ವರೂಪಂ ಚ ಸ್ನಾನಂ ಕೃತ್ವಾ ಮನೋರಮಂ ॥ ೭೯ ॥
ಸ್ನಾನಾರ್ಥಂ ದೇವತಾನಾಂ ಚ ಋಷೀಣಾಂ ಭಾವಿತಾತ್ಮನಾಂ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಸರ್ವಪಾಪೈಃ ಪ್ರಮುಚ್ಯತೆ ॥ ೮೦ ॥
ಧರ್ಮವಾಪ್ಯಾಂ ನರಃ ಸ್ನಾತ್ವಾ ದೃಷ್ಟ್ವಾ ಧರ್ಮೇಶ್ವರಂ ಶಿವಂ ।
ಮುಚ್ಯತೇ ಸರ್ವಪಾಪೇಭ್ಯೋ ನ ಮಾತುರ್ಗರ್ಭಮಾವಿಶೇತ್ ॥ ೮೧ ॥

---

೭೬. ಸೂತನು ಹೇಳುತ್ತಾನೆ:— ಯಮಧರ್ಮನು ಪ್ರತಿಷ್ಠೆಮಾಡಿದ ಧರ್ಮೇಶ್ವರಲಿಂಗವನ್ನು ಸ್ಮರಿಸುವುದರಿಂದಲೂ, ಪೂಜಿಸುವುದರಿಂದಲೂ ಮನುಷ್ಯನು ಸಕಲ ಪಾಪಗಳಿಂದ ಮುಕ್ತನಾಗುವನು.

೭೭. ಸಮಸ್ತರ ಹೃದಯಗಳಲ್ಲಿರುವ ಯಾವ ಪರಬ್ರಹ್ಮನು ಯೋಗಿಗಳಿಗೆ ಧ್ಯಾನದಿಂದ ಹೊಂದಲು ಶಕ್ಯನೊ ಅವನೇ ಅಲ್ಲಿ ಸ್ವಯಂಭುವಲಿಂಗವೆಂಬ ಹೆಸರಿನಿಂದ ನೆಲಸಿದನು.

೭೮–೮೦. ಮನುಷ್ಯರು ಆ ಮಹಾದೇವನನ್ನು ಆರಾಧಿಸಿ ವ್ಯಾಧಿಮುಕ್ತರಾಗುವರು. ಬಳಿಕ ಯಮನು ದೇವತೆಗಳ ಮತ್ತು ಜ್ಞಾನಿಗಳಾದ ಮುನಿಗಳ ಸ್ನಾನಕ್ಕೋಸ್ಕರ ಅಲ್ಲಿ ಮನೋಹರವಾದ ಧರ್ಮವಾಪೀ ಎಂಬ ಕೊಳವನ್ನು ಕಲ್ಪಿಸಿ ಅದರಲ್ಲಿ ಕೋಟಿಸಂಖ್ಯಾತಗಳಾದ ತೀರ್ಥಗಳ ನೀರನ್ನು ಬಿಟ್ಟನು. ಈ ಯಮತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಸಕಲ ಪಾಪಮುಕ್ತನಾಗುವನು.

೮೧. ಮಾನವನು ಈ ಧರ್ಮವಾಪಿಯಲ್ಲಿ ಮಿಂದು ಧರ್ಮೇಶ್ವರನ ದರ್ಶನ ಮಾಡಿದರೆ ಸಕಲ ಪಾಪಮುಕ್ತನಾಗಿ ತಿರುಗಿ ಜನ್ಮವಿಲ್ಲದೆ ಮೋಕ್ಷವನ್ನು ಹೊಂದುವನು.

CC-0. Jangamwadi Math Collection. Digitized by eGangotri

ತತ್ರ ಸ್ನಾತ್ವಾ ನರೋ ಯಸ್ತು ಕರೋತಿ ಯಮತರ್ಪಣಂ ।
ವ್ಯಾಧಿದೋಷವಿನಾಶಾರ್ಥಂ ಕ್ಲೇಶದೋಷೋಪಶಾಂತಯೇ ॥
ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ
ವೈವಸ್ವತಾಯ ಕಾಲಾಯ ದಧ್ನಾಯ ಪರಮೇಷ್ಠಿನೇ ॥ ೮೨ ॥
ವೃಕೋದರಾಯ ವೃಕಾಯ ದಕ್ಷಿಣೇಶಾಯ ತೇ ನಮಃ ।
ನೀಲಾಯ ಚಿತ್ರಗುಪ್ತಾಯ ಚಿತ್ರ ವೈಚಿತ್ರ ತೇ ನಮಃ ॥ ೮೩ ॥
ಯಮಾರ್ಥಂ ತರ್ಪಣಂ ಯೋ ವೈ ಧರ್ಮವಾಪ್ಯಾಂ ಕರಿಷ್ಯತಿ ।
ಸಾಕ್ಷತೈರ್ನಾಮಭಿಶ್ಚೈತೈಸ್ತಸ್ಯ ನೋಪದ್ರವೋ ಭವೇತ್ ॥ ೮೪ ॥
ಏಕಾಂತರಸ್ತೃತೀಯಸ್ತು ಜ್ವರಶ್ಚಾತುರ್ಥಿಕಸ್ತಥಾ ।
ವೇಲಾಯಾಂ ಜಾಯತೇ ಯಸ್ತು ಜ್ವರಃ ಶೀತಜ್ವರಸ್ತಥಾ ॥ ೮೫ ॥
ಪೀಡಯಂತಿ ನ ಚೈತಸ್ಯ ಯಸ್ಯೈವ ಮತಿರೀದೃಶೀ ।
ರೇವತ್ಯಾದಿಗ್ರಹಾ ದೋಷಾ ಡಾಕಿನೀ ಶಾಕಿನೀ ತಥಾ ॥ ೮೬ ॥
ಧನಧಾನ್ಯಸಮೃದ್ಧಿಃ ಸ್ಯಾತ್ಸಂತತಿರ್ವರ್ಧತೇ ಸದಾ ।
ಭೂತೇಶ್ವರಂ ತು ಸಂಪೂಜ್ಯ ಸುಸ್ನಾತೋ ವಿಜಿತೇಂದ್ರಿಯಃ ॥ ೮೭ ॥
ಸಾಂಗಂ ರುದ್ರಜಪಂ ಕೃತ್ವಾ ವ್ಯಾಧಿದೋಷಾತ್ಪ್ರಮುಚ್ಯತೇ ।
ಅಮಾವಾಸ್ಯಾಂ ಸೋಮದಿನೇ ವ್ಯತೀಪಾತೇ ಚ ವೈಧೃತೌ ।
ಸಂಕ್ರಾಂತೌ ಗ್ರಹಣೇ ಚೈವ ತತ್ರ ಶ್ರಾದ್ಧಂ ಸ್ಮೃತಂ ನೃಣಾಂ ॥ ೮೮ ॥

---

೮೨–೮೪. ಮನುಷ್ಯನು ತನ್ನ ವ್ಯಾಧಿ ಮತ್ತು ದುಃಖಗಳ ನಾಶಕ್ಕಾಗಿ ಈ ಯಮತೀರ್ಥದಲ್ಲಿ ಮಿಂದು ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ದಧ್ನ, ಪರಮೇಷ್ಠಿ, ವೃಕೋದರ, ವೃಕ, ದಕ್ಷಿಣೇಶ, ನೀಲ, ಚಿತ್ರಗುಪ್ತ, ಚಿತ್ರ, ವೈಚಿತ್ರ ಎಂಬ ನಾಮಗಳಿಂದ ಅಕ್ಷತಸಹಿತವಾಗಿ ಯಮನಿಗೆ ತರ್ಪಣಮಾಡಿದರೆ ಅವನ ತೊಂದರೆಗಳು ನೀಗುವುವು.

೮೫–೮೮. ಮೂರುದಿನಕ್ಕೊಮ್ಮೆಯೂ, ನಾಲ್ಕುದಿನಕ್ಕೊಮ್ಮೆಯೂ ಬರುವ ಜ್ವರವೂ, ಶೀತಜ್ವರವೂ, ರೇವತ್ಯಾದಿ ಗ್ರಹದೋಷಗಳೂ, ಶಾಕಿನೀ ಡಾಕಿನೀ ಪಿಶಾಚಗಳೂ ಪೀಡಿಸುವುದಿಲ್ಲ. ಧನ ಮತ್ತು ಧಾನ್ಯಗಳ ಸಮೃದ್ಧಿಯಾಗುವುದು. ಯಾವಾಗಲೂ ಸಂತತಿಯು ಬೆಳೆಯುವುದು. ಈ ಧರ್ಮವಾಪಿಯಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿ ಮಹಾದೇವನನ್ನು ಪೂಜಿಸಿ ಅಂಗನ್ಯಾಸ ಕರನ್ಯಾಸಸಹಿತವಾದ ರುದ್ರಜಪವನ್ನುಮಾಡಿದರೆ ರೋಗದ ಉಪದ್ರವವು ಮಾಯವಾಗುವುದು. ಅಮಾವಾಸ್ಯೆ, ಸೋಮವಾರ, ವ್ಯತೀಪಾತ, ವೈಧೃತಿ, ಸಂಕ್ರಮಣ, ಗ್ರಹಣಕಾಲಗಳಲ್ಲಿ ಮಾನವನು ಇಲ್ಲಿ ಶ್ರಾದ್ಧಮಾಡಬೇಕೆಂದು ವಿಹಿತವಾಗಿದೆ.

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 4729

CC-0. Jangamwadi Math Collection. Digitized by eGangotri

ಶ್ರಾದ್ಧಂ ಕೃತಂ ತೇನ ಸಮಾಃ ಸಹಸ್ರಂ
ನಿರಸ್ಯ ಚೈತತ್ಪಿತರಸ್ತ್ವದಂತಿ ।
ಪಾನೀಯಮೇವಾಽಪಿ ತಿಲೈರ್ವಿಮಿಶ್ರಿತಂ
ದದಾತಿ ಯೋ ವೈ ಪ್ರಥಿತೋ ಮನುಷ್ಯಃ ॥ ೮೯ ॥
ಏಕವಿಂಶತಿವಾರೈಸ್ತು ಗಯಾಯಾಂ ಪಿಂಡದಾನತಃ ।
ಧರ್ಮೇಶ್ವರೇ ಸಕೃದ್ದತ್ತಂ ಪಿತೄಣಾಂ ಚಾಽಕ್ಷಯಂ ಭವೇತ್ ॥ ೯೦ ॥
ಧರ್ಮೇಶಾತ್ಪಶ್ಚಿಮೇ ಭಾಗೇ ವಿಶ್ವೇಶ್ವರಾಂತರೇಽಪಿ ವಾ ।
ಧರ್ಮವಾಪೀತಿ ವಿಖ್ಯಾತಾ ಸ್ವರ್ಗಸೋಪಾನದಾಯಿನೀ ॥ ೯೧ ॥
ಧರ್ಮೇಣ ನಿರ್ಮಿತಾ ಪೂರ್ವಂ ಶಿವಾರ್ಥಂ ಧರ್ಮಬುದ್ಧಿನಾ ।
ತತ್ರ ಸ್ನಾತ್ವಾ ಚ ಪೀತ್ವಾ ಚ ತರ್ಪಿತಾಃ ಪಿತೃದೇವತಾಃ ॥ ೯೨ ॥
ಶಮೀಪತ್ರಪ್ರಮಾಣಂ ತು ಪಿಂಡಂ ದದ್ಯಾಚ್ಚ ಯೋ ನರಃ ।
ಧರ್ಮವಾಪ್ಯಾಂ ಮಹಾಪುಣ್ಯಾಂ ಗರ್ಭವಾಸಂ ನ ಚಾಪ್ನುಯಾತ್ ॥ ೯೩ ॥
ಕುಂಭೀಪಾಕಾನ್ಮಹಾರೌದ್ರಾದ್ರೌರವಾನ್ನರಕಾತ್ಪ್ರನಃ ।
ಅಂಧತಾಮಿಸ್ರಕಾದ್ರಾಜನ್ಮುಚ್ಯತೇ ನಾಽತ್ರ ಸಂಶಯಃ ॥ ೯೪ ॥

---

೮೯. ಇಂತಹ ದಿನಗಳಲ್ಲಿ ಇಲ್ಲಿ ಯಾವ ಮನುಷ್ಯನು ತಿಲತರ್ಪಣವನ್ನು ಮಾಡುವನೊ, ಅಂತಹ ಮನುಷ್ಯನ ಪಿತೃಗಳು ಅವನು ಹಿಂದೆ ಮಾಡಿದ ಸಾವಿರವರ್ಷದ ಶ್ರಾದ್ಧವನ್ನೂ ತ್ಯಜಿಸಿ ಈ ತರ್ಪಣೋದಕವನ್ನೇ ಪಾನ ಮಾಡುವರು.

೯೦. ಇಪ್ಪತ್ತೊಂದುಸಾರಿ ಗಯೆಯಲ್ಲಿ ಪಿಂಡಪ್ರದಾನ ಮಾಡುವುದಕ್ಕಿಂತ ಈ ಧರ್ಮೇಶ್ವರದಲ್ಲಿ ಒಂದುಸಾರಿ ಮಾಡಿದ ಪಿಂಡಪ್ರದಾನವು ಪಿತೃಗಳಿಗೆ ಅಕ್ಷಯವಾಗುವುದು.

೯೧-೯೨. ಧರ್ಮೇಶ್ವರಕ್ಕಿಂತ ಪಶ್ಚಿಮದಲ್ಲಿ ವಿಶ್ವೇಶ್ವರನ ಸಮ್ಮುಖದಲ್ಲಿ ಧರ್ಮಬುದ್ಧಿಯುಳ್ಳ ಯಮನು ಮಹೇಶ್ವರನಿಗೋಸ್ಕರ ಸ್ವರ್ಗಲೋಕದ ಮೆಟ್ಟಿಲಾದ ಧರ್ಮವಾಪಿಯನ್ನು ನಿರ್ಮಿಸಿ ಅದರಲ್ಲಿ ಸ್ನಾನಮಾಡಿ ತರ್ಪಣದಿಂದ ಪಿತೃದೇವತೆಗಳನ್ನು ಸಂತೋಷಗೊಳಿಸಿದನು.

೯೩. ಪವಿತ್ರವಾದ ಧರ್ಮವಾಪಿಯಲ್ಲಿ ಯಾವ ನರನು ಶಮಿಯ ಎಲೆಯಷ್ಟು ಪ್ರಮಾಣದ ಪಿಂಡವನ್ನು ಪಿತೃಗಳಿಗೆ ಕೊಡುವನೊ, ಅವನು ತಿರುಗಿ ತಾಯಿಯ ಗರ್ಭವಾಸಕಷ್ಟವನ್ನನುಭವಿಸಿ ಹುಟ್ಟುವುದಿಲ್ಲ.

೯೪. ರಾಜೇಂದ್ರ! ಮತ್ತು ಕುಂಭೀಪಾಕ, ರೌರವ, ಅಂಧತಾಮಿಸ್ರಕವೆಂಬ ಅತಿ ಭಯಂಕರವಾದ ನರಕದಿಂದ ಮುಕ್ತನಾಗುವನು. ಸಂದೇಹವಿಲ್ಲ.

CC-0. Jangamwadi Math Collection. Digitized by eGangotri

ಸೂತ ಉವಾಚ :—

ಏಕವರ್ಷಂ ತರ್ಪಣೀಯಂ ಧರ್ಮವಾಪ್ಯಾಂ ನರೋತ್ತಮಃ ।
ಋತೌ ಮಾಸೇ ಚ ಪಕ್ಷೇ ಚ ವಿಪರೀತಂ ಚ ಜಾಯತೇ ॥ ೯೫ ॥
ಬರ್ಹಿಷದೋಽಗ್ನಿಷ್ವಾತ್ತಾಶ್ಚ ಆಜ್ಯಪಾಃ ಸೋಮಪಾಸ್ತಥಾ ।
ತೃಪ್ತಿಂ ಪ್ರಯಾಂತಿ ಪರಮಾಂ ವಾಪ್ಯಾಂ ವೈ ತರ್ಪಣೇನ ತು ॥ ೯೬ ॥
ಕುರುಕ್ಷೇತ್ರಾದಿಕ್ಷೇತ್ರಾಣಿ ಅಯೋಧ್ಯಾದಿಪುರಾಸ್ತಥಾ ।
ಪುಷ್ಕರಾದ್ಯಾನಿ ಸರ್ವಾಣಿ ಮುಕ್ತಿನಾಮಾನಿ ಸಂತಿ ವೈ ॥ ೯೭ ॥
ತಾನಿ ಸರ್ವಾಣಿ ತುಲ್ಯಾನಿ ಧರ್ಮಕೂಪೋಽಧಿಕೋ ಭವೇತ್ ।
ಮಂತ್ರೋ ವೇದಾಸ್ತಥಾ ಯಜ್ಞಾ ದಾನಾನಿ ಚ ವ್ರತಾನಿ ಚ ॥ ೯೮ ॥
ಅಕ್ಷಯಾಣಿ ಪ್ರಜಾಯಂತೇ ದತ್ವಾ ಜಪ್ತ್ವಾ ನರೇಶ್ವರ ।
ಅಭಿಚಾರಾಶ್ಚ ಯೇ ಚಾಽನ್ಯೇ ಸುಸಿದ್ಧಾಽಥರ್ವವೇದಜಾಃ ॥ ೯೯ ॥
ತೇ ಸರ್ವೇ ಸಿದ್ಧಿಮಾಯಾಂತಿ ತಸ್ಮಿನ್ಸ್ಥಾನೇ ಕೃತಾ ಅಪಿ ।
ಆದಿತೀರ್ಥಂ ನೃಪಶ್ರೇಷ್ಠ ಕಾಜೇಶೈರುಪಸೇವಿತಂ ॥ ೧೦೦ ॥
ಸಿದ್ಧಿಸ್ಥಾನಂ ಸುಸೌಮ್ಯಂ ಚ ಬ್ರಹ್ಮಾದ್ಯೈರಪಿ ಸೇವಿತಂ ।
ಕೃತೇ ತು ಯುಗಪರ್ಯಂತಂ ತ್ರೇತಾಯಾಂ ಲಕ್ಷಪಂಚಕಂ ॥ ೧೦೧ ॥

---

೯೫. ಸೂತನು ಹೇಳುತ್ತಾನೆ:— ಮಾನವನು ಇಲ್ಲಿ ಒಂದು ಋತು, ಒಂದು ತಿಂಗಳು, ಒಂದು ಪಕ್ಷಗಳಲ್ಲಿ ಮಾಡಿದ ತರ್ಪಣವು ಒಂದು ವರ್ಷದ ತರ್ಪಣವಾಗುವುದು.

೯೬. ಈ ಧರ್ಮವಾಪಿಯಲ್ಲಿ ಮಾಡಿದ ತರ್ಪಣದಿಂದ ಬರ್ಹಿಷದ, ಅಗ್ನಿಷ್ವಾತ್ತ, ಆಜ್ಯಪ, ಸೋಮಪ ಎಂಬ ಪಿತೃಗಳು ತೃಪ್ತಿಯೊಂದುವರು.

೯೭–೧೦೨. ಕುರುಕ್ಷೇತ್ರ ಮೊದಲಾದ ಕ್ಷೇತ್ರಗಳೂ, ಅಯೋಧ್ಯಾದಿ ಪಟ್ಟಣಗಳೂ, ಪುಷ್ಕರಾದಿ ಮುಕ್ತಿಕ್ಷೇತ್ರಗಳೂ ಸಮಾನವಾದುವು. ಇವುಗಳಿಗಿಂತ ಧರ್ಮಕೂಪವು ಹೆಚ್ಚಿನದು. ರಾಜೇಂದ್ರ! ಇಲ್ಲಿ ಜಪಿಸಿದ ಮಂತ್ರಗಳು, ವೇದಗಳು, ಯಜ್ಞಗಳು, ಕೊಟ್ಟ ದಾನಗಳು, ವ್ರತಗಳು ಇವೆಲ್ಲ ಅಕ್ಷಯಗಳಾಗುವುವು. ಈ ಸ್ಥಳದಲ್ಲಿ ಆಥರ್ವಣ ವೇದೋಕ್ತವಾದ ಮಾಟಗಳನ್ನು ಮಾಡಿದರೂ ಅವು ಸಫಲವಾಗುವುವು. ಈ ಸಿದ್ಧಿಕ್ಷೇತ್ರವನ್ನು ಯಮ, ಬ್ರಹ್ಮ ಮಹೇಶ್ವರರೂ ಸೇವಿಸಿರುತ್ತಾರೆ. ಇದರಲ್ಲಿ ಮಾಡಿದ ಸತ್ಕಾರ್ಯದ ಫಲವು ಕೃತಯುಗದಲ್ಲಿ ಒಂದು ಯುಗಕಾಲದಲ್ಲಿಯೂ, ತ್ರೇತಾಯುಗದಲ್ಲಿ ಐದುಲಕ್ಷವರ್ಷಗಳಲ್ಲಿಯೂ, ದ್ವಾಪರಯುಗದಲ್ಲಿ ಒಂದು ಲಕ್ಷವರ್ಷಗಳಲ್ಲಿಯೂ,

CC-0. Jangamwadi Math Collection. Digitized by eGangotri

ದ್ವಾಪರೇ ಲಕ್ಷಮೇಕಂ ತು ದಿನೈಕೇನ ಫಲಂ ಕಲೌ ।
ಏತದುಕ್ತಂ ಮಯಾ ಬ್ರಹ್ಮನ್ಧರ್ಮಾರಣ್ಯಸ್ಯ ವರ್ಣನಂ ।
ಫಲಂ ಚೈವಾತ್ರ ಸರ್ವಂ ಹಿ ಉಕ್ತಂ ದ್ವೈಪಾಯನೇನ ತು ॥ ೧೦೨ ॥

ಸೂತ ಉವಾಚ :—

ಅತಃ ಪರಂ ಪ್ರವಕ್ಷ್ಯಾಮಿ ಧರ್ಮವಾಕ್ಯಂ ಮನೋರಮಂ ।
ದೇವಾನಾಂ ಹಿತಕಾಮಾಯ ಆಜ್ಞಾಪ್ಯ ಚ ಯದುಕ್ತವಾನ್ ॥ ೧೦೩ ॥

ಧರ್ಮ ಉವಾಚ :—

ಅಸ್ಮಿನ್ಕ್ಷೇತ್ರೇ ಪ್ರಕುರ್ವಂತಿ ವಿಷ್ಣುಮಾಯಾವಿಮೋಹಿತಾಃ ।
ಪಾರದಾರ್ಯಂ ಮಹಾದುಷ್ಟಂ ಸ್ವರ್ಣಸ್ತೇಯಾದಿಕಂ ತಥಾ ॥ ೧೦೪ ॥
ಅನ್ಯಚ್ಚ ವಿಕೃತಂ ಸರ್ವಂ ಕುರ್ವಾಣೋ ನರಕಂ ವ್ರಜೇತ್ ।
ಅನ್ಯಕ್ಷೇತ್ರೇ ಕೃತಂ ಪಾಪಂ ಧರ್ಮಾರಣ್ಯೇ ವಿನಶ್ಯತಿ ॥ ೧೦೫ ॥
ಧರ್ಮಾರಣ್ಯೇ ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ।
ಯಥಾ ಪುಣ್ಯಂ ತಥಾ ಪಾಪಂ ಯತ್ಕಿಂಚಿಚ್ಚ ಶುಭಾಶುಭಂ ॥ ೧೦೬ ॥
ತತ್ಸರ್ವಂ ವರ್ಧತೇ ನಿತ್ಯಂ ವರ್ಷಾಣಿ ಶತಮಿತ್ಯುತ ।
ಕಾಮಿನಾಂ ಕಾಮದಂ ಪುಣ್ಯಂ ಯೋಗಿನಾಂ ಮುಕ್ತಿದಾಯಕಂ ॥ ೧೦೭ ॥
ಸಿದ್ಧಾನಾಂ ಸಿದ್ಧಿದಂ ಪ್ರೋಕ್ತಂ ಧರ್ಮಾರಣ್ಯಂ ತು ಸರ್ವದಾ ।
ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಧನವಾನ್ಭವೇತ್ ॥ ೧೦೮ ॥

---

ಕಲಿಯುಗದಲ್ಲಿ ಒಂದು ದಿನದಲ್ಲಿಯೂ ಸಿದ್ಧಿಸುವುದು. ಈಗ ನಾನು ಧರ್ಮಾರಣ್ಯವನ್ನು ವರ್ಣಿಸಿದ್ದಾಯಿತು. ಈ ಫಲಗಳನ್ನೆಲ್ಲ ವ್ಯಾಸರೇ ಹೇಳಿರುತ್ತಾರೆ.

೧೦೩. ಸೂತನು ಹೇಳುತ್ತಾನೆ:—ಇನ್ನುಮುಂದೆ ಧರ್ಮರಾಜನು ದೇವತೆಗಳ ಹಿತದೃಷ್ಟಿಯಿಂದ ಅಪ್ಪಣೆಮಾಡಿ ಹೇಳಿದ ಮನೋಹರವಾದ ಮಾತನ್ನು ಹೇಳುವೆನು.

೧೦೪–೧೦೮. ಧರ್ಮನು ಹೇಳುತ್ತಾನೆ:—ಈ ಕ್ಷೇತ್ರದಲ್ಲಿ ಮನುಷ್ಯರು ವಿಷ್ಣುಮಾಯೆಯಿಂದ ಮೋಹಗೊಂಡು ಪರಸ್ತ್ರೀಗಮನ, ಅತಿ ಕೆಟ್ಟದಾದ ಸುವರ್ಣಚೌರ್ಯ, ಇನ್ನೂ ಇತರ ಕೆಟ್ಟ ಕೆಲಸಗಳನ್ನು ಮಾಡಿದರೆ ನರಕವನ್ನು ಸೇರುವರು. ಇತರ ಪುಣ್ಯಕ್ಷೇತ್ರಗಳಲ್ಲಿ ಮಾಡಿದ ಪಾಪವು ಧರ್ಮಾರಣ್ಯದಲ್ಲಿ ನಾಶವಾಗುವುದು. ಇಲ್ಲಿ ಮಾಡಿದ ಪಾಪವು ಇನ್ನೂ ದೃಢವಾಗುವುದು. ಇಲ್ಲಿ ಪುಣ್ಯವು ಹೆಚ್ಚಿದಂತೆ ಪಾಪವೂ ನೂರುವರ್ಷಗಳವರೆಗೆ ನಿತ್ಯವೂ ವೃದ್ಧಿಯಾಗುತ್ತಿರುವುದು. ಈ ಧರ್ಮಾರಣ್ಯವು ಕಾಮಿಗಳಿಗೆ ಕಾಮವನ್ನೂ, ಯೋಗಿಗಳಿಗೆ ಮೋಕ್ಷವನ್ನೂ, ಸಿದ್ಧರಿಗೆ ಜ್ಞಾನಸಿದ್ಧಿಯನ್ನೂ ಯಾವಾಗಲೂ ನೀಡುವುದು. ಮಕ್ಕಳಿಲ್ಲದವನು ಮಕ್ಕಳನ್ನೂ, ಬಡವನು ಹಣವನ್ನೂ ಪಡೆಯುವನು.

CC-0. Jangamwadi Math Collection. Digitized by eGangotri

ಏತದಾಖ್ಯಾನಕಂ ಪುಣ್ಯಂ ಧರ್ಮೇಣ ಕಥಿತಂ ಪುರಾ ।
ಯಃ ಶೃಣೋತಿ ನರೋ ಭಕ್ತ್ಯಾ ನಾರೀ ವಾ ಶ್ರಾವಯೇತ್ತು ಯಃ ।
ಗೋಸಹಸ್ರಫಲಂ ತಸ್ಯ ಅಂತೇ ಹರಿಪುರಂ ವ್ರಜೇತ್ ॥ ೧೦೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಕ್ಷೇತ್ರ ಸ್ಥಾಪನಂ"ನಾಮ ಚತುರ್ಥೋಽಧ್ಯಾಯಃ

---

೧೦೯. ಹಿಂದೆ ಧರ್ಮರಾಜನು ಹೇಳಿದ ಪವಿತ್ರವಾದ ಈ ಕಥೆಯನ್ನು ಗಂಡಸಾಗಲಿ, ಹೆಂಗಸಾಗಲಿ ಕೇಳಿದರೆ ಅಥವಾ ಇನ್ನೊಬ್ಬರಿಗೆ ಹೇಳಿದರೆ ಅವರು ಸಹಸ್ರಗೋದಾನದ ಫಲವನ್ನು ಪಡೆದು ಕೊನೆಯಲ್ಲಿ ಕೈಲಾಸವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಕ್ಷೇತ್ರಸ್ಥಾಪನ" ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ಸದಾಚಾರವರ್ಣನಂ

ವ್ಯಾಸ ಉವಾಚ :—

ಅತಃಪರಂ ಪ್ರವಕ್ಷ್ಯಾಮಿ ಧರ್ಮಾರಣ್ಯನಿವಾಸಿನಾ ।
ಯತ್ಕಾರ್ಯಂ ಪುರುಷೇಣೇಹ ಗಾರ್ಹಸ್ಥ್ಯಮನುತಿಷ್ಠತಾ ॥ ೧ ॥
ಧರ್ಮಾರಣ್ಯೇಷು ಯೇ ಜಾತಾ ಬ್ರಾಹ್ಮಣಾಃ ಶುದ್ಧವಂಶಜಾಃ ।
ಅಷ್ಟಾದಶಸಹಸ್ರಾಶ್ಚ ಕಾಜೇಶೈಶ್ಚ ವಿನಿರ್ಮಿತಾಃ ॥ ೨ ॥
ಸದಾಚಾರಾಃ ಪವಿತ್ರಾಶ್ಚ ಬ್ರಾಹ್ಮಣಾ ಬ್ರಹ್ಮವಿತ್ತಮಾಃ ।
ತೇಷಾಂ ದರ್ಶನಮಾತ್ರೇಣ ಮಹಾಪಾಪೈರ್ವಿಮುಚ್ಯತೇ ॥ ೩ ॥

ಯುಧಿಷ್ಠಿರ ಉವಾಚ :—

ಪಾರಾಶರ್ಯ ಸಮಾಖ್ಯಾಹಿ ಸದಾಚಾರಂ ಚ ಮೇ ಪ್ರಭೋ ।
ಆಚಾರಾದ್ಧರ್ಮಮಾಪ್ನೋತಿ ಆಚಾರಾಲ್ಲಭತೇ ಫಲಂ ।
ಆಚಾರಾಚ್ಛ್ರಿಯಮಾಪ್ನೋತಿ ತದಾಚಾರಂ ವದಸ್ವ ಮೇ ॥ ೪ ॥

ವ್ಯಾಸ ಉವಾಚ :—

ಸ್ಥಾವರಾಃ ಕೃಮಯೋಽಬ್ಜಾಶ್ಚ ಪಕ್ಷಿಣಃ ಪಶವೋ ನರಾಃ ।
ಕ್ರಮೇಣ ಧಾರ್ಮಿಕಾಸ್ತ್ವೇತ ಏತೇಭ್ಯೋ ಧಾರ್ಮಿಕಾಃ ಸುರಾಃ ॥ ೫ ॥

---

## ಕನ್ನಡದ ಅನುವಾದ

### ಸದಾಚಾರವರ್ಣನ

೧. ವ್ಯಾಸನು ಹೇಳುತ್ತಾನೆ :—ಇನ್ನುಮುಂದೆ ಧರ್ಮಾರಣ್ಯದಲ್ಲಿ ವಾಸಿಸುವ ಗೃಹಸ್ಥನು ಮಾಡುವ ಕಾರ್ಯವನ್ನು ಹೇಳುವೆನು.

೨-೩. ಧರ್ಮಾರಣ್ಯದಲ್ಲಿ ಹುಟ್ಟಿದ ಶುದ್ಧವಂಶಜರೂ, ಬ್ರಹ್ಮಾದಿಗಳಿಂದ ನಿರ್ಮಿತರೂ, ಒಳ್ಳೆಯ ನಡತೆಯುಳ್ಳವರೂ, ಬ್ರಹ್ಮಜ್ಞಾನಿವರೇಣ್ಯರೂ, ಶುದ್ಧರೂ ಆಗಿರುವ ಬ್ರಾಹ್ಮಣರನ್ನು ನೋಡುವುದರಿಂದಲೆ ಮನುಷ್ಯನ ಪಾಪವು ತೊಲಗುವುದು.

೪. ಯುಧಿಷ್ಠಿರನು ಕೇಳುತ್ತಾನೆ :—ಪರಾಶರತನಯನಾದ ಎಲೈ ವ್ಯಾಸನೆ! ಮನುಷ್ಯನು ಸದಾಚಾರದಿಂದ ಧರ್ಮವನ್ನೂ, ಸತ್ಫಲವನ್ನೂ, ಸಂಪತ್ತನ್ನೂ ಪಡೆಯುವನು. ಅಂತಹ ಒಳ್ಳೆಯ ಆಚಾರವನ್ನು ನನಗೆ ಹೇಳು.

೫. ವ್ಯಾಸನು ಹೇಳುತ್ತಾನೆ :—ಸ್ಥಾವರಗಳು, ಕೃಮಿಗಳು, ನೀರಿನಲ್ಲಿರುವ ಪ್ರಾಣಿಗಳು, ಹಕ್ಕಿಗಳು, ಪಶುಗಳು, ಮನುಷ್ಯರು, ಇವರು ಕ್ರಮವಾಗಿ ಒಬ್ಬರಿಗಿಂತೊಬ್ಬರು ಧರ್ಮಿಷ್ಠರು. ಇವರೆಲ್ಲರಿಗಿಂತಲೂ ದೇವತೆಗಳು ಧಾರ್ಮಿಕರು.

CC-0. Jangamwadi Math Collection. Digitized by eGangotri

ಸಹಸ್ರಭಾಗಾತ್ಪ್ರಥಮೋ ದ್ವಿತೀಯೋಽನುಕ್ರಮಾಸ್ತಥಾ ।
ಸರ್ವ ಏತೇ ಮಹಾಭಾಗಾಃ ಪಾಪಾನ್ಮುಕ್ತಿಸಮಾಶ್ರಯಾಃ ॥ ೬ ॥
ಚತುರ್ಣಾಮಪಿ ಭೂತಾನಾಂ ಪ್ರಾಣಿನೋಽತೀವ ಚೋತ್ತಮಾಃ ।
ಪ್ರಾಣಿಭ್ಯೋಽಪಿ ಮುನಿಶ್ರೇಷ್ಠಾಃ ಸರ್ವೇ ಬುದ್ಧ್ಯುಪಜೀವನಃ ॥ ೭ ॥
ಮತಿಮದ್ಭ್ಯೋ ನರಾಃ ಶ್ರೇಷ್ಠಾಸ್ತೇಭ್ಯಃ ಶ್ರೇಷ್ಠಾಸ್ತು ವಾಡವಾಃ ।
ವಿಪ್ರೇಭ್ಯೋಽಪಿ ಚ ವಿದ್ವಾಂಸೋ ವಿದ್ವದ್ಭ್ಯಃ ಕೃತಬುದ್ಧಯಃ ॥ ೮ ॥
ಕೃತಧೀಭ್ಯೋಽಪಿ ಕರ್ತಾರಃ ಕರ್ತೃಭ್ಯೋ ಬ್ರಹ್ಮತತ್ಪರಾಃ ।
ನ ತೇಭ್ಯೋಽಭ್ಯಧಿಕಃ ಕಶ್ಚಿತ್ತ್ರಿಷು ಲೋಕೇಷು ಭಾರತ ॥ ೯ ॥
ಅನ್ಯೋನ್ಯಪೂಜಕಾಸ್ತೇ ವೈ ತಪೋವಿದ್ಯಾವಿಶೇಷತಃ ।
ಬ್ರಾಹ್ಮಣೋ ಬ್ರಹ್ಮಣಾ ಸೃಷ್ಟಃ ಸರ್ವಭೂತೇಶ್ವರೋ ಯತಃ ॥ ೧೦ ॥
ಅತೋ ಜಗತ್ಸ್ಥಿತಂ ಸರ್ವಂ ಬ್ರಾಹ್ಮಣೋಽರ್ಹತಿ ನಾಽಪರಃ ।
ಸದಾಚಾರೋ ಹಿ ಸರ್ವಾರ್ಹೋ ನಾಚಾರಾದ್ವಿಚ್ಯುತಃ ಪುನಃ ॥ ೧೧ ॥

---

೬. ಸ್ಥಾವರಗಳಲ್ಲಿ ಸಾವಿರದಲ್ಲೊಂದು ಭಾಗದವರೂ, ಕ್ರಿಮ್ಯಾದಿಗಳಲ್ಲಿ ಪ್ರತಿಯೊಬ್ಬ ಮಹಾನುಭಾವರೂ ಪಾಪಮುಕ್ತರಾಗಿ ಮೋಕ್ಷವನ್ನು ಪಡೆಯುವರು.

೭. ನಾಲ್ಕುವಿಧವಾದ ಭೂತಗಳಲ್ಲಿ ಪ್ರಾಣಿಗಳು ಅತ್ಯಂತ ಉತ್ತಮವಾದುವು. ಈ ಪ್ರಾಣಿಸಾಮಾನ್ಯಕ್ಕಿಂತ ಬುದ್ಧಿಯಿಂದ ಜೀವಿಸುವವರು ಉತ್ತಮರು.

೮–೯. ಬುದ್ಧಿವಂತರಲ್ಲಿ ಮನುಷ್ಯರು ಶ್ರೇಷ್ಠರು. ಅವರಿಗಿಂತ ಬ್ರಾಹ್ಮಣರೂ, ಬ್ರಾಹ್ಮಣರಿಗಿಂತ ವಿದ್ವಾಂಸರೂ, ವಿದ್ವಾಂಸರಿಗಿಂತ ಕುಶಲಬುದ್ಧಿಯುಳ್ಳವರೂ, ಕುಶಲ ಬುದ್ಧಿಗಳಿಗಿಂತ ಅನುಷ್ಠಾನಪರರೂ, ಅನುಷ್ಠಾನಪರರಿಗಿಂತ ಬ್ರಹ್ಮಜ್ಞಾನಿಗಳೂ ಉತ್ತಮರು. ಬ್ರಹ್ಮನಿಷ್ಠರಿಗಿಂತ ಉತ್ತಮರು ಮೂರುಲೋಕದಲ್ಲಿ ಯಾರೂ ಇರುವುದಿಲ್ಲ.

೧೦. ಬ್ರಹ್ಮದೇವನು ಬ್ರಾಹ್ಮಣರನ್ನು ಸಕಲ ಪ್ರಾಣಿಗಳಿಗಿಂತ ಶ್ರೇಷ್ಠರನ್ನಾಗಿ ಸೃಷ್ಟಿಸಿರುವುದರಿಂದ ಅವರಲ್ಲಿ ತಪಸ್ಸು ವಿದ್ಯೆ ಇವುಗಳ ಅತಿಶಯದಿಂದ ಬ್ರಾಹ್ಮಣರು ಪರಸ್ಪರ ಪೂಜ್ಯರು.

೧೧. ಆದುದರಿಂದ ಬ್ರಾಹ್ಮಣನು ಪ್ರಪಂಚದಲ್ಲಿರುವುದನ್ನೆಲ್ಲ ಹೊಂದಲು ಯೋಗ್ಯನು. ಇತರನು ಹಾಗೆ ಎಲ್ಲವನ್ನೂ ಹೊಂದಲು ಅರ್ಹನಲ್ಲ. ಆದರೆ ಸದಾಚಾರಿಯಾದ ಬ್ರಾಹ್ಮಣನು ಸರ್ವಪೂಜ್ಯನೇ ಹೊರತು ಆಚಾರಭ್ರಷ್ಟನಾದ ಬ್ರಾಹ್ಮಣನು ಪೂಜ್ಯನಲ್ಲ.

CC-0. Jangamwadi Math Collection. Digitized by eGangotri

ತಸ್ಮಾದ್ವಿಪ್ರೇಣ ಸತತಂ ಭಾವ್ಯಮಾಚಾರಶೀಲಿನಾ ।
ವಿದ್ವೇಷರಾಗರಹಿತಾ ಅನುತಿಷ್ಠಂತಿ ಯಂ ಮುನೇ ॥ ೧೨ ॥
ಸದ್ಧಿಯಸ್ತಂ ಸದಾಚಾರಂ ಧರ್ಮಮೂಲಂ ವಿದುರ್ಬುಧಾಃ ।
ಲಕ್ಷಣೈಃ ಪರಿಹೀನೋಽಪಿ ಸಮ್ಯಗಾಚಾರತತ್ಪರಃ ॥ ೧೩ ॥
ಶ್ರದ್ಧಾಲುರನಸೂಯಶ್ಚ ನರೋ ಜೀವೇತ್ಸಮಾಃ ಶತಂ ।
ಶ್ರುತಿಸ್ಮೃತಿಭ್ಯಾಮುದಿತಂ ಸ್ವೇಷು ಸ್ವೇಷು ಚ ಕರ್ಮಸು ॥ ೧೪ ॥
ಸದಾಚಾರಂ ನಿಷೇವೇತ ಧರ್ಮಮೂಲಮತಂದ್ರಿತಃ ।
ದುರಾಚಾರರತೋ ಲೋಕೇ ಗರ್ಹಣೀಯಃ ಪುಮಾನ್ಭವೇತ್ ॥ ೧೫ ॥
ವ್ಯಾಧಿಭಿಶ್ಚಾಽಭಿಭೂಯೇತ ಸದಾಽಲ್ಪಾಯುಃ ಸುದುಃಖಭಾಕ್ ।
ತ್ಯಾಜ್ಯಂ ಕರ್ಮ ಪರಾಧೀನಂ ಕಾರ್ಯಮಾತ್ಮವಶಂ ಸದಾ ॥ ೧೬ ॥
ದುಃಖೀ ಯತಃ ಪರಾಧೀನಃ ಸದೈವಾತ್ಮವಶಃ ಸುಖೀ ।
ಯಸ್ಮಿನ್ಕರ್ಮಣ್ಯಂತರಾತ್ಮಾ ಕ್ರಿಯಮಾಣೇ ಪ್ರಸೀದತಿ ॥ ೧೭ ॥
ತದೇವ ಕರ್ಮ ಕರ್ತವ್ಯಂ ವಿಪರೀತಂ ನ ಚ ಕ್ವಚಿತ್ ।
ಪ್ರಥಮಂ ಧರ್ಮಸರ್ವಸ್ವಂ ಪ್ರೋಕ್ತಂ ಯನ್ನಿಯಮಾ ಯಮಾಃ ॥ ೧೮ ॥
ಅತಸ್ತೇಷ್ವೇವ ವೈ ಯತ್ನಃ ಕರ್ತವ್ಯೋ ಧರ್ಮಮಿಚ್ಛತಾ ।
ಸತ್ಯಂ ಕ್ಷಮಾರ್ಜವಂ ಧ್ಯಾನಮಾನೃಶಂಸ್ಯಮಹಿಂಸನಂ ॥ ೧೯ ॥

---

೧೨–೨೬. ಆದುದರಿಂದ ಬ್ರಾಹ್ಮಣನು ಯಾವಾಗಲೂ ಆಚಾರಶೀಲನಾಗಿರಬೇಕು. ಬ್ರಾಹ್ಮಣನು ರಾಗದ್ವೇಷವಿಲ್ಲದೆ ಯಾವುದನ್ನು ಅನುಷ್ಠಾನ ಮಾಡುವನೊ ಸಜ್ಜನರಾದ ಪಂಡಿತರು ಅದನ್ನು ಧರ್ಮಕ್ಕೆ ಕಾರಣವಾದ ಸದಾಚಾರವೆನ್ನುವರು. ಲಕ್ಷಣವಿಲ್ಲದವನಾದರೂ ಶ್ರದ್ಧೆಯುಳ್ಳವನೂ, ಅಸೂಯೆಯಿಲ್ಲದವನೂ ಆಗಿ ಮನುಷ್ಯನು ಆಚಾರದಲ್ಲಿ ಚೆನ್ನಾಗಿ ಆಸಕ್ತನಾಗಿದ್ದರೆ ಅವನು ನೂರುವರ್ಷಕಾಲ ಬದುಕುವನು. ತನಗೆ ವಿಹಿತವಾದ ಕರ್ಮಗಳಲ್ಲಿ ಶ್ರುತಿಸ್ಮೃತಿಗಳಿಂದ ಬೋಧಿತವಾದ ಧರ್ಮಕ್ಕೆ ಕಾರಣವಾಗಿರುವ ಸದಾಚಾರವನ್ನು ಆಲಸ್ಯವಿಲ್ಲದೆ ಸೇವಿಸಬೇಕು. ಪ್ರಪಂಚದಲ್ಲಿ ದುರಾಚಾರಪರನಾದ ಮನುಷ್ಯನು ನಿಂದಾಸ್ಪದನಾಗಿ ರೋಗಗಳಿಂದ ಪೀಡಿಸಲ್ಪಟ್ಟು ಯಾವಾಗಲೂ ದುಃಖಗಳನ್ನನುಭವಿಸುತ್ತ ಅಲ್ಪಾಯುಸ್ಸುಳ್ಳವನಾಗುವನು. ಪರಾಧೀನನು ದುಃಖಿಯೂ, ಸ್ವತಂತ್ರನು ಸುಖಿಯೂ ಆಗುವುದರಿಂದ ಯಾವಾಗಲೂ ಪರಾಧೀನವಾದ ಕಾರ್ಯವನ್ನು ತ್ಯಜಿಸಿ ಸ್ವಾಧೀನವಾದ ಕಾರ್ಯವನ್ನವಲಂಬಿಸಬೇಕು. ಯಾವ ಕೆಲಸವನ್ನು ಮಾಡಿದರೆ ಮನಸ್ಸು ಪ್ರಸನ್ನವಾಗುವುದೊ ಅದನ್ನೇ ಮಾಡಬೇಕಲ್ಲದೆ ಅದಕ್ಕೆ ವಿರುದ್ಧವಾದುದನ್ನು ಯಾವಾಗಲೂ ಮಾಡಬಾರದು. ಮೊದಲು ಧರ್ಮದ ಸಾರವನ್ನು ಹೇಳಿದೆನು. ಧರ್ಮಾನುಷ್ಠಾನಮಾಡಲು ಬಯಸು

CC-0. Jangamwadi Math Collection. Digitized by eGangotri

ದಮಃ ಪ್ರಸಾದೋ ಮಾಧುರ್ಯಂ ಮೃದುತೇತಿ ಯಮಾ ದಶ ।
ಶೌಚಂ ಸ್ನಾನಂ ತಪೋ ದಾನಂ ಮೌನೇಜ್ಯಾಧ್ಯಯನಂ ವ್ರತಂ ॥ ೨೦ ॥
ಉಪೋಷಣೋಪಸ್ಥದಂಡೋ ದಶೈತೇ ನಿಯಮಾಃ ಸ್ಮೃತಾಃ ।
ಕಾಮಂ ಕ್ರೋಧಂ ದಮಂ ಮೋಹಂ ಮಾತ್ಸರ್ಯಂ ಲೋಭಮೇವ ಚ ॥
ಅಮೂನ್ಷಡ್ವೈರಿಣೋ ಜಿತ್ವಾ ಸರ್ವತ್ರ ವಿಜಯೀ ಭವೇತ್ ।
ಶನೈಃ ಸಂಚಿನುಯಾದ್ಧರ್ಮಂ ವಲ್ಮೀಕಂ ಶೃಂಗವಾನ್ಯಥಾ ॥ ೨೨ ॥
ಪರಪೀಡಾಮಕುರ್ವಾಣಃ ಪರಲೋಕಸಹಾಯಿನಂ ।
ಧರ್ಮ ಏವ ಸಹಾಯೀ ಸ್ಯಾದಮುತ್ರ ಪರಿರಕ್ಷಿತಃ ॥ ೨೩ ॥
ಪಿತೃಮಾತೃಸುತಭ್ರಾತೃಯೋಷಿದ್ಬಂಧುಜನಾದಿಕಃ ।
ಜಾಯತೇ ಚೈಕಲಃ ಪ್ರಾಣೀ ಮ್ರಿಯತೇ ಚ ತಥೈಕಲಃ ॥ ೨೪ ॥
ಏಕಲಃ ಸುಕೃತಂ ಭುಂಕ್ತೇ ಭುಂಕ್ತೇ ದುಷ್ಕೃತಮೇಕಲಃ ।
ದೇಹೇ ಪಂಚತ್ವಮಾಪನ್ನೇ ತ್ಯಕ್ತ್ವೈಕಂ ಕಾಷ್ಠಲೋಷ್ಠವತ್ ॥ ೨೫ ॥
ಬಾಂಧವಾ ವಿಮುಖಾ ಯಾಂತಿ ಧರ್ಮೋ ಯಾಂತಮನುವ್ರಜೇತ್ ।
ಅತಃ ಸಂಚಿನುಯಾದ್ಧರ್ಮಮತ್ರಾಽಮುತ್ರ ಸಹಾಯಿನಂ ॥ ೨೬ ॥

---

ವನು ಯಮ ನಿಯಮಗಳ ಅನುಷ್ಠಾನದಲ್ಲಿಯೂ ಪ್ರಯತ್ನಿಸಬೇಕು. ಸತ್ಯ, ಸಹನೆ, ಆರ್ಜವ, ಧ್ಯಾನ, ಘಾತುಕನಲ್ಲದಿರುವುದು, ಅಹಿಂಸೆ, ಇಂದ್ರಿಯ ನಿಗ್ರಹ, ಪ್ರಸನ್ನತೆ, ಸ್ನೇಹ, ಸೌಮ್ಯತೆ ಇವು ಹತ್ತು ಯಮಗಳು. ಶೌಚ, ಸ್ನಾನ, ತಪಸ್ಸು, ದಾನ, ಮೌನ, ಪೂಜೆ, ಅಧ್ಯಯನ, ವ್ರತ, ಉಪವಾಸ, ಗುಹ್ಯೇಂದ್ರಿಯನಿಗ್ರಹ ಇವು ಹತ್ತು ನಿಯಮಗಳು. ಕಾಮ, ಕ್ರೋಧ, ಮದ, ಮೋಹ, ಮಾತ್ಸರ್ಯ, ಲೋಭ ಈ ಷಡ್ವೈರಿಗಳನ್ನು ಗೆದ್ದು ಎಲ್ಲೆಡೆಯಲ್ಲಿಯೂ ಜಯಶಾಲಿಯಾಗುವನು. ಗೆದ್ದಲು ಹುಳುವು ಹುತ್ತವನ್ನು ಬೆಳೆಯಿಸುವಂತೆ ಪರರಿಗೆ ತೊಂದರೆಮಾಡದೆ ಪರಲೋಕಕ್ಕೆ ಬೆಂಬಲವಾದ ಧರ್ಮವನ್ನು ಮೆಲ್ಲನೆ ಗಳಿಸಬೇಕು. ಈ ಲೋಕದಲ್ಲಿ ಕಾಪಾಡಿದ ಧರ್ಮವೊಂದೇ ಪರಲೋಕದಲ್ಲಿ ತಾಯಿ, ತಂದೆ, ಮಕ್ಕಳು, ಸಹೋದರರು, ಹೆಂಡತಿ, ಬಂಧುಜನಗಳಿಗಿಂತ ಮಿಗಿಲಾಗಿ ಸಹಾಯಮಾಡುವುದು. ಪ್ರಾಣಿಯು ಒಂಟಿಯಾಗಿ ಹುಟ್ಟುವುದು, ಒಂಟಿಯಾಗಿ ಸಾಯುವುದು. ಒಂಟಿಯಾಗಿ ಪುಣ್ಯಪಾಪಗಳನ್ನನುಭವಿಸುವುದು. ಈ ದೇಹವು ಮೃತವಾದ ಕೂಡಲೆ ಬಾಂಧವರು ಇದನ್ನು ಕಟ್ಟಿಗೆ ಮತ್ತು ಮಣ್ಣಿನ ಹೆಂಟೆಯಂತೆ ಒಂಟಿಯಾಗಿ ತ್ಯಜಿಸಿ ಹೊರಟು ಹೋಗುವರು. ಧರ್ಮವೊಂದೇ ಹಿಂಬಾಲಿಸುವುದು. ಆದುದರಿಂದ ಇಹಪರಗಳಲ್ಲಿ ಸಹಾಯಕವಾದ ಧರ್ಮವನ್ನು ಗಳಿಸಬೇಕು.

CC-0. Jangamwadi Math Collection. Digitized by eGangotri

ಧರ್ಮಂ ಸಹಾಯಿನಂ ಲಬ್ಧ್ವಾ ಸಂತರೇದ್ದುಸ್ತರಂ ತಮಃ ।
ಸಂಬಂಧಾನಾಚಾರೇನ್ನಿತ್ಯಮುತ್ತಮೈರುತ್ತಮೈಃ ಸುಧೀಃ ॥ ೨೭ ॥
ಅಧಮಾನಧಮಾಂಸ್ತ್ಯಕ್ತ್ವಾ ಕುಲಮುತ್ಕರ್ಷತಾಂ ನಯೇತ್ ।
ಉತ್ತಮಾನುತ್ತಮಾನೇವ ಗಚ್ಛೇದ್ಧೀನಾಂಶ್ಚ ವರ್ಜಯೇತ್ ।
ಬ್ರಾಹ್ಮಣಃ ಶ್ರೇಷ್ಠತಾಮೇತಿ ಪ್ರತ್ಯವಾಯೇನ ಶೂದ್ರತಾಂ ॥ ೨೮ ॥
ಅನಧ್ಯಯನಶೀಲಂ ಚ ಸದಾಚಾರವಿಲಂಘಿನಂ ।
ಸಾಲಸಂ ಚ ದುರನ್ನಾದಂ ಬ್ರಾಹ್ಮಣಂ ಬಾಧತೇಽಂತಕಃ ॥ ೨೯ ॥
ಅತೋಽಭ್ಯಸ್ಯೇತ್ಪ್ರಯತ್ನೇನ ಸದಾಚಾರಂ ಸದಾ ದ್ವಿಜಃ ।
ತೀರ್ಥಾನ್ಯಪ್ಯಭಿಲಷ್ಯಂತಿ ಸದಾಚಾರಿಸಮಾಗಮಂ ॥ ೩೦ ॥
ರಜನೀಪ್ರಾಂತಯಾಮಾರ್ಧಂ ಬ್ರಾಹ್ಮಃ ಸಮಯ ಉಚ್ಯತೇ ।
ಸ್ವಹಿತಂ ಚಿಂತಯೇತ್ಪ್ರಾಜ್ಞಸ್ತಸ್ಮಿಂಶ್ಚೋತ್ಥಾಯ ಸರ್ವದಾ ॥ ೩೧ ॥
ಗಜಾಸ್ಯಂ ಸಂಸ್ಮರೇದಾದೌ ತತ ಈಶಂ ಸಹಾಂಬಯಾ ।
ಶ್ರೀರಂಗಂ ಶ್ರೀಸಮೇತಂ ತು ಬ್ರಹ್ಮಾಣಂ ಕಮಲೋದ್ಭವಂ ॥ ೩೨ ॥
ಇಂದ್ರಾದೀನ್ಸಕಲಾನ್ದೇವಾನ್ವಸಿಷ್ಠಾದೀನ್ಮುನೀನಪಿ ।
ಗಂಗಾದ್ಯಾಃ ಸರಿತಃ ಸರ್ವಾಃ ಶ್ರೀಶೈಲಾದ್ಯಖಿಲಾನ್ಗಿರೀನ್ ॥ ೩೩ ॥

---

೨೭. ಮಾನವನು ಧರ್ಮದ ಸಹಾಯದಿಂದ ನರಕವನ್ನು ದಾಟುವನು. ಜ್ಞಾನಿಯು ಯಾವಾಗಲೂ ಉತ್ತಮರ ಸಹವಾಸಮಾಡಬೇಕು.

೨೮. ಬ್ರಾಹ್ಮಣನು ನೀಚರನ್ನು ಬಿಟ್ಟು ತನ್ನ ವಂಶವನ್ನು ಊರ್ಜಿತಗೊಳಿಸಬೇಕು. ಉತ್ತಮರ ಸಹವಾಸಮಾಡುತ್ತ ದೀನರ ಸಹವಾಸವನ್ನು ಬಿಟ್ಟರೆ ಶ್ರೇಷ್ಠನಾಗುವನು. ಪಾಪವನ್ನು ಮಾಡಿದರೆ ಶೂದ್ರನಾಗುವನು.

೨೯. ವೇದಾಧ್ಯಯನ ಮಾಡದವನೂ, ಸದಾಚಾರಬಾಹ್ಯನೂ, ಮೈಗಳ್ಳನೂ, ದುಷ್ಟಾನ್ನವನ್ನು ಭುಂಜಿಸುವನೂ ಆಗಿರುವ ಬ್ರಾಹ್ಮಣನನ್ನು ಯಮನು ಪೀಡಿಸುವನು.

೩೦. ಆದುದರಿಂದ ಬ್ರಾಹ್ಮಣನು ಯಾವಾಗಲೂ ಸದಾಚಾರವನ್ನು ಅಭ್ಯಾಸ ಮಾಡುವುದಕ್ಕೆ ಯತ್ನಿಸಬೇಕು. ಇಂತಹ ಸದಾಚಾರಿಗಳ ಆಗಮನವನ್ನು ತೀರ್ಥಗಳೂ ಅಪೇಕ್ಷಿಸುವುವು.

೩೧. ರಾತ್ರಿಯ ಕೊನೆಯ ಜಾಮದ ಅರ್ಧಭಾಗವು ಬ್ರಾಹ್ಮ ಮುಹೂರ್ತವೆನ್ನಿಸಿಕೊಳ್ಳುವುದು. ಬುದ್ಧಿವಂತನು ಅದರಲ್ಲೆದ್ದು ಯಾವಾಗಲೂ ತನ್ನ ಇಷ್ಟದೇವತೆಯನ್ನು ಧ್ಯಾನಿಸಬೇಕು.

೩೨–೩೩. ಮೊದಲು ಗಜಾನನನ್ನೂ, ಬಳಿಕ ಭವಾನೀ ಸಹಿತನಾದ ಮಹೇಶ್ವರನನ್ನೂ, ಲಕ್ಷ್ಮೀಸಹಿತನಾದ ಶ್ರೀರಂಗಸ್ವಾಮಿಯನ್ನೂ, ಬ್ರಹ್ಮ

CC-0. Jangamwadi Math Collection. Digitized by eGangotri

ಕ್ಷೀರೋದಾದೀನ್ಸಮುದ್ರಾಂಶ್ಚ ಮಾನಸಾದಿಸರಾಂಸಿ ಚ ।
ವನಾನಿ ನಂದನಾದೀನಿ ಧೇನೂಃ ಕಾಮದುಘಾದಯಃ ॥ ೩೪ ॥
ಕಲ್ಪವೃಕ್ಷಾದಿವೃಕ್ಷಾಂಶ್ಚ ಧಾತೂನ್ಕಾಂಚನಮುಖ್ಯತಃ ।
ದಿವ್ಯಸ್ತ್ರೀರುರ್ವಶೀಮುಖ್ಯಾಃ ಪ್ರಹ್ಲಾದಾದ್ಯಾನ್ಹರೇಃ ಪ್ರಿಯಾನ್ ॥ ೩೫ ॥
ಜನನೀಚರಣೌ ಸ್ಮೃತ್ವಾ ಸರ್ವತೀರ್ಥೋತ್ತಮೋತ್ತಮೌ ।
ಪಿತರಂ ಚ ಗುರೂಂಶ್ಚಾಽಪಿ ಹೃದಿ ಧ್ಯಾತ್ವಾ ಪ್ರಸನ್ನಧೀಃ ॥ ೩೬ ॥
ತತಶ್ಚಾಽವಶ್ಯಕಂ ಕರ್ತುಂ ನೈರ್ಋತೀಂ ದಿಶಮಾವ್ರಜೇತ್ ।
ಗ್ರಾಮಾದ್ಧನುಶ್ಶತಂ ಗಚ್ಛೇನ್ನಗರಾಚ್ಚ ಚತುರ್ಗುಣಂ ॥ ೩೭ ॥
ತೃಣೈರಾಚ್ಛಾದ್ಯ ವಸುಧಾಂ ಶಿರಃ ಪ್ರಾವೃತ್ಯ ವಾಸಸಾ ।
ಕರ್ಣೋಪವೀತೋದಙ್ಮುಖೋ ದಿವಸೇ ಸಂಧ್ಯಯೋರಪಿ ॥ ೩೮ ॥
ವಿಣ್ಮೂತ್ರೇ ವಿಸೃಜೇನ್ಮೌನೀ ನಿಶಾಯಾಂ ದಕ್ಷಿಣಾಮುಖಃ ।
ನ ತಿಷ್ಠನ್ನಾಪ್ಸು ನೋ ವಿಪ್ರಗೋವಹ್ನ್ಯನಿಲಸಂಮುಖಃ ॥ ೩೯ ॥
ನ ಫಾಲಕೃಷ್ಟೇ ಭೂಭಾಗೇ ನ ರಥ್ಯಾಸೇವ್ಯಭೂತಲೇ ।
ನಾಲೋಕಯೇದ್ದಿಶೋ ಭಾಗಾನ್ಜ್ಯೋತಿಶ್ಚಕ್ರಂ ನಭೋ ಮಲಂ ॥ ೪೦ ॥

---

ನನ್ನೂ, ಇಂದ್ರಾದಿ ಸಮಸ್ತದೇವತೆಗಳನ್ನೂ, ವಸಿಷ್ಠ ಮೊದಲಾದ ಮುನಿಗಳನ್ನೂ, ಗಂಗಾದಿ ಸಕಲ ನದಿಗಳನ್ನೂ, ಶ್ರೀಶೈಲಾದಿ ಪರ್ವತಗಳನ್ನೂ, ಕ್ಷೀರಸಾಗರವೆ ಮೊದಲಾದ ಸಮುದ್ರಗಳನ್ನೂ, ಮಾನಸಾದಿ ಸರೋವರಗಳನ್ನೂ, ನಂದನಾದಿ ವನಗಳನ್ನೂ, ಕಾಮಧೇನು ಮೊದಲಾದ ಗೋವುಗಳನ್ನೂ, ಕಲ್ಪವೃಕ್ಷ ಮೊದಲಾದ ವೃಕ್ಷಗಳನ್ನೂ, ಸುವರ್ಣ ಮೊದಲಾದ ಲೋಹಗಳನ್ನೂ, ಉರ್ವಶೀ ಮೊದಲಾದ ದೇವತಾಸ್ತ್ರೀಯರನ್ನೂ, ಪ್ರಹ್ಲಾದನೆ ಮೊದಲಾದ ಭಾಗವತರನ್ನೂ ಧ್ಯಾನಿಸಬೇಕು.

೩೬. ಸಕಲ ತೀರ್ಥಗಳಿಗಿಂತ ಶ್ರೇಷ್ಠವಾದ ತಾಯಿಯ ಅಡಿಗಳನ್ನೂ, ತಂದೆಯನ್ನೂ, ಗುರುಗಳನ್ನೂ ಧ್ಯಾನಿಸಿ ಪ್ರಸನ್ನವಾದ ಮನಸ್ಸುಳ್ಳವನಾಗಬೇಕು.

೩೭. ಬಳಿಕ ಶೌಚಕ್ಕಾಗಿ ಗ್ರಾಮದಿಂದ ನೂರು ಬಿಲ್ಲುಗಳ ದೂರವೂ, ಪಟ್ಟಣದಿಂದ ನಾನೂರು ಬಿಲ್ಲುಗಳ ದೂರವೂ ನೈಋತ್ಯ ದಿಕ್ಕಿಗೆ ತೆರಳಬೇಕು.

೩೮–೪೦. ಭೂಮಿಯನ್ನು ಹುಲ್ಲುಗಳಿಂದ ಮುಚ್ಚಿ, ತಲೆಗೆ ಬಟ್ಟೆಯನ್ನು ಸುತ್ತಿಕೊಂಡು, ಉಪವೀತವನ್ನು ಕಿವಿಯಲ್ಲಿ ಧರಿಸಿ, ಹಗಲು ಮತ್ತು ಸಂಧ್ಯಾಕಾಲಗಳಲ್ಲಿ ಉತ್ತರಾಭಿಮುಖನಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖನಾಗಿಯೂ, ಮಲಮೂತ್ರಗಳನ್ನು ವಿಸರ್ಜಿಸಬೇಕು. ನಿಂತುಕೊಂಡೂ, ಬ್ರಾಹ್ಮಣರು, ಗೋವು, ಅಗ್ನಿ, ಗಾಳಿ ಇವುಗಳಿಗೆ ಎದುರಾಗಿಯೂ ಉತ್ತ

CC-0. Jangamwadi Math Collection. Digitized by eGangotri

ವಾಮೇನ ಪಾಣಿನಾ ಶಿಶ್ನಂ ಧೃತ್ವೋತ್ತಿಷ್ಠೇತ್ಪ್ರಯತ್ನವಾನ್ ।
ಅಥೋ ಮೃದಂ ಸಮಾದದ್ಯಾಜ್ಜಂತುಕರ್ಕರವರ್ಜಿತಾಂ ॥ ೪೧ ॥
ವಿಹಾಯ ಮೂಷಕೋತ್ಖಾತಾಂ ಚೋಚ್ಛಿಷ್ಟಾಂ ಕೇಶಸಂಕುಲಾಂ ।
ಗುಹ್ಯೇ ದದ್ಯಾನ್ಮೃದಂ ಚೈಕಾಂ ಪ್ರಕ್ಷಾಲ್ಯ ಚಾಂಬುನಾ ತತಃ ॥ ೪೨ ॥
ಪುನರ್ವಾಮಕರೇಣೇತಿ ಪಂಚಧಾ ಕ್ಷಾಲಯೇದ್ಗುದಂ ।
ಏಕೈಕಪಾದಯೋರ್ದದ್ಯಾತ್ತಿಸ್ರಃ ಪಾಣ್ಯೋರ್ಮೃದಸ್ತಥಾ ॥ ೪೩ ॥
ಇತ್ಥಂ ಶೌಚಂ ಗೃಹೀ ಕುರ್ಯಾದ್ಗಂಧಲೇಪಕ್ಷಯಾವಧಿ ।
ಕ್ರಮಾದ್ದ್ವೈಗುಣ್ಯತಃ ಕುರ್ಯಾದ್ಬ್ರಹ್ಮಚರ್ಯಾದಿಷು ತ್ರಿಷು ॥ ೪೪ ॥
ದಿವಾ ವಿಹಿತಶೌಚಾಚ್ಚ ರಾತ್ರಾವರ್ಧಂ ಸಮಾಚರೇತ್ ।
ಪರಗ್ರಾಮೇ ತದರ್ಧಂ ಚ ಪಥಿತಸ್ಯಾರ್ಧಮೇವ ಚ ॥ ೪೫ ॥
ತದರ್ಧಂ ರೋಗಿಣಾಂ ಚಾಪಿ ಸುಸ್ಥೇ ನ್ಯೂನಂ ನ ಕಾರಯೇತ್ ।
ಅಪಿ ಸರ್ವನದೀತೋಯೈರ್ಮೃತ್ಕೂಟೈಶ್ಚಾಪ್ಯಗೋಪಮೈಃ ॥ ೪೬ ॥
ಆಪಾತಮಾಚರೇಚ್ಛೌಚಂ ಭಾವದುಷ್ಟೋ ನ ಶುದ್ಧಿಭಾಕ್ ।
ಆರ್ದ್ರಧಾತ್ರೀಫಲೋನ್ಮಾನಾ ಮೃದಃ ಶೌಚೇ ಪ್ರಕೀರ್ತಿತಾಃ ॥ ೪೭ ॥

---

ಭೂಮಿಯಲ್ಲಿಯೂ, ರಸ್ತೆಯಲ್ಲಿಯೂ, ಮಲವಿಸರ್ಜನೆಮಾಡಬಾರದು. ಮತ್ತು ಮಲವಿಸರ್ಜನೆಮಾಡುವಾಗ ದಿಕ್ಕುಗಳನ್ನೂ, ನಕ್ಷತ್ರ ಮಂಡಲವನ್ನೂ, ಆಕಾಶವನ್ನೂ, ಅಮೇಧ್ಯವನ್ನೂ ಕಾಣಕೂಡದು.

೪೧-೪೩. ಎಡಗೈಯಿಂದ ಶಿಶ್ನವನ್ನು ಹಿಡಿದುಕೊಂಡು ಮೇಲಕ್ಕೆದ್ದು ಜಂತುಗಳಿರುವುದೂ, ಇಲಿಗಳು ಅಗೆದುದೂ, ಎಂಜಲೂ, ಕೂದಲಿರುವುದೂ ಆಗಿರುವ ಮೃತ್ತಿಕೆಯನ್ನು ಬಿಟ್ಟು ಬೇರೆ ಮಣ್ಣನ್ನು ಐದಾವೃತ್ತಿ ಗುದದಲ್ಲಿಯೂ, ಕೈಕಾಲುಗಳಲ್ಲಿ ಮೂರುಸಲವೂ ಲೇಪಿಸಿಕೊಂಡು ಎಡಗೈಯಿಂದ ನೀರಿನಿಂದ ತೊಳೆಯಬೇಕು.

೪೪. ಹೀಗೆ ಗೃಹಸ್ಥನು ವಾಸನೆಯು ಹೋಗುವವರೆಗೂ, ಬ್ರಹ್ಮಚಾರೀ, ವಾನಪ್ರಸ್ಥ, ಸನ್ಯಾಸಿಗಳು ಕ್ರಮವಾಗಿ ಗ್ರಹಸ್ಥನಿಗಿಂತ ಇಮ್ಮಡಿಯಾಗಿಯೂ ಶೌಚವನ್ನು ಮಾಡಿಕೊಳ್ಳಬೇಕು.

೪೫-೪೭. ಹಗಲು ಮಾಡಬೇಕಾಗಿ ವಿಹಿತವಾದ ಶೌಚಸಂಖ್ಯೆಗಿಂತ ರಾತ್ರಿಯಲ್ಲಿ ಅರ್ಧಭಾಗವನ್ನೂ, ಪರಸ್ಥಳದಲ್ಲಿ ಅದರರ್ಧಭಾಗವನ್ನೂ, ದಾರಿಯಲ್ಲಿ ಅದರರ್ಧಭಾಗವನ್ನು ಮಾಡಬೇಕು. ವ್ಯಾಧಿಗ್ರಸ್ತನು ಅದರರ್ಧಭಾಗವನ್ನು ಮಾಡಬೇಕು. ಸೌಖ್ಯವಾಗಿರುವಾಗ ಕಡಿಮೆ ಶೌಚವನ್ನು ಮಾಡಕೂಡದು. ಮರಣಕಾಲದವರೆಗೆ ಎಲ್ಲನದಿಯ ಜಲದಿಂದಲೂ, ಪರ್ವತದಂತಿರುವ ಮಣ್ಣಿನ ಮುದ್ದೆಗಳಿಂದಲೂ ಶುದ್ಧಿಮಾಡಿಕೊಳ್ಳಬೇಕು. ಆದರೆ ಮನಸ್ಸು ಶುದ್ಧವಾಗಿಲ್ಲ

CC-0. Jangamwadi Math Collection. Digitized by eGangotri

ಸರ್ವಾಶ್ಯಾಹುತಯೋಽಪ್ಯೇವಂ ಗ್ರಾಸಾಶ್ಚಾಂದ್ರಾಯಣೇಽಪಿ ಚ ।
ಪ್ರಾಗಾಸ್ಯ ಉದಗಾಸ್ಯೋ ವಾ ಸೂಪವಿಷ್ಟಃ ಶುಚೌ ಭುವಿ ॥ ೪೮ ॥
ಉಪಸ್ಪೃಶೇದ್ದ್ವಿಹೀನಾಭಿಸ್ತುಷಾಂಗಾರಾಽಸ್ಥಿಭಸ್ಮಭಿಃ ।
ಅತಿಸ್ವಚ್ಛಾಭಿರದ್ಭಿಶ್ಚ ಯಾವದ್ಧೃದ್ಗಾಭಿರತ್ವರಃ ॥ ೪೯ ॥
ಬ್ರಾಹ್ಮಣೋ ಬ್ರಹ್ಮತೀರ್ಥೇನ ದೃಷ್ಟಿಪೂತಾಭಿರಾಚಮೇತ್ ।
ಕಂಠಗಾಭಿರ್ನೃಪಃ ಶುಧ್ಯೇತ್ತಾಲುಗಾಭಿಸ್ತಥೋರುಜಃ ॥ ೫೦ ॥
ಸ್ತ್ರೀ ಶೂದ್ರಾ ವಾಽಥ ಸಂಸ್ಪರ್ಶಮಾತ್ರೇಣಾಽಪಿ ವಿಶುಧ್ಯತಃ ।
ಶಿರಃ ಶಬ್ದಂ ಸಕಂಠಂ ವಾ ಜಲೇ ಮುಕ್ತಶಿಖೋಽಪಿ ವಾ ॥ ೫೧ ॥
ಅಕ್ಷಾಲಿತಪದದ್ವಂದ್ವ ಆಚಾಂತೋಽಪ್ಯಶುಚಿರ್ಮತಃ ।
ತ್ರಿಃಪೀತ್ವಾಂಬು ವಿಶುದ್ಧ್ಯರ್ಥಂ ತತಃ ಖಾನಿ ವಿಶೋಧಯೇತ್ ॥ ೫೨ ॥
ಅಂಗುಷ್ಠಮೂಲದೇಶೇನ ಹ್ಯಧರೋಷ್ಠೌ ಪರೀಮೃಜೇತ್ ।
ಸ್ಪೃಷ್ಟ್ವಾ ಜಲೇನ ಹೃದಯಂ ಸಮಸ್ತಾಭಿಃ ಶಿರಃ ಸ್ಪೃಶೇತ್ ॥ ೫೩ ॥
ಅಂಗುಲ್ಯಗ್ರೈಸ್ತಥಾ ಸ್ಕಂಧೌ ಸಾಂಬು ಸರ್ವತ್ರ ಸಂಸ್ಪೃಶೇತ್ ।
ಆಚಾಂತಃ ಪುನರಾಚಾಮೇತ್ಕೃತ್ವಾ ರಥ್ಯೋಪಸರ್ಪಣಂ ॥ ೫೪ ॥

---

ದಿದ್ದರೆ ಶುದ್ಧನಾಗಲಾರನು. ಈ ಶೌಚಕ್ಕೆ ಹಸಿ ನೆಲ್ಲಿಕಾಯಿಯಷ್ಟು ಮಣ್ಣನ್ನು ತೆಗೆದುಕೊಳ್ಳಬೇಕು. ಹೀಗೆಯೇ ಹೋಮದ ಆಹುತಿಗಳೂ, ಚಾಂದ್ರಾಯಣ ವ್ರತದಲ್ಲಿ ಕವಳವೂ ಹಸಿ ನೆಲ್ಲಿಕಾಯಿಯಷ್ಟೇ ಇರಬೇಕು. ಶುಚಿಯಾದ ಸ್ಥಳ ದಲ್ಲಿ ಪೂರ್ವ ಅಥವಾ ಪಶ್ಚಿಮಾಭಿಮುಖನಾಗಿ ಚೆನ್ನಾಗಿ ಕುಳಿತುಕೊಂಡು ಭತ್ತದ ಹೊಟ್ಟು, ಇದ್ದಲು, ಮೂಳೆ, ಬೂದಿಗಳಿಲ್ಲದೆ ಸ್ವಚ್ಛವಾಗಿರುವ ನೀರಿನಿಂದ ಅವಸರಪಡದೆ ಹೃದಯವನ್ನು ವ್ಯಾಪಿಸುವವರೆಗೆ ಆಚಮನ ಮಾಡಬೇಕು.

೫೦. ಬ್ರಾಹ್ಮಣನು ದೃಷ್ಟಿಯಿಂದ ಶುದ್ಧವಾದ ಬ್ರಹ್ಮತೀರ್ಥವೆಂಬ ಹೆಬ್ಬೆರಳಿನ ಬುಡದಲ್ಲಿರುವ ನೀರಿನಿಂದಲೂ, ಕ್ಷತ್ರಿಯನು ಕಂಠಗತವಾದ ನೀರಿನಿಂದಲೂ, ವೈಶ್ಯನು ದವಡೆಯನ್ನು ಸೇರಿದ ನೀರಿನಿಂದಲೂ ಶುದ್ಧನಾಗುವನು.

೫೧–೫೨. ಸ್ತ್ರೀ ಶೂದ್ರರು ಶಿರಸ್ಸು, ಕಿವಿ, ಕಂಠಗಳಲ್ಲಿ ಜಲಸ್ಪರ್ಶದಿಂದಲೆ ಶುದ್ಧರಾಗುವರು. ತಲೆಗೂದಲನ್ನು ಬಿಡಿಸಿಕೊಂಡೂ, ಕಾಲುಗಳನ್ನು ತೊಳೆ ಯದೆಯೂ ಆಚಮನಮಾಡಿದರೂ ಬ್ರಾಹ್ಮಣಾದಿಗಳು ಶುದ್ಧರಾಗುವುದಿಲ್ಲ. ಮೂರುಸಾರಿ ನೀರನ್ನು ಕುಡಿದು ಬಳಿಕ ಇಂದ್ರಿಯಗಳನ್ನು ಶುದ್ಧಿಗೊಳಿಸಬೇಕು.

೫೩–೫೪. ಹೆಬ್ಬೆರಳಿನ ಬುಡದಿಂದ ತುಟಿಗಳನ್ನೂ, ನೀರಿನಿಂದ ಎದೆ ಯನ್ನೂ, ಎಲ್ಲ ಬೆರಳುಗಳಿಂದ ತಲೆಯನ್ನೂ, ಬೆರಳುಗಳ ತುದಿಗಳಿಂದ ಹೆಗಲು ಗಳನ್ನೂ, ಮುಟ್ಟಬೇಕು. ಹೀಗೆ ಆಚಮನಮಾಡಿದವನು ರಸ್ತೆಯಲ್ಲಿ ನಡೆದರೆ ತಿರುಗಿ ಆಚಮನಮಾಡಬೇಕು.

CC-0. Jangamwadi Math Collection. Digitized by eGangotri

ಸ್ನಾತ್ವಾ ಭುಕ್ತ್ವಾ ಪಯಃ ಪೀತ್ವಾ ಪ್ರಾರಂಭೇ ಶುಭಕರ್ಮಣಾಂ ।
ಸುಪ್ತ್ವಾ ವಾಸಃ ಪರೀಧಾಯ ತಥಾ ದೃಷ್ಟ್ವಾಽಪ್ಯಮಂಗಲಂ ॥ ೫೫ ॥
ಪ್ರಮಾದಾದಶುಚಿ ಸ್ಮೃತ್ವಾ ದ್ವಿರಾಚಾಂತಃ ಶುಚಿರ್ಭವೇತ್ ।
ದಂತಧಾವನಂ ಪ್ರಕುರ್ವೀತ ಯಥೋಕ್ತಂ ಧರ್ಮಶಾಸ್ತ್ರತಃ ।
ಆಚಾಂತೋಽಪ್ಯಶುಚಿರ್ಯಸ್ಮಾದಕೃತ್ವಾ ದಂತಧಾವನಂ ॥ ೫೬ ॥
ಪ್ರತಿಪದ್ದರ್ಶಷಷ್ಠೀಷು ನವಮ್ಯಾಂ ರವಿವಾಸರೇ ।
ದಂತಾನಾಂ ಕಾಷ್ಠಸಂಯೋಗೋ ದಹೇದಾಸಪ್ತಮಂ ಕುಲಂ ॥ ೫೭ ॥
ಅಲಾಭೇ ದಂತಕಾಷ್ಠಾನಾಂ ನಿಷಿದ್ಧೇ ವಾಽಥ ವಾಸರೇ ।
ಗಂಡೂಷಾ ದ್ವಾದಶ ಗ್ರಾಹ್ಯಾ ಮುಖಸ್ಯ ಪರಿಶುದ್ಧಯೇ ॥ ೫೮ ॥
ಕನಿಷ್ಠಾಗ್ರಪರೀಮಾಣಂ ಸತ್ವಚಂ ನಿರ್ವ್ರಣಾರುಜಂ ।
ದ್ವಾದಶಾಂಗುಲಮಾನಂ ಚ ಸಾರ್ದ್ರಂ ಸ್ಯಾದ್ದಂತಧಾವನಂ ॥ ೫೯ ॥
ಏಕೈಕಾಂಗುಲಮಾನಂ ತಚ್ಚೂರ್ಣಯೇದ್ದಂತಧಾವನಂ ।
ಪ್ರಾತಃ ಸ್ನಾನಂ ಚರಿತ್ವಾ ಚ ಶುದ್ಧ್ಯೈತ ತೀರ್ಥೇ ವಿಶೇಷತಃ ॥ ೬೦ ॥

---

೫೫–೫೬. ಸ್ನಾನಮಾಡಿ, ಉಂಡೂ, ನೀರನ್ನು (ಹಾಲನ್ನು) ಕುಡಿದೂ, ಶುಭಕಾರ್ಯಗಳ ಆದಿಯಲ್ಲಿಯೂ, ನಿದ್ರೆಮಾಡಿಯೂ, ಬಟ್ಟೆಯನ್ನುಟ್ಟೂ, ಅಮಂಗಳ ವಸ್ತುವನ್ನು ನೋಡಿಯೂ, ಅಜಾಗರೂಕತೆಯಿಂದ ಅಶುಚಿಯನ್ನು ಸ್ಮರಿಸಿಯೂ ಎರಡುಸಾರಿ ಆಚಮನಮಾಡಿದರೆ ಶುದ್ಧನಾಗುವನು. ಧರ್ಮಶಾಸ್ತ್ರವಿಹಿತವಾದ ಕ್ರಮದಿಂದ ಹಲ್ಲುಗಳನ್ನುಜ್ಜಿಕೊಳ್ಳಬೇಕು. ಹೀಗೆ ಹಲ್ಲುಗಳನ್ನುಜ್ಜದೆ ಆಚಮನಮಾಡಿದರೂ ಶುದ್ಧನಾಗುವುದಿಲ್ಲ.

೫೭. ಪಾಡ್ಯ, ಅಮಾವಾಸ್ಯೆ, ಷಷ್ಠೀ, ನವಮೀತಿಥಿಗಳಲ್ಲಿಯೂ, ಭಾನುವಾರದ ದಿನವೂ ಹಲ್ಲುಗಳಿಗೆ ಉಜ್ಜುವ ಕಡ್ಡಿಯ ಸಂಬಂಧವಾದರೆ ಏಳು ವಂಶದ ವರೆಗಿನ ಪಿತೃಗಳು ಹಾಳಾಗುವರು.

೫೮. ದಂತಕಾಷ್ಠವು ಸಿಕ್ಕದಿರುವಾಗಲೂ, ದಂತಧಾವನಕ್ಕೆ ನಿಷಿದ್ಧವಾದ ದಿನಗಳಲ್ಲಿಯೂ ಬಾಯಿಯು ಶುದ್ಧವಾಗುವುದಕ್ಕಾಗಿ ಹನ್ನೆರಡುಸಾರಿ ಗಂಡೂಷವನ್ನು ಮಾಡಬೇಕು.

೫೯. ಕಿರುಬೆರಳಿನ ತುದಿಯಷ್ಟು ದಪ್ಪಗೂ, ತೊಗಟೆಯಿಂದ ಸಹಿತವೂ, ಘಾಯವಿಲ್ಲದೆಯೂ, ತುಂಡಾಗದೆಯೂ, ಇರುವ ಹನ್ನೆರಡಂಗುಲ ಉದ್ದವಾದ ಹಸಿ ಕಡ್ಡಿಯು ದಂತಕಾಷ್ಠವೆನಿಸುವುದು.

೬೦. ಆ ದಂತಧಾವನದ ಕಡ್ಡಿಯನ್ನು ಒಂದು ಅಂಗುಲದಷ್ಟು ಅಗಿದು ಹಲ್ಲುಗಳನ್ನುಜ್ಜಿಕೊಂಡು ಶುದ್ಧಿಗಾಗಿ ಬೆಳಗ್ಗೆ ಸ್ನಾನಮಾಡಬೇಕು, ತೀರ್ಥದಲ್ಲಿ ಮಿಂದರೆ ಇನ್ನೂ ಉತ್ತಮ.

CC-0. Jangamwadi Math Collection. Digitized by eGangotri

ಪ್ರಾತಃಸ್ನಾನಾದ್ಯತಃ ಶುದ್ಧ್ಯೇತ್ಕಾಯೋಽಯಂ ಮಲಿನಃ ಸದಾ ।
ಯನ್ಮಲಂ ನವಭಿಶ್ಛಿದ್ರೈಃ ಸ್ರವತ್ಯೇವ ದಿವಾನಿಶಂ ॥ ೬೧ ॥
ಉತ್ಸಾಹಮೇಧಾಸೌಭಾಗ್ಯರೂಪಸಂಪತ್ಪ್ರವರ್ಧಕಂ ।
ಪ್ರಾಜಾಪತ್ಯಸಮಂ ಪ್ರಾಹುಸ್ತನ್ಮಹಾಘವಿನಾಶಕೃತ್ ॥ ೬೨ ॥
ಪ್ರಾತಃಸ್ನಾನಂ ಹರೇತ್ಪಾಪಮಲಕ್ಷ್ಮೀಂ ಗ್ಲಾನಿಮೇವ ಚ ।
ಅಶುಚಿತ್ವಂ ಚ ದುಃಸ್ವಪ್ನಂ ತುಷ್ಟಿಂ ಪುಷ್ಟಿಂ ಪ್ರಯಚ್ಛತಿ ॥ ೬೩ ॥
ನೋಪಸರ್ಪಂತಿ ವೈ ದುಷ್ಟಾಃ ಪ್ರಾತಸ್ಸ್ನಾಯಿಜನಂ ಕ್ವಚಿತ್ ।
ದೃಷ್ಟಾಽದೃಷ್ಟಫಲಂ ಯಸ್ಮಾತ್ಪ್ರಾತಃಸ್ನಾನಂ ಸಮಾಚರೇತ್ ॥ ೬೪ ॥
ಪ್ರಸಂಗತಃ ಸ್ನಾನವಿಧಿಂ ಪ್ರವಕ್ಷ್ಯಾಮಿ ನೃಪೋತ್ತಮಃ ।
ವಿಧಿಸ್ನಾನಂ ಯತಃ ಪ್ರಾಹುಃ ಸ್ನಾನಾಚ್ಛತಗುಣೋತ್ತರಂ ॥ ೬೫ ॥
ವಿಶುದ್ಧಾಂ ಮೃದಮಾದಾಯ ಬರ್ಹಿಷಸ್ತಿಲಗೋಮಯಂ ।
ಶುಚೌ ದೇಶೇ ಪರಿಸ್ಥಾಪ್ಯ ಹ್ಯಾಚಮ್ಯ ಸ್ನಾನಮಾಚರೇತ್ ॥ ೬೬ ॥
ಉಪಗ್ರಹೀ ಬದ್ಧಶಿಖೋ ಜಲಮಧ್ಯೇ ಸಮಾವಿಶೇತ್ ।
ಸ್ವಶಾಖೋಕ್ತವಿಧಾನೇನ ಸ್ನಾನಂ ಕುರ್ಯಾದ್ಯಥಾವಿಧಿ ॥ ೬೭ ॥

---

೬೧. ಹಗಲೂ ರಾತ್ರಿಯೂ ನವದ್ವಾರಗಳಿಂದ ಸುರಿದ ಮಲದಿಂದ ಮಲಿನವಾದ ಶರೀರವು ಪ್ರಾತಃಸ್ನಾನದಿಂದ ಶುದ್ಧವಾಗುವುದು.

೬೨–೬೪. ಉತ್ಸಾಹ, ಬುದ್ಧಿ, ಸೌಭಾಗ್ಯ, ರೂಪಗಳ ಸಮೃದ್ಧಿಯನ್ನು ಹೆಚ್ಚಿಸುವುದೂ, ವಿಪುಲ ಪಾಪವನ್ನು ಪರಿಹರಿಸುವುದೂ ಆದ ಪ್ರಾತಃಸ್ನಾನವು ಪ್ರಾಜಾಪತ್ಯವೆಂಬ ಕೃಚ್ಛ್ರಕ್ಕೆ ಸಮವು. ಈ ಪ್ರಾತಃಸ್ನಾನದಿಂದ ಪಾಪವೂ, ಅಮಂಗಳವೂ, ಅಶುದ್ಧತೆಯೂ, ದುಃಸ್ವಪ್ನದೋಷವೂ ಹೋಗಿ ಸಂತೋಷ ಮತ್ತು ಪುಷ್ಟಿಗಳು ಉಂಟಾಗುವುದು. ಬೆಳಗ್ಗೆ ಸ್ನಾನಮಾಡುವವನನ್ನು ದುಷ್ಟರು ಸಮೀಪಿಸುವುದಿಲ್ಲ. ಹೀಗೆ ದೃಷ್ಟಾದೃಷ್ಟಫಲಗಳಾಗುವುದರಿಂದ ಪ್ರಾತಃಸ್ನಾನವನ್ನು ಮಾಡಬೇಕು.

೬೫. ರಾಜೇಂದ್ರ! ಬರಿಯ ಸ್ನಾನಕ್ಕಿಂತಲೂ ಶಾಸ್ತ್ರೋಕ್ತರೀತಿಯಿಂದ ಮಾಡಿದ ಸ್ನಾನವು ನೂರ್ಮಡಿಯಷ್ಟು ಉತ್ತಮವಾದುದರಿಂದ ಪ್ರಸ್ತಾವಕ್ರಮದಿಂದ ಈಗ ಸ್ನಾನವಿಧಿಯನ್ನು ಹೇಳುವೆನು.

೬೬. ಶುದ್ಧವಾದ ಮಣ್ಣನ್ನೂ, ದರ್ಭೆಗಳನ್ನೂ, ಎಳ್ಳನ್ನೂ, ಗೋಮಯವನ್ನೂ ಶುದ್ಧವಾದ ಸ್ಥಳದಲ್ಲಿಟ್ಟುಕೊಂಡು ಆಚಮನಮಾಡಿ ಸ್ನಾನಮಾಡಬೇಕು.

೬೭. ಸಮೀಪದಲ್ಲಿರುವ ಯಾವುದಾದರೊಂದನ್ನು ಅವಲಂಬಿಸಿ ಜುಟ್ಟನ್ನು ಕಟ್ಟಿಕೊಂಡು ನೀರಿನಲ್ಲಿಳಿದು ಋಗಾದಿಯಾಗಿ ತನ್ನ ಶಾಖೆಯಲ್ಲಿ ವಿಹಿತವಾದ ಕ್ರಮದಿಂದ ಸ್ನಾನಮಾಡಬೇಕು.



CC-0. Jangamwadi Math Collection. Digitized by eGangotri

ಸ್ನಾತ್ವೇತ್ಥಂ ವಸ್ತ್ರಮಾಪೀಡ್ಯ ಗೃಹ್ಣೀಯಾದ್ಧೌತವಾಸಸೀ ।
ಆಚಮ್ಯ ಚ ತತಃ ಕುರ್ಯಾತ್ಪ್ರಾತಃ ಸಂಧ್ಯಾಂ ಕುಶಾನ್ವಿತಃ ॥ ೬೮ ॥
ಪ್ರಾಣಾಯಾಮಾಂಶ್ಚರನ್ವಿಪ್ರೋ ನಿಯಮ್ಯ ಮಾನಸಂ ದೃಢಂ ।
ಅಹೋರಾತ್ರಕೃತೈಃ ಪಾಪೈರ್ಮುಕ್ತೋ ಭವತಿ ತತ್ಕ್ಷಣಾತ್ ॥ ೬೯ ॥
ದಶದ್ವಾದಶಸಂಖ್ಯಾ ವಾ ಪ್ರಾಣಾಯಾಮಾಃ ಕೃತಾ ಯದಿ ।
ನಿಯಮ್ಯ ಮಾನಸಂ ತೇನ ತದಾ ತಪ್ತಂ ಮಹತ್ತಪಃ ॥ ೭೦ ॥
ಸವ್ಯಾಹೃತಿ ಪ್ರಣವಕಾಃ ಪ್ರಾಣಾಯಾಮಾಸ್ತು ಷೋಡಶ ।
ಅಪಿ ಭ್ರೂಣಹನಂ ಮಾಸಾತ್ಪುನಂತ್ಯಹರಹಃ ಕೃತಾಃ ॥ ೭೧ ॥
ಯಥಾ ಪಾರ್ಥಿವಧಾತೂನಾಂ ದಹ್ಯಂತೇ ಧಮನಾನ್ಮಲಾಃ ।
ತಥೇಂದ್ರಿಯೈಃ ಕೃತಾ ದೋಷಾ ಜ್ವಾಲ್ಯಂತೇ ಪ್ರಾಣಸಂಯಮಾತ್ ॥೭೨॥
ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಃ ಪರಂ ತಪಃ ।
ಗಾಯತ್ರ್ಯಾಸ್ತು ಪರಂ ನಾಸ್ತಿ ಪಾವನಂ ಚ ನೃಪೋತ್ತಮ ॥ ೭೩ ॥
ಕರ್ಮಣಾ ಮನಸಾ ವಾಚಾ ಯದ್ರಾತ್ರೌ ಕುರುತೇ ತ್ವಘಂ ।
ಉತ್ತಿಷ್ಠನ್ಪೂರ್ವಸಂಧ್ಯಾಯಾಂ ಪ್ರಾಣಾಯಾಮೈರ್ವಿಶೋಧಯೇತ್ ॥

---

೬೮. ಹೀಗೆ ಸ್ನಾನಮಾಡಿ ಬಟ್ಟೆಯನ್ನು ಹಿಂಡಿಕೊಂಡು ಒಗೆದ ಬಟ್ಟೆಗಳನ್ನು ಉಟ್ಟು ಆಚಮನಮಾಡಿ ದರ್ಭೆಯನ್ನು ಕೈಯಲ್ಲಿ ಹಿಡಿದುಕೊಂಡು ಪ್ರಾತಸ್ಸಂಧ್ಯಾವಂದನೆಯನ್ನು ಮಾಡಬೇಕು.

೬೯. ಬ್ರಾಹ್ಮಣನು ಪ್ರಾಣಾಯಾಮಮಾಡಿ ಮನಸ್ಸನ್ನು ಸ್ಥಿರಗೊಳಿಸಿದರೆ ಕೂಡಲೆ ಹಗಲು ಮತ್ತು ರಾತ್ರಿಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುವನು.

೭೦. ದೃಢಮನಸ್ಸಿನಿಂದ ಹತ್ತು ಅಥವಾ ಹನ್ನೆರಡು ಪ್ರಾಣಾಯಾಮಗಳನ್ನು ಮಾಡುವುದರಿಂದ ಮಹಾತಪಸ್ಸನ್ನಾಚರಿಸಿದಂತಾಗುವುದು.

೭೧. ವ್ಯಾಹೃತಿಪ್ರಣವ ಮಂತ್ರಗಳಿಂದ ಸಹಿತವಾಗಿ ಹದಿನಾರು ಪ್ರಾಣಾಯಾಮಗಳನ್ನು ಪ್ರತಿನಿತ್ಯವೂ ಮಾಡಿದಲ್ಲಿ ಆ ಪ್ರಾಣಾಯಾಮಗಳು ಶಿಶುಹತ್ಯ ಮಾಡಿದವನನ್ನೂ ಪವಿತ್ರಗೊಳಿಸುವುವು.

೭೨. ಸುವರ್ಣಾದಿ ಲೋಹಗಳನ್ನು ಬೆಂಕಿಯಲ್ಲಿಟ್ಟು ಊದುವುದರಿಂದ ಅವುಗಳ ಕೊಳೆಯು ಹೋಗುವಂತೆ ಇಂದ್ರಿಯಗಳಿಂದ ಮಾಡಿದ ದೋಷಗಳು ಪ್ರಾಣಾಯಾಮಗಳಿಂದ ನೀಗುವುವು.

೭೩. ರಾಜವರ! ಗಾಯತ್ರಿಯ ಒಂದೊಂದು ಅಕ್ಷರವೂ ಪರಬ್ರಹ್ಮಪ್ರತಿಪಾದಕವಾದುದು. ಆ ಗಾಯತ್ರಿಯ ಉಚ್ಚಾರಣಪೂರ್ವಕವಾಗಿ ಮಾಡುವ ಪ್ರಾಣಾಯಾಮವು ಉತ್ತಮವಾದ ತಪಸ್ಸು. ಅದರಿಂದ ಗಾಯತ್ರಿಗಿಂತಲೂ ಉತ್ತಮವಾದ ಪವಿತ್ರಮಂತ್ರವು ಮತ್ತೊಂದಿಲ್ಲ.

೭೪. ರಾತ್ರಿಯಲ್ಲಿ ಕಾಯಿಕವಾಚಿಕ ಮಾನಸಿಕವಾಗಿ ಮಾಡಿದ ಪಾಪವನ್ನು

CC-0. Jangamwadi Math Collection. Digitized by eGangotri

ಯದಹ್ನಾ ಕುರುತೇ ಪಾಪಂ ಮನೋವಾಕ್ಕಾಯಕರ್ಮಭಿಃ ।
ಆಸೀನಃ ಪಶ್ಚಿಮಾಂ ಸಂಧ್ಯಾಂ ಪ್ರಾಣಾಯಾಮೈರ್ವ್ಯಪೋಹತಿ ।
ಪಶ್ಚಿಮಾಂ ತು ಸಮಾಸೀನೋ ಮಲಂ ಹಂತಿ ದಿವಾಕೃತಂ ॥ ೭೫ ॥
ನೋಪತಿಷ್ಠೇತ್ತು ಯಃ ಪೂರ್ವಾಂ ನೋಪಾಸ್ತೇ ಯಸ್ತು ಪಶ್ಚಿಮಾಂ ।
ಸ ಶೂದ್ರವದ್ಬಹಿಷ್ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಣಃ ॥ ೭೬ ॥
ಅಪಾಂ ಸಮೀಪಮಾಸಾದ್ಯ ನಿತ್ಯಕರ್ಮ ಸಮಾಚರೇತ್ ।
ತತ ಆಚಮನಂ ಕುರ್ಯಾದ್ಯಥಾ ವಿಧ್ಯನುಪೂರ್ವಶಃ ॥ ೭೭ ॥
ಆಪೋಹಿಷ್ಠೇತಿ ತಿಸೃಭಿರ್ಮಾರ್ಜನಂ ತು ತತಶ್ಚರೇತ್ ।
ಭೂಮೌ ಶಿರಸಿ ಚಾಕಾಶ ಆಕಾಶೇ ಭುವಿ ಮಸ್ತಕೇ ॥ ೭೮ ॥
ಮಸ್ತಕೇ ಚ ತಥಾಕಾಶೇ ಭೂಮೌ ಚ ನವಧಾ ಕ್ಷಿಪೇತ್ ।
ಭೂಮಿಶಬ್ದೇನ ಚರಣಾವಾಕಾಶಂ ಹೃದಯಂ ಸ್ಮೃತಂ ।
ಶಿರಸ್ಯೇವ ಶಿರಃಶಬ್ದೋ ಮಾರ್ಜನಂ ತ್ರೈರುದಾಹೃತಂ ॥ ೭೯ ॥
ವಾರುಣಾದಪಿ ಚಾಗ್ನೇಯಾದ್ವಾಯವ್ಯಾದಪಿ ಚೇಂದ್ರತಃ ।
ಮಂತ್ರಸ್ನಾನಾದಪಿ ಪರಂ ಬ್ರಾಹ್ಮಂ ಸ್ನಾನಮಿದಂ ಪರಂ ।
ಬ್ರಾಹ್ಮಸ್ನಾನೇನ ಯಃ ಸ್ನಾತಃ ಸ ಬಾಹ್ಯಾಭ್ಯಂತರಂ ಶುಚಿಃ ॥ ೮೦ ॥

---

ಪ್ರಾತಃಕಾಲ ಸಂಧ್ಯಾಕಾಲಗಳಲ್ಲಿದ್ದು ಪ್ರಾಣಾಯಾಮಮಾಡಿ ಹೋಗಲಾಡಿಸಬೇಕು.

೭೫–೭೬. ಹಗಲು ಕಾಯಿಕವಾಚಿಕ ಮಾನಸಿಕವಾಗಿ ಮಾಡಿದ ಮತ್ತು ಇತರವಿಧವಾದ ಪಾಪವು ಸಾಯಂಸಂಧ್ಯಾಕಾಲದಲ್ಲಿ ಪ್ರಾಣಾಯಾಮಮಾಡುವುದರಿಂದ ನೀಗುವುದು. ಯಾವ ಬ್ರಾಹ್ಮಣನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಸಂಧ್ಯಾವಂದನೆಯನ್ನು ಮಾಡುವುದಿಲ್ಲವೊ ಅವನು ಬ್ರಾಹ್ಮಣನ ಎಲ್ಲಾ ಕರ್ಮಗಳಿಗೂ ಅನಧಿಕಾರಿಯಾಗುವನು.

೭೭. ನೀರಿನ ಹತ್ತಿರದಲ್ಲಿ ನಿತ್ಯಕರ್ಮವನ್ನು ನೆರವೇರಿಸಬೇಕು. ಮೊದಲು ವಿಹಿತಕ್ರಮದಿಂದ ಆಚಮನಮಾಡಬೇಕು.

೭೮–೭೯. ತರುವಾಯ ಆಪೋಹಿಷ್ಠೇತ್ಯಾದಿ ಮೂರು ಋಕ್ಕುಗಳಿಂದ ಭೂಮಿ ಶಿರಸ್ಸು ಆಕಾಶ, ಆಕಾಶ ಭೂಮಿ ಶಿರಸ್ಸು, ಶಿರಸ್ಸು ಆಕಾಶ ಭೂಮಿಗಳಲ್ಲಿ ಒಂಬತ್ತುಸಾರಿ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಇಲ್ಲಿ ಭೂಮಿ ಶಬ್ದಕ್ಕೆ ಪಾದಗಳೆಂದೂ, ಆಕಾಶ ಶಬ್ದಕ್ಕೆ ಎದೆಯೆಂದೂ, ಶಿರಶ್ಶಬ್ದಕ್ಕೆ ತಲೆಯೆಂದೂ ಅರ್ಥವು.

೮೦. ವಾರುಣವೆಂಬ ಅವಗಾಹನಸ್ನಾನದಿಂದಲೂ, ಆಗ್ನೇಯವೆಂಬ ಭಸ್ಮಸ್ನಾನದಿಂದಲೂ, ವಾಯವ್ಯವೆಂಬ ಗೋಧೂಳಿಸ್ನಾನದಿಂದಲೂ, ಐಂದ್ರವೆಂಬ

CC-0. Jangamwadi Math Collection. Digitized by eGangotri

ಸರ್ವತ್ರ ಚಾಽರ್ಹತಾಮೇತಿ ದೇವಪೂಜಾದಿ ಕರ್ಮಣಿ ।
ನಕ್ತನ್ದಿನಂ ನಿಮಜ್ಜ್ಯಾಽಪ್ಸು ಕೈವರ್ತಾಃ ಕಿಮು ಪಾವನಾಃ ॥ ೮೧ ॥
ಶತಶೋಽಪಿ ತಥಾಸ್ನಾತಾ ನ ಶುದ್ಧಾ ಭಾವದೂಷಿತಾಃ ।
ಅಂತಃಕರಣಶುದ್ಧಾಂಶ್ಚ ತಾನ್ವಿಭೂತಿಃ ಪವಿತ್ರಯೇತ್ ॥ ೮೨ ॥
ಕಿಂ ಪಾವನಾಃ ಪ್ರಕೀರ್ತ್ಯಂತೇ ರಾಸಭಾ ಭಸ್ಮಧೂಸರಾಃ ।
ಸ ಸ್ನಾತಃ ಸರ್ವತೀರ್ಥೇಷು ಮುಕ್ತಃ ಸರ್ವೈರ್ವಿವರ್ಜಿತಃ ॥ ೮೩ ॥
ತೇನ ಕ್ರತುಶತೈರಿಷ್ಟಂ ಚೇತೋ ಯಸ್ಯೇಹ ನಿರ್ಮಲಂ ।
ತದೇವ ನಿರ್ಮಲಂ ಚೇತೋ ಯಥಾಸ್ಯಾತ್ತನ್ಮುನೇ ಶೃಣು ॥ ೮೪ ॥
ವಿಶ್ವೇಶಶ್ಚೇತ್ಪ್ರಸನ್ನಃ ಸ್ಯಾತ್ತದಾ ಸ್ಯಾನ್ನಾಽನ್ಯಥಾ ಕ್ವಚಿತ್ ।
ತಸ್ಮಾಚ್ಚೇತೋ ವಿಶುದ್ಧ್ಯರ್ಥಂ ಕಾಶೀನಾಥಂ ಸಮಾಶ್ರಯೇತ್ ॥ ೮೫ ॥
ಇದಂ ಶರೀರಮುತ್ಸೃಜ್ಯ ಪರಂ ಬ್ರಹ್ಮಾಽಧಿಗಚ್ಛತಿ ।
ದ್ರುಪದಾಂತಂ ತತೋ ಜಪ್ತ್ವಾ ಜಲಮಾದಾಯ ಪಾಣಿನಾ ॥ ೮೬ ॥

---

ಬಿಸಿಲು ಮಳೆಯ ಸ್ನಾನದಿಂದಲೂ, ಮಂತ್ರಸ್ನಾನದಿಂದಲೂ ಈಗ ಹೇಳಿದ ಆಪೋಹಿಷ್ಠೇತ್ಯಾದಿ ಮಂತ್ರಸ್ನಾನವು ಉತ್ತಮವಾದುದು. ಈ ಬ್ರಾಹ್ಮಸ್ನಾನ ಮಾಡಿದವನು ಒಳಗೂ ಹೊರಗೂ ಶುಚಿಯಾಗುವನು.

೮೧. ಇಂತಹನು ದೇವಪೂಜಾದಿಕಾರ್ಯಗಳಿಗೆ ಅರ್ಹನಾಗುವನು. ಮನುಷ್ಯನು ಹಗಲು ರಾತ್ರಿ ನೀರಿನಲ್ಲಿ ಬೆಸ್ತನಂತೆ ಮುಳುಗಿದಮಾತ್ರಕ್ಕೆ ಪವಿತ್ರನಾಗುವುದಿಲ್ಲ.

೮೨. ನೂರಾರು ಸಾರಿ ಸ್ನಾನಮಾಡಿದರೂ ಮನಸ್ಸು ದುಷ್ಟವಾಗಿದ್ದರೆ ಮನುಷ್ಯನು ಶುದ್ಧನಾಗುವುದಿಲ್ಲ. ಮನಸ್ಸು ಶುದ್ಧವಾಗಿದ್ದರೆ ಮಾತ್ರ ವಿಭೂತಿಯು ಅವನನ್ನು ಪವಿತ್ರನನ್ನಾಗಿಸುವುದು.

೮೩–೮೪. ಭಸ್ಮಲಿಪ್ತವಾದ ಮಾತ್ರಕ್ಕೆ ಕತ್ತೆಯು ಪವಿತ್ರಪ್ರಾಣಿಯೆನಿಸಿಕೊಳ್ಳುವುದೇ? ಯಾವನ ಮನಸ್ಸು ಶುದ್ಧವಾಗಿರುವುದೊ, ಅವನೇ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಿದವನಾಗುವನು. ಸಕಲದೋಷಮುಕ್ತನೂ ಅವನೆ. ಅವನೇ ಅನೇಕ ಯಾಗಗಳನ್ನು ಮಾಡಿದವನು. ಹಾಗೆ ಮನಸ್ಸು ಶುದ್ಧವಾಗುವುದಕ್ಕೆ ಕಾರಣವೇನೆಂಬುದನ್ನು ಹೇಳುತ್ತೇನೆ ಕೇಳು.

೮೫. ವಿಶ್ವೇಶ್ವರನು ಪ್ರಸನ್ನನಾದರೆ ಮನಸ್ಸು ಶುದ್ಧವಾಗುವುದು. ಆದುದರಿಂದ ಮನಸ್ಸಿನ ಶುದ್ಧಿಗಾಗಿ ಕಾಶೀನಾಥನಾದ ವಿಶ್ವೇಶ್ವರನನ್ನು ಶರಣು ಹೊಂದಬೇಕು.

೮೬–೮೮. ಆ ವಿಶ್ವೇಶ್ವರನ ಅನುಗ್ರಹದಿಂದ ಈ ದೇಹವನ್ನು ತ್ಯಜಿಸಿ ಪರಬ್ರಹ್ಮನನ್ನು ಸೇರುವನು. ಸ್ನಾನವಿಧಿಯನ್ನರಿತ ವಿಪ್ರನು ಕೈಯಲ್ಲಿ ನೀರನ್ನು

CC-0. Jangamwadi Math Collection. Digitized by eGangotri

ಕುರ್ಯಾದ್ದೃತಂ ಚ ಮಂತ್ರೇಣ ವಿಧಿಜ್ಞಸ್ತ್ವಘಮರ್ಷಣಂ ।
ನಿಮಜ್ಜ್ಯಾಽಪ್ಸು ಚ ಯೋ ವಿದ್ವಾನ್ ಜಪೇತ್ತ್ರಿರಘಮರ್ಷಣಂ ॥ ೮೭ ॥
ಜಲೇ ವಾಽಪಿ ಸ್ಥಲೇವಾಽಪಿ ಯಃ ಕುರ್ಯಾದಘಮರ್ಷಣಂ ।
ತಸ್ಯಾಘೌಘೋ ವಿನಶ್ಯೇತ ಯಥಾ ಸೂರ್ಯೋದಯೇ ತಮಃ ॥ ೮೮ ॥
ಗಾಯತ್ರೀಂ ಶಿರಸಾ ಹೀನಾಂ ಮಹಾವ್ಯಾಹೃತಿಪೂರ್ವಿಕಾಂ ।
ಪ್ರಣವಾದ್ಯಾಂ ಜಪಂಸ್ತಿಷ್ಠನ್ಕ್ಷಿಪೇದಂಭೋಽಂಜಲಿತ್ರಯಂ ॥ ೮೯ ॥
ತೇನ ವಜ್ರೋದಕೇನಾಽಽಶು ಮಂದೇಹಾ ನಾಮ ರಾಕ್ಷಸಾಃ ।
ಸೂರ್ಯತೇಜಃಪ್ರಲೋಪಂ ತೇ ಶೈಲಾ ಇವ ವಿವಸ್ವತಃ ॥ ೯೦ ॥
ಸಹಾಯಾರ್ಥಂ ಚ ಸೂರ್ಯಸ್ಯ ಯೋ ದ್ವಿಜೋ ನಾಽಂಜಲಿತ್ರಯಂ ।
ಕ್ಷಿಪೇನ್ಮಂದೇಹನಾಶಾಯ ಸೋಽಪಿ ಮಂದೇಹತಾಂ ವ್ರಜೇತ್ ॥ ೯೧ ॥
ಪ್ರಾತಸ್ತಾವಜ್ಜಪಂಸ್ತಿಷ್ಠೇದ್ಯಾವತ್ಸೂರ್ಯಸ್ಯ ದರ್ಶನಂ ।
ಉಪವಿಷ್ಟೋ ಜಪೇತ್ಸಾಯಮೃಕ್ಷಾಣಾಮಾವಿಲೋಕನಾತ್ ॥ ೯೨ ॥
ಕಾಲಲೋಪೋ ನ ಕರ್ತವ್ಯೋ ದ್ವಿಜೇನ ಸ್ವಹಿತೇಪ್ಸುನಾ ।
ಅರ್ಧೋದಯಾಸ್ತಸಮಯೇ ತಸ್ಮಾದ್ವಜ್ರೋದಕಂ ಕ್ಷಿಪೇತ್ ॥ ೯೩ ॥

---

ಹಿಡಿದುಕೊಂಡು "ಋತಂ ಚ ಸತ್ಯಂಚೇ"ತ್ಯಾದಿ ಅಘಮರ್ಷಣ ಮಂತ್ರವನ್ನು ನೆಲದಲ್ಲಾಗಲಿ, ಜಲದಲ್ಲಾಗಲಿ ಮೂರಾವೃತ್ತಿ ಜಪಿಸಿ ಸ್ನಾನಮಾಡಿದರೆ ಅವನ ಪಾಪರಾಶಿಯು ಸೂರ್ಯನು ಉದಯವಾದಾಗ ಕತ್ತಲೆಯು ಹೇಗೊ ಹಾಗೆ ಮಾಯವಾಗುವುದು.

೮೯–೯೧. ನಿಂತುಕೊಂಡು ಪ್ರಣವ ಮತ್ತು ವ್ಯಾಹೃತಿ ಪೂರ್ವಕವಾಗಿ ಗಾಯತ್ರಿಯನ್ನುಚ್ಚರಿಸಿ ಮೂರು ಬೊಗಸೆ ನೀರನ್ನು ಅರ್ಘ್ಯವಾಗಿ ಕೊಟ್ಟರೆ ವಜ್ರದಂತಿರುವ ಆ ನೀರಿನಿಂದ ಸೂರ್ಯನ ತೇಜಸ್ಸನ್ನು ಹಾಳುಮಾಡುತ್ತಿರುವ ಮಂದೇಹರೆಂಬ ರಾಕ್ಷಸರು ಹತರಾಗುವರು. ಯಾವ ಬ್ರಾಹ್ಮಣನು ಸೂರ್ಯನಿಗೆ ಸಹಾಯವನ್ನು ಮಾಡುವ ಮೂಲಕ ಮಂದೇಹರಾಕ್ಷಸರನ್ನು ನಾಶಮಾಡುವುದಕ್ಕಾಗಿ ಮೂರಾವೃತ್ತಿ ಜಲದಿಂದ ಅರ್ಘ್ಯವನ್ನು ಕೊಡುವುದಿಲ್ಲವೊ ಅವನೂ ಮಂದೇಹನೇ ಆಗುವನು.

೯೨. ಬೆಳಗ್ಗೆ ಸೂರ್ಯನ ದರ್ಶನವಾಗುವವರೆಗೆ ನಿಂತುಕೊಂಡೂ ಸಾಯಂಕಾಲ ನಕ್ಷತ್ರಗಳು ಕಾಣಿಸುವವರೆಗೆ ಕುಳಿತುಕೊಂಡೂ ಜಪಿಸಬೇಕು.

೯೩. ತನಗೆ ಹಿತವನ್ನು ಬಯಸುವ ವಿಪ್ರನು ಕಾಲಾತಿಕ್ರಮವನ್ನು ಮಾಡದೆ ಸೂರ್ಯನ ಅರ್ಧೋದಯ ಮತ್ತು ಅರ್ಧಾಸ್ತಮಯಕಾಲದಲ್ಲಿ ವಜ್ರೋದಕವನ್ನು ಕೊಡಬೇಕು.

CC-0. Jangamwadi Math Collection. Digitized by eGangotri

ವಿಧಿನಾಽಪಿ ಕೃತಾ ಸಂಧ್ಯಾ ಕಾಲಾಽತೀತಾಽಫಲಾ ಭವೇತ್ ।
ಅಯಮೇವಹಿ ದೃಷ್ಟಾಂತೋ ವಂಧ್ಯಾಸ್ತ್ರೀಮೈಥುನಂ ಯಥಾ ॥ ೯೪ ॥
ಜಲೇ ವಾಮಕರಂ ಕೃತ್ವಾ ಯಾ ಸಂಧ್ಯಾಚರಿತಾ ದ್ವಿಜೈಃ ।
ವೃಷಲೀ ಸಾ ಪರಿಜ್ಞೇಯಾ ರಕ್ಷೋಗಣಮುದಾವಹಾ ॥ ೯೫ ॥
ಉಪಸ್ಥಾನಂ ತತಃ ಕುರ್ಯಾಚ್ಛಾಖೋಕ್ತವಿಧಿನಾ ತತಃ ।
ಸಹಸ್ರಕೃತ್ವೋ ಗಾಯತ್ರ್ಯಾಃ ಶತಕೃತ್ವೋಽಥವಾ ಪುನಃ ॥ ೯೬ ॥
ದಶಕೃತ್ವೋಽಥ ದೇವ್ಯೈ ಚ ಕುರ್ಯಾತ್ಸೌರೀಮುಪಸ್ಥಿತಿಂ ।
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ ॥ ೯೭ ॥
ಗಾಯತ್ರೀಂ ಯೋಜಪೇದ್ವಿಪ್ರೋ ನ ಸ ಪಾಪೈಃ ಪ್ರಲಿಪ್ಯತೇ ।
ರಕ್ತಚಂದನಮಿಶ್ರಾಭಿರದ್ಭಿಶ್ಚ ಕುಸುಮೈಃ ಕುಶೈಃ ॥ ೯೮ ॥
ವೇದೋಕ್ತೈರಾಗಮೋಕ್ತೈರ್ವಾ ಮಂತ್ರೈರರ್ಘ್ಯಂ ಪ್ರದಾಪಯೇತ್ ।
ಅರ್ಚಿತಃ ಸವಿತಾ ಯೇನ ತೇನ ತ್ರೈಲೋಕ್ಯಮರ್ಚಿತಂ ॥ ೯೯ ॥
ಅರ್ಚಿತಃ ಸವಿತಾ ದತ್ತೇ ಸುತಾನ್ಪಶುವಸೂನಿಚ ।
ವ್ಯಾಧೀನ್ಹರೇದ್ದಧಾತ್ಯಾಯುಃ ಪೂರಯೇದ್ವಾಂಛಿತಾನ್ಯಪಿ ॥ ೧೦೦ ॥

---

೯೪. ಕಾಲವನ್ನು ಮೀರಿ ವಿಹಿತಕ್ರಮದಿಂದ ಸಂಧ್ಯಾವಂದನೆಯನ್ನು ಮಾಡಿದರೂ ಅದು ಬಂಜೆಯ ಮೈಥುನದಂತೆ ನಿಷ್ಫಲವಾದೀತು.

೯೫. ನೀರಿನಲ್ಲಿ ಎಡಗೈಯನ್ನಿಟ್ಟು ಬ್ರಾಹ್ಮಣನು ಮಾಡಿದ ಸಂಧ್ಯಾವಂದನೆಯು ರಾಕ್ಷಸರಿಗೆ ಸಂತೋಷವನ್ನುಂಟುಮಾಡುವ ವೃಷಲೀ ಎನ್ನಿಸುವುದು.

೯೬-೧೦೦. ಅರ್ಘ್ಯಪ್ರದಾನವಾದ ಮೇಲೆ ತನ್ನ ಶಾಖೋಕ್ತಕ್ರಮದಿಂದ ಉಪಸ್ಥಾನಮಾಡಬೇಕು. ತರುವಾಯ ಸಾವಿರ, ನೂರು, ಅಥವಾ ಹತ್ತು ಸಾರಿ ಗಾಯತ್ರಿಯನ್ನು ಜಪಿಸಿ ಸೂರ್ಯೋಪಸ್ಥಾನಮಾಡಬೇಕು. ಗಾಯತ್ರಿಯನ್ನು ಸಾವಿರಸಾರಿ ಜಪಿಸುವುದು ಉತ್ತಮವು, ನೂರುಸಾರಿ ಜಪಿಸುವುದು ಮಧ್ಯಮವು, ಹತ್ತುಸಾರಿ ಜಪಿಸುವುದು ಅಧಮವು. ಹೀಗೆ ಹತ್ತಕ್ಕೆ ಕಮ್ಮಿಯಾಗದಂತೆ ಗಾಯತ್ರಿಯನ್ನು ಜಪಿಸಿದ ಬ್ರಾಹ್ಮಣನು ಸಮಸ್ತಪಾಪಮುಕ್ತನಾಗುವನು. ಕೆಂಪು ಗಂಧದಿಂದಲೂ, ಹೂವುಗಳಿಂದಲೂ ಮಿಶ್ರವಾದ ನೀರಿನಿಂದ ವೇದೋಕ್ತ ಅಥವಾ ಆಗಮೋಕ್ತ ಮಂತ್ರಗಳೊಡನೆ ಅರ್ಘ್ಯವನ್ನು ಕೊಡಬೇಕು. ಸೂರ್ಯನನ್ನು ಪೂಜಿಸಿದವನು ಮೂರು ಲೋಕವನ್ನೂ ಪೂಜಿಸಿದವನಾಗುವನು. ಹೀಗೆ ಅರ್ಚಿಸಿದ ಸೂರ್ಯದೇವನು ಮಕ್ಕಳನ್ನೂ, ಪಶುಗಳನ್ನೂ, ದ್ರವ್ಯಗಳನ್ನೂ ಕೊಡುತ್ತಾನೆ. ರೋಗವನ್ನು ಹೋಗಲಾಡಿಸಿ ಆಯುಸ್ಸನ್ನು ಕೊಟ್ಟು ಇಷ್ಟಾರ್ಥಗಳನ್ನು ಅನುಗ್ರಹಿಸುವನು.

CC-0. Jangamwadi Math Collection. Digitized by eGangotri

ಅಯಂ ಹಿ ರುದ್ರ ಆದಿತ್ಯೋ ಹರಿರೇಷ ದಿವಾಕರಃ ।
ರವಿರ್ಹಿರಣ್ಯರೂಪೋಽಸೌ ತ್ರಯೀ ರೂಪೋಽಯಮರ್ಯಮಾ ॥೧೦೧॥
ತತಸ್ತು ತರ್ಪಣಂ ಕುರ್ಯಾತ್ಸ್ವಶಾಖೋಕ್ತವಿಧಾನತಃ ।
ಬ್ರಹ್ಮಾದೀನಖಿಲಾನ್ದೇವಾನ್ಮರೀಚ್ಯಾದೀಂಸ್ತಥಾ ಮುನೀನ್ ॥ ೧೦೨ ॥
ಚಂದನಾಽಗರುಕರ್ಪೂರಗಂಧವತ್ಕುಸುಮೈರಪಿ ।
ತರ್ಪಯೇಚ್ಛುಚಿಭಿಸ್ತೋಯೈಸ್ತೃಪ್ಯಂತ್ವಿತಿ ಸಮುಚ್ಚರೇತ್ ॥ ೧೦೩ ॥
ಸನಕಾದೀನ್ಮನುಷ್ಯಾಂಶ್ಚ ನಿವೀತೀ ತರ್ಪಯೇದ್ಯವೈಃ ।
ಅಂಗುಷ್ಠದ್ವಯಮಧ್ಯೇ ತು ಕೃತ್ವಾ ದರ್ಭಾನೃಜೂನ್ದ್ವಿಜಃ ॥ ೧೦೪ ॥
ಕವ್ಯವಾಡನಲಾದೀಂಶ್ಚ ಪಿತೄನ್ದಿವ್ಯಾನ್ಪ್ರತರ್ಪಯೇತ್ ।
ಪ್ರಾಚೀನಾವೀತಿಕೋ ದರ್ಭೈರ್ದ್ವಿಗುಣೈಸ್ತಿಲಮಿಶ್ರಿತೈಃ ॥ ೧೦೫ ॥
ರವೌ ಶುಕ್ಲೇ ತ್ರಯೋದಶ್ಯಾಂ ಸಪ್ತಮ್ಯಾಂ ನಿಶಿ ಸಂಧ್ಯಯೋಃ ।
ಶ್ರೇಯೋಽರ್ಥೀ ಬ್ರಾಹ್ಮಣೋ ಜಾತು ನ ಕುರ್ಯಾತ್ತಿಲತರ್ಪಣಂ ॥೧೦೬॥
ಯದಿ ಕುರ್ಯಾತ್ತತಃ ಕುರ್ಯಾಚ್ಛುಕ್ಲೈರೇವ ತಿಲೈಃ ಕೃತೀ ।
ಚತುರ್ದಶ ಯಮಾನ್ಪಶ್ಚಾತ್ತರ್ಪಯೇನ್ನಾಮ ಉಚ್ಚರನ್ ॥ ೧೦೭ ॥

---

೧೦೧. ಈ ಆದಿತ್ಯನು ರುದ್ರ, ವಿಷ್ಣು, ಹಿರಣ್ಯ, ವೇದ ಇವುಗಳ ಸ್ವರೂಪನು.

೧೦೨–೧೦೩. ಬಳಿಕ ತನ್ನ ಶಾಖೋಕ್ತಕ್ರಮದಿಂದ ಚಂದನ, ಕೃಷ್ಣಾಗುರು, ಕರ್ಪೂರಗಳ ಸುವಾಸನೆಯುಳ್ಳ ಹೂವುಗಳಿಂದ ಸಹಿತವಾದ ಶುದ್ಧ ಜಲದಿಂದ 'ತೃಪ್ಯಂತು' ಎಂದು ಹೇಳುತ್ತ ಬ್ರಹ್ಮಾದಿ ದೇವತೆಗಳಿಗೂ ಮರೀಚ್ಯಾದಿ ಮುನಿಗಳಿಗೂ ತರ್ಪಣಕೊಡಬೇಕು.

೧೦೪. ಬ್ರಾಹ್ಮಣನು ನೆಟ್ಟಗಿರುವ ದರ್ಭೆಗಳನ್ನು ಬೆರಳಿನ ಮಧ್ಯದಲ್ಲಿ ಸಿಕ್ಕಿಸಿಕೊಂಡು ಯಜ್ಞೋಪವೀತವನ್ನು ಮಾಲಾಕಾರವಾಗಿ ಹಾಕಿಕೊಂಡು ಅಕ್ಕಿಯ ಕಾಳುಗಳಿಂದ ಸನಕಾದಿ ಮನುಷ್ಯಋಷಿಗಳನ್ನು ತರ್ಪಿಸಬೇಕು.

೧೦೫. ಜನಿವಾರವನ್ನು ಎಡಮಾಡಿಕೊಂಡು ಎಳ್ಳು ಸಹಿತವಾದ ಇಮ್ಮಡಿ ದರ್ಭೆಗಳಿಂದ ಕವ್ಯವಾಟ್, ಅನಲ ಮೊದಲಾದ ದಿವ್ಯಪಿತೃಗಳಿಗೆ ತರ್ಪಣ ಕೊಡಬೇಕು.

೧೦೬–೧೦೭. ಭಾನುವಾರ, ಸಪ್ತಮಿ, ತ್ರಯೋದಶಿ ತಿಥಿಗಳಲ್ಲಿಯೂ, ರಾತ್ರಿಯಲ್ಲಿಯೂ, ಸಂಧ್ಯಾಕಾಲದಲ್ಲಿಯೂ ಶ್ರೇಯಸ್ಸನ್ನು ಬಯಸುವ ಬ್ರಾಹ್ಮಣನು ತಿಲತರ್ಪಣ ಮಾಡಕೂಡದು. ಹಾಗೆ ತರ್ಪಣಮಾಡಬೇಕಾದರೆ ಬಿಳಿ ಎಳ್ಳಿನಿಂದ ತರ್ಪಣಮಾಡಬೇಕು. ಬಳಿಕ ಹದಿನಾಲ್ಕು ಯಮರಿಗೆ ಅವರ ನಾಮಗಳನ್ನುಚ್ಚರಿಸಿ ತರ್ಪಣ ಮಾಡಬೇಕು.

CC-0. Jangamwadi Math Collection. Digitized by eGangotri

ತತಃ ಸ್ವಗೋತ್ರಮುಚ್ಚಾರ್ಯ ತರ್ಪಯೇತ್ಸ್ವಾನ್ಪಿತೄನ್ಮುದಾ ।
ಸವ್ಯಜಾನುನಿಪಾತೇನ ಪಿತೃತೀರ್ಥೇನ ವಾಗ್ಯತಃ ॥ ೧೦೮ ॥
ಏಕೈಕಮಂಜಲಿಂ ದೇವಾ ದ್ವೌದ್ವೌ ತು ಸನಕಾದಿಕಾಃ ।
ಪಿತರಸ್ತ್ರೀನ್ಪ್ರವಾಂಛಂತಿ ಸ್ತ್ರಿಯ ಏಕೈಕಮಂಜಲಿಂ ॥ ೧೦೯ ॥
ಅಂಗುಲ್ಯಗ್ರೇಣ ವೈ ದೇವಮಾರ್ಷಮಂಗುಲಿಮೂಲಗಂ ।
ಬ್ರಾಹ್ಮಮಂಗುಷ್ಠಮೂಲೇ ತು ಪಾಣಿಮಧ್ಯೇ ಪ್ರಜಾಪತೇಃ ॥ ೧೧೦ ॥
ಮಧ್ಯೇಽಂಗುಷ್ಠಪ್ರದೇಶಿನ್ಯೋಃ ಪಿತ್ರ್ಯಂ ತೀರ್ಥಂ ಪ್ರಚಕ್ಷತೇ ।
ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ॥ ೧೧೧ ॥
ತೃಪ್ಯಂತು ಸರ್ವೇ ಪಿತರೋ ಮಾತೃಮಾತಾಮಹಾದಯಃ ।
ಅನ್ಯೇಚ ಮಂತ್ರಾಃ ಪ್ರೋಕ್ತಾ ಯೇ ವೇದಪೌರಾಣಸಂಭವಾಃ ॥
ಸಾಂಗಂ ಚ ತರ್ಪಣಂ ಕುರ್ಯಾತ್ಪಿತೄಣಾಂ ಚ ಸುಖಪ್ರದಂ ।
ಅಗ್ನಿಕಾರ್ಯಂ ತತಃ ಕೃತ್ವಾ ವೇದಾಽಭ್ಯಾಸಂ ತತಶ್ಚರೇತ್ ॥ ೧೧೩ ॥
ಶ್ರುತ್ಯಭ್ಯಾಸಃ ಪಂಚಧಾ ಸ್ಯಾತ್ಸ್ವೀಕಾರೋಽರ್ಥವಿಚಾರಣಂ ।
ಅಭ್ಯಾಸಶ್ಚ ತಪಶ್ಚಾಽಪಿ ಶಿಷ್ಯೇಭ್ಯಃ ಪ್ರತಿಪಾದನಂ ॥ ೧೧೪ ॥

---

೧೦೮. ಅನಂತರ ಪಿತೃತೀರ್ಥದಿಂದ ಎಡಮೊಣಕಾಲೂರಿಕೊಂಡು ತನ್ನ ಪಿತೃಗಳಿಗೆ ಗೋತ್ರೋಚ್ಚಾರಣಪೂರ್ವಕವಾಗಿ ಸಂತೋಷದಿಂದ ತರ್ಪಣ ಕೊಡಬೇಕು.

೧೦೯. ದೇವತೆಗಳಿಗೆ ಒಂದೊಂದು ಬೊಗಸೆ ನೀರನ್ನೂ, ಸನಕಾದಿಗಳಿಗೆ ಎರಡೆರಡು ಬೊಗಸೆ ನೀರನ್ನೂ, ಪಿತೃಗಳಿಗೆ ಮೂರು ಮೂರು ಬೊಗಸೆ ನೀರನ್ನೂ, ಹೆಂಗಸರಿಗೆ ಒಂದೊಂದು ಬೊಗಸೆ ನೀರನ್ನೂ ತರ್ಪಣವಾಗಿ ಕೊಡಬೇಕು.

೧೧೦–೧೧೪. ಬೆರಳುಗಳ ಕೊನೆಯಲ್ಲಿ ದೇವತೀರ್ಥವೂ, ಬೆರಳುಗಳ ಬುಡದಲ್ಲಿ ಋಷಿತೀರ್ಥವೂ, ಹೆಬ್ಬೆಟ್ಟಿನ ಬುಡದಲ್ಲಿ ಬ್ರಾಹ್ಮತೀರ್ಥವೂ, ಅಂಗೈಯ ನಡುವೆ ಪ್ರಜಾಪತಿತೀರ್ಥವೂ, ಹೆಬ್ಬೆಟ್ಟು ಮತ್ತು ಪ್ರದೇಶಿನೀ ಎಂಬ ಅದರ ಪಕ್ಕದಲ್ಲಿರುವ ಬೆರಳಿನ ಮಧ್ಯದಲ್ಲಿ ಪಿತೃತೀರ್ಥವೂ ಇರುವುದು. ಆಬ್ರಹ್ಮೇತ್ಯಾದಿ ಮಂತ್ರದಿಂದಲೂ, ಇನ್ನೂ ವೇದ ಮತ್ತು ಪುರಾಣಗಳ ಮಂತ್ರಗಳಿಂದಲೂ ಪಿತೃಗಳಿಗೆ ಸೌಖ್ಯವನ್ನುಂಟುಮಾಡುವ ತರ್ಪಣವನ್ನು ಮಾಡಬೇಕು. ಬಳಿಕ ಅಗ್ನಿಕಾರ್ಯವನ್ನೂ, ವೇದಾಭ್ಯಾಸವನ್ನೂ ಮಾಡಬೇಕು. ಗುರುವಿನಿಂದ ಉಪದೇಶ, ಅರ್ಥವಿಚಾರ, ಅಭ್ಯಾಸ, ತಪಸ್ಸು, ಶಿಷ್ಯರಿಗೆ ಹೇಳಿಕೊಡುವುದು, ಹೀಗೆ ವೇದಾಭ್ಯಾಸವು ಐದು ಪ್ರಕಾರವಾಗಿದೆ.

CC-0. Jangamwadi Math Collection. Digitized by eGangotri

ಲಬ್ಧಸ್ಯ ಪ್ರತಿಪಾಲಾರ್ಥಮಲಬ್ಧಸ್ಯ ಚ ಲಬ್ಧಯೇ ।
ಪ್ರಾತಃ ಕೃತ್ಯಮಿದಂ ಪ್ರೋಕ್ತಂ ದ್ವಿಜಾತೀನಾಂ ನೃಪೋತ್ತಮ ॥ ೧೧೫ ॥
ಅಥವಾ ಪ್ರಾತರುತ್ಥಾಯ ಕೃತ್ವಾಽವಶ್ಯಕಮೇವ ಚ ।
ಶೌಚಾಚಮನಮಾದಾಯ ಭಕ್ಷಯೇದ್ದಂತಧಾವನಂ ॥ ೧೧೬ ॥
ವಿಶೋಧ್ಯ ಸರ್ವಗಾತ್ರಾಣಿ ಪ್ರಾತಃಸಂಧ್ಯಾಂ ಸಮಾಚರೇತ್ ।
ವೇದಾಽರ್ಥಾನಧಿಗಚ್ಛೇದ್ವೈ ಶಾಸ್ತ್ರಾಣಿ ವಿವಿಧಾನ್ಯಪಿ ॥ ೧೧೭ ॥
ಅಧ್ಯಾಪಯೇಚ್ಛುಚೀಂಛಿಷ್ಯಾನ್ಹಿತಾನ್ಮೇಧಾಸಮನ್ವಿತಾನ್ ।
ಉಪೇಯಾದೀಶ್ವರಂ ಚಾಽಪಿ ಯೋಗಕ್ಷೇಮಾದಿಸಿದ್ಧಯೇ ॥ ೧೧೮ ॥
ತತೋ ಮಧ್ಯಾಽಹ್ನಸಿದ್ಧ್ಯರ್ಥಂ ಪೂರ್ವೋಽಕ್ತಂ ಸ್ನಾನಮಾಚರೇತ್ ।
ಸ್ನಾತ್ವಾ ಮಾಧ್ಯಾಹ್ನಿಕೀಂ ಸಂಧ್ಯಾಮುಪಾಸೀತ ವಿಚಕ್ಷಣಃ ॥ ೧೧೯ ॥
ದೇವತಾಂ ಪರಿಪೂಜ್ಯಾಽಥ ನೈಮಿತ್ತಿಕವಿಧಿಂ ಚರೇತ್ ।
ಪವನಾಽಗ್ನಿಂ ಸಮುಜ್ವಾಲ್ಯ ವೈಶ್ವದೇವಂ ಸಮಾಚರೇತ್ ॥ ೧೨೦ ॥
ನಿಷ್ಪಾವಾನ್ಕೋವಿದಾರಾಂಶ್ಚ ಮಾಷಾನ್ಕಲಾಪಾಂಶ್ಚ ಣಕಾಂಸ್ತ್ಯಜೇತ್ ।
ತೈಲಪಕ್ವಮಪಕ್ವಾಽನ್ನಂ ಸರ್ವಂ ಲವಣಯುಕ್ತ್ಯಜೇತ್ ॥ ೧೨೧ ॥
ಆಢಕ್ಯನ್ನಂ ಮಸೂರಾನ್ನಂ ವರ್ತುಲಂ ಧಾನ್ಯಸಂಭವಂ ।
ಭುಕ್ತಶೇಷಂ ಪರ್ಯುಷಿತಂ ವೈಶ್ವದೇವೇ ವಿವರ್ಜಯೇತ್ ॥ ೧೨೨ ॥

---

೧೧೫. ರಾಜೇಂದ್ರ! ಲಬ್ಧವಾದುದರ ಪಾಲನೆಗೂ, ಅಪ್ರಾಪ್ತವಾದುದರ ಪ್ರಾಪ್ತಿಗೂ ದ್ವಿಜರಿಗೆ ಈ ಬೆಳಗಿನ ಕರ್ತವ್ಯವು ವಿಹಿತವಾಗಿದೆ.

೧೧೬–೧೧೭. ಅಥವಾ ಬೆಳಗ್ಗೆ ಎದ್ದು ಆವಶ್ಯಕವಾದ ಶೌಚಾಚಮನಗಳನ್ನು ಮಾಡಿ ಹಲ್ಲುಗಳನ್ನುಜ್ಜಿಕೊಂಡು ಮಿಂದು ಪ್ರಾತಃಸ್ಸಂಧ್ಯಾವಂದನೆಯನ್ನು ಮಾಡಿ ವೇದಾರ್ಥಗಳನ್ನೂ ಬಗೆಬಗೆಯ ಶಾಸ್ತ್ರಾರ್ಥಗಳನ್ನೂ ತಿಳಿಯಬೇಕು.

೧೧೮. ಶುದ್ಧರೂ, ಪ್ರಿಯರೂ, ಬುದ್ಧಿಶಾಲಿಗಳೂ ಆಗಿರುವ ಶಿಷ್ಯರಿಗೆ ಪಾಠಹೇಳಿ ಯೋಗಕ್ಷೇಮಾದಿಗಳ ಪ್ರಾಪ್ತಿಗಾಗಿ ಪರಮಾತ್ಮನನ್ನು ಶರಣುಹೋಗಬೇಕು.

೧೧೯. ತರುವಾಯ ಮಧ್ಯಾಹ್ನದಲ್ಲಿ ಹಿಂದೆ ಹೇಳಿದಂತೆ ಮಿಂದು ಮಾಧ್ಯಾಹ್ನಿಕ ಸಂಧ್ಯೋಪಾಸನೆಯನ್ನು ಮಾಡಬೇಕು.

೧೨೦. ಬಳಿಕ ದೇವಪೂಜೆಗೈದು ನೈಮಿತ್ತಿಕ ಕರ್ಮವನ್ನಾಚರಿಸಿ ಉರಿಯುವ ಪವನಾಗ್ನಿಯಲ್ಲಿ ವೈಶ್ವದೇವ ಹೋಮವನ್ನು ನೆರವೇರಿಸಬೇಕು.

೧೨೧–೧೨೨. ವೈಶ್ವದೇವ ಹೋಮದಲ್ಲಿ ಅವರೆ, ಹಾರಕ, ಉದ್ದು, ಕಡಲೆ ಮೊದಲಾದ ಧಾನ್ಯಗಳನ್ನೂ, ಎಣ್ಣೆಯಿಂದ ಕರೆದ ಪದಾರ್ಥಗಳನ್ನೂ, ಬೇಯಿಸಿದ ಅನ್ನವನ್ನೂ, ಉಪ್ಪು ಮಿಶ್ರವಾದ ಪದಾರ್ಥವನ್ನೂ, ತೊಗರಿಕಾಳಿನ



CC-0. Jangamwadi Math Collection. Digitized by eGangotri

ದರ್ಭಪಾಣಿಃ ಸಮಾಚಮ್ಯ ಪ್ರಾಣಾಯಾಮಂ ವಿಧಾಯ ಚ ।
ಪೃಷೋದಿವೀತಿ ಮಂತ್ರೇಣ ಪರ್ಯುಕ್ಷಣಮಥಾಚರೇತ್ ॥ ೧೨೩ ॥
ಪ್ರದಕ್ಷಿಣಂ ಚ ಪರ್ಯುಕ್ಷ್ಯ ದ್ವಿಃಪರಿಸ್ತೀರ್ಯ ವೈ ಕುಶಾನ್ ।
ರಾಪೋರ್ಧದೇವಮಂತ್ರೇಣ ಕುರ್ಯಾದ್ವಹ್ನಿಂ ಸ್ವಸಂಮುಖೇ ॥
ವೈಶ್ವಾನರಂ ಸಮಭ್ಯರ್ಚ್ಯ ಗಂಧಪುಷ್ಪಾಕ್ಷತೈಸ್ತಥಾ ।
ಸ್ವಶಾಖೋಕ್ತಪ್ರಕಾರೇಣ ಹೋಮಂ ಕುರ್ಯಾದ್ವಿಚಕ್ಷಣಃ ॥ ೧೨೫ ॥
ಅಧ್ವಗಃ ಕ್ಷೀಣವೃತ್ತಿಶ್ಚ ವಿದ್ಯಾರ್ಥೀ ಗುರುಪೋಷಕಃ ।
ಯತಿಶ್ಚ ಬ್ರಹ್ಮಚಾರೀ ಚ ಷಡೇತೇ ಧರ್ಮಭಿಕ್ಷುಕಾಃ ॥ ೧೨೬ ॥
ಅತಿಥಿಃ ಪಾಂಥಿಕೋ ಜ್ಞೇಯೋಽನೂಚಾನಃ ಶ್ರುತಿಪಾರಗಃ ।
ಮಾನ್ಯಾವೇತೌ ಗೃಹಸ್ಥಾನಾಂ ಬ್ರಹ್ಮಲೋಕಮಭೀಪ್ಸತಾಂ ॥ ೧೨೭ ॥
ಅಪಿ ಶ್ವಪಾಕೇ ಶುನಿ ವಾ ನೈವಾನ್ನಂ ನಿಷ್ಫಲಂ ಭವೇತ್ ।
ಅನ್ನಾರ್ಥಿನಿ ಸಮಾಯಾತೇ ಪಾತ್ರಾಽಪಾತ್ರಂ ನ ಚಿಂತಯೇತ್ ॥ ೧೨೮ ॥
ಶುನಾಂ ಚ ಪತಿತಾನಾಂ ಚ ಶ್ವಪಚಾಂ ಪಾಪರೋಗಿಣಾಂ ।
ಕಾಕಾನಾಂ ಚ ಕೃಮೀಣಾಂ ಚ ಬಹಿರನ್ನಂ ಕಿರೇದ್ಭುವಿ ॥ ೧೨೯ ॥

---

ಅನ್ನವನ್ನೂ, ಕಾಡುಕಡಲೆ ಗುಗ್ಗರಿಯನ್ನೂ, ಗುಂಡಗಿರುವ ಧಾನ್ಯಗಳನ್ನೂ, ಎಂಜಲನ್ನೂ, ತಂಗಳನ್ನೂ ಉಪಯೋಗಿಸಕೂಡದು.

೧೨೩–೧೨೪. ದರ್ಭೆಯನ್ನು ಹಿಡಿದುಕೊಂಡು ಆಚಮನಪ್ರಾಣಾಯಾಮಗಳನ್ನುಮಾಡಿ ಪೃಷೋದಿವೀತ್ಯಾದಿ ಮಂತ್ರದಿಂದ ಎರಡುಸಾರಿ ಪರ್ಯುಕ್ಷಣಮಾಡಿ ದರ್ಭೆಗಳನ್ನು ಅಗ್ನಿಯ ಸುತ್ತಲೂ ಹಾಸಿ ರಾಪೋರ್ಧದೇವಮಂತ್ರದಿಂದ ಅಗ್ನಿಯನ್ನು ಸ್ವಾಭಿಮುಖವಾಗಿ ಮಾಡಿಕೊಳ್ಳಬೇಕು.

೧೨೫. ಗಂಧ, ಹೂವು, ಅಕ್ಷತೆಗಳಿಂದ ಅಗ್ನಿದೇವನನ್ನು ಪೂಜಿಸಿ ತನ್ನ ಶಾಖೋಕ್ತಕ್ರಮದಿಂದ ಹೋಮವನ್ನು ಮಾಡಬೇಕು.

೧೨೬–೧೨೭. ದಾರಿಹೋಕ, ಜೀವನಕ್ಕೆ ಆಶ್ರಯವಿಲ್ಲದವನು, ವಿದ್ಯಾರ್ಥಿ, ಗುರುವನ್ನು ಪೋಷಿಸುವವನು, ಸನ್ಯಾಸಿ, ಬ್ರಹ್ಮಚಾರಿ ಈ ಆರು ಜನರು ಧರ್ಮಭಿಕ್ಷಾರ್ಹರು. ಬ್ರಹ್ಮಲೋಕಾಭಿಲಾಷಿಗಳಾದ ಗೃಹಸ್ಥರಿಗೆ ಅತಿಥಿಯಾದ ದಾರಿಗನೂ, ಸಾಂಗವೇದಾಧ್ಯಯನಮಾಡಿದ ಶ್ರೋತ್ರಿಯನೂ ಪೂಜಾರ್ಹನು.

೧೨೮. ಚಂಡಾಲನಿಗಾಗಲಿ, ನಾಯಿಗಾಗಲಿ ನೀಡಿದ ಅನ್ನವು ನಿರರ್ಥಕವಾಗಲಾರದು. ಅನ್ನಾರ್ಥಿಯಾಗಿ ಬಂದವರಲ್ಲಿ ಪಾತ್ರಾಪಾತ್ರವಿಚಾರಮಾಡಬಾರದು.

೧೨೯. ನಾಯಿ, ಪತಿತ, ಚಂಡಾಲ, ಕುಷ್ಠಾದಿ ಪಾಪರೋಗಿಗಳಿಗೂ, ಕೃಮಿಗಳಿಗಾಗಿಯೂ ಹೊರಗಡೆ ಅನ್ನವನ್ನು ಎರಚಬೇಕು.

CC-0. Jangamwadi Math Collection. Digitized by eGangotri

ಐಂದ್ರವಾರುಣವಾಯವ್ಯಾಃ ಸೌಮ್ಯಾ ವೈ ನೈಋರ್ೃತಾಶ್ಚ ಯೇ ।
ಪ್ರತಿಗೃಹ್ಣಂತ್ವಿಮಂ ಪಿಂಡಂ ಕಾಕಾ ಭೂಮೌ ಮಯಾಽರ್ಪಿತಂ ॥ ೧೩೦ ॥
ಇತ್ಥಂ ಭೂತಬಲಿಂ ಕೃತ್ವಾ ಕಾಲಂ ಗೋದೋಹಮಾತ್ರಕಂ ।
ಪ್ರತೀಕ್ಷ್ಯಾಽತಿಥಿಮಾಯಾತಂ ವಿಶೇದ್ಭೋಜ್ಯಗೃಹಂ ತತಃ ॥ ೧೩೧ ॥
ಅದತ್ವಾ ವಾಯಸಬಲಿಂ ನಿತ್ಯಶ್ರಾದ್ಧಂ ಸಮಾಚರೇತ್ ।
ನಿತ್ಯಶ್ರಾದ್ಧೇ ಸ್ವಸಾಮರ್ಥ್ಯಾತ್ತ್ರೀನ್ದ್ವಾವೇಕಮಥಾಽಪಿ ವಾ ॥ ೧೩೨ ॥
ಭೋಜಯೇತ್ಪಿತೃಯಜ್ಞಾರ್ಥಂ ದದ್ಯಾದುದ್ಧೃತ್ಯ ವಾರಿ ಚ ।
ನಿತ್ಯಶ್ರಾದ್ಧಂ ದೈವಹೀನಂ ನಿಯಮಾದಿವಿವರ್ಜಿತಂ ॥ ೧೩೩ ॥
ದಕ್ಷಿಣಾರಹಿತಂ ಶ್ವೇತದ್ದಾತೃಭೋಕ್ತ್ರುಸುತೃಪ್ತಿಕೃತ್ ।
ಪಿತೃಯಜ್ಞಂ ವಿಧಾಯೇತ್ಥಂ ಸ್ವಸ್ಥಬುದ್ಧಿರನಾತುರಃ ॥ ೧೩೪ ॥
ಅದುಷ್ಟಾಸನಮಧ್ಯಾಸ್ಯ ಭುಂಜೀತ ಶಿಶುಭಿಃ ಸಹ ।
ಸುಗಂಧಿಃ ಸುಮನಾಃ ಸ್ರಗ್ವೀ ಶುಚಿವಾಸೋಽದ್ವಯಾಽನ್ವಿತಃ ॥ ೧೩೫ ॥
ಪ್ರಾಗಸ್ಯ ಉದಗಾಸ್ಯೋವಾ ಭುಂಜೀತ ಪಿತೃಸೇವಿತಂ ।
ವಿಧಾಯಾಽನ್ನಮನಗ್ನಂ ತದುಪರಿಷ್ಟಾದಧಸ್ತಥಾ ॥ ೧೩೬ ॥
ಆಪೋಶನ ವಿಧಾನೇನ ಕೃತ್ವಾಽಶ್ನೀಯಾತ್ಸುಧೀರ್ದ್ವಿಜಃ ।
ಭೂಮೌ ಬಲಿತ್ರಯಂ ಕುರ್ಯಾದಪೋ ದದ್ಯಾತ್ತದೋಪರಿ ॥ ೧೩೭ ॥

---

೧೩೦–೧೩೧. ಪೂರ್ವ, ಪಶ್ಚಿಮ, ವಾಯವ್ಯ, ಉತ್ತರ, ನೈಋತ್ಯ ದಿಕ್ಕುಗಳ ಕಾಗೆಗಳು ನಾನು ಭೂಮಿಯಲ್ಲಿ ಕೊಟ್ಟ ಪಿಂಡವನ್ನು ತೆಗೆದುಕೊಳ್ಳಲಿ, ಎಂದು ಭೂತ ಬಲಿಗೈದು ಹಸುವಿನ ಹಾಲನ್ನು ಕರೆಯುವಷ್ಟು ಕಾಲ ಬರುವ ಅತಿಥಿಯನ್ನು ನಿರೀಕ್ಷಿಸಿ ಊಟದ ಮನೆಯನ್ನು ಪ್ರವೇಶಿಸಬೇಕು.

೧೩೨–೧೩೭. ವಾಯಸಬಲಿಯನ್ನು ಕೊಡದೆ ನಿತ್ಯಶ್ರಾದ್ಧವನ್ನು ಮಾಡಬೇಕು. ಈ ನಿತ್ಯಶ್ರಾದ್ಧದಲ್ಲಿ ತನ್ನ ಶಕ್ತ್ಯನುಸಾರ ಮೂವರು, ಇಬ್ಬರು, ಅಥವಾ ಒಬ್ಬ ಬ್ರಾಹ್ಮಣನನ್ನು ಪಿತೃಯಜ್ಞಾರ್ಥವಾಗಿ ಭೋಜನಮಾಡಿಸಿ ನೀರನ್ನೂ ನೀಡಬೇಕು. ದೇವರಹಿತವಾಗಿಯೂ, ನಿಯಮಗಳಿಲ್ಲದೆಯೂ, ದಕ್ಷಿಣೆಯಿಲ್ಲದೆಯೂ ಮಾಡಿದ ನಿತ್ಯಶ್ರಾದ್ಧವು ಶ್ರಾದ್ಧಮಾಡುವವನಿಗೂ, ಭೋಜನಮಾಡುವವರಿಗೂ ತೃಪ್ತಿಯನ್ನುಂಟುಮಾಡುವುದು. ಹೀಗೆ ಪಿತೃಯಜ್ಞವನ್ನುಮಾಡಿ ಸ್ವಸ್ಥಚಿತ್ತನಾಗಿ ಶುಭಾಸನದಲ್ಲಿ ಕುಳಿತು ಶಿಶುಗಳೊಡನೆ ಭುಜಿಸಬೇಕು. ಸುಗಂಧನೂ, ಒಳ್ಳೆಯ ಮನಸ್ಸುಳ್ಳವನೂ, ಹೂವಿನ ಹಾರವುಳ್ಳವನೂ, ಶುದ್ಧವಾದ ಎರಡು ವಸ್ತ್ರಗಳನ್ನು ಧರಿಸಿದವನೂ, ಪೂರ್ವಾಭಿಮುಖನೂ ಅಥವಾ ಉತ್ತರಾಭಿಮುಖನೂ ಆಗಿ ಪಿತೃಶೇಷವನ್ನು ಊಟಮಾಡಬೇಕು. ಆ ಅನ್ನವನ್ನು ಮೇಲೆ ಮತ್ತು ಕೆಳಗೆ ಆಪೋಶನಕ್ರಮದಿಂದ

CC-0. Jangamwadi Math Collection. Digitized by eGangotri

ಸಕೃಚ್ಚಾಽಪ ಉಪಸ್ಪೃಶ್ಯ ಪ್ರಾಣಾದ್ಯಾಹುತಿಪಂಚಕಂ ।
ದದ್ಯಾಜ್ಜಠರ ಕುಂಡಾಽಗ್ನೌ ದರ್ಭಪಾಣಿಃ ಪ್ರಸನ್ನಧೀಃ ॥ ೧೩೮ ॥
ದರ್ಭಪಾಣಿಸ್ತು ಯೋ ಭುಂಕ್ತೇ ತಸ್ಯ ದೋಷೋ ನ ವಿದ್ಯತೇ ।
ಕೇಶಕೀಟಾದಿ ಸಂಭೂತಸ್ತದಶ್ನೀಯಾತ್ಸದರ್ಭಕಃ ॥ ೧೩೯ ॥
ತತೋ ಮೌನೇನ ಭುಂಜೀತ ನ ಕುರ್ಯಾದ್ದಂತಘರ್ಷಣಂ ।
ಪ್ರಕ್ಷಾಲಿತವ್ಯಹಸ್ತಸ್ಯ ದಕ್ಷಿಣಾಂಗುಷ್ಠಮೂಲತಃ ॥ ೧೪೦ ॥
ರೌರವೇಽಪುಣ್ಯನಿಲಯೇ ಅಧೋಲೋಕ ನಿವಾಸಿನಾಂ ।
ಉಚ್ಛಿಷ್ಟೋದಕಮಿಚ್ಛೂನಾಮಕ್ಷಯ್ಯಮುಪತಿಷ್ಠತಾಂ ॥ ೧೪೧ ॥
ಪುನರಾಚಮ್ಯ ಮೇಧಾವೀ ಶುಚಿರ್ಭೂತ್ವಾ ಪ್ರಯತ್ನತಃ ।
ಮುಖಶುದ್ಧಿಂ ತತಃ ಕೃತ್ವಾ ಪುರಾಣಶ್ರವಣಾದಿಭಿಃ ॥ ೧೪೨ ॥
ಅತಿವಾಹ್ಯ ದಿವಾಽಶೇಷಂ ತತಃ ಸಂಧ್ಯಾಂ ಸಮಾಚರೇತ್ ।
ಗೃಹೇಷು ಪ್ರಾಕೃತಾ ಸಂಧ್ಯಾ ಗೋಷ್ಠೇ ದಶಗುಣಾಸ್ಮೃತಾ ॥ ೧೪೩ ॥

---

ಆವರಣಗೊಳಿಸಿ ಊಟಮಾಡಬೇಕು. ನೆಲದಲ್ಲಿ ಮೂರು ಬಲಿಯನ್ನಿತ್ತು ಅದರ ಮೇಲೆ ನೀರನ್ನೆರೆಯಬೇಕು.

೧೩೮. ಒಂದುಸಾರಿ ಆಪೋಶನ ತೆಗೆದುಕೊಂಡು ಕುಶಹಸ್ತನಾಗಿ ಪ್ರಸನ್ನ ಮನಸ್ಸಿನಿಂದ ಹೊಟ್ಟೆಯೆಂಬ ಅಗ್ನಿಕುಂಡದಲ್ಲಿ ಪ್ರಾಣಾದಿಯಾದ ಐದು ಅಹುತಿಗಳನ್ನು ಕೊಡಬೇಕು.

೧೩೯. ದರ್ಭೆಯನ್ನು ಕೈಯಲ್ಲಿಟ್ಟುಕೊಂಡು ಊಟಮಾಡಿದವನಿಗೆ ಕೂದಲು ಕ್ರಿಮಿ ಮೊದಲಾದುವುಗಳಿಂದುಂಟಾದ ದೋಷವು ಸಂಭವಿಸುವುದಿಲ್ಲ. ಆದುದರಿಂದ ಕುಶಹಸ್ತನಾಗಿ ಭುಂಜಿಸಬೇಕು.

೧೪೦–೧೪೧. ಹಲ್ಲುಗಳನ್ನು ಕಡಿಯದೆ ಮೌನವಾಗಿ ಊಟಮಾಡಿ ಕೈಯನ್ನು ತೊಳೆದುಕೊಳ್ಳುವುದಕ್ಕಿಂತ ಮುಂಚೆ ಬಲಗೈಯ ಹೆಬ್ಬೆಟ್ಟಿನ ಬುಡದಿಂದ "ಪಾಪಕ್ಕೆ ಆವಾಸಸ್ಥಾನವಾದ ರೌರವವೆಂಬ ನರಕಲೋಕವಾಸಿಗಳಾಗಿ ಎಂಜಲು ನೀರನ್ನು ಬಯಸುವವರಿಗೆ ಈ ಉದಕವು ಅಕ್ಷಯವಾಗಿ ಸೇರಲಿ" ಎಂದು ಎಂಜಲು ನೀರನ್ನು ಬಿಡಬೇಕು.

೧೪೨–೧೪೩. ಜಾಣನಾದ ವಿಪ್ರನು ಬಾಯಿತೊಳೆದುಕೊಂಡು ತಿರುಗಿ ಆಚಮನಮಾಡಿ ಪುರಾಣಶ್ರವಣ ಮೊದಲಾದವುಗಳಿಂದ ಉಳಿದ ಹಗಲನ್ನು ಕಳೆದು ಸಾಯಂಕಾಲ ಸಂಧ್ಯಾವಂದನೆಯನ್ನು ಮಾಡಬೇಕು. ಮನೆಯಲ್ಲಿ ಮಾಡಿದ ಸಂಧ್ಯಾವಂದನೆಯು ಸಾಮಾನ್ಯವಾಗುವುದು. ಇದಕ್ಕಿಂತ ಹಸುವಿನ ಕೊಟ್ಟಿಗೆಯಲ್ಲಿ ಮಾಡಿದ ಸಂಧ್ಯಾವಂದನೆಯು ಹತ್ತರಷ್ಟೂ, ನದಿಯಲ್ಲಿ ಮಾಡಿದ ಸಂಧ್ಯಾವಂದನೆಯು ಹತ್ತುಸಾವಿರದಷ್ಟೂ, ಶಿವಸನ್ನಿಧಿಯಲ್ಲಿ ಮಾಡಿದ ಸಂಧ್ಯಾ

CC-0. Jangamwadi Math Collection. Digitized by eGangotri

ಸದ್ಯಾಮಯುತಸಂಖ್ಯಾಸ್ಯಾದನಂತಾ ಶಿವಸನ್ನಿಧೌ ।
ಅಸೃತಂ ಮದ್ಯಗಂಧಂ ಚ ದಿವಾಮೈಥುನಮೇವ ಚ ।
ಪುನಾತಿ ವೃಷಲಸ್ಥಾನಂ ಸಂಧ್ಯಾ ಬಹಿರುಪಾಸಿತಾ ॥ ೧೪೪ ॥
ಉದ್ದೇಶತಃ ಸಮಾಖ್ಯಾತ ಏಷ ನಿತ್ಯತನೋ ವಿಧಿಃ ।
ಇತ್ಥಂ ಸಮಾಚರನ್ವಿಪ್ರೋ ನಾಽವಸೀದತಿ ಕರ್ಹಿಚಿತ್ ॥ ೧೪೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಸದಾಚಾರ ವರ್ಣನಂ"ನಾಮ ಪಂಚಮೋಽಧ್ಯಾಯಃ

---

ವಂದನೆಯು ಅನಂತವೂ ಆಗುವುದು. ಹೊರಗೆ ಮಾಡಿದ ಸಂಧ್ಯಾವಂದನೆಯು ಸುಳ್ಳನ್ನೂ, ಹೆಂಡದ ವಾಸನೆಯನ್ನೂ, ಹಗಲು ಮೈಥುನವನ್ನೂ, ಶೂದ್ರಸ್ಥಳವನ್ನೂ ಪವಿತ್ರಗೊಳಿಸುವುದು.

೧೪೫. ಈ ರೀತಿ ಕ್ರಮವಾಗಿ ಪ್ರತಿದಿನವೂ ದ್ವಿಜನು ಮಾಡತಕ್ಕ ವಿಧಿಯನ್ನು ಹೇಳಿದೆನು. ಹೀಗೆ ಮಾಡಿದ ಸದಾಚಾರಿಯಾದ ವಿಪ್ರನು ಯಾವಾಗಲೂ ಕೆಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯೆಯಲ್ಲಿ "ಸದಾಚಾರವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಸದಾಚಾರಲಕ್ಷಣವರ್ಣನಂ

ವ್ಯಾಸ ಉವಾಚ :—

ಉಪಕಾರಾಯ ಸಾಧೂನಾಂ ಗೃಹಸ್ಥಾಶ್ರಮವಾಸಿನಾಂ ।
ಯಥಾ ಚ ಕ್ರಿಯತೇ ಧರ್ಮೋ ಯಥಾವತ್ಕಥಯಾಮಿ ತೇ ॥ ೧ ॥
ವತ್ಸ ಗಾರ್ಹಸ್ಥ್ಯಮಾಸ್ಥಾಯ ನರಃ ಸರ್ವಮಿದಂ ಜಗತ್ ।
ಪುಷ್ಣಾತಿ ತೇನ ಲೋಕಾಂಶ್ಚ ಸ ಜಯತ್ಯಭಿವಾಂಛಿತಾನ್ ॥ ೨ ॥
ಪಿತರೋ ಮುನಯೋ ದೇವಾ ಭೂತಾನಿ ಮನುಜಾಸ್ತಥಾ ।
ಕ್ರಿಮಿಕೀಟಪತಂಗಾಶ್ಚ ವಯಾಂಸಿ ಪಿತರೋಽಸುರಾಃ ॥ ೩ ॥
ಗೃಹಸ್ಥಮುಪಜೀವಂತಿ ತತಸ್ತೃಪ್ತಿಂ ಪ್ರಯಾಂತಿ ಚ ।
ಮುಖಂ ವಾಽಸ್ಯ ನಿರೀಕ್ಷಂತೇ ಅಪೋ ನೋ ದಾಸ್ಯತೀತಿ ಚ ॥ ೪ ॥
ಸರ್ವಸ್ಯಾಧಾರಭೂತಾ ಯೇ ವತ್ಸಧೇನುಸ್ತ್ರಯೀಮಯೀ ।
ಅಸ್ಯಾಂ ಪ್ರತಿಷ್ಠಿತಂ ವಿಶ್ವಂ ವಿಶ್ವಹೇತುಶ್ಚ ಯಾ ಮತಾ ॥ ೫ ॥

---

## ಕನ್ನಡದ ಅನುವಾದ

### ಸದಾಚಾರಲಕ್ಷಣವರ್ಣನ

೧. ವ್ಯಾಸನು ಹೇಳುತ್ತಾನೆ:—ಗೃಹಸ್ಥಾಶ್ರಮಿಗಳಾದ ಸಾಧುಗಳ ಉಪಕಾರಕ್ಕೋಸ್ಕರ ಸದಾಚಾರಾನುಷ್ಠಾನಕ್ರಮವನ್ನು ಹೇಳುತ್ತೇನೆ.

೨. ಮಗು! ಮನುಷ್ಯನು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅದರಿಂದ ಈ ಪ್ರಪಂಚವನ್ನು ಪೋಷಿಸುತ್ತಾನೆ. ತನ್ನ ಇಷ್ಟಾರ್ಥಗಳನ್ನೂ ದೊರಕಿಸಿಕೊಳ್ಳುವನು.

೩–೪. ಪಿತೃಗಳು, ಮುನಿಗಳು, ದೇವತೆಗಳು, ಹಸು ಮೊದಲಾದ ಪ್ರಾಣಿಗಳು, ಮನುಷ್ಯರು, ಕೃಮಿಕೀಟಗಳು, ಪತಂಗಗಳು, ಪಕ್ಷಿಗಳು, ಅಸುರರು ಇವರೆಲ್ಲರೂ ಗೃಹಸ್ಥನನ್ನು ಆಶ್ರಯಿಸಿ ಜೀವಿಸುತ್ತಾರೆ, ಅವನಿಂದ ತೃಪ್ತರಾಗುತ್ತಾರೆ. ನಮಗೆ ನೀರನ್ನೆರೆಯುವನೆಂದು ಅವನ ಮುಖವನ್ನು ನೋಡುತ್ತಿರುತ್ತಾರೆ.

೫. ಮಗು! ವೇದತ್ರಯರೂಪವಾದ ಧೇನುವು ಸಮಸ್ತಕ್ಕೂ ಆಶ್ರಯಭೂತವಾದುದು. ಇದರಲ್ಲಿ ಸಮಸ್ತವೂ ನೆಲಸಿರುವುದು. ಇದು ಸಕಲಕ್ಕೂ ಕಾರಣವಾದುದು.

CC-0. Jangamwadi Math Collection. Digitized by eGangotri

ಋಕ್ಪೃಷ್ಠಾಽಸೌ ಯಜುಃ ಸಂಧ್ಯಾ ಸಾಮಕುಕ್ಷಿಪಯೋಧರಾ ।
ಇಷ್ಟಾಪೂರ್ತಿವಿಷಾಣಾ ಚ ಸಾಧುಸೂಕ್ತತನೂರುಹಾ ॥ ೬ ॥
ಶಾಂತಿಪುಷ್ಟಿಶಕೃನ್ಮೂತ್ರಾ ವರ್ಣಪಾದಪ್ರತಿಷ್ಠಿತಾ ।
ಉಪಜೀವ್ಯಮಾನಾ ಜಗತಾಂ ಪದಕ್ರಮಜಟಾಘನೈಃ ॥ ೭ ॥
ಸ್ವಾಹಾಕಾರಸ್ವಧಾಕಾರೌ ವಷಟ್ಕಾರಶ್ಚ ಪುತ್ರಕ ।
ಹಂತಕಾರಸ್ತಥೈವಾಽನ್ಯಸ್ತಸ್ಯಾಃ ಸ್ತನಚತುಷ್ಟಯಂ ॥ ೮ ॥
ಸ್ವಾಹಾಕಾರಸ್ತನಂ ದೇವಾಃ ಪಿತರಶ್ಚ ಸ್ವಧಾಮಯಂ ।
ಮುನಯಶ್ಚ ವಷಟ್ಕಾರಂ ದೇವಭೂತಸುರೇಶ್ವರಾಃ ॥ ೯ ॥
ಹಂತಕಾರಂ ಮನುಷ್ಯಾಶ್ಚ ಪಿಬಂತಿ ಸತತಂ ಸ್ತನಂ ।
ಏವಮಧ್ಯಾಪಯೇದೇವ ವೇದಾನಾಂ ಪ್ರತ್ಯಹಂ ತ್ರಯೀಂ ॥ ೧೦ ॥
ತೇಷಾಮುಚ್ಛೇದಕರ್ತಾ ಯಃ ಪುರುಷೋಽನಂತ ಪಾಪಕೃತ್ ।
ಸ ತಮಸ್ಯಂಧತಾಮಿಸ್ರೇ ನರಕೇ ಹಿ ನಿಮಜ್ಜತಿ ॥ ೧೧ ॥
ಯಸ್ತ್ವೇನಾಂ ಮಾನವೋ ಧೇನುಂ ಸ್ವೈರ್ವತ್ಸೈರಮರಾದಿಭಿಃ ।
ಪೂಜಯತ್ಯುಚಿತೇ ಕಾಲೇ ಸ ಸ್ವರ್ಗಾಯೋಪಪದ್ಯತೇ ॥ ೧೨ ॥

---

೬—೮. ಈ ಹಸುವಿಗೆ ಋಗ್ವೇದವು ಬೆನ್ನು. ಯಜುರ್ವೇದ ಸಾಮವೇದಗಳು ಹೊಟ್ಟೆ ಮತ್ತು ಸ್ತನಗಳು. ಯಜ್ಞಾದಿಗಳೂ, ಛತ್ರ ಬಾವಿ ಮುಂತಾದ ಧರ್ಮಕಾರ್ಯಗಳೂ ಕೊಂಬುಗಳು. ಸೂಕ್ತಗಳು ರೋಮಗಳು. ಶಾಂತಿಪುಷ್ಟಿ ಕರ್ಮಗಳು ಗೋಮಯ ಗೋಮೂತ್ರಗಳು. ಅಕ್ಷರಗಳು ಕಾಲುಗಳು. ಈ ಹಸುವು ಪದ, ಕ್ರಮ, ಜಟೆ, ಘನ ಇವುಗಳಿಂದ ಪ್ರಪಂಚವನ್ನು ಕಾಪಾಡುವುದು. ಸ್ವಾಹಾಕಾರ, ಸ್ವಧಾಕಾರ, ವಷಟ್ಕಾರ, ಹಂತಕಾರಗಳು ನಾಲ್ಕು ಸ್ತನಗಳು.

೯—೧೦. ಈ ಧೇನುವಿನ ಸ್ವಾಹಾಕಾರಸ್ತನವನ್ನು ದೇವತೆಗಳೂ, ಸ್ವಧಾಕಾರ ಸ್ತನವನ್ನು ಪಿತೃಗಳೂ, ವಷಟ್ಕಾರಸ್ತನವನ್ನು ಮುನಿಗಳೂ, ಹಂತಕಾರಸ್ತನವನ್ನು ದೇವತೆಗಳೂ, ಮನುಷ್ಯರೂ, ಭೂತಗಳೂ ಯಾವಾಗಲೂ ಕುಡಿಯುತ್ತಾರೆ. ಹೀಗೆಯೇ ಅವನ್ನು ಸಂಧಾನಮಾಡಿಕೊಂಡು ಪ್ರತಿದಿನವೂ ಈ ವೇದ ತ್ರಯಗಳನ್ನು ಅಧ್ಯಯನಮಾಡಬೇಕು.

೧೧. ಈ ವೇದಗಳನ್ನು ಹಾಳುಮಾಡುವ ಮನುಷ್ಯನು ಅತ್ಯಂತ ಪಾಪವನ್ನು ಮಾಡಿದವನಂತೆ ಕಾರ್ಗತ್ತಲುಳ್ಳ ನರಕದಲ್ಲಿ ಮುಳುಗುವನು.

೧೨. ಯಾವ ಮಾನವನು ಉಚಿತಸಮಯದಲ್ಲಿ ದೇವಲೋಕದ ಕರುಗಳಾದ ದೇವತೆಗಳೇ ಮೊದಲಾದವರೊಡನೆ ಪೂಜಿಸುವನೊ, ಅವನು ಸ್ವರ್ಗವನ್ನು ಪಡೆಯಲು ಯೋಗ್ಯನಾಗುವನು.

CC-0. Jangamwadi Math Collection. Digitized by eGangotri

ತಸ್ಮಾತ್ಪುತ್ರ ಮನುಷ್ಯೇಣ ದೇವರ್ಷಿಪಿತೃಮಾನವಾಃ ।
ಭೂತಾನಿ ಚಾನುದಿವಸಂ ಪೋಷ್ಯಾಣಿ ಸ್ವತನುರ್ಯಥಾ ॥ ೧೩ ॥
ತಸ್ಮಾತ್ಸ್ನಾತಃ ಶುಚಿರ್ಭೂತ್ವಾ ದೇವರ್ಷಿಪಿತೃತರ್ಪಣಂ ।
ಯಜ್ಞಸ್ಯಾಂತೇ ತಥೈವಾದ್ಭಿಃ ಕಾಲೇ ಕುರ್ಯಾತ್ಸಮಾಹಿತಃ ॥ ೧೪ ॥
ಸುಮನೋಗಂಧಪುಷ್ಪೈಶ್ಚ ದೇವಾನಭ್ಯರ್ಚ್ಯ ಮಾನವಃ ।
ತತೋಽಗ್ನೇಸ್ತರ್ಪಣಂ ಕುರ್ಯಾದ್ದದ್ಯಾಚ್ಚಾಪಿ ಬಲೀಂಸ್ತಥಾ ॥ ೧೫ ॥
ನಕ್ತಂಚರೇಭ್ಯೋ ಭೂತೇಭ್ಯೋ ಬಲಿಮಾಕಾಶತೋ ಹರೇತ್ ।
ಪಿತೄಣಾಂ ನಿರ್ವಪೇತ್ತದ್ವದ್ದಕ್ಷಿಣಾಭಿಮುಖಸ್ತತಃ ॥ ೧೬ ॥
ಗೃಹಸ್ಥಸ್ತತ್ಪರೋ ಭೂತ್ವಾ ಸುಸಮಾಹಿತಮಾನಸಃ ।
ತತಸ್ತೋಯಮುಪಾದಾಯ ತೇಷ್ವೇವಾರ್ಪಣಸತ್ಕ್ರಿಯಾಂ ॥ ೧೭ ॥
ಸ್ಥಾನೇಷು ನಿಕ್ಷಿಪೇತ್ಪ್ರಾಜ್ಞೋನಾಮ್ನಾತೂದ್ದಿಶ್ಯ ದೇವತಾಃ ।
ಏವಂ ಬಲಿಂ ಗೃಹೇ ದತ್ವಾ ಗೃಹೇ ಗೃಹಪತಿಃ ಶುಚಿಃ ॥ ೧೮ ॥
ಆಚಮ್ಯಚ ತತಃ ಕುರ್ಯಾತ್ಪ್ರಾಜ್ಞೋ ದ್ವಾರಾವಲೋಕನಂ ।
ಮುಹೂರ್ತಸ್ಯಾಷ್ಟಮಂ ಭಾಗಮುದೀಕ್ಷೇತಾತಿಥಿಂ ತತಃ ॥ ೧೯ ॥
ಅತಿಥಿಂ ತತ್ರ ಸಂಪ್ರಾಪ್ತಮರ್ಘ್ಯಪಾದ್ಯೋದಕೇನ ಚ ।
ಬುಭುಕ್ಷುಮಾಗತಂ ಶ್ರಾಂತಂ ಯಾಚಮಾನಮಕಿಂಚನಂ ॥ ೨೦ ॥

---

೧೩–೧೪. ಮಗು! ಆದುದರಿಂದ ಮನುಷ್ಯನು ಯಾವಾಗಲೂ ದೇವತೆಗಳನ್ನೂ, ಋಷಿಗಳನ್ನೂ, ಪಿತೃಗಳನ್ನೂ, ಮನುಷ್ಯರನ್ನೂ, ಇತರ ಪ್ರಾಣಿಗಳನ್ನೂ ತನ್ನ ದೇಹದಂತೆ ಕಾಪಾಡಬೇಕು. ಸ್ನಾನಮಾಡಿ ಶುದ್ಧನಾಗಿಯೂ, ಸಾವಧಾನ ಮನಸ್ಸುಳವನಾಗಿಯೂ, ಬ್ರಹ್ಮಯಜ್ಞದ ಕೊನೆಯಲ್ಲಿ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ ತರ್ಪಣಕೊಡಬೇಕು.

೧೫. ಮಾನವನು ಹೂವು ಗಂಧಗಳಿಂದ ದೇವತೆಗಳನ್ನು ಆರಾಧಿಸಿ ಅಗ್ನಿ ತರ್ಪಣಮಾಡಿ ಬಲಿಯನ್ನು ಕೊಡಬೇಕು.

೧೬. ಬಳಿಕ ರಾಕ್ಷಸರಿಗೂ, ಭೂತಗಳಿಗೂ ಆಕಾಶದಲ್ಲಿ ಬಲಿಯನ್ನು ಕೊಟ್ಟು ದಕ್ಷಿಣಾಭಿಮುಖನಾಗಿ ಪಿತೃತರ್ಪಣಮಾಡಬೇಕು.

೧೭–೧೯. ಗೃಹಸ್ಥನು ಸಾವಧಾನ ಮನಸ್ಸಿನಿಂದ ಪಿತೃಗಳಲ್ಲಿಯೇ ಆಸಕ್ತನಾಗಿ ನೀರಿನಿಂದ ತರ್ಪಣಮಾಡಬೇಕು. ಮನೆಯಲ್ಲಿ ದೇವತೆಗಳನ್ನುದ್ದೇಶಿಸಿ ಆಯಾ ಸ್ಥಾನಗಳಲ್ಲಿ ಬಲಿಯನ್ನಿತ್ತು ಆಚಮನಮಾಡಿ ಬಾಗಿಲಿನಲ್ಲಿ ಆರು ನಿಮಿಷಗಳ ಕಾಲ ಅತಿಥಿಯ ಆಗಮನವನ್ನು ನಿರೀಕ್ಷಿಸಬೇಕು.

೨೦–೨೨. ಭೋಜನಕ್ಕಾಗಿ ಬಂದವನೂ, ಬಳಲಿದವನೂ, ಬೇಡುತ್ತಿರುವವನೂ, ಬಡವನೂ ಆಗಿರುವ ಬ್ರಾಹ್ಮಣನನ್ನು ಅತಿಥಿಯೆಂದು ಹೇಳುವರು.

CC-0. Jangamwadi Math Collection. Digitized by eGangotri

ಬ್ರಾಹ್ಮಣಂ ಪ್ರಾಹುರತಿಥಿಂ ಸಂಪೂಜ್ಯಂ ಶಕ್ತಿತೋ ಬುಧೈಃ ।
ನ ಪೃಚ್ಛೇತ್ತತ್ರಾಚರಣಂ ಸ್ವಾಧ್ಯಾಯಂ ಚಾಽಪಿ ಪಂಡಿತಃ ॥ ೨೧ ॥
ಶೋಭನಾಽಶೋಭನಾಕಾರಂ ತಂ ಮನ್ಯೇತ ಪ್ರಜಾಪತಿಂ ।
ಅನಿತ್ಯಂ ಹಿ ಸ್ಥಿತೋ ಯಸ್ಮಾತ್ತಸ್ಮಾದತಿಥಿರುಚ್ಯತೇ ॥ ೨೨ ॥
ತಸ್ಮೈ ದತ್ವಾ ತು ಯೋ ಭುಂಕ್ತೇ ಸ ತು ಭುಂಕ್ತೇಽಮೃತಂ ನರಃ ।
ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿ ನಿವರ್ತತೇ ॥ ೨೩ ॥
ಸ ದತ್ವಾ ದುಷ್ಕೃತಂ ತಸ್ಮೈ ಪುಣ್ಯಮಾದಾಯ ಗಚ್ಛತಿ ।
ಅಪಿ ವಾ ಶಾಕದಾನೇನ ಯದ್ವಾ ತೋಯಪ್ರದಾನತಃ ।
ಪೂಜಯೇತ್ತಂ ನರಃ ಶಕ್ತ್ಯಾ ತೇನೈವಾಽತೋ ವಿಮುಚ್ಯತೇ ॥ ೨೪ ॥

ಯುಧಿಷ್ಠಿರ ಉವಾಚ :—

ವಿವಾಹಾ ಬ್ರಾಹ್ಮದೈವಾರ್ಷಾಃ ಪ್ರಾಜಾಪತ್ಯಾಽಸುರೌ ತಥಾ ।
ಗಾಂಧರ್ವೋ ರಾಕ್ಷಸಶ್ಚಾಽಪಿ ಪೈಶಾಚೋಽಷ್ಟಮ ಉಚ್ಯತೇ ॥ ೨೫ ॥
ಏತೇಷಾಂ ಚ ವಿಧಿಂ ಬ್ರೂಹಿ ತಥಾ ಕಾರ್ಯಂ ಚ ತತ್ವತಃ ।
ಗೃಹಸ್ಥಾನಾಂ ತಥಾ ಧರ್ಮಾನ್ಬ್ರೂಹಿ ಮೇ ತ್ವಂ ವಿಶೇಷತಃ ॥ ೨೬ ॥

ಪರಾಶರ ಉವಾಚ :—

ಸ ಬ್ರಾಹ್ಮೋ ವರಮಾಹೂಯ ಯತ್ರ ಕನ್ಯಾ ಸ್ವಲಂಕೃತಾ ।
ದೀಯತೇ ತತ್ಸುತಃ ಪೂಯಾತ್ಪುರುಷಾನೇಕವಿಂಶತಿಂ ॥ ೨೭ ॥

---

ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಶಕ್ತ್ಯನುಸಾರ ಪೂಜಿಸಿ ಅವನ ಆಚಾರ ಮತ್ತು ವೇದಾಧ್ಯಯನ ವಿಷಯವನ್ನು ಕೇಳದೆ ಸುರೂಪಿ ಅಥವಾ ಕುರೂಪಿಯಾಗಿದ್ದಾಗ್ಗೂ ಅವನನ್ನು ಬ್ರಹ್ಮನೆಂದು ತಿಳಿಯಬೇಕು. ಅವನು ಸ್ಥಿರವಾಗಿ ನೆಲೆಸುವವನಲ್ಲದುದರಿಂದ ಅತಿಥಿಯೆನಿಸಿಕೊಳ್ಳುವನು.

೨೩–೨೪. ಆ ಅತಿಥಿಗೆ ಅನ್ನವನ್ನು ನೀಡಿ ತರುವಾಯ ಭುಂಜಿಸುವ ಮನುಷ್ಯನು ಅಮೃತವನ್ನು ಸವಿಯುವನು. ಯಾವನ ಮನೆಯಿಂದ ಅತಿಥಿಯು ತನ್ನ ಅಭೀಷ್ಟವನ್ನು ಪಡೆಯದೆ ಹಿಂದಿರುಗುವನೋ ಅವನು ಭಗ್ನಾಶನಾಗಿ ತೆರಳುವಾಗ ತನ್ನ ಪಾಪವನ್ನು ಗೃಹಸ್ಥನಿಗೆ ಕೊಟ್ಟು ಅವನ ಪುಣ್ಯವನ್ನು ತಾನು ಒಯ್ಯುವನು. ಆದ್ದರಿಂದ ಮನುಷ್ಯನು ತನ್ನ ಶಕ್ತ್ಯನುಸಾರ ತರಕಾರಿಯನ್ನಾಗಲಿ, ನೀರನ್ನಾಗಲಿ ಅವನಿಗಿತ್ತು ಪೂಜಿಸಿದರೆ ಆ ಅನಿಷ್ಟದಿಂದ ಪಾರಾಗುವನು.

೨೫–೨೬. ಯುಧಿಷ್ಠಿರನು ಕೇಳುತ್ತಾನೆ:—ಎಲೈ ಮುನಿಯೆ! ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚವೆಂದು ಎಂಟು ವಿಧವಾದ ವಿವಾಹಗಳು ಇರುವುವಷ್ಟೆ. ಇವುಗಳ ವಿಧಿಯನ್ನೂ, ಮಾಡತಕ್ಕ ಕ್ರಮವನ್ನೂ, ಗೃಹಸ್ಥರ ಧರ್ಮಗಳನ್ನೂ ವಿಶೇಷವಾಗಿ ತಿಳಿಸು.

೨೭. ವ್ಯಾಸನು ಹೇಳುತ್ತಾನೆ:— ವರನನ್ನು ಮನೆಗೆ ಕರೆಯಿಸಿ ಅವನಿಗೆ

CC-0. Jangamwadi Math Collection. Digitized by eGangotri

ಯಜ್ಞಸ್ಥಾಯರ್ತ್ವಿಜೇ ದೈವಸ್ತಜ್ಜಃ ಪಾತಿ ಚತುರ್ದಶ ।
ವರಾದಾದಾಯ ಗೋದ್ವಂದ್ವಮಾರ್ಷಸ್ತಜ್ಜಃ ಪುನಾತಿ ಷಟ್ ॥ ೨೮ ॥
ಸಹೋಭೌ ಚರತಾಂ ಧರ್ಮಂ ಪ್ರಾಜಾಪತ್ಯಃ ಸ ಈರಿತಃ ।
ವರವಧ್ವೋಃ ಸ್ವೇಚ್ಛಯಾ ಚ ಗಾಂಧರ್ವೋಽನ್ಯೋನ್ಯಮೈತ್ರತಃ ॥ ೨೯ ॥
ಪ್ರಸಹ್ಯ ಕನ್ಯಾಹರಣಾದ್ರಾಕ್ಷಸೋ ನಿಂದಿತಃ ಸತಾಂ ।
ಛಲೇನ ಕನ್ಯಾಹರಣಾತ್ಪೈಶಾಚೋ ಗರ್ಹಿತೋಽಷ್ಟಮಃ ।
ಪ್ರಾಯಃ ಕ್ಷತ್ರವಿಶೋರುಕ್ತಾ ಗಾಂಧರ್ವಾಽಸುರರಾಕ್ಷಸಾಃ ॥ ೩೦ ॥
ಅಷ್ಟಮಸ್ತ್ವೇಷ ಪಾಪಿಷ್ಠಃ ಪಾಪಿಷ್ಠಾನಾಂ ಚ ಸಂಭವಃ ।
ಸವರ್ಣಯಾ ಕರೋ ಗ್ರಾಹ್ಯೋ ಧಾರ್ಯಃ ಕ್ಷತ್ರಿಯಯಾ ಶರಃ ॥ ೩೧ ॥
ಪ್ರತೋದೋ ವೈಶ್ಯಯಾ ಧಾರ್ಯೋ ವಾಸೋಂತಃ ಶೂದ್ರಯಾ ತಥಾ ।
ಅಸವರ್ಣಾಸ್ವೇಷವಿಧಿಃ ಸ್ಮೃತೌ ದೃಷ್ಟಶ್ಚ ವೇದನೇ ॥ ೩೨ ॥

---

ಒಡವೆ ಮೊದಲಾದವುಗಳಿಂದ ಭೂಷಿತಳಾದ ಕನ್ಯೆಯನ್ನು ಮದುವೆಮಾಡಿ ಕೊಟ್ಟರೆ ಅದು ಬ್ರಾಹ್ಮವಿವಾಹವು. ಹೀಗೆ ವಿವಾಹಿತಳಾದ ಕನ್ಯೆಯಲ್ಲಿ ಜನಿಸಿದ ಮಗನು ಇಪ್ಪತ್ತೊಂದು ಜನ ಪೂರ್ವಜರನ್ನು ಪವಿತ್ರಗೊಳಿಸುವನು.

೨೮. ಯಜ್ಞಮಾಡಿಸಿದ ಋತ್ವಿಜನಿಗೆ ಕನ್ಯೆಯನ್ನು ಕೊಟ್ಟು ವಿವಾಹ ಮಾಡಿದರೆ ಅದು ದೈವವಿವಾಹವೆನ್ನಿಸುವುದು. ಆ ಕನ್ಯೆಯಲ್ಲಿ ಜನಿಸಿದ ಪುತ್ರನು ಹದಿನಾಲ್ಕು ಮಂದಿ ಪೂರ್ವಪುರುಷನ್ನು ಪೊರೆಯುವನು. ವರನಿಂದ ಎರಡು ಧೇನುಗಳನ್ನು ಪಡೆದು ಮಾಡುವ ವಿವಾಹವು ಆರ್ಷವೆನಿಸುವುದು. ಅಂತಹ ವಿವಾಹದಲ್ಲಿ ಊಢಳಾದ ಕನ್ಯೆಯಲ್ಲಿ ಹುಟ್ಟಿದ ತನಯನು ಆರು ಜನ ಪೂರ್ವಜರನ್ನು ಪವಿತ್ರಗೊಳಿಸುವನು.

೨೯. ದಂಪತಿಗಳಿಬ್ಬರೂ ಸೇರಿ ಧರ್ಮವನ್ನಾಚರಿಸಲೆಂದು ಹೇಳಿ ಮಾಡುವ ಮದುವೆಯು ಪ್ರಾಜಾಪತ್ಯವೆಂದೂ, ಪರಸ್ಪರ ಸ್ನೇಹದಿಂದ ವರವಧುಗಳು ತಮ್ಮ ಇಷ್ಟದಂತೆ ಮಾಡಿಕೊಳ್ಳುವ ವಿವಾಹಕ್ಕೆ ಗಾಂಧರ್ವವೆಂದೂ ಹೆಸರು. ಬಲಾತ್ಕಾರವಾಗಿ ಕನ್ಯೆಯನ್ನು ಅಪಹರಿಸಿ ಮದುವೆಮಾಡಿಕೊಂಡರೆ ಅದು ರಾಕ್ಷಸ ವಿವಾಹವೆನ್ನಿಸುವುದು. ಅದು ಸಜ್ಜನರಿಗೆ ನಿಂದಿತವಾದುದು.

೩೦. ಮೋಸದಿಂದ ಕನ್ಯೆಯನ್ನಪಹರಿಸಿ ವಿವಾಹವಾದರೆ ಪೈಶಾಚವೆಂಬ ನಿಂದ್ಯವಾದ ಎಂಟನೆ ವಿವಾಹವಾಗುವುದು. ಸಾಮಾನ್ಯವಾಗಿ ಗಾಂಧರ್ವ, ಆಸುರ, ರಾಕ್ಷಸ ವಿವಾಹಗಳು ಕ್ಷತ್ರಿಯ ಮತ್ತು ವೈಶ್ಯರಿಗೆ ವಿಹಿತವಾಗಿವೆ.

೩೧–೩೨. ಈ ಎಂಟನೆಯ ಪೈಶಾಚ ವಿವಾಹವು ಅತ್ಯಂತ ಪಾಪಿಷ್ಠವಾದುದು. ಈ ವಿವಾಹದಿಂದ ಊಢಳಾದ ಕನ್ಯೆಯಲ್ಲಿ ಪಾಪಿಷ್ಠ ಪ್ರಜೆಗಳು ಜನಿಸುವರು. ಬ್ರಾಹ್ಮಣ ಕನ್ಯೆಯು ವರನ ಕೈಯನ್ನೂ, ಕ್ಷತ್ರಿಯಜಾತಿಯ ಕನ್ಯೆಯು ವಿವಾಹ ಮಾಡಿಕೊಳ್ಳುವಾಗ ಬಾಣವನ್ನೂ, ವೈಶ್ಯಕನ್ಯೆಯು ಚಾವುಟಿಯನ್ನೂ, ಶೂದ್ರ

CC-0. Jangamwadi Math Collection. Digitized by eGangotri

ಸವರ್ಣಾಭಿಸ್ತು ಸರ್ವಾಭಿಃ ಪಾಣಿಗ್ರಾಹ್ಯಸ್ತ್ವಯಂ ವಿಧಿಃ ।
ಧರ್ಮ್ಯೇ ವಿವಾಹೇ ಜಾಯಂತೇ ಧರ್ಮ್ಯಾಃ ಪುತ್ರಾಃ ಶತಾಯುಷಃ ॥ ೩೩॥
ಅಧರ್ಮ್ಯಾದ್ಧರ್ಮರಹಿತಾ ಮಂದಭಾಗ್ಯಧನಾಯುಷಃ ।
ಕೃತಕಾಲಾಽಭಿಗಮನೇ ಧರ್ಮೋಽಯಂ ಗೃಹಿಣಃ ಪರಃ ॥ ೩೪ ॥
ಸ್ತ್ರೀಣಾಂ ವರಮನುಸ್ಮೃತ್ಯ ಯಥಾಕಾಮ್ಯಥವಾ ಭವೇತ್ ।
ದಿವಾಽಭಿಗಮನಂ ಪುಂಸಾಮನಾಯುಷ್ಯಂ ಪರಂ ಮತಂ ॥ ೩೫ ॥
ಶ್ರಾದ್ಧಾಽಹಃ ಸರ್ವಪರ್ವಾಣಿ ನ ಗಂತವ್ಯಾನಿ ಧೀಮತಾ ।
ತತ್ರ ಗಚ್ಛನ್ಸ್ತ್ರಿಯಂ ಮೋಹಾದ್ಧರ್ಮಾತ್ಪ್ರಚ್ಯವತೇ ಪರಾತ್ ॥ ೩೬ ॥
ಋತುಕಾಲಾಽಭಿಗಾಮೀ ಯಃ ಸ್ವದಾರನಿರತಶ್ಚ ಯಃ ।
ಸ ಸದಾ ಬ್ರಹ್ಮಚಾರೀ ಹಿ ವಿಜ್ಞೇಯಃ ಸ ಗೃಹಾಶ್ರಮೀ ॥ ೩೭ ॥
ಆರ್ಷೇ ವಿವಾಹೇ ಗೋದ್ವಂದ್ವಂ ಯದುಕ್ತಂ ತತ್ರ ಶಸ್ಯತೇ ।
ಶುಲ್ಕಮಣ್ವಪಿ ಕನ್ಯಾಯಾಃ ಕನ್ಯಾವಿಕ್ರಯಪಾಪಕೃತ್ ॥ ೩೮ ॥
ಅಪತ್ಯವಿಕ್ರಯಾತ್ಕಲ್ಪಂ ವಸೇದ್ವಿಟ್ಕೃಮಿಭೋಜನೇ ।
ಅತೋ ನಾಽಣ್ವಪಿ ಕನ್ಯಾಯಾ ಉಪಜೀವ್ಯಂ ನರೈರ್ಧನಂ ॥ ೩೯ ॥

---

ಕನ್ಯೆಯು ವರನ ಬಟ್ಟೆಯ ಕೊನೆಯನ್ನೂ ಹಿಡಿದುಕೊಳ್ಳಬೇಕು. ಅಸಜಾತೀಯ ವಿವಾಹದಲ್ಲಿ ಈ ಕ್ರಮವು ಸ್ಮೃತಿ ಮತ್ತು ವೇದಗಳಲ್ಲಿ ಕಂಡುಬರುತ್ತದೆ.

೩೩. ಸವರ್ಣಸ್ತ್ರೀವಿವಾಹದಲ್ಲಿ ಇದು ವಿಹಿತವಾಗಿದೆ. ಧರ್ಮವಿಹಿತ ವಿವಾಹದಲ್ಲಿ ಧರ್ಮಿಷ್ಠರೂ, ನೂರು ವರ್ಷ ಆಯುಸ್ಸುಳ್ಳವರೂ ಆಗಿರುವ ಪುತ್ರರು ಜನಿಸುವರು.

೩೪–೩೫. ಅಧರ್ಮ ವಿವಾಹದಲ್ಲಿ ಧರ್ಮಬಾಹ್ಯರೂ, ಅಲ್ಪಭಾಗ್ಯರೂ, ಬಡವರೂ, ಅಲ್ಪಾಯುಷ್ಯರೂ ಆದ ಪುತ್ರರು ಹುಟ್ಟುವರು. ಗೃಹಸ್ಥರು ವಿಹಿತ ಕಾಲದಲ್ಲಿ ಸ್ತ್ರೀಯನ್ನು ಸೇರಬೇಕು. ಅಥವಾ ಸ್ತ್ರೀಯರ ಇಷ್ಟವನ್ನರಿತು ಅವರ ಅಭಿಲಾಷೆಯಂತೆ ನಡೆಯಬಹುದು. ಹಗಲು ಪುರುಷನು ಸ್ತ್ರೀಸಂಗವನ್ನು ಮಾಡಿದರೆ ತನ್ನ ಆಯುಸ್ಸನ್ನು ಕಳೆದುಕೊಳ್ಳುವನು.

೩೬. ಜಾಣನಾದ ಗೃಹಸ್ಥನು ಶ್ರಾದ್ಧದಿನಗಳಲ್ಲಿಯೂ, ಅಮಾವಾಸ್ಯೆ ಮೊದಲಾದ ಎಲ್ಲ ಪರ್ವಕಾಲಗಳಲ್ಲಿಯೂ ಸ್ತ್ರೀಸಂಗಮಾಡಕೂಡದು. ಮೋಹ ದಿಂದ ಅಂತಹ ದಿವಸಗಳಲ್ಲಿ ಸ್ತ್ರೀಸಂಗಮಾಡಿದವನು ಧರ್ಮಭ್ರಷ್ಟನಾಗುವನು.

೩೭. ಋತುಕಾಲಗಳಲ್ಲಿ ಮಾತ್ರ ತನ್ನ ಸತಿಯ ಸಂಗವನ್ನು ಮಾಡುವ ಮಾನವನು ಯಾವಾಗಲೂ ಗೃಹಸ್ಥನಾದರೂ, ಬ್ರಹ್ಮಚಾರಿಯೂ ಆಗಿರುವನು.

೩೮. ಆರ್ಷ ವಿವಾಹದಲ್ಲಿ ಎರಡು ಹಸುಗಳನ್ನಲ್ಲದೆ ಕನ್ಯಾವಿಕ್ರಯ ಪಾಪ ವನ್ನೆಸಗುವ ಸ್ವಲ್ಪ ಕನ್ಯಾಶುಲ್ಕವನ್ನೂ ತೆಗೆದುಕೊಳ್ಳಕೂಡದು.

೩೯. ಕನ್ಯೆಯ ವಿಕ್ರಯಮಾಡುವುದರಿಂದ ಮಾನವನು ಕಲ್ಪಾಂತ್ಯದವರೆಗೆ

CC-0. Jangamwadi Math Collection. Digitized by eGangotri

ತತ್ರ ತುಷ್ಟಾ ಮಹಾಲಕ್ಷ್ಮೀರ್ನಿವಸೇದ್ದಾನವಾರಿಣಾ ।
ವಾಣಿಜ್ಯಂ ನೀಚಸೇವಾ ಚ ವೇದಾಽನಧ್ಯಯನಂ ತಥಾ ॥ ೪೦ ॥
ಕುವಿವಾಹಃ ಕ್ರಿಯಾಲೋಪಃ ಕುಲೇ ಪತನಹೇತವಃ ।
ಕುರ್ಯಾದ್ವೈವಾಹಿಕೇ ಚಾಽಗ್ನೌ ಗೃಹ್ಯಕರ್ಮಾಽನ್ವಹಂ ಗೃಹೀ ॥ ೪೧ ॥
ಪಂಚಯಜ್ಞಕ್ರಿಯಾಂ ಚಾಽಪಿ ಪಕ್ತಿಂ ದೈನಂದಿನೀಮಪಿ ।
ಗೃಹಸ್ಥಾಶ್ರಮಿಣಃ ಪಂಚಸೂನಾ ಕರ್ಮ ದಿನೇ ದಿನೇ ॥ ೪೨ ॥
ಕುಂಡನೀ ಪೇಷಿಣೀ ಚುಲ್ಲೀ ಹ್ಯುದಕುಂಭೀ ತು ಮಾರ್ಜನೀ ।
ತಾಸಾಂ ಚ ಪಂಚಸೂನಾನಾಂ ನಿರಾಕರಣಹೇತವಃ ।
ಕ್ರತವಃ ಪಂಚ ನಿರ್ದಿಷ್ಟಾ ಗೃಹಿಶ್ರೇಯೋಽಭಿವರ್ಧನಾಃ ॥ ೪೩ ॥
ಪಠನಂ ಬ್ರಹ್ಮಯಜ್ಞಃ ಸ್ಯಾತ್ತರ್ಪಣಂ ಚ ಪಿತೃಕ್ರತುಃ ।
ಹೋಮೋ ದೈವೋ ಬಲಿರ್ಭೌತ ಆತಿಥ್ಯಂ ನೃಕ್ರತುಃ ಕ್ರಮಾತ್ ॥ ೪೪ ॥
ವೈಶ್ವದೇವಾಂತರೇ ಪ್ರಾಪ್ತಃ ಸೂರ್ಯೋಢೋವಾಽತಿಥಿಃ ಸ್ಮೃತಃ ।
ಅತಿಥೇರಾದಿತೋಽಪ್ಯೇತೇ ಭೋಜ್ಯಾ ನಾಽತ್ರ ವಿಚಾರಣಾ ॥ ೪೫ ॥

---

ಅಮೇಧ್ಯ ಮತ್ತು ಕೃಮಿಭೂಯಿಷ್ಠವಾದ ನರಕದಲ್ಲಿ ವಾಸಿಸುವನು. ಆದ್ದರಿಂದ ಗೃಹಸ್ಥನು ಸ್ವಲ್ಪವಾದರೂ ಕನ್ಯೆಯ ಹಣದಿಂದ ಜೀವಿಸಬಾರದು.

೪೦–೪೩. ಆ ವಿವಾಹದಲ್ಲಿ ಸಂತುಷ್ಟಳಾದ ಮಹಾಲಕ್ಷ್ಮಿಯು ದಾನೋದಕದೊಡನೆ ವಾಸಿಸುವಳು. ವ್ಯಾಪಾರ, ನೀಚಜನರ ಸೇವೆ, ವೇದಗಳನ್ನು ಓದದಿರುವುದು, ನಿಂದ್ಯವಾದ ಮದುವೆ, ವಿಹಿತಕರ್ಮಗಳನ್ನು ಮಾಡದಿರುವುದು ಇವುಗಳು ವಂಶಭ್ರಷ್ಟನಾಗಲು ಕಾರಣಗಳಾಗುವುವು. ಗೃಹಸ್ಥನು ಪ್ರತಿದಿನವೂ ವಿವಾಹಾಗ್ನಿಯಲ್ಲಿ ಗೃಹ್ಯಕರ್ಮಗಳನ್ನೂ, ಪಂಚಯಜ್ಞಗಳನ್ನೂ, ಪ್ರತಿದಿನದ ಅಡುಗೆಯನ್ನೂ ಮಾಡಬೇಕು. ಗೃಹಸ್ಥಾಶ್ರಮಿಯು ಪ್ರತಿದಿನವೂ ಕುಂಡನೀ, ಪೇಷಣೀ, ಚುಲ್ಲೀ, ಉದಕುಂಭೀ, ಮಾರ್ಜನೀ ಎಂಬ ಐದು ಸೂನಾಕರ್ಮಗಳನ್ನು ಮಾಡಬೇಕಾಗುವುದು. ಆ ಪಂಚಸೂನಾ ದೋಷಗಳ ನಿವಾರಣೆಗಾಗಿ ಅವನ ಶ್ರೇಯಸ್ಸಿನ ಅಭಿವೃದ್ಧಿಗೆ ಕಾರಣಗಳಾದ ಈ ಪಂಚಯಜ್ಞಗಳು ವಿಹಿತವಾಗಿವೆ.

೪೪. ವೇದಾಧ್ಯಯನವು ಬ್ರಹ್ಮಯಜ್ಞವು. ಪಿತೃತರ್ಪಣವು ಪಿತೃಯಜ್ಞವು. ವೈಶ್ವದೇವಹೋಮವು ದೈವಯಜ್ಞವು. ಭೂತಬಲಿಯು ಭೂತಯಜ್ಞವು. ಅತಿಥಿಪೂಜೆಯು ಮನುಷ್ಯ ಯಜ್ಞವು.

೪೫. ವೈಶ್ವದೇವ ಹೋಮಮಾಡುವಾಗ ನೂತನ ವಧುವಿನೊಡನೆ ಬಂದವನೂ ಅತಿಥಿಯೆನಿಸಿಕೊಳ್ಳುವನು. ಅತಿಥಿಗಿಂತ ಮೊದಲೇ ಇಂತಹವರಿಗೆ ಭೋಜನಮಾಡಿಸಬಹುದು. ಈ ವಿಷಯದಲ್ಲಿ ವಿಚಾರವಿಲ್ಲ.

CC-0. Jangamwadi Math Collection. Digitized by eGangotri

ಪಿತೃದೇವಮನುಷ್ಯೇಭ್ಯೋ ದತ್ವಾಽಶ್ನಾತ್ಯಮೃತಂ ಗೃಹೀ ।
ಅದತ್ವಾಽನ್ನಂ ಚ ಯೋ ಭುಂಕ್ತೇ ಕೇವಲಂ ಸ್ವೋದರಂಭರಿಃ ॥ ೪೬ ॥
ವೈಶ್ವದೇವೇನ ಯೇ ಹೀನಾ ಆತಿಥ್ಯೇನ ವಿವರ್ಜಿತಾಃ ।
ಸರ್ವೇ ತೇ ವೃಷಲಾ ಜ್ಞೇಯಾಃ ಪ್ರಾಪ್ತವೇದಾ ಅಪಿ ದ್ವಿಜಾಃ ॥ ೪೭ ॥
ಅಕೃತ್ವಾ ವೈಶ್ವದೇವಂ ತು ಭುಂಜಂತೇ ಯೇ ದ್ವಿಜಾಽಧಮಾಃ ।
ಇಹಲೋಕೇಽನ್ನಹೀನಾಃ ಸ್ಯುಃ ಕಾಕಯೋನಿಂ ವ್ರಜಂತ್ಯಥಃ ॥ ೪೮ ॥
ವೇದೋಕ್ತಂ ವಿದಿತಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ ।
ಯದಿ ಕುರ್ಯಾದ್ಯಥಾಶಕ್ತಿ ಪ್ರಾಪ್ನುಯಾತ್ಸದ್ಗತಿಂ ಪರಾಂ ॥ ೪೯ ॥
ಷಷ್ಠ್ಯಷ್ಟಮ್ಯೋರ್ವಸೇತ್ಪಾಪಂ ತೈಲೇ ಮಾಂಸೇ ಸದೈವ ಹಿ ।
ಚತುರ್ದಶ್ಯಾಂ ಪಂಚದಶ್ಯಾಂ ತಥೈವ ಚ ಕ್ಷುರೇ ಭಗೇ ॥ ೫೦ ॥
ಉದಯಂತಂ ನ ವೀಕ್ಷೇತ ನಾಽಸ್ತಂ ಯಂತಂ ನ ಮಸ್ತಕೇ ।
ನ ರಾಹುಣೋಪಸ್ಸೃಷ್ಟಂ ಚ ನಾಽಂಡಸ್ಥಂ ವೀಕ್ಷಯೇದ್ರವಿಂ ॥ ೫೧ ॥

---

೪೬. ಗೃಹಸ್ಥನು ಪಿತೃಗಳು, ದೇವತೆಗಳು, ಮನುಷ್ಯರು ಇವರ ಯಜ್ಞವಾದ ಮೇಲೆ ಉಳಿದ ಅಮೃತವೆಂಬ ಯಜ್ಞಶೇಷವನ್ನು ಭುಂಜಿಸಬೇಕು. ಹೀಗೆ ಪಿತ್ರಾದಿಯಜ್ಞಗಳನ್ನು ನೆರವೇರಿಸದೆ ಊಟಮಾಡುವವನು ತನ್ನ ಹೊಟ್ಟೆಯನ್ನು ಮಾತ್ರ ತುಂಬಿಸಿಕೊಳ್ಳುವವನು.

೪೭. ಬ್ರಾಹ್ಮಣರು ವೇದಾಧ್ಯಯನ ಮಾಡಿದ್ದರೂ ಅವರು ವೈಶ್ವದೇವ ಮತ್ತು ಅತಿಥಿ ಪೂಜೆಯನ್ನು ಮಾಡದಿದ್ದರೆ ಶೂದ್ರರೆನಿಸಿಕೊಳ್ಳುವರು.

೪೮. ಯಾವ ನೀಚಬ್ರಾಹ್ಮಣರು ವೈಶ್ವದೇವವನ್ನು ಮಾಡದೆ ಭೋಜನ ಮಾಡುವರೊ, ಅವರು ಈ ಲೋಕದಲ್ಲಿ ಅನ್ನವಿಲ್ಲದವರಾಗಿ ಜನ್ಮಾಂತರದಲ್ಲಿ ಕಾಗೆಯ ಜನ್ಮವನ್ನು ಪಡೆಯುವರು.

೪೯. ವೇದವಿಹಿತವಾದ ಕರ್ಮಗಳಲ್ಲಿ ತನಗೆ ತಿಳಿದಷ್ಟನ್ನು ಯಾವನು ನಿತ್ಯವೂ ಆಲಸ್ಯವಿಲ್ಲದೆ ಶಕ್ತ್ಯನುಸಾರ ಆಚರಿಸುವನೊ, ಅವನು ಉತ್ತಮಗತಿಯನ್ನು ಹೊಂದುವನು.

೫೦. ಷಷ್ಠೀ ಮತ್ತು ಅಷ್ಟಮೀ ತಿಥಿಗಳಲ್ಲಿ ಪಾಪವು ಎಣ್ಣೆಯಲ್ಲಿಯೂ, ಮಾಂಸದಲ್ಲಿಯೂ, ಚತುರ್ದಶೀ, ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ ಬೆಂಡೆಕಾಯಿಯಲ್ಲಿಯೂ, ಯೋನಿಯಲ್ಲಿಯೂ ಇರುವುದು.

೫೧. ಸೂರ್ಯನು ಉದಯಿಸುತ್ತಿರುವಾಗಲೂ, ಮುಳುಗುತ್ತಿರುವಾಗಲೂ, ಮಧ್ಯದಲ್ಲಿರುವಾಗಲೂ, ರಾಹುಗ್ರಸ್ತನಾಗಿರುವಾಗಲೂ, ಪರಿಧಿಯೊಳಗಿರುವಾಗಲೂ ಅವನನ್ನು ನೋಡಬಾರದು.

CC-0. Jangamwadi Math Collection. Digitized by eGangotri

ನಾವೀಕ್ಷೇತಾತ್ಮನೋ ರೂಪಮಪ್ಸು ಧಾವೇನ್ನ ಕರ್ದಮೇ ।
ನ ನಗ್ನಾಂ ಸ್ತ್ರಿಯಮೀಕ್ಷೇತ ನ ನಗ್ನೋ ಜಲಮಾವಿಶೇತ್ ॥ ೫೨ ॥
ದೇವತಾಯತನಂ ವಿಪ್ರಂ ಧೇನುಂ ಮಧು ಮೃದಂ ತಥಾ ।
ಜಾತಿವೃದ್ಧಂ ವಯೋವೃದ್ಧಂ ವಿದ್ಯಾವೃದ್ಧಂ ತಥೈವ ಚ ॥ ೫೩ ॥
ಅಶ್ವತ್ಥಂ ಚೈತ್ಯವೃಕ್ಷಂ ಚ ಗುರುಂ ಜಲಭೃತಂ ಘಟಂ ।
ಸಿದ್ಧಾನ್ನಂ ದಧಿ ಸಿದ್ಧಾರ್ಥಂ ಗಚ್ಛನ್ಕುರ್ಯಾತ್ಪ್ರದಕ್ಷಿಣಂ ॥ ೫೪ ॥
ರಜಸ್ವಲಾಂ ನ ಸೇವೇತ ನಾಶ್ನೀಯಾತ್ಸಹಭಾರ್ಯಯಾ ।
ಏಕವಾಸಾ ನ ಭುಂಜೀತ ನ ಭುಂಜೀತೋತ್ಕಟಾಸನೇ ॥ ೫೫ ॥
ನಾಶುಚಿಂ ಸ್ತ್ರಿಯಮೀಕ್ಷೇತ ತೇಜಸ್ಕಾಮೋ ದ್ವಿಜೋತ್ತಮಃ ।
ಅಸಂತರ್ಪ್ಯ ಪಿತೄನ್ದೇವಾನ್ನಾದ್ಯಾದನ್ನಂ ಚ ಕುತ್ರಚಿತ್ ॥ ೫೬ ॥
ಪಕ್ವಾನ್ನಂ ಚಾಪಿ ನೋ ಮಾಂಸಂ ದೀರ್ಘಕಾಲಂ ಜಿಜೀವಿಷುಃ ।
ನ ಮೂತ್ರಣಂ ವ್ರಜೇ ಕುರ್ಯಾನ್ನ ವಲ್ಮೀಕೇ ನ ಭಸ್ಮನಿ ॥ ೫೭ ॥
ನ ಗರ್ತೇಷು ನ ಸತ್ವೇಷು ನ ತಿಷ್ಠನ್ನ ವ್ರಜನ್ನಪಿ ।
ಬ್ರಾಹ್ಮಣಂ ಸೂರ್ಯಮಗ್ನಿಂ ಚ ಚಂದ್ರಶುಕ್ರಗುರೂನಪಿ ॥ ೫೮ ॥

---

೫೨. ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಕೂಡದು. ಕೆಸರಿನಲ್ಲಿ ಓಡಕೂಡದು. ಬತ್ತಲೆಯಾಗಿರುವ ಹೆಂಗಸನ್ನು ನೋಡಬಾರದು. ತಾನು ಬತ್ತಲೆಯಾಗಿ ನೀರಿಗಿಳಿಯಬಾರದು.

೫೩–೫೪. ದಾರಿಯಲ್ಲಿ ದೇವಾಲಯವನ್ನೂ, ಬ್ರಾಹ್ಮಣನನ್ನೂ, ಹಸುವನ್ನೂ, ಜೇನನ್ನೂ, ಮೃತ್ತಿಗೆಯನ್ನೂ, ಸ್ವಜಾತಿಯಲ್ಲಿ ವೃದ್ಧನಾದವನನ್ನೂ, ವಯೋವೃದ್ಧನನ್ನೂ, ವಿದ್ಯೆಯಿಂದ ದೊಡ್ಡವನಾದವನನ್ನೂ, ಅಶ್ವತ್ಥವೃಕ್ಷವನ್ನೂ, ರಾಜಬೀದಿಯಲ್ಲಿರುವ ದೇವಯೋಗ್ಯವಾದ ಮರವನ್ನೂ, ಗುರುವನ್ನೂ, ನೀರು ತುಂಬಿದ ಗಡಿಗೆಯನ್ನೂ, ಸಿದ್ಧಾನ್ನವನ್ನೂ, ಮೊಸರನ್ನೂ, ಬಿಳಿ ಸಾಸಿವೆಯನ್ನೂ ಪ್ರದಕ್ಷಿಣೆಮಾಡಿ ಮುಂದಕ್ಕೆ ಸಾಗಬೇಕು.

೫೫. ಮುಟ್ಟಾದ ಹೆಂಗಸಿನ ಸಂಗವನ್ನು ಮಾಡಕೂಡದು. ಹೆಂಡತಿಯೊಡನೆಯೂ, ಒಂದು ಬಟ್ಟೆಯಿಂದಲೂ, ಉನ್ನತಾಸನದಲ್ಲಿ ಕುಳಿತೂ ಭೋಜನ ಮಾಡಬಾರದು.

೫೬–೫೮. ತೇಜಸ್ಸನ್ನು ಬಯಸುವ ಮಾನವನು ಅಶುದ್ಧಳಾದ ಹೆಂಗಸನ್ನು ನೋಡಕೂಡದು. ಬಹಳಕಾಲ ಬದುಕಲಿಚ್ಛಿಸುವವನು ಪಿತೃಗಳನ್ನು ತೃಪ್ತಿಗೊಳಿಸದೆ ಅನ್ನವನ್ನೂ ಮಾಂಸವನ್ನೂ ತಿನ್ನಬಾರದು. ದನದ ಕೊಟ್ಟಿಗೆಯಲ್ಲಿಯೂ, ಹುತ್ತದಲ್ಲಿಯೂ, ಬೂದಿಯಲ್ಲಿಯೂ, ಪ್ರಾಣಿಗಳಿರುವ ಕುಣಿಗಳಲ್ಲಿಯೂ ಮೂತ್ರವಿಸರ್ಜನೆ ಮಾಡಬಾರದು. ಮತ್ತು ನಿಂತುಕೊಂಡೂ, ಹೋಗು

CC-0. Jangamwadi Math Collection. Digitized by eGangotri

ಅಭಿಪಶ್ಯನ್ನ ಕುರ್ವೀತ ಮಲಮೂತ್ರ ವಿಸರ್ಜನಂ ।
ಮುಖೇನೋಪಧಮೇನ್ನಾಽಗ್ನಿಂ ನಗ್ನಾಂ ನೇಕ್ಷೇತ ಯೋಷಿತಂ ॥ ೫೯ ॥
ನಾಽಂಘ್ರೀ ಪ್ರತಾಪಯೇದಗ್ನೌ ನ ವಸ್ತು ಅಶುಚಿ ಕ್ಷಿಪೇತ್ ।
ಪ್ರಾಣಿಹಿಂಸಾಂ ನ ಕುರ್ವೀತ ನಾಽಶ್ನೀಯಾತ್ಸಂಧ್ಯಯೋರ್ದ್ವಯೋಃ॥ ೬೦॥
ನ ಸಂವಿಶೇಚ್ಚ ಸಂಧ್ಯಾಯಾಂ ಪ್ರಾತಃ ಸಾಯಂ ಕ್ವಚಿದ್ಬುಧಃ ।
ನಾಽಽಚಕ್ಷೀತ ಧಯಂತೀಂ ಗಾಂ ನೇಂದ್ರಚಾಪಂ ಪ್ರದರ್ಶಯೇತ್ ॥ ೬೧॥
ನೈಕಃ ಸುಪ್ಯಾತ್ಕ್ವಚಿಚ್ಛೂನ್ಯೇ ನ ಶಯಾನಂ ಪ್ರಬೋಧಯೇತ್ ।
ಪಂಥಾನಂ ನೈಕಲೋ ಯಾಯಾನ್ನವಾರ್ಯಂಜಲಿನಾ ಪಿಬೇತ್ ॥ ೬೨ ॥
ನ ದಿವೋದ್ಧೃತಸಾರಂ ಚ ಭಕ್ಷಯೇದ್ದಧಿನೋ ನಿಶಿ ।
ಸ್ತ್ರೀಧರ್ಮಿಣೀಂ ನಾಽಭಿವದೇನ್ನಾಽದ್ಯಾದಾತೃಪ್ತಿ ರಾತ್ರಿಷು ॥ ೬೩ ॥
ತೌರ್ಯತ್ರಿಕಪ್ರಿಯೋ ನಸ್ಯಾತ್ಕಾಂಸ್ಯೇ ಪಾದೌ ನ ಧಾವಯೇತ್ ।
ಶ್ರಾದ್ಧಂ ಕೃತ್ವಾ ಪರಶ್ರಾದ್ಧೇ ಯೋಽಶ್ನೀಯಾದ್ಜ್ಞಾನವರ್ಜಿತಃ ॥ ೬೪ ॥
ದಾತುಃ ಶ್ರಾದ್ಧಫಲಂ ನಾಽಸ್ತಿ ಭೋಕ್ತಾ ಕಿಲ್ಬಿಷಭುಗ್ಭವೇತ್ ।
ನ ಧಾರಯೇದನ್ಯಭುಕ್ತಂ ವಾಸಶ್ಚೋಽಪಾನಹಾವಪಿ ॥ ೬೫ ॥

---

ತ್ತಲೂ, ಬ್ರಾಹ್ಮಣ, ಸೂರ್ಯ, ಅಗ್ನಿ, ಚಂದ್ರ, ನಕ್ಷತ್ರ, ಗುರುಗಳನ್ನು ನೋಡುತ್ತಲೂ ಮಲಮೂತ್ರ ವಿಸರ್ಜನೆಮಾಡಬಾರದು. ಬಾಯಿಯಿಂದ ಬೆಂಕಿಯನ್ನೂದಬಾರದು. ಬತ್ತಲೆಯಾದ ಹೆಂಗಸನ್ನು ನೋಡಕೂಡದು.

೬೦. ಪಾದಗಳನ್ನು ಬೆಂಕಿಯಲ್ಲಿ ಕಾಯಿಸಬಾರದು. ಅಶುದ್ಧವಸ್ತುವನ್ನು ಕಾಲಿನಿಂದ ಎಸೆಯಕೂಡದು. ಪ್ರಾಣಿಹಿಂಸೆ ಮಾಡಕೂಡದು. ಬೆಳಗ್ಗೆ ಮತ್ತು ಸಾಯಂಕಾಲ ಸಂಧ್ಯಾಕಾಲಗಳಲ್ಲಿ ಭುಂಜಿಸಬಾರದು.

೬೧. ಸಂಧ್ಯಾಕಾಲಗಳಲ್ಲಿ ಎಲ್ಲಿಯೂ ಮಲಗಬಾರದು. ಕುಡಿಯುತ್ತಿರುವ ಆಕಳನ್ನು ಅಡ್ಡಿಮಾಡಕೂಡದು. ಕಾಮನಬಿಲ್ಲನ್ನು ನೋಡಕೂಡದು.

೬೨. ಯಾರೂ ಇಲ್ಲದ ಸ್ಥಳದಲ್ಲಿ ಒಬ್ಬನೇ ನಿದ್ರಿಸಬಾರದು. ನಿದ್ರಿಸುತ್ತಿರುವವನನ್ನು ಎಚ್ಚರಿಸಕೂಡದು. ಒಬ್ಬಂಟಿಗನಾಗಿ ದಾರಿಯಲ್ಲಿ ಪ್ರಯಾಣ ಮಾಡಬಾರದು. ನೀರನ್ನು ಬೊಗಸೆಯಿಂದ ಕುಡಿಯಕೂಡದು.

೬೩. ಹಗಲು ಬೆಣ್ಣೆತೆಗೆದ ಮೊಸರನ್ನು ರಾತ್ರಿ ಊಟಮಾಡಬಾರದು. ರಜಸ್ವಲೆಯನ್ನು ವಂದಿಸಕೂಡದು. ರಾತ್ರಿಯ ವೇಳೆಯಲ್ಲಿ ತೃಪ್ತಿಯಾಗುವವರೆಗೆ ಊಟಮಾಡಬಾರದು.

೬೪–೬೫. ನೃತ್ಯ, ಗೀತ, ವಾದ್ಯ ಮೂರರಲ್ಲಿ ಪ್ರೀತಿಯುಳ್ಳವನಾಗಬಾರದು. ಕಂಚಿನಲ್ಲಿ ಪಾದಗಳನ್ನು ತೊಳೆಯಕೂಡದು. ಯಾವನು ತಾನು ಶ್ರಾದ್ಧಮಾಡಿ ಮತ್ತೊಬ್ಬನು ಮಾಡಿದ ಶ್ರಾದ್ಧದಲ್ಲಿ ತಿಳುವಳಿಕೆಯಿಲ್ಲದೆ ಭುಂಜಿ

CC-0. Jangamwadi Math Collection. Digitized by eGangotri

ನ ಭಿನ್ನಭಾಜನೇಽಶ್ನೀಯಾನ್ನಾಸೀತಾಗ್ನ್ಯಾದಿದೂಷಿತೇ ।
ಆರೋಹಣಂ ಗವಾಂ ಪೃಷ್ಠೇ ಪ್ರೇತಧೂಮಂ ಸರಿತ್ತಟಂ ॥ ೬೬ ॥
ಬಾಲಾತಪಂ ದಿವಾಸ್ವಾಪಂ ತ್ಯಜೇದ್ದೀರ್ಘಂ ಜಿಜೀವಿಷುಃ ।
ಸ್ನಾತ್ವಾ ನ ಮಾರ್ಜಯೇದ್ಗಾತ್ರಂ ವಿಸೃಜೇನ್ನ ಶಿಖಾಂ ಪಥಿ ॥ ೬೭ ॥
ಹಸ್ತೌ ಶಿರೋ ನಧುನುಯಾನ್ನಾಕರ್ಷೇದಾಸನಂ ಪದಾ ।
ಕರೇಣ ನೋ ಮೃಜೇದ್ಗಾತ್ರಂ ಸ್ನಾನವಸ್ತ್ರೇಣ ವಾ ಪುನಃ ॥ ೬೮ ॥
ಶುನೋಚ್ಛಿಷ್ಟಂ ಭವೇದ್ಗಾತ್ರಂ ಪುನಃ ಸ್ನಾನೇನ ಶುಧ್ಯತಿ ।
ನೋತ್ಪಾಟಯೇಲ್ಲೋಮನಖಂ ದಶನೇನ ಕದಾಚನ ॥ ೬೯ ॥
ಕರಜೈಃ ಕರಜಚ್ಛೇದಂ ವಿವರ್ಜಯೇಚ್ಛುಭಾಯ ತು ।
ಯದಾಯತ್ಯಾಂ ತ್ಯಜೇತ್ತನ್ನ ಕುರ್ಯಾತ್ಕರ್ಮ ಪ್ರಯತ್ನತಃ ॥ ೭೦ ॥
ಅದ್ವಾರೇಣ ನ ಗಂತವ್ಯಂ ಸ್ವವೇಶ್ಮಾಽಪಿ ಕದಾಚನ ।
ಕ್ರೀಡೇನ್ನಾಽಜ್ಞೈಃ ಸಹಾಽಽಸೀತ ನ ಧರ್ಮಘ್ನೈರ್ನ ರೋಗಿಭಿಃ ॥ ೭೧ ॥

---

ಸುವನೊ, ಅವನು ಪಾಪಿಷ್ಠನಾಗುವನು. ಶ್ರಾದ್ಧಮಾಡಿದವನ ಶ್ರಾದ್ಧಫಲವು ಹಾಳಾಗುವುದು. ಬೇರೆಯವರುಟ್ಟ ಬಟ್ಟೆಯನ್ನೂ ಬೇರೆಯವರ ಪಾದರಕ್ಷೆಗಳನ್ನೂ ಧರಿಸಬಾರದು.

೬೬–೬೭. ಒಡೆದ ಪಾತ್ರೆಯಲ್ಲಿ ಊಟಮಾಡಬಾರದು. ಬೆಂಕಿ ಮೊದಲಾದವುಗಳಿಂದ ಕೆಡಿಸಲ್ಪಟ್ಟ ಸ್ಥಳದಲ್ಲಿ ಕೂತುಕೊಳ್ಳಬಾರದು. ಗೋವುಗಳ ಬೆನ್ನಿನಮೇಲೆ ಕೂತುಕೊಳ್ಳುವುದನ್ನೂ, ಚಿತಿಯ ಹೊಗೆಯನ್ನೂ, ನದಿಯ ದಡವನ್ನೂ, ಎಳೆಬಿಸಿಲನ್ನೂ, ಹಗಲು ನಿದ್ರೆಯನ್ನೂ, ಬಹುಕಾಲ ಜೀವಿಸಲಿಚ್ಛಿಸುವವನು ಬಿಡಬೇಕು. ಸ್ನಾನವಾದ ಮೇಲೆ ದೇಹವನ್ನುಜ್ಜಿಕೊಳ್ಳಬಾರದು. ದಾರಿಯಲ್ಲಿ ಜುಟ್ಟನ್ನು ಬಿಡಿಸಿಕೊಂಡು ಹೋಗಬಾರದು.

೬೮. ಕೈಗಳನ್ನೂ, ತಲೆಯನ್ನೂ, ಅಲ್ಲಾಡಿಸಕೂಡದು. ಆಸನವನ್ನು ಪಾದದಿಂದ ಎಳೆಯಬಾರದು. ಶರೀರವನ್ನು ಕೈಯಿಂದಾಗಲಿ, ಸ್ನಾನದ ಬಟ್ಟೆಯಿಂದಾಗಲಿ ಉಜ್ಜಿಕೊಳ್ಳಬಾರದು.

೬೯–೭೦. ನಾಯಿಯನ್ನು ಮುಟ್ಟಿದರೆ ತಿರುಗಿ ಸ್ನಾನಮಾಡಿದರೆ ಶುದ್ಧನಾಗುವನು. ಒಂದುವೇಳೆಯೂ ಹಲ್ಲಿನಿಂದ ರೋಮ ಮತ್ತು ಉಗುರುಗಳನ್ನು ಕೀಳಕೂಡದು. ಉಗುರುಗಳಿಂದ ಉಗುರನ್ನು ಕೀಳಬಾರದು. ಮುಂದಿನ ಶುಭಕ್ಕಾಗಿ ಬಿಟ್ಟ ಕೆಲಸವನ್ನು ತಿರುಗಿ ಮಾಡಲು ಪ್ರಯತ್ನಿಸಬಾರದು.

೭೧. ತನ್ನ ಮನೆಯನ್ನೂ ಒಂದುವೇಳೆಯೂ ಬಾಗಿಲನ್ನು ಬಿಟ್ಟು ಬೇರೆ ಕಡೆಯಿಂದ ಪ್ರವೇಶಿಸಕೂಡದು. ಆಡಲರಿಯದವರೊಡನೆಯೂ, ಧರ್ಮಬಾಹ್ಯರೊಡನೆಯೂ, ರೋಗಿಗಳೊಡನೆಯೂ ಆಡುತ್ತ ಕೂತುಕೊಳ್ಳಬಾರದು.

CC-0. Jangamwadi Math Collection. Digitized by eGangotri

ನ ಶಯೀತ ಕ್ವಚಿನ್ನಗ್ನಃ ಪಾಣೌ ಭುಂಜೀತ ನೈವ ಚ ।
ಆರ್ದ್ರಪಾದಕರಾಸ್ಯೋಽಶ್ನನ್ದೀರ್ಘಕಾಲಂ ನ ಜೀವತಿ ॥ ೭೨ ॥
ಸಂವಿಶೇನ್ನಾರ್ದ್ರಚರಣೋ ನೋಚ್ಛಿಷ್ಟಃ ಕ್ವಚಿದಾವ್ರಜೇತ್ ।
ಶಯನಸ್ಥೋ ನಚಾಽಶ್ನೀಯಾನ್ನಪಿಬೇಚ್ಚ ಜಲಂ ದ್ವಿಜಃ ॥ ೭೩ ॥
ಸೋಪಾನತ್ಕೋ ನೋಪವಿಶೇನ್ನಜಲಂ ಚೋತ್ಥಿತಃ ಪಿಬೇತ್ ।
ಸರ್ವಮಮ್ಲಮಯಂ ನಾಽದ್ಯಾದಾರೋಗ್ಯಸ್ಯಾಽಭಿಲಾಷುಕಃ ॥ ೭೪ ॥
ನ ನಿರೀಕ್ಷೇತ ವಿಣ್ಮೂತ್ರೇ ನೋಚ್ಛಿಷ್ಟಃ ಸಂಸ್ಪೃಶೇಚ್ಛಿರಃ ।
ನಾಽಧಿತಿಷ್ಠೇತ್ತುಷಾಂಗಾರಭಸ್ಮಕೇಶಕಪಾಲಿಕಾಃ ॥ ೭೫ ॥
ಪತಿತೈಃ ಸಹ ಸಂವಾಸಃ ಪತನಾಯೈವ ಜಾಯತೇ ।
ಧದ್ಯಾದೂರ್ಧ್ವಾಸನಂ ಮಂಚಂ ನ ಶೂದ್ರಾಯ ಕದಾಚನ ॥ ೭೬ ॥
ಬ್ರಾಹ್ಮಣ್ಯಾದ್ಧೀಯತೇ ವಿಪ್ರಃ ಶೂದ್ರೋ ಧರ್ಮಾಚ್ಚ ಹೀಯತೇ ।
ಧರ್ಮೋಪದೇಶಃ ಶೂದ್ರಾಣಾಂ ಸ್ವಶ್ರೇಯಃ ಪ್ರತಿಘಾತಯೇತ್ ॥ ೭೭ ॥

---

೭೨. ಬತ್ತಲೆಯಾಗಿ ಎಲ್ಲಿಯೂ ಮಲಗಬಾರದು. ಎಲೆ ಮೊದಲಾದವುಗಳಿಲ್ಲದೆ ಕೈಯಲ್ಲಿಯೇ ಬಡಿಸಿಕೊಂಡು ಊಟಮಾಡಬಾರದು. ಒದ್ದೆಯಾದ ಪಾದ, ಕೈ, ಮುಖವುಳ್ಳವನಾಗಿ ಊಟಮಾಡುವವನು ಹೆಚ್ಚುಕಾಲ ಜೀವಿಸುವುದಿಲ್ಲ.

೭೩. ಬ್ರಾಹ್ಮಣನು ಒದ್ದೆಯಾದ ಅಡಿಯುಳ್ಳವನಾಗಿ ಮಲಗಬಾರದು. ಎಂಜಲುಳ್ಳವನಾಗಿ ಎಲ್ಲಿಗೂ ಹೋಗಕೂಡದು. ಹಾಸಿಗೆಯಲ್ಲಿಯೇ ಕುಳಿತುಕೊಂಡು ಊಟಮಾಡಕೂಡದು. ನೀರನ್ನೂ ಕುಡಿಯಬಾರದು.

೭೪. ಆರೋಗ್ಯವನ್ನು ಬಯಸುವವನು ಪಾದರಕ್ಷೆಗಳನ್ನು ಹಾಕಿಕೊಂಡು ಕುಳಿತುಕೊಳ್ಳಬಾರದು. ನಿಂತುಕೊಂಡು ನೀರನ್ನು ಕುಡಿಯಬಾರದು. ಪೂರ್ತಿ ಹುಳಿಯಾದ ವಸ್ತುವನ್ನು ತಿನ್ನಕೂಡದು.

೭೫. ಮಲಮೂತ್ರಗಳನ್ನು ನೋಡಕೂಡದು. ಉಚ್ಛಿಷ್ಟನಾಗಿ ತಲೆಯನ್ನು ಮುಟ್ಟಬಾರದು; ಹೊಟ್ಟು, ಕೆಂಡ, ಬೂದಿ, ಕೂದಲು, ಮಡಿಕೆಯ ಹೋಳುಗಳಲ್ಲಿ ನಿಲ್ಲಬಾರದು.

೭೬. ಪಾಪಿಗಳ ಸಹವಾಸವು ಅಧೋಗತಿಗೆ ಕಾರಣ. ಶೂದ್ರನಿಗೆ ಎತ್ತರವಾದ ಮಂಚವನ್ನು ಆಸನವಾಗಿ ಒಂದುವೇಳೆಯೂ ಕೊಡಬಾರದು.

೭೭. ಬ್ರಾಹ್ಮಣನು ಶೂದ್ರನಿಗೆ ಧರ್ಮೋದೇಶಮಾಡಿದರೆ ಬ್ರಾಹ್ಮಣ್ಯದಿಂದ ಭ್ರಷ್ಟನಾಗುವುದಲ್ಲದೆ ಶೂದ್ರನೂ ಅವನ ಧರ್ಮದಿಂದ ಭ್ರಷ್ಟನಾಗುವನು. ಮತ್ತು ತನ್ನ ಶ್ರೇಯಸ್ಸನ್ನೂ ಹಾಳುಮಾಡಿಕೊಳ್ಳುವನು.

CC-0. Jangamwadi Math Collection. Digitized by eGangotri

ದ್ವಿಜ ಶುಶ್ರೂಷಣಂ ಧರ್ಮಃ ಶೂದ್ರಾಣಾಂ ಹಿ ಪರೋ ಮತಃ ।
ಕಂಡೂಯನಂ ಹಿ ಶಿರಸಃ ಪಾಣಿಭ್ಯಾಂ ನ ಶುಭಂ ಮತಂ ॥ ೭೮ ॥
ಆದಿಶೇದ್ವೈದಿಕಂ ಮಂತ್ರಂ ನ ಶೂದ್ರಾಯ ಕದಾಚನ ।
ಬ್ರಾಹ್ಮಣ್ಯಾದ್ಧೀಯತೇ ವಿಪ್ರಃ ಶೂದ್ರೋ ಧರ್ಮಾಚ್ಚ ಹೀಯತೇ ॥ ೭೯ ॥
ಆತಾಡನಂ ಕರಾಭ್ಯಾಂ ಚ ಕ್ರೋಶನಂ ಕೇಶಲುಂಚನಂ ।
ಅಶಾಸ್ತ್ರವರ್ತನಂ ಭೂಯೋ ಲುಬ್ಧಾತ್ಕೃತ್ವಾ ಪ್ರತಿಗ್ರಹಂ ॥ ೮೦ ॥
ಬ್ರಾಹ್ಮಣಃ ಸ ಚ ವೈ ಯಾತಿ ನರಕಾನೇಕವಿಂಶತಿಂ ।
ಅಕಾಲಮೇಘಸ್ತನಿತೇ ವರ್ಷರ್ತೌ ಪಾಂಸುವರ್ಷಣೇ ॥ ೮೧ ॥
ಮಹಾಬಾಲಧ್ವನೌ ರಾತ್ರಾವನಧ್ಯಾಯಾಃ ಪ್ರಕೀರ್ತಿತಾಃ ।
ಉಲ್ಕಾಪಾತೇ ಚ ಭೂಕಂಪೇ ದಿಗ್ದಾಹೇ ಮಧ್ಯರಾತ್ರಿಷು ॥ ೮೨ ॥
ಸಂಧ್ಯಯೋರ್ವೃಷಲೋಪಾಂತೇ ರಾಜ್ಯಹಾರೇ ಚ ಸೂತಕೇ ।
ದಶಾಽಷ್ಟಕಾಸು ಭೂತಾಯಾಂ ಶ್ರಾದ್ಧಾಽಹೇ ಪ್ರತಿಪದ್ಯಪಿ ॥ ೮೩ ॥
ಪೂರ್ಣಿಮಾಯಾಂ ತಥಾಽಷ್ಟಮ್ಯಾಂ ವಿಡ್ವರೇ ರಾಷ್ಟ್ರವಿಪ್ಲವೇ ।
ಉಪಾಕರ್ಮಣಿ ಚೋತ್ಸರ್ಗೇ ಕಲ್ಪಾದಿಷು ಯುಗಾದಿಷು ॥ ೮೪ ॥
ಆರಣ್ಯಕಮಧೀತ್ಯಾಽಪಿ ಬಾಣಸಾಮ್ನೋರಪಿ ಧ್ವನೌ ।
ಅನಧ್ಯಾಯೇಷು ಚೈತೇಷು ಚಾಽಧೀಯೀತ ನ ವೈ ಕ್ವಚಿತ್ ॥ ೮೫ ॥

---

೭೮. ದ್ವಿಜಸೇವೆಯು ಶೂದ್ರರಿಗೆ ಉತ್ತಮವಾದ ಧರ್ಮವು. ಎರಡು ಕೈಗಳಿಂದ ತಲೆಯನ್ನು ಕೆರೆದುಕೊಳ್ಳುವುದು ಅನಿಷ್ಟವು.

೭೯. ಒಂದುವೇಳೆಯೂ ಶೂದ್ರನಿಗೆ ವೈದಿಕಮಂತ್ರವನ್ನು ಉಪದೇಶಿಸಬಾರದು. ಹಾಗೆ ಮಾಡಿದರೆ ವಿಪ್ರನು ಬ್ರಾಹ್ಮಣ್ಯದಿಂದಲೂ, ಶೂದ್ರನು ಸ್ವಧರ್ಮದಿಂದಲೂ ಭ್ರಷ್ಟನಾಗುವನು.

೮೦–೮೫. ಕೈಗಳಿಂದ ಹೊಡೆದುಕೊಳ್ಳುವುದು, ಕಿರಿಚಿಕೊಳ್ಳುವುದು, ಕೂದಲನ್ನು ಕತ್ತರಿಸಿಕೊಳ್ಳುವುದು, ಶಾಸ್ತ್ರಬಾಹ್ಯನಾಗಿ ನಡೆಯುವುದು, ಲೋಭದಿಂದ ದಾನಪಡೆಯುವುದು ಇವುಗಳನ್ನು ಮಾಡಿದ ಬ್ರಾಹ್ಮಣನು ಇಪ್ಪತ್ತೊಂದು ನರಕಗಳಿಗೆ ಹೋಗುವನು. ಅಕಾಲದ ಗುಡುಗು, ವರ್ಷರ್ತು, ದೂಳು ಸುರಿಯುವುದು, ಹುಡುಗರ ಘಟ್ಟಿಯಾದ ಶಬ್ದ, ಕೊಳ್ಳಿಬೀಳುವುದು, ಭೂಕಂಪ, ದಿಕ್ಕುಗಳ ಸುಡುವಿಕೆ, ನಡುರಾತ್ರಿ, ಸಂಧ್ಯಾಕಾಲಗಳು, ಶೂದ್ರನ ಸಮೀಪ, ರಾಜ್ಯಾಪಹಾರ, ಸೂತಕ, ಹತ್ತು ಅಷ್ಟಕಗಳು, ಕೃಷ್ಣಪಕ್ಷ ಚತುರ್ದಶೀ, ಶ್ರಾದ್ಧದಿನ, ಪಾಡ್ಯಮಿ, ಹುಣ್ಣಿಮೆ, ಅಷ್ಟಮಿ, ರಾಜ್ಯದ ಉಪಪ್ಲವ, ಉಪಾಕರ್ಮ, ಉತ್ಸರ್ಜನ, ಕಲ್ಪಾದಿಗಳು, ಯುಗಾದಿಗಳು, ಬಾಣ ಮತ್ತು ಸಾಮಧ್ವನಿಗಳು ಇವು ಅನಧ್ಯಾಯಗಳು. ಇವುಗಳಲ್ಲಿ ಎಲ್ಲಿಯೂ ಅಧ್ಯಯನ ಮಾಡಬಾರದು.

CC-0. Jangamwadi Math Collection. Digitized by eGangotri

ಭೂತಾಽಷ್ಟಮ್ಯೋಃ ಪಂಚದಶ್ಯೋರ್ಬ್ರಹ್ಮಚಾರೀ ಸದಾ ಭವೇತ್ ।
ಅನಾಯುಷ್ಯಕರಂ ಚೇಹ ಪರದಾರೋಪಸರ್ಪಣಂ ।
ತಸ್ಮಾತ್ತದ್ದೂರತಸ್ತ್ಯಾಜ್ಯಂ ವೈರಿಣಾಂ ಚೋಪಸೇವನಂ ॥ ೮೬ ॥
ಪೂರ್ವರ್ಧಿಭಿಃ ಪರಿತ್ಯಕ್ತಮಾತ್ಮಾನಂ ನಾಽವಮಾನಯೇತ್ ।
ಸದೋದ್ಯಮವತಾಂ ಯಸ್ಮಾಚ್ಛ್ರಿಯೋ ವಿದ್ಯಾ ನ ದುರ್ಲಭಾಃ ॥ ೮೭ ॥
ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಂ ।
ಪ್ರಿಯಂ ಚ ನಾಽನೃತಂ ಬ್ರೂಯಾದೇಷ ಧರ್ಮೋ ವಿಧೀಯತೇ ॥ ೮೮ ॥
ವಾಚೋವೇಗಂ ಮನೋವೇಗಂ ಜಿಹ್ವಾವೇಗಂ ಚ ವರ್ಜಯೇತ್ ।
ಗುಹ್ಯಜಾನ್ಯಪಿ ಲೋಮಾನಿ ತತ್ಸ್ಪರ್ಶಾದಶುಚಿರ್ಭವೇತ್ ॥ ೮೯ ॥
ಪಾದಧೌತೋದಕಂ ಮೂತ್ರಮುಚ್ಛಿಷ್ಟಾನ್ಯುದಕಾನಿ ಚ ।
ನಿಷ್ಠೀವನಂ ಚ ಶ್ಲೇಷ್ಮಾಣಂ ಗೃಹಾದ್ದೂರಂ ವಿನಿಕ್ಷಿಪೇತ್ ॥ ೯೦ ॥
ಅಹರ್ನಿಶಂ ಶ್ರುತೇರ್ಜಾಪ್ಯಾಚ್ಛೌಚಾಚಾರ ನಿಷೇವಣಾತ್ ।
ಅದ್ರೋಹವತ್ಯಾ ಬುದ್ಧ್ಯಾ ಚ ಪೂರ್ವಜನ್ಮ ಸ್ಮರೇದ್ದ್ವಿಜಃ ॥ ೯೧ ॥

---

೮೬. ಚತುರ್ದಶೀ ಮತ್ತು ಅಷ್ಟಮಿಗಳಲ್ಲಿಯೂ, ಹುಣ್ಣಿಮೆ ಅಮಾವಾಸ್ಯೆಗಳಲ್ಲಿಯೂ ಯಾವಾಗಲೂ ಬ್ರಹ್ಮಚಾರಿಯಾಗಿರಬೇಕು. ಈ ಪ್ರಪಂಚದಲ್ಲಿ ಪರಸತಿಯ ಗಮನವೂ ವೈರಿಗಳ ಆಶ್ರಯವೂ ಆಯುಷ್ಯಕ್ಕೆ ಹಾನಿಕರವು. ಆದ್ದರಿಂದ ಅವುಗಳನ್ನು ದೂರದಿಂದಲೆ ಬಿಡಬೇಕು.

೮೭. ಹಿಂದಿನ ಸಂಪತ್ಸಮೃದ್ಧಿಯು ಹಾಳಾದರೆ ತನ್ನನ್ನು ಅವಮಾನ ಮಾಡಿಕೊಳ್ಳಬಾರದು. ಯಾವಾಗಲೂ ಪ್ರಯತ್ನಿಸುತ್ತಿರುವವರಿಗೆ ಸಂಪತ್ತುಗಳೂ, ವಿದ್ಯೆಗಳೂ ದುರ್ಲಭಗಳಲ್ಲ.

೮೮. ಸತ್ಯವನ್ನು ಹೇಳಬೇಕು. ಹಿತವಾಗಿ ನುಡಿಯಬೇಕು. ಅಪ್ರಿಯವಾದ ಸತ್ಯವನ್ನು ಹೇಳಬಾರದು. ಪ್ರಿಯವಾಗಿದ್ದರೂ ಸುಳ್ಳನ್ನಾಡಬಾರದು. ಇದು ಧರ್ಮವೆನಿಸುವುದು.

೮೯. ಮಾತು, ಮನಸ್ಸು, ನಾಲಿಗೆಗಳ ವೇಗವನ್ನು ತ್ಯಜಿಸಬೇಕು. ಗುಹ್ಯಸ್ಥಾನಗಳಲ್ಲಿರುವ ಕೂದಲುಗಳನ್ನು ಮುಟ್ಟಿದರೆ ಅಶುದ್ಧನಾಗುವನು.

೯೦. ಕಾಲುತೊಳೆದ ನೀರನ್ನೂ, ಮೂತ್ರವನ್ನೂ, ಎಂಜಲು ನೀರನ್ನೂ, ಉಗುಳನ್ನೂ, ಕಫವನ್ನೂ ಮನೆಯಿಂದ ದೂರದಲ್ಲಿ ಚೆಲ್ಲಬೇಕು.

೯೧. ಹಗಲೂ ರಾತ್ರಿ ವೇದಾಧ್ಯಯನದಿಂದಲೂ, ಶೌಚ ಮತ್ತು ಆಚಾರಗಳ ಅನುಷ್ಠಾನದಿಂದಲೂ, ದ್ರೋಹವಿಲ್ಲದ ಬುದ್ಧಿಯಿಂದಲೂ ನಡೆಯುವ ದ್ವಿಜನು ಹಿಂದಿನ ಜನ್ಮವನ್ನು ಸ್ಮರಿಸಿಯಾನು.

CC-0. Jangamwadi Math Collection. Digitized by eGangotri

ವೃದ್ಧಾನ್ಪ್ರಯತ್ನಾದ್ವಂದೇತ ದದ್ಯಾತ್ತೇಷಾಂ ಸ್ವಮಾಸನಂ ।
ವಿನಮ್ರಕಂಧರೋ ಭೂಯಾದನುಯಾಯಾತ್ತತಶ್ಚ ತಾನ್ ॥ ೯೨ ॥
ಶ್ರುತಿಭೂದೇವದೇವಾನಾಂ ನೃಪ ಸಾಧುತಪಸ್ವಿನಾಂ ।
ಪತಿವ್ರತಾನಾಂ ನಾರೀಣಾಂ ನಿಂದಾಂ ಕುರ್ಯಾನ್ನ ಕರ್ಹಿಚಿತ್ ॥ ೯೩ ॥
ಉದ್ಧೃತ್ಯ ಪಂಚ ಮೃತ್ಪಿಂಡಾನ್ಸ್ನಾಯಾತ್ಪರಜಲಾಶಯೇ ।
ಶ್ರದ್ಧಯಾ ಪಾತ್ರಮಾಸಾದ್ಯ ಯತ್ಕಿಂಚಿದ್ದೀಯತೇ ವಸು ॥ ೯೪ ॥
ದೇಶೇ ಕಾಲೇ ಚ ವಿಧಿನಾ ತದಾನಂತ್ಯಾಯಕಲ್ಪತೇ ।
ಭೂಪ್ರದೋ ಮಂಡಲಾಽಧೀಶಃ ಸರ್ವತ್ರ ಸುಖಿತೋಽನ್ನದಃ ॥ ೯೫ ॥
ತೋಯದಾತಾ ಸುರೂಪಃ ಸ್ಯಾತ್ಪುಷ್ಟಶ್ಚಾಽನ್ನಪ್ರದೋ ಭವೇತ್ ।
ಪ್ರದೀಪದೋ ನಿರ್ಮಲಾಽಕ್ಷೋ ಗೋದಾತಾಽರ್ಯಮಲೋಕಭಾಕ್ ॥
ಸ್ವರ್ಣದಾತಾ ಚ ದೀರ್ಘಾಯುಸ್ತಿಲದಃಸ್ಯಾಚ್ಚ ಸುಪ್ರಜಃ ।
ವೇಶ್ಮದೋಽತ್ಯುಚ್ಚ ಸೌಧೇಶೋ ವಸ್ತ್ರದಶ್ಚಂದ್ರಲೋಕಭಾಕ್ ॥ ೯೭ ॥
ಹಯಪ್ರದೋ ದಿವ್ಯದೇಹೋ ಲಕ್ಷ್ಮೀವಾನ್ವೃಷಭಪ್ರದಃ ।
ಸುಭಾರ್ಯಃ ಶಿಬಿಕಾದಾತಾ ಸುಪರ್ಯಂಕಪ್ರದೋಽಪಿ ಚ ॥ ೯೮ ॥

---

೯೨. ವೃದ್ಧರನ್ನು ಪ್ರಯತ್ನದಿಂದ ವಂದಿಸಿ ಅವರಿಗೆ ತನ್ನ ಆಸನವನ್ನಿತ್ತು ನಮ್ರನಾಗಿ ತಲೆ ತಗ್ಗಿಸಿಕೊಂಡಿರಬೇಕು. ತರುವಾಯ ಅವರನ್ನು ಹಿಂಬಾಲಿಸಬೇಕು.

೯೩. ವೇದ, ಬ್ರಾಹ್ಮಣರು, ದೇವತೆಗಳು, ರಾಜರು, ಸಜ್ಜನರು, ಮುನಿಗಳು, ಪತಿವ್ರತೆಯರಾದ ಹೆಂಗಸರು ಇವರನ್ನು ಯಾವಾಗಲೂ ನಿಂದಿಸಬಾರದು.

೯೪–೯೫. ಐದು ಮಣ್ಣಿನ ಉಂಡೆಗಳನ್ನು ಎತ್ತಿ ಇತರರ ಕೊಳದಲ್ಲಿ ಸ್ನಾನ ಮಾಡಬೇಕು. ದೇಶಕಾಲವನ್ನರಿತು ಉತ್ತಮ ಪಾತ್ರವನ್ನು ಹೊಂದಿ ವಿಧಿಯಿಂದ ಶ್ರದ್ಧಾಪುರಸ್ಸರವಾಗಿ ಕೊಟ್ಟ ಸ್ವಲ್ಪ ದ್ರವ್ಯವೂ ಅನಂತವಾಗುವುದು. ಭೂದಾನ ಮಾಡಿದವನು ರಾಜನೂ, ಅನ್ನವನ್ನು ನೀಡಿದವನು ಸುಖಿಯೂ ಆಗುವನು.

೯೬–೯೮. ನೀರನ್ನು ದಾನಮಾಡಿದವನು ಸುಂದರನೂ, ಅನ್ನದಾನಮಾಡಿದವನು ಪುಷ್ಟನೂ, ದೀಪದಾನಮಾಡಿದವನು ಶುದ್ಧವಾದ ಕಣ್ಣುಳ್ಳವನೂ, ಗೋದಾನಮಾಡಿದವನು ಸೂರ್ಯಲೋಕವನ್ನು ಹೊಂದುವವನೂ, ಸ್ವರ್ಣದಾನ ಮಾಡಿದವನು ದೀರ್ಘಾಯುಷ್ಯವುಳ್ಳವನೂ, ಎಳ್ಳನ್ನು ದಾನಮಾಡಿದವನು ಒಳ್ಳೆ ಮಕ್ಕಳುಳ್ಳವನೂ, ಗೃಹದಾನಮಾಡಿದವನು ಉನ್ನತವಾದ ಮಹಡಿಮನೆಯುಳ್ಳವನೂ, ವಸ್ತ್ರವನ್ನು ದಾನಮಾಡಿದವನು ಚಂದ್ರಲೋಕಗಾಮಿಯೂ, ಅಶ್ವದಾನಮಾಡಿದವನು ಸುಂದರದೇಹವುಳ್ಳವನೂ, ಎತ್ತನ್ನು ದಾನಮಾಡಿದವನು ಸಂಪತ್ತುಳ್ಳವನೂ, ಪಲ್ಲಕ್ಕಿ ಮತ್ತು ಮಂಚವನ್ನು ದಾನಮಾಡಿದವನು ಒಳ್ಳೆಯ ಪತ್ನಿಯುಳ್ಳವನೂ ಆಗುವನು.

CC-0. Jangamwadi Math Collection. Digitized by eGangotri

ಶ್ರದ್ಧಯಾ ಪ್ರತಿಗೃಹ್ಣಾತಿ ಶ್ರದ್ಧಯಾ ಯಃ ಪ್ರಯಚ್ಛತಿ ।
ಸ್ವರ್ಗಿಣೌ ತಾವುಭೌ ಸ್ಯಾತಾಂ ಪತತೋಽಶ್ರದ್ಧಯಾ ತ್ವಧಃ ॥ ೯೯ ॥
ಅನೃತೇನ ಕ್ಷರೇದ್ಯಜ್ಞಸ್ತಪೋ ವಿಸ್ಮಯತಃ ಕ್ಷರೇತ್ ।
ಕ್ಷರೇತ್ಕೀರ್ತಿರ್ವಿನಾದಾನಮಾಯುರ್ವಿಪ್ರಾಽಪಮಾನತಃ ॥ ೧೦೦ ॥
ಗಂಧಂ ಪುಷ್ಪಂ ಕುಶಾ ಗಾವಃ ಶಾಕಂ ಮಾಂಸಂ ಪಯೋ ದಧಿ ।
ಮಣಿಮತ್ಸ್ಯಗೃಹಂ ಧಾನ್ಯಂ ಗ್ರಾಹ್ಯಮೇತದುಪಸ್ಥಿತಂ ॥ ೧೦೧ ॥
ಮಧೂದಕಂ ಫಲಂ ಮೂಲಮೇಧಾಂಸ್ಯಭಯದಕ್ಷಿಣಾ ।
ಅಭ್ಯುದ್ಯತಾನಿ ಗ್ರಾಹ್ಯಾಣಿ ಶ್ವೇತಾನ್ಯಪಿ ನಿಕೃಷ್ಟತಃ ॥ ೧೦೨ ॥
ದಾಸ ನಾಪಿತ ಗೋಪಾಲ ಕುಲಮಿತ್ರಾರ್ಧಸೀರಿಣಃ ।
ಭೋಜ್ಯಾನ್ನಾಃ ಶೂದ್ರವರ್ಗೇಽಮೀ ತಥಾತ್ಮನಿನಿವೇದಕಃ ॥ ೧೦೩ ॥
ಇತ್ಥಮಾಚಾರಧರ್ಮೋಽಯಂ ಧರ್ಮಾಽರಣ್ಯನಿವಾಸಿನಾಂ ।
ಶ್ರುತಿಸ್ಮೃತ್ಯುಕ್ತಧರ್ಮೋಽಯಂ ಯುಧಿಷ್ಠಿರ ನಿವೇದಿತಃ ॥ ೧೦೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಸದಾಚಾರ ಲಕ್ಷಣವರ್ಣನಂ"ನಾಮ ಷಷ್ಠೋಽಧ್ಯಾಯಃ

---

೯೯. ಶ್ರದ್ಧೆಯಿಂದ ದಾನಕೊಡುವವನೂ, ಶ್ರದ್ಧೆಯಿಂದ ದಾನ ತೆಗೆದು ಕೊಳ್ಳುವವನೂ ಸ್ವರ್ಗಲೋಕವನ್ನು ಸೇರುವರು. ಅಶ್ರದ್ಧೆಯಿಂದ ಕೊಡುವ ಮತ್ತು ತೆಗೆದುಕೊಳ್ಳುವವರು ನರಕವನ್ನು ಸೇರುವರು.

೧೦೦. ಸುಳ್ಳಿನಿಂದ ಯಜ್ಞವೂ, ಗರ್ವದಿಂದ ತಪಸ್ಸೂ, ದಾನಮಾಡ ದಿದ್ದರೆ ಕೀರ್ತಿಯೂ, ಬ್ರಾಹ್ಮಣನ ಅವಮಾನದಿಂದ ಆಯುಸ್ಸೂ ಹಾಳಾಗುವುದು.

೧೦೧–೧೦೨. ಗಂಧ, ಹೂವು, ದರ್ಭೆ, ಗೋವುಗಳು, ತರಕಾರಿ, ಮಾಂಸ, ಹಾಲು, ಮೊಸರು, ರತ್ನ, ಮೀನು, ಮನೆ, ಧಾನ್ಯ, ಜೇನು, ನೀರು, ಹಣ್ಣು, ಗೆಣಸು, ಕಟ್ಟಿಗೆ, ಅಭಯದಕ್ಷಿಣೆ ಇವುಗಳನ್ನು ನೀಚ ನಿಂದಲೂ ತೆಗೆದುಕೊಳ್ಳಬಹುದು.

೧೦೩. ಸೇವಕ, ಕ್ಷೌರಕ, ಗೊಲ್ಲ, ವಂಶದಗೆಳೆಯ, ಉಳುವವ ಇವ ರನ್ನು ಶೂದ್ರರ ಗುಂಪಿನಲ್ಲಿ ಊಟಮಾಡಿಸಬೇಕು.

೧೦೪. ಯುಧಿಷ್ಠಿರ! ಹೀಗೆ ಶ್ರುತಿಸ್ಮೃತಿ ವಿಹಿತವಾದ ಧರ್ಮಾರಣ್ಯವಾಸಿ ಗಳ ಆಚಾರ ಧರ್ಮವನ್ನು ನಿನಗೆ ತಿಳಿಸಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯೆಯಲ್ಲಿ "ಸದಾಚಾರಲಕ್ಷಣವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಧರ್ಮಾಚಾರವರ್ಣನಂ

ವ್ಯಾಸ ಉವಾಚ :—

ಸಂಪ್ರಾಪ್ಯ ಧರ್ಮವಾಪ್ಯಾಂ ಚ ಯಃ ಕುರ್ಯಾತ್ಪಿತೃತರ್ಪಣಂ ।
ತೃಪ್ತಿಂ ಪ್ರಯಾಂತಿ ಪಿತರೋ ಯಾವದಿಂದ್ರಾಶ್ಚತುರ್ದಶ ॥ ೧ ॥
ಪಿತರಶ್ಚಾಽತ್ರ ಪೂಜ್ಯಾಶ್ಚ ಸ್ವರ್ಗತಾ ಯೇ ಚ ಪೂರ್ವಜಾಃ ।
ಪಿಂಡಾಂಶ್ಚ ನಿರ್ವಪೇತ್ತೇಷಾಂ ಪ್ರಾಪ್ಯೇಮಾಂ ಮುಕ್ತಿದಾಯಿಕಾಂ ॥ ೨ ॥
ತ್ರೇತಾಯಾಂ ಪಂಚದಿವಸೈರ್ದ್ವಾಪರೇ ತ್ರಿದಿನೇನ ತು ।
ಏಕಚಿತ್ತೇನ ಯೋ ವಿಪ್ರಾಃ ಪಿಂಡಂ ದದ್ಯಾತ್ಕಲೌ ಯುಗೇ ॥ ೩ ॥
ಲೋಲುಪಾ ಮಾನವಾ ಲೋಕೇ ಸಂಪ್ರಾಪ್ತೇ ತು ಕಲೌ ಯುಗೇ ।
ಪರದಾರರತಾ ಲೋಕಾಃ ಸ್ತ್ರಿಯೋಽತಿಚಪಲಾಃ ಪುನಃ ॥ ೪ ॥
ಪರದ್ರೋಹರತಾಃ ಸರ್ವೇ ನರನಾರೀನಪುಂಸಕಾಃ ।
ಪರನಿಂದಾಪರಾ ನಿತ್ಯಂ ಪರಚ್ಛಿದ್ರೋಪದರ್ಶಕಾಃ ॥ ೫ ॥

---

### ಕನ್ನಡದ ಅನುವಾದ

#### ಧರ್ಮಾಚಾರವರ್ಣನ

೧. ವ್ಯಾಸರು ಹೇಳುತ್ತಾರೆ :—ಧರ್ಮವಾಪಿಯನ್ನು ಹೊಂದಿ ಪಿತೃತರ್ಪಣ ಮಾಡಿದರೆ ಚತುರ್ದಶಪಿತೃಗಳು ತೃಪ್ತಿಗೊಳ್ಳುವರು.

೨. ಮುಕ್ತಿಪ್ರದವಾದ ಈ ಧರ್ಮವಾಪಿಯಲ್ಲಿ ಸ್ವರ್ಗವಾಸಿಗಳಾದ ಹಿಂದಿನ ಪೂಜ್ಯಪಿತೃಗಳಿಗೆ ಪಿಂಡಪ್ರದಾನಮಾಡಬೇಕು.

೩. ತ್ರೇತಾಯುಗದಲ್ಲಿ ಐದು ದಿವಸಗಳಲ್ಲಿಯೂ, ದ್ವಾಪರಯುಗದಲ್ಲಿ ಮೂರುದಿನಗಳಲ್ಲಿಯೂ. ಕಲಿಯುಗದಲ್ಲಿ ಒಂದೇ ಮನಸ್ಸಿನಲ್ಲಿಯೂ ಇಲ್ಲಿ ವಿಪ್ರನು ಪಿಂಡಪ್ರದಾನಮಾಡಿದರೆ ಪಿತೃಗಳು ಮುಕ್ತರಾಗುವರು.

೪. ಕಲಿಯುಗವು ಪ್ರಾಪ್ತವಾಗಲು ಪ್ರಪಂಚದಲ್ಲಿ ಮನುಷ್ಯರು ಅತ್ಯಾಶೆಯುಳ್ಳವರೂ, ಪರರಪತ್ನಿಯರಲ್ಲಿ ಆಸಕ್ತರೂ ಆಗುವರು. ಹೆಂಗಸರು ಅತ್ಯಂತ ಚಂಚಲಚಿತ್ತರಾಗಿರುವರು.

೫. ಗಂಡಸರು, ಹೆಂಗಸರು, ನಪುಂಸಕರು ಇವರೆಲ್ಲರೂ ಪರರಿಗೆ ದ್ರೋಹ ಮಾಡುವುದರಲ್ಲಿ ಆಸಕ್ತರೂ, ಮತ್ತೊಬ್ಬರ ನಿಂದೆಯಲ್ಲಿ ನಿರತರೂ, ಯಾವಾಗಲೂ ಇತರರ ದೋಷಾನ್ವೇಷಣಪರರೂ ಆಗಿರುವರು.

CC-0. Jangamwadi Math Collection. Digitized by eGangotri

ಪರೋದ್ವೇಗಕರಾ ನೂನಂ ಕಲಹಾ ಮಿತ್ರಭೇದಿನಃ ।
ಸರ್ವೇ ತೇ ಶುದ್ಧತಾಂ ಯಾಂತಿ ಕಾಜೇಶಾಃ ಸ್ವಯಮಬ್ರುವನ್ ॥ ೬ ॥
ಏತದುಕ್ತಂ ಮಹಾಭಾಗ ಧರ್ಮಾರಣ್ಯಸ್ಯ ವರ್ಣನಂ ।
ಫಲಂ ಚೈವಾತ್ರ ಸರ್ವಂ ಹಿ ಯದುಕ್ತಂ ಶೂಲಪಾಣಿನಾ ॥ ೭ ॥
ವಾಙ್ಮನಃಕಾಯಶುದ್ಧಾಶ್ಚ ಪರದಾರಪರಾಙ್ಮುಖಾಃ ।
ಅದ್ರೋಹಾಶ್ಚ ಸಮಾಃ ಕ್ರುದ್ಧಾ ಮಾತಾಪಿತೃಪರಾಯಣಾಃ ॥ ೮ ॥
ಅಲೌಲ್ಯಾ ಲೋಭರಹಿತಾ ದಾನಧರ್ಮಪರಾಯಣಾಃ ।
ಆಸ್ತಿಕಾಶ್ಚೈವ ಧರ್ಮಜ್ಞಾಃ ಸ್ವಾಮಿಭಕ್ತಿರತಾಶ್ಚ ಯೇ ॥ ೯ ॥
ಪತಿವ್ರತಾ ತು ಯಾ ನಾರೀ ಪತಿಶುಶ್ರೂಷಣೇ ರತಾ ।
ಅಹಿಂಸಕಾ ಆತಿಥೇಯಾಃ ಸ್ವಧರ್ಮನಿರತಾಃ ಸದಾ ॥ ೧೦ ॥

ಶೌನಕ ಉವಾಚ:—

ಶೃಣು ಸೂತ ಮಹಾಭಾಗ ಸರ್ವಧರ್ಮವಿದಾಂ ವರ ।
ಗೃಹಸ್ಥಾನಾಂ ಸದಾಚಾರಃ ಶ್ರುತಶ್ಚ ತ್ವನ್ಮುಖಾನ್ಮಯಾ ॥ ೧೧ ॥
ಏಕಂ ಮನೇಪ್ಸಿತಂ ಮೇಽದ್ಯ ತತ್ಕಥಯಸ್ವ ಸೂತಜ ।
ಪತಿವ್ರತಾನಾಂ ಸರ್ವಾಸಾಂ ಲಕ್ಷಣಂ ಕೀದೃಶಂ ವದ ॥ ೧೨ ॥

---

೬–೭. ಹೀಗೆ ಪರರಿಗೆ ವ್ಯಥೆಯನ್ನುಂಟುಮಾಡುವವರೂ, ಜಗಳವಾಡಿ ಮಿತ್ರರನ್ನು ಭೇದಿಸತಕ್ಕವರೂ ಆದ ಅವರೆಲ್ಲರೂ ಶುದ್ಧರಾಗುವರೆಂದು ಯಮ ಬ್ರಹ್ಮ ಮಹೇಶ್ವರರು ಸ್ವಂತವಾಗಿ ಹೇಳಿದ್ದಾರೆ. ಎಲೈ ಭಾಗ್ಯಶಾಲಿಯಾದ ಯುಧಿಷ್ಠಿರನೆ! ಧರ್ಮಾರಣ್ಯವನ್ನು ಈ ರೀತಿ ವರ್ಣಿಸಿ ಹೇಳಿದೆನು. ಮಹೇಶ್ವರನು ಹೇಳಿದ ಫಲವನ್ನೂ ಸಮಗ್ರವಾಗಿ ತಿಳಿಸಿರುವೆನು.

೮–೧೦. ಧರ್ಮಾರಣ್ಯವಾಸಿಗಳಾದ ಜನರು ಮಾತು, ಮನಸ್ಸು, ಶರೀರಗಳಿಂದ ಪವಿತ್ರರೂ, ಪರರಸತಿಯರಲ್ಲಿ ಪರಾಙ್ಮುಖರೂ, ದ್ರೋಹಬುದ್ಧಿಯಿಲ್ಲದವರೂ, ಸರ್ವಸಮರೂ, ತಾಯಿತಂದೆಗಳ ಸೇವೆಯಲ್ಲಿ ಆಸಕ್ತರೂ, ಸ್ಥಿರಮಾನಸರೂ, ಆಶೆಯಿಲ್ಲದವರೂ, ದಾನಧರ್ಮನಿರತರೂ, ಆಸ್ತಿಕರೂ, ಧರ್ಮವನ್ನರಿತವರೂ, ಯಜಮಾನನಲ್ಲಿ ಭಕ್ತಿಯುಳ್ಳವರೂ ಆಗಿರುವರು. ಹೆಂಗಸು ಪತಿವ್ರತೆಯಾಗಿ ಪತಿಸೇವೆಯಲ್ಲಿ ನಿರತಳಾಗಿರುವಳು. ಗಂಡಸರು ಹಿಂಸೆಮಾಡದವರೂ, ಅತಿಥಿಗಳನ್ನು ಸತ್ಕರಿಸುವವರೂ, ಯಾವಾಗಲೂ ಸ್ವಧರ್ಮದಲ್ಲಿ ಆಸಕ್ತರೂ ಆಗಿರುವರು.

೧೧. ಶೌನಕನು ಕೇಳುತ್ತಾನೆ:—ಸಕಲ ಧರ್ಮಜ್ಞರಲ್ಲಿ ಅಗ್ರಗಣ್ಯನಾದ ಸೂತನೆ! ನಿನ್ನಿಂದ ನಾನು ಗೃಹಸ್ಥರ ಸದಾಚಾರವನ್ನು ಕೇಳಿದೆನು.

೧೨. ನನಗೆ ಸಕಲ ಪತಿವ್ರತೆಯರ ಲಕ್ಷಣವನ್ನು ತಿಳಿಯಬೇಕೆಂದು ಒಂದು ಅಭಿಲಾಷೆಯಿದೆ. ಆ ಲಕ್ಷಣವು ಎಂತಹುದೆಂಬುದನ್ನು ನನಗೆ ಹೇಳು.

CC-0. Jangamwadi Math Collection. Digitized by eGangotri

ಸೂತ ಉವಾಚ :—

ಪತಿವ್ರತಾ ಗೃಹೇ ಯಸ್ಯ ಸಫಲಂ ತಸ್ಯ ಜೀವನಂ ।
ಯಸ್ಯಾಂಗಚ್ಛಾಯಯಯಾ ತುಲ್ಯಾ ಯತ್ಕಥಾ ಪುಣ್ಯಕಾರಿಣೀ ॥ ೧೩ ॥
ಪತಿವ್ರತಾಸ್ತ್ವರುಂಧತ್ಯಾ ಸಾವಿತ್ರ್ಯಾಽಪ್ಯನಸೂಯಯಾ ।
ಶಾಂಡಿಲ್ಯಾ ಚೈವ ಸತ್ಯಾಚ ಲಕ್ಷ್ಮ್ಯಾ ಚ ಶತರೂಪಯಾ ॥ ೧೪ ॥
ಮೇನಯಾಚ ಸುನೀತ್ಯಾಚ ಸಂಜ್ಞಯಾ ಸ್ವಾಹಯಾ ಸಮಾಃ ।
ಪತಿವ್ರತಾನಾಂ ಧರ್ಮಾ ಹಿ ಮುನಿನಾ ಚ ಪ್ರಕೀರ್ತಿತಾಃ ॥ ೧೫ ॥
ಭುಂಕ್ತೇ ಭುಂಕ್ತೇ ಸ್ವಾಮಿನಿ ಚ ತಿಷ್ಠತಿ ತ್ವನುತಿಷ್ಠತಿ ।
ವಿನಿದ್ರಿತೇ ಯಾ ನಿದ್ರಾತಿ ಪ್ರಥಮಂ ಪರಿಬುಧ್ಯತಿ ॥ ೧೬ ॥
ಅನಲಂಕೃತಮಾತ್ಮಾನಂ ದೇಶಾಂತೇ ಭರ್ತರಿ ಸ್ಥಿತೇ ।
ಕಾರ್ಯಾರ್ಥಂ ಪ್ರೋಷಿತೇ ಕ್ವಾಪಿ ಸರ್ವಮಂಡನವರ್ಜಿತಾ ॥ ೧೭ ॥
ಭರ್ತುರ್ನಾಮ ನ ಗೃಹ್ಣಾತಿ ಹ್ಯಾಯುಷೋಽಸ್ಯ ಹಿ ವೃದ್ಧಯೇ ।
ಪುರುಷಾಂತರನಾಮಾಽಪಿ ನ ಗೃಹ್ಣಾತಿ ಕದಾಚನ ॥ ೧೮ ॥
ಆಕೃಷ್ಟಾಽಪಿ ಚ ನಾಕ್ರೋಶೇತ್ತಾಡಿತಾಽಪಿ ಪ್ರಸೀದತಿ ।
ಇದಂ ಕುರು ಕೃತಂ ಸ್ವಾಮಿನ್ಮನ್ಯತಾಮಿತಿ ವಕ್ತಿಚ ॥ ೧೯ ॥

---

೧೩. ಸೂತನು ಹೇಳುತ್ತಾನೆ:—ಯಾವನ ಮನೆಯಲ್ಲಿ ದೇಹದ ನೆರಳಿನಂತಿರುವ ಪತಿವ್ರತೆಯಿರುವಳೊ, ಅವನ ಜೀವನವು ಸಫಲವಾದುದು. ಅವನ ಕಥೆಯು ಪುಣ್ಯವನ್ನುಂಟುಮಾಡುವುದು.

೧೪. ಪತಿವ್ರತೆಯರು ಅರುಂಧತಿ; ಸಾವಿತ್ರಿ, ಅನಸೂಯಾ, ಶಾಂಡಿಲ್ಯಾ, ಪಾರ್ವತೀ, ಲಕ್ಷ್ಮೀ, ಶತರೂಪಾ, ಮೇನಾ, ಸುನೀತಿ, ಸಂಜ್ಞಾ, ಸ್ವಾಹಾ ಇವರಿಗೆ ಸಮಾನರು. ಈ ಪತಿವ್ರತೆಯರ ಧರ್ಮವನ್ನು ವ್ಯಾಸರು ಹೇಳಿರುತ್ತಾರೆ.

೧೫–೧೬. ಪತಿವ್ರತೆಯು ಪತಿಯು ಭೋಜನಮಾಡಿದ ಮೇಲೆ ಊಟ ಮಾಡುವಳು. ಅವನು ನಿಂತಿರಲು ತಾನೂ ನಿಂತಿರುವಳು. ಅವನು ನಿದ್ರೆಮಾಡಲು ನಿದ್ರಿಸಿ ಅವನಿಗಿಂತ ಮೊದಲು ಏಳುವಳು.

೧೭. ಪತಿಯು ಯಾವುದಾದರೂ ಕೆಲಸಕ್ಕಾಗಿ ಬೇರೆ ದೇಶಕ್ಕೆ ಹೋಗಿರಲು ತಾನು ಯಾವ ಒಡವೆ ವಸ್ತುಗಳಿಂದಲೂ ಅಲಂಕಾರಮಾಡಿಕೊಳ್ಳದಿರುವಳು.

೧೮. ಪತಿಯ ಆಯುಷ್ಯದ ವೃದ್ಧಿಗಾಗಿ ಅವನ ಹೆಸರನ್ನು ಹೇಳುವುದಿಲ್ಲ. ಪರಪುರುಷನ ಹೆಸರನ್ನೂ ಎತ್ತುವುದಿಲ್ಲ.

೧೯. ಪತಿಯು ಎಳೆದರೂ ಕೂಗಿಕೊಳ್ಳುವುದಿಲ್ಲ. ಹೊಡೆದರೂ ಪ್ರಸನ್ನಳಾಗಿಯೇ ಇರುವಳು. "ಪತಿಯು ಇದನ್ನು ಮಾಡು" ಎಂದು ಆಜ್ಞೆಮಾಡಿದರೆ "ಸ್ವಾಮಿ ಮಾಡಿದ್ದೇನೆ. ಪರಾಂಬರಿಸಿ" ಎನ್ನುವಳು.

CC-0. Jangamwadi Math Collection. Digitized by eGangotri

ಆಹೂತಾ ಗೃಹಕಾರ್ಯಾಣಿ ತ್ಯಕ್ತ್ವಾ ಗಚ್ಛತಿ ಸತ್ವರಂ ।
ಕಿಮರ್ಥಂ ವ್ಯಾಹೃತಾ ನಾಥ ಸ ಪ್ರಸಾದೋ ವಿಧೀಯತಾಂ ॥ ೨೦ ॥
ನ ಚಿರಂ ತಿಷ್ಠತಿ ದ್ವಾರಿ ನ ದ್ವಾರಮುಪಸೇವತೇ ।
ಅದಾತವ್ಯಂ ಸ್ವಯಂ ಕಿಂಚಿತ್ಕಸ್ಮೈಚಿನ್ನ ದದಾತ್ಯಪಿ ॥ ೨೧ ॥
ಪೂಜೋಪಕರಣಂ ಸರ್ವಮನುಕ್ತಾ ಸಾಧಯೇತ್ಸ್ವಯಂ ।
ನಿಯಮೋದಕಬರ್ಹಿಂಷಿ ಯತ್ರ ಪುಷ್ಪಾಕ್ಷತಾದಿಕಂ ॥ ೨೨ ॥
ಪ್ರತೀಕ್ಷಮಾಣಾ ಚ ವರಂ ಯಥಾ ಕಾಲೋಚಿತಂ ಹಿ ಯತ್ ।
ತದುಪಸ್ಥಾಪಯೇತ್ಸರ್ವಮನುದ್ವಿಗ್ನಾಽತಿಹೃಷ್ಟವತ್ ॥ ೨೩ ॥
ಸೇವತೇ ಭರ್ತುರುಚ್ಛಿಷ್ಟಮಿಷ್ಟಮನ್ನಂ ಫಲಾದಿಕಂ ।
ದೂರತೋ ವರ್ಜಯೇದೇಷಾ ಸಮಾಜೋತ್ಸವದರ್ಶನಂ ॥ ೨೪ ॥
ನ ಗಚ್ಛೇತ್ತೀರ್ಥಯಾತ್ರಾದಿ ವಿವಾಹಪ್ರೇಕ್ಷಣಾದಿಷು ।
ಸುಖಸುಪ್ತಂ ಸುಖಾಸೀನಂ ರಮಮಾಣಂ ಯದೃಚ್ಛಯಾ ॥ ೨೫ ॥
ಅಂತರಾಯೇಽಪಿ ಕಾರ್ಯೇಷು ಪತಿಂ ನೋತ್ಥಾಪಯೇತ್ಕ್ವಚಿತ್ ।
ಸ್ತ್ರೀಧರ್ಮಿಣೀ ತ್ರಿರಾತ್ರಂ ತು ಸ್ವಸುಖಂ ನೈವ ದರ್ಶಯೇತ್ ॥ ೨೬ ॥

---

೨೦. ಯಾವುದಾದರೂ ಕೆಲಸಕ್ಕಾಗಿ ಪತಿಯು ಕರೆದರೆ ಮನೆಗೆಲಸಗಳನ್ನು ಮಾಡುತ್ತಿದ್ದರೂ ಅವುಗಳನ್ನು ತ್ಯಜಿಸಿ ಕೂಡಲೆ ಹೋಗುವಳು. "ನಾಥ! ಏಕೆ ಕರೆದಿರಿ; ಕೆಲಸವನ್ನು ಹೇಳಿ ಅನುಗ್ರಹಮಾಡಿರಿ" ಎನ್ನುವಳು.

೨೧. ಬಾಗಿಲಲ್ಲಿ ಹೆಚ್ಚುಕಾಲ ನಿಲ್ಲುವುದಿಲ್ಲ. ಯಾವಾಗಲೂ ಬಾಗಿಲಲ್ಲೇ ಇರುವುದಿಲ್ಲ. ತಾನು ಸ್ವಂತವಾಗಿ ಕೊಡಬಾರದ್ದನ್ನು ಯಾರಿಗೂ ಕೊಡುವುದಿಲ್ಲ.

೨೨. ದೇವಪೂಜೆಗೆ ಬೇಕಾಗಿರುವ ಶುದ್ಧೋದಕ, ದರ್ಭೆ, ಹೂವು, ಅಕ್ಷತೆ ಮೊದಲಾದವುಗಳನ್ನು ಹೇಳಿಸಿಕೊಳ್ಳದೆ ತಾನೇ ಸಿದ್ಧಮಾಡಿಡುವಳು.

೨೩. ಪತಿಯ ಅನುಗ್ರಹವನ್ನು ನಿರೀಕ್ಷಿಸುತ್ತ ಕಾಲೋಚಿತವಾದ ಪದಾರ್ಥಗಳನ್ನು ಸಂತೋಷದಿಂದ ಬೇಸರಗೊಳ್ಳದೆ ಅವನಿಗೆ ಅಣಿಮಾಡಿ ಕೊಡುವಳು.

೨೪. ಪತಿಯ ಉಚ್ಛಿಷ್ಟವಾದ ಅನ್ನ, ಹಣ್ಣು ಮೊದಲಾದವುಗಳನ್ನು ಪ್ರೀತಿಯಿಂದ ಭುಜಿಸುವಳು. ಸಾಮಾಜಿಕೋತ್ಸವಗಳ ನೋಟವನ್ನು ದೂರದಿಂದಲೇ ತ್ಯಜಿಸುವಳು.

೨೫–೨೬. ತೀರ್ಥಯಾತ್ರೆ, ಮದುವೆ ಮೊದಲಾದವುಗಳಿಗೆ ತಾನೊಬ್ಬಳೇ ಹೋಗುವುದಿಲ್ಲ. ಸುಖವಾಗಿ ನಿದ್ರಿಸುತ್ತಿರುವವನೂ, ಸೌಖ್ಯದಿಂದ ಕೂತು ವಿನೋದಪಡುತ್ತಿರುವವನೂ ಆದ ಪತಿಯನ್ನು ಆಕಸ್ಮಿಕವಾದ ಕಾರ್ಯಗಳ



CC-0. Jangamwadi Math Collection. Digitized by eGangotri

ಸ್ವವಾಕ್ಯಂ ಶ್ರಾವಯೇನ್ನಾಽಪಿ ಯಾವತ್ಸ್ನಾತ್ವಾ ನ ಶುಧ್ಯತಿ ।
ಸುಸ್ನಾತಾ ಭರ್ತೃವದನಮೀಕ್ಷೇತಾಽನ್ಯಸ್ಯ ನ ಕ್ವಚಿತ್ ।
ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ॥ ೨೭ ॥
ಹರಿದ್ರಾಂ ಕುಂಕುಮಂ ಚೈವ ಸಿಂದೂರಂ ಕಜ್ಜಲಂ ತಥಾ ।
ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಂ ॥ ೨೮ ॥
ಕೇಶಸಂಸ್ಕಾರಕಂ ಚೈವ ಕರಕರ್ಣಾದಿಭೂಷಣಂ ।
ಭರ್ತುರಾಯುಷ್ಯಮಿಚ್ಛಂತೀ ದೂರಯೇನ್ನ ಪತಿವ್ರತಾ ॥ ೨೯ ॥
ಭರ್ತೃವಿದ್ವೇಷಿಣೀಂ ನಾರೀಂ ನೈಷಾ ಸಂಭಾಷತೇ ಕ್ವಚಿತ್ ।
ನೈಕಾಕಿನೀ ಕ್ವಚಿದ್ಭೂಯಾನ್ನ ನಗ್ನಾ ಸ್ನಾತಿ ಚ ಕ್ವಚಿತ್ ॥ ೩೦ ॥
ನೋಲೂಖಲೇ ನ ಮುಸಲೇ ನ ವರ್ಧನ್ಯಾಂ ದೃಷದ್ಯಪಿ ।
ನ ಯಂತ್ರಕೇ ನ ದೇಹಲ್ಯಾಂ ಸತೀ ಚೋಪವಿಶೇತ್ಕ್ವಚಿತ್ ॥ ೩೧ ॥
ವಿನಾ ವ್ಯವಾಯಸಮಯಾತ್ಪ್ರಾಗಲ್ಭ್ಯಂ ನ ಕ್ವಚಿಚ್ಚರೇತ್ ।
ಯತ್ರ ಯತ್ರ ರುಚಿರ್ಭರ್ತುಸ್ತತ್ರ ಪ್ರೇಮವತೀ ಸದಾ ॥ ೩೨ ॥

---

ಅಡ್ಡಿಗಳು ಒದಗಿದರೂ ಎಬ್ಬಿಸಕೂಡದು. ತಾನು ರಜಸ್ವಲೆಯಾಗಿರುವಾಗ ಮೂರು ರಾತ್ರಿ ತನ್ನ ಮುಖವನ್ನು ತೋರಿಸಕೂಡದು.

೨೭. ಸ್ನಾನಮಾಡಿ ಶುದ್ಧಳಾಗುವವರೆಗೂ ಪತಿಯೊಡನೆ ಮಾತನಾಡಬಾರದು. ಸ್ನಾನಮಾಡಿ ಪತಿಯ ಮುಖವನ್ನು ನೋಡಬೇಕು. ಪರರ ಮುಖವನ್ನು ನೋಡಕೂಡದು. ಅಥವಾ ಹಾಗೆ ನೋಡಿದರೂ ಗಂಡನನ್ನು ಮನಸ್ಸಿನಲ್ಲಿ ಚಿಂತಿಸಿ ಸೂರ್ಯನನ್ನು ಈಕ್ಷಿಸಬೇಕು.

೨೮–೨೯. ಪತಿವ್ರತೆಯು ಅರಿಸಿನ, ಕುಂಕುಮ, ಸಿಂದೂರ, ಕಾಡಿಗೆ, ಕುಪ್ಪಸ, ತಾಂಬೂಲ, ಮಂಗಳಾಭರಣ, ತಲೆಬಾಚಿಕೊಳ್ಳುವುದು, ಕೈ ಮತ್ತು ಕಿವಿಗಳ ಒಡವೆಗಳು ಇವುಗಳನ್ನು ಪತಿಯ ಆಯುಷ್ಯದ ವೃದ್ಧಿಗಾಗಿ ತ್ಯಜಿಸಕೂಡದು.

೩೦. ಅವಳು ಗಂಡನನ್ನು ದ್ವೇಷಿಸುವ ಹೆಂಗಸಿನೊಡನೆ ಮಾತಾಡಕೂಡದು. ಒಬ್ಬಂಟಿಗಳಾಗಿ ಎಲ್ಲಿಯೂ ಮಾತಾಡಬಾರದು. ಬತ್ತಲೆಯಾಗಿ ಸ್ನಾನಮಾಡಬಾರದು.

೩೧. ಒರಳು, ಒನಕೆ, ಈಳಿಗೆಮಣೆ ಅಥವಾ ಮಡಿಕೆ, ಬೀಸುವಕಲ್ಲು, ಯಂತ್ರ, ಹೊಸಲುಗಳಲ್ಲಿ ಕುಳಿತುಕೊಳ್ಳಕೂಡದು.

೩೨. ಕೂಡುವ ಸಮಯನ್ನು ಬಿಟ್ಟು ಬೇರೆಲ್ಲಿಯೂ ತನ್ನ ಧಾರ್ಷ್ಟ್ಯವನ್ನು ತೋರಿಸಬಾರದು. ಗಂಡನಿಗೆ ಪ್ರಿಯವಾದವುಗಳಲ್ಲೆಲ್ಲ ತಾನೂ ಪ್ರೀತಿಯುಳ್ಳವಳಾಗಿರಬೇಕು.

CC-0. Jangamwadi Math Collection. Digitized by eGangotri

ಇದಮೇವ ವ್ರತಂ ಸ್ತ್ರೀಣಾಮಯಮೇವ ಪರೋ ವೃಷಃ ।
ಇಯಮೇವ ಚ ಪೂಜಾ ಚ ಭರ್ತುರ್ವಾಕ್ಯಂ ನಲಂಘಯೇತ್ ॥ ೩೩ ॥
ಕ್ಲೀಬಂ ವಾ ದುರವಸ್ಥಂ ವಾ ವ್ಯಾಧಿತಂ ವೃದ್ಧಮೇವ ವಾ ।
ಸುಸ್ಥಿರಂ ದುಃಸ್ಥಿರಂ ವಾऽಪಿ ಪತಿಮೇಕಂ ನ ಲಂಘಯೇತ್ ॥ ೩೪ ॥
ಸರ್ಪಿರ್ಲವಣಹಿಂಗ್ವಾದಿ ಕ್ಷಯೇऽಪಿ ಚ ಪತಿವ್ರತಾ ।
ಪತಿಂ ನಾऽಸ್ತೀತಿ ನ ಬ್ರೂಯಾದಾಯಸೇಷು ನ ಭೋಜಯೇತ್ ॥ ೩೫ ॥
ತೀರ್ಥಸ್ನಾನಾऽರ್ಥಿನೀ ಚೈವ ಪತಿಪಾದೋದಕಂ ಪಿಬೇತ್ ।
ಶಂಕರಾದಪಿ ವಾ ವಿಷ್ಣೋಃ ಪತಿರೇವಾऽಧಿಕಃ ಸ್ತ್ರಿಯಃ ॥ ೩೬ ॥
ವ್ರತೋಪವಾಸನಿಯಮಂ ಪತಿಮುಲ್ಲಂಘ್ಯ ಯಾ ಚರೇತ್ ।
ಆಯುಷ್ಯಂ ಹರತೇ ಭರ್ತುರ್ಮೃತಾ ನಿರಯಮೃಚ್ಛತಿ ॥ ೩೭ ॥
ಉಕ್ತಾ ಪ್ರತ್ಯುತ್ತರಂ ದದ್ಯಾನ್ನಾರೀ ಯಾ ಕ್ರೋಧತತ್ಪರಾ ।
ಸರಮಾ ಜಾಯತೇ ಗ್ರಾಮೇ ಸೃಗಾಲೀ ನಿರ್ಜನೇ ವನೇ ॥ ೩೮ ॥
ಸ್ತ್ರೀಣಾಂ ಹಿ ಪರಮಶ್ಚೈಕೋ ನಿಯಮಃ ಸಮುದಾಹೃತಃ ।
ಅಭ್ಯರ್ಚ್ಯ ಚರಣೌ ಭರ್ತುರ್ಭೋಕ್ತವ್ಯಂ ಕೃತನಿಶ್ಚಯಾ ॥ ೩೯ ॥

---

೩೩—೩೪. ಪತಿವ್ರತೆಗೆ ಇದೇ ನಿಯಮ, ಇದೇ ಉತ್ತಮವಾದ ಧರ್ಮ, ಇದೇ ಪೂಜೆ. ಗಂಡನ ಮಾತನ್ನು ಯಾವಾಗಲೂ ಮೀರಬಾರದು. ಪತಿಯು ನಪುಂಸಕನಾಗಲಿ, ದುರವಸ್ಥೆಯುಳ್ಳವನಾಗಲಿ, ರೋಗಿಯಾಗಲಿ, ಮುದುಕನಾಗಲಿ, ದೃಢಕಾಯನಾಗಲಿ, ನಿರ್ಬಲನಾಗಲಿ ಅವನನ್ನು ಬಿಡಕೂಡದು.

೩೫—೩೬. ಮನೆಯಲ್ಲಿರುವ ತುಪ್ಪ, ಉಪ್ಪು, ಹಿಂಗುಗಳು ಇವೇ ಮೊದಲಾದವು ಮುಗಿದಾಗ್ಯೂ ಊಟಮಾಡುವಾಗ ಇಲ್ಲವೆಂದು ಗಂಡನಿಗೆ ಹೇಳಬಾರದು. ಕಬ್ಬಿಣದ ಪಾತ್ರೆಗಳಲ್ಲಿ ಬಡಿಸಬಾರದು. ಪತಿವ್ರತೆಗೆ ತೀರ್ಥಸ್ನಾನ ಮಾಡಬೇಕೆಂದಪೇಕ್ಷೆಯಾದರೆ ಪತಿಯ ಪಾದೋದಕವನ್ನು ಕುಡಿಯಬೇಕು. ಹೆಂಗಸಿಗೆ ಶಂಕರ ವಿಷ್ಣುಗಳಿಗಿಂತಲೂ ಗಂಡನೇ ಅಧಿಕನು.

೩೭. ಗಂಡನನ್ನು ಮೀರಿ ಯಾವಳು ವ್ರತೋಪವಾಸ ನಿಯಮಗಳನ್ನು ಮಾಡುವಳೊ, ಅವಳು ಗಂಡನ ಆಯುಸ್ಸನ್ನು ಅಪಹರಿಸುವಳು. ತಾನೂ ಮೃತಳಾದ ಮೇಲೆ ನರಕವನ್ನೈದುವಳು.

೩೮. ಯಾವ ಹೆಂಗಸು ಕೋಪದಿಂದ ಪತಿಯು ಹೇಳಿದ್ದಕ್ಕೆ ಪ್ರತ್ಯುತ್ತರವನ್ನು ಕೊಡುವಳೊ, ಅವಳು ಗ್ರಾಮದಲ್ಲಿ ಹೆಣ್ಣು ನಾಯಿಯಾಗಿಯೂ, ನಿರ್ಜನವಾದ ಕಾಡಿನಲ್ಲಿ ಹೆಣ್ಣುನರಿಯಾಗಿಯೂ ಹುಟ್ಟುವಳು.

೩೯. ಹೆಂಗಸು ನಿಶ್ಚಲಮನಸ್ಸಿನಿಂದ ಗಂಡನ ಪಾದವನ್ನು ಪೂಜಿಸಿ ಊಟಮಾಡಬೇಕು. ಇದು ಅವಳಿಗೆ ಅತ್ಯುತ್ತಮವ್ರತವೆಂದು ಹೇಳಿದೆ.

CC-0. Jangamwadi Math Collection. Digitized by eGangotri

ಉಚ್ಚಾಸನಂ ನ ಸೇವೇತ ನ ವ್ರಜೇತ್ಪರವೇಶ್ಮಸು ।
ತತ್ರ ಪಾರುಷ್ಯವಾಕ್ಯಾನಿ ಬ್ರೂಯಾನ್ನೈವ ಕದಾಚನ ॥ ೪೦ ॥
ಗುರೂಣಾಂ ಸನ್ನಿಧೌ ವಾಽಪಿ ನೋಚ್ಚೈರ್ಬ್ರೂಯಾನ್ನವಾಹಯೇತ್ ॥೪೧॥
ಯಾ ಭರ್ತಾರಂ ಪರಿತ್ಯಜ್ಯ ರಹಶ್ಚರತಿ ದುರ್ಮತಿಃ ।
ಉಲೂಕೀ ಜಾಯತೇ ಕ್ರೂರಾ ವೃಕ್ಷಕೋಟರಶಾಯಿನೀ ॥ ೪೨ ॥
ತಾಡಿತಾ ತಾಡಯೇಚ್ಚೇತ್ತಂ ಸಾ ವ್ಯಾಘ್ರೀ ವೃಷದಂಶಿಕಾ ।
ಕಟಾಕ್ಷಯತಿ ಯಾಽನ್ಯಂ ವೈ ಕೇಕರಾಕ್ಷೀ ತು ಸಾ ಭವೇತ್ ॥ ೪೩ ॥
ಯಾ ಭರ್ತಾರಂ ಪರಿತ್ಯಜ್ಯ ಮಿಷ್ಟಮಶ್ನಾತಿ ಕೇವಲಂ ।
ಸಾ ಗ್ರಾಮೇ ಸೂಕರೀ ಭೂಯಾದ್ವಲ್ಗುಲೀ ವಾಽಥ ವಿಜ್ಭುಜಾ ॥ ೪೪ ॥
ಹುನ್ತ್ವಂ ಕೃತ್ವಾಽಪ್ರಿಯಂ ಬ್ರೂತೇ ಮೂಕಾ ಸಾ ಜಾಯತೇ ಖಲು ।
ಯಾ ಸಪತ್ನೀಂ ಸದೇರ್ಷ್ಯೇತ ದುರ್ಭಗಾ ಸಾ ಪುನಃ ಪುನಃ ।
ದೃಷ್ಟಿಂ ವಿಲುಪ್ಯ ಭರ್ತುರ್ಯಾ ಕಂಚಿದನ್ಯಂ ಸಮೀಕ್ಷತೇ ॥ ೪೫ ॥
ಕಾಣಾಚ ವಿಮುಖಾ ವಾಽಪಿ ಕುರುಪಾಽಪಿ ಚ ಜಾಯತೇ ।
ಬಾಹ್ಯಾದಾಯಾಂತಮಾಲೋಕ್ಯ ತ್ವರಿತಾಚ ಜಲಾಸನೈಃ ।
ತಾಂಬೂಲೈರ್ವ್ಯಜನೈಶ್ಚೈವ ಪಾದಸಂವಾಹನಾದಿಭಿಃ ॥ ೪೬ ॥

---

೪೦. ಗಂಡನಿಗಿಂತ ಎತ್ತರವಾದ ಆಸನದಲ್ಲಿ ಕುಳಿತುಕೊಳ್ಳಬಾರದು. ಪರರ ಮನೆಗೆ ಹೋಗಬಾರದು. ಹೋದರೂ ಅಲ್ಲಿ ಕಠಿನವಾದ ಮಾತುಗಳನ್ನು ಒಂದುವೇಳೆಯೂ ಆಡಬಾರದು.

೪೧–೪೨. ಗುರುಗಳ ಹತ್ತಿರ ಘಟ್ಟಿಯಾಗಿ ಮಾತಾಡಬಾರದು. ವಾಹನದಲ್ಲಿ ಸಂಚರಿಸಲೂಬಾರದು. ದುಷ್ಟಳಾದ ಯಾವ ಹೆಂಗಸು ಪತಿಯನ್ನು ತ್ಯಜಿಸಿ ಗುಟ್ಟಾಗಿ ಸಂಚರಿಸುವಳೋ, ಅವಳು ಮರದ ಪೊಟರೆಯಲ್ಲಿ ವಾಸಿಸುವ ಮೊರಟು ಗೂಬೆಯಾಗಿ ಹುಟ್ಟುವಳು.

೪೩. ಗಂಡನು ಹೊಡೆದರೆ ಅವನನ್ನು ತಿರುಗಿ ಹೊಡೆಯುವ ಹೆಂಗಸು ಹೆಣ್ಣು ಹುಲಿಯೂ, ಹೆಣ್ಣು ಬೆಕ್ಕೂ ಆಗಿ ಹುಟ್ಟುವಳು. ಯಾವಳು ಪರಪುರುಷನನ್ನು ಕಟಾಕ್ಷಿಸುವಳೋ, ಅವಳು ಮೆಲ್ಲಗಣ್ಣಿನವಳಾಗುವಳು.

೪೪. ಪತಿಯನ್ನು ಬಿಟ್ಟು ತಾನೊಬ್ಬಳೆ ಮೃಷ್ಟಾನ್ನವನ್ನು ಭುಂಜಿಸುವವಳು ಗ್ರಾಮದಲ್ಲಿ ಹೆಣ್ಣು ಹಂದಿ ಅಥವಾ ಹೆಣ್ಣು ನಾಯಿಯಾಗಿ ಜನಿಸುವಳು.

೪೫–೪೬. ಪತಿಗೆ ಹುಂಕಾರದಿಂದ ಅಪ್ರಿಯವನ್ನಾಡುವವಳು ಮೂಕಳಾಗುವಳು. ಸವತಿಯಲ್ಲಿ ಯಾವಾಗಲೂ ತಿರುತಿರುಗಿ ಅಸೂಯೆಪಡುವವಳು ದೌರ್ಭಾಗ್ಯವುಳ್ಳವಳಾಗುವಳು. ಗಂಡನ ಕಣ್ಣನ್ನು ಮರೆಸಿ ಪರಪುರುಷನನ್ನು ನೋಡುವವಳು ಕುರುಡಿ ಅಥವಾ ಕುರೂಪಿನಿಯಾಗುವಳು. ಹೊರಗಿನಿಂದ

CC-0. Jangamwadi Math Collection. Digitized by eGangotri

ತಥೈವ ಚಾರುವಚನೈಃ ಸ್ವೇದಸನ್ನೋದನೈಃ ಪರೈಃ ।
ಯಾ ಪ್ರಿಯಂ ಪ್ರೀಣಯೇತ್ಪ್ರೀತಾ ತ್ರಿಲೋಕೀ ಪ್ರೀಣಿತಾ ತಯಾ ।
ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಸುತಂ ಸುತಃ ॥ ೪೭ ॥
ಅಮಿತಸ್ಯಹಿ ದಾತಾರಂ ಭರ್ತಾರಂ ಕಾ ನ ಪೂಜಯೇತ್ ।
ಭರ್ತಾ ದೇವೋ ಗುರುರ್ಭರ್ತಾ ಧರ್ಮಸ್ತೀರ್ಥವ್ರತಾನಿ ಚ ।
ತಸ್ಮಾತ್ಸರ್ವಂ ಪರಿತ್ಯಜ್ಯ ಪತಿಮೇಕಂ ಸಮರ್ಚಯೇತ್ ॥ ೪೮ ॥
ಜೀವಹೀನೋ ಯಥಾ ದೇಹೀ ಕ್ಷಣಾದಶುಚಿತಾಂ ವ್ರಜೇತ್ ।
ಭರ್ತೃಹೀನಾ ತಥಾ ಯೋಷಿತ್ಸುಸ್ನಾತಾಽಪ್ಯಶುಚಿಃ ಸದಾ ॥ ೪೯ ॥
ಅಮಂಗಲೇಭ್ಯಃ ಸರ್ವೇಭ್ಯೋ ವಿಧವಾ ಸ್ಯಾದಮಂಗಲಾ ।
ವಿಧವಾದರ್ಶನಾತ್ಸಿದ್ಧಿಃ ಕ್ವಾಪಿ ಜಾತು ನ ಜಾಯತೇ ॥ ೫೦ ॥
ವಿಹಾಯ ಮಾತರಂ ಚೈಕಾಂ ಸರ್ವಾಮಂಗಲವರ್ಜಿತಾಃ ।
ತದಾಶಿಷಮಪಿ ಪ್ರಾಜ್ಞಸ್ತ್ಯಜೇದಾಶೀವಿಷೋಪಮಾಂ ॥ ೫೧ ॥
ಕನ್ಯಾವಿವಾಹಸಮಯೇ ವಾಚಯೇಯುರಿತಿ ದ್ವಿಜಾಃ ।
ಭರ್ತುಃ ಸಹಚರೀ ಭೂಯಾಜ್ಜೀವತೋಽಜೀವತೋಽಪಿ ವಾ ॥ ೫೨ ॥

---

ಬರುತ್ತಿರುವ ಗಂಡನನನ್ನು ನೋಡಿ ಯಾವಳು ಜಾಗ್ರತೆಯಾಗಿ ಪ್ರೀತಿಯಿಂದ ನೀರು, ಆಸನ, ತಾಂಬೂಲ, ಬೀಸಣಿಗೆ, ಇವುಗಳಿಂದಲೂ, ಕಾಲು ಒತ್ತುವುದು, ಒಳ್ಳೆಯ ಮಾತನ್ನಾಡುವುದು, ಬೆವರನ್ನೊರಿಸುವುದು ಇವುಗಳಿಂದಲೂ ಅವನನ್ನು ಸಂತೋಷಪಡಿಸುವಳೊ, ಅವಳು ಮೂರುಲೋಕಗಳನ್ನೂ ಸಂತೋಷಪಡಿಸಿದವಳಂತಾಗುವಳು. ತಂದೆ, ಸಹೋದರ ಮತ್ತು ಮಕ್ಕಳು ಇವರೆಲ್ಲರೂ ಇಷ್ಟವಾದುದನ್ನು ಮಿತವಾಗಿ ಕೊಡುವರು. ಗಂಡನು ಇಷ್ಟವಾದುದನ್ನು ಅಮಿತವಾಗಿ ಕೊಡುವನಾದುದರಿಂದ ಅವನನ್ನು ಯಾವ ಹೆಂಡತಿಯು ತಾನೆ ಪೂಜಿಸಲಾರಳು. ಗಂಡನೇ ದೇವರು, ಗುರುವು, ಧರ್ಮ, ತೀರ್ಥ, ವ್ರತಗಳು. ಆದುದರಿಂದ ಎಲ್ಲವನ್ನೂ ಬಿಟ್ಟು ಗಂಡನನ್ನೊಬ್ಬನನ್ನೇ ಪೂಜಿಸಬೇಕು.

೪೯. ಜೀವವಿಲ್ಲದ ಪ್ರಾಣಿಯು ಕೂಡಲೆ ಅಶುಚಿಯಾಗುವಂತೆ ಗಂಡನಿಲ್ಲದ ಹೆಂಗಸು ಸ್ನಾನಮಾಡಿದಾಗ್ಗೂ ಯಾವಾಗಲೂ ಅಶುದ್ಧಳೇ.

೫೦. ವಿಧವೆಯು ಸಕಲ ಅಮಂಗಳ ವಸ್ತುಗಳಿಗಿಂತಲೂ ಅಮಂಗಳಕರಳು. ವಿಧವೆಯನ್ನು ನೋಡಿದರೆ ಎಲ್ಲಿಯೂ ಯಾವ ಕೆಲಸವೂ ಸಿದ್ಧಿಸುವುದಿಲ್ಲ.

೫೧–೫೨. ವಿಧವೆಯಾದ ತಾಯಿಯೊಬ್ಬಳನ್ನು ಬಿಟ್ಟು ಉಳಿದ ವಿಧವೆಯರೆಲ್ಲರೂ ಅಮಂಗಳರು. ಜಾಣನಾದವನು ಸರ್ಪದಂತಿರುವ ಆ ವಿಧವೆಯರ ಆಶೀರ್ವಾದವನ್ನು ಪರಿಗ್ರಹಿಸಕೂಡದು. ಬ್ರಾಹ್ಮಣರು ಕನ್ಯೆಯ ಮದುವೆಯ ಕಾಲದಲ್ಲಿ "ಗಂಡನು ಜೀವಿಸಿರಲಿ, ಅಥವಾ ಮೃತನಾಗಲಿ ಅವನಿಗೆ ನೀನು ಸಹಚಾರಿಣಿಯಾಗು" ಎಂದು ಹೇಳುವರು.

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. ......... 4729

CC-0. Jangamwadi Math Collection. Digitized by eGangotri

ಅನುವ್ರಜಂತೀ ಭರ್ತಾರಂ ಗೃಹಾತ್ಪಿತೃವನಂ ಮುದಾ ।
ಪದೇಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೫೩ ॥
ವ್ಯಾಲಗ್ರಾಹೀ ಯಥಾವ್ಯಾಲಂ ಬಲಾದುದ್ಧರತೇ ಬಿಲಾತ್ ।
ಏವಮುತ್ಕ್ರಮ್ಯ ದೂತೇಭ್ಯಃ ಪತಿಂ ಸ್ವರ್ಗಂ ವ್ರಜೇತ್ಸತೀ ॥ ೫೪ ॥
ಯಮದೂತಾಃ ಪಲಾಯಂತೇ ತಾಮಾಲೋಕ್ಯ ಪತಿವ್ರತಾಂ ।
ತಪನಸ್ತಪ್ಯತೇ ನೂನಂ ದಹನೋಽಪಿ ಚ ದಹ್ಯತೇ ॥ ೫೫ ॥
ಕಂಪಂತೇ ಸರ್ವತೇಜಾಂಸಿ ದೃಷ್ಟ್ವಾ ಪಾತಿವ್ರತಂ ಮಹಃ ।
ಯಾವತ್ಸ್ವಲೋಮಸಂಖ್ಯಾಽಸ್ತಿ ತಾವತ್ಕೋಟ್ಯಯುತಾನಿ ಚ ॥ ೫೬ ॥
ಭರ್ತ್ರಾ ಸ್ವರ್ಗಸುಖಂ ಭುಂಕ್ತೇ ರಮಮಾಣಾ ಪತಿವ್ರತಾ ।
ಧನ್ಯಾ ಸಾ ಜನನೀ ಲೋಕೇ ಧನ್ಯೋಽಸೌ ಜನಕಃ ಪುನಃ ॥ ೫೭ ॥
ಧನ್ಯಃ ಸ ಚ ಪತಿಃ ಶ್ರೀಮಾನ್ಯೇಷಾಂ ಗೇಹೇ ಪತಿವ್ರತಾ ।
ಪಿತೃವಂಶ್ಯಾ ಮಾತೃವಂಶ್ಯಾಃ ಪತಿವಂಶ್ಯಾಸ್ತ್ರಯಸ್ತ್ರಯಃ ।
ಪತಿವ್ರತಾಯಾಃ ಪುಣ್ಯೇನ ಸ್ವರ್ಗಸೌಖ್ಯಾನಿ ಭುಂಜತೇ ॥ ೫೮ ॥
ಶೀಲಭಂಗೇನ ದುರ್ವೃತ್ತಾಃ ಪಾತಯಂತಿ ಕುಲತ್ರಯಂ ।
ಪಿತುರ್ಮಾತುಸ್ತಥಾ ಪತ್ಯುರಿಹಾಽಮುತ್ರ ಚ ದುಃಖಿತಾಃ ॥ ೫೯ ॥

---

೫೩. ಮನೆಯಿಂದ ಸ್ಮಶಾನದವರೆಗೆ ಮೃತಪತಿಯನ್ನು ಹಿಂಬಾಲಿಸುವ ಹೆಂಗಸು ನಿಶ್ಚಯವಾಗಿ ಪ್ರತಿಹೆಜ್ಜೆಯಲ್ಲಿಯೂ ಅಶ್ವಮೇಧಯಾಗದ ಫಲವನ್ನು ಹೊಂದುವಳು.

೫೪. ಹಾವಾಡಿಗನು ಹಾವನ್ನು ಬಿಲದಿಂದ ಹೊರಗೆಳೆಯುವಂತೆ ಪತಿವ್ರತೆಯು ಪತಿಯನ್ನು ಯಮದೂತರಿಂದ ಸೆಳೆದು ಸ್ವರ್ಗಕ್ಕೆ ಕಳುಹಿಸುವಳು.

೫೫. ಆ ಪತಿವ್ರತೆಯನ್ನು ನೋಡಿ ಯಮದೂತರು ಓಡಿಹೋಗುವರು. ಸೂರ್ಯನೂ ತಪಿಸಿಹೋಗುವನು. ಬೆಂಕಿಯೂ ದಗ್ಧವಾಗುವುದು.

೫೬–೫೮. ಪತಿವ್ರತೆಯ ತೇಜಸ್ಸನ್ನು ಕಂಡು ಸಕಲ ತೇಜಸ್ಸುಗಳೂ ನಡುಗುವುವು. ಪತಿವ್ರತೆಯು ತನ್ನ ರೋಮಸಂಖ್ಯೆಗೆ ಸರಿಯಾಗಿ ಅಯುತಕೋಟಿ ವರ್ಷಗಳ ಕಾಲ ಗಂಡನೊಡನೆ ವಿನೋದಪಡುತ್ತ ಸ್ವರ್ಗಸೌಖ್ಯವನ್ನನುಭವಿಸುವಳು. ಪತಿವ್ರತೆಯ ತಾಯಿಯೂ, ತಂದೆಯೂ, ಪತಿಯೂ ಪುಣ್ಯವಂತರು. ಪತಿವ್ರತೆಯ ಪುಣ್ಯದಿಂದ ಅವಳ ತಂದೆ, ತಾಯಿ, ಪತಿಯ ವಂಶದ ಮೂರು ಮೂರು ಮಂದಿ ಪಿತೃಗಳೂ ಸ್ವರ್ಗಸೌಖ್ಯಗಳನ್ನನುಭವಿಸುವರು.

೫೯. ಹೆಂಗಸರು ತಮ್ಮ ನಡತೆಗಳನ್ನು ಕೆಡಿಸಿಕೊಂಡು ದುರ್ಮಾರ್ಗಗಾಮಿನಿಯರಾದರೆ ಅವರು ತಮ್ಮ ತಾಯಿ, ತಂದೆ ಮತ್ತು ಪತಿಯ ಕುಲಗಳನ್ನು ಕೆಡಿಸುವುದಲ್ಲದೆ ತಾವೂ ಇಹಪರಗಳಲ್ಲಿ ದುಃಖಪಡುವರು.

CC-0. Jangamwadi Math Collection. Digitized by eGangotri

ಪತಿವ್ರತಾಯಾಶ್ಚರಣೋ ಯತ್ರಯತ್ರ ಸ್ಪೃಶೇದ್ಭುವಂ ।
ಸಾ ತೀರ್ಥಭೂಮಿರ್ಮಾನ್ಯೇತಿ ನಾಽತ್ರ ಭಾರೋಽಸ್ತಿ ಪಾವನಃ ॥ ೬೦ ॥
ಬಿಭ್ಯತ್ಪತಿವ್ರತಾಸ್ಪರ್ಶಂ ಕುರುತೇ ಭಾನುಮಾನಪಿ ।
ಸೋಮೋ ಗಂಧರ್ವ ಏವಾಽಪಿ ಸ್ವಪಾವಿತ್ರ್ಯಾಯ ನಾಽನ್ಯಥಾ ॥ ೬೧ ॥
ಆಪಃ ಪತಿವ್ರತಾಸ್ಪರ್ಶಮಭಿಲಷ್ಯಂತಿ ಸರ್ವದಾ ।
ಗಾಯತ್ರ್ಯ್ಯಘವಿನಾಶೋ ನೋ ಪಾತಿವ್ರತ್ಯೇನ ಸಾಽಘನುತ್ ॥ ೬೨ ॥
ಗೃಹೇ ಗೃಹೇ ನ ಕಿಂ ನಾರ್ಯೋ ರೂಪಲಾವಣ್ಯಗರ್ವಿತಾಃ ।
ಪರಂ ವಿಶ್ವೇಶಭಕ್ತ್ಯೈವ ಲಭ್ಯತೇ ಸ್ತ್ರೀ ಪತಿವ್ರತಾ ॥ ೬೩ ॥
ಭಾರ್ಯಾ ಮೂಲಂ ಗೃಹಸ್ಥಸ್ಯ ಭಾರ್ಯಾ ಮೂಲಂ ಸುಖಸ್ಯ ಚ ।
ಭಾರ್ಯಾ ಧರ್ಮಫಲಾಯೈವ ಭಾರ್ಯಾ ಸಂತಾನವೃದ್ಧಯೇ ॥ ೬೪ ॥
ಪರಲೋಕಸ್ತ್ವಯಂ ಲೋಕೋ ಜೀಯತೇ ಭಾರ್ಯಯಾ ದ್ವಯಂ ।
ದೇವಪಿತ್ರತಿಥೀನಾಂ ಚ ತೃಪ್ತಿಃ ಸ್ಯಾದ್ಭಾರ್ಯಯಾ ಗೃಹೇ ।
ಗೃಹಸ್ಥಃ ಸ ತು ವಿಜ್ಞೇಯೋ ಗೃಹೇ ಯಸ್ಯ ಪತಿವ್ರತಾ ॥ ೬೫ ॥

---

೬೦. ಪತಿವ್ರತೆಯ ಪಾದಗಳು ಎಲ್ಲಿ ಎಲ್ಲಿ ಭೂಮಿಯನ್ನು ಸ್ಪರ್ಶಿಸುವುವೊ ಆ ಸ್ಥಳವು ಪೂಜ್ಯವಾದ ತೀರ್ಥಭೂಮಿಯಾಗುವುದು. ಪವಿತ್ರವಾದುದು ಎಂದಿಗೂ ಭಾರವಾಗುವುದಿಲ್ಲ.

೬೧. ಸೂರ್ಯನೂ ಹೆದರುತ್ತಲೇ ಪತಿವ್ರತೆಯನ್ನು ಮುಟ್ಟುವನು. ಚಂದ್ರನೂ, ಗಂಧರ್ವನೂ ತಮ್ಮ ಶುದ್ಧಿಗಾಗಿಯೆ ಪತಿವ್ರತೆಯನ್ನು ಮುಟ್ಟುವರು.

೬೨. ನೀರು ಯಾವಾಗಲೂ ಪತಿವ್ರತೆಯ ಸ್ಪರ್ಶವನ್ನು ಅಪೇಕ್ಷಿಸುವುದು. ಗಾಯತ್ರಿಯು ಪಾಪವನ್ನು ಹೋಗಲಾಡಿಸುವುದಿಲ್ಲ; ಪತಿವ್ರತೆಯು ತನ್ನ ಪಾತಿವ್ರತ್ಯದಿಂದ ಪಾಪವನ್ನು ಪರಿಹರಿಸುವಳು.

೬೩. ಪ್ರತಿಯೊಂದು ಮನೆಯಲ್ಲಿಯೂ ಸೌಂದರ್ಯದಿಂದ ಅಹಂಕಾರಗೊಂಡ ಹೆಂಗಸರಿಲ್ಲವೇನು? ಆದರೆ ಮಾನವನಿಗೆ ಪರಮೇಶ್ವರನಲ್ಲಿಯ ಭಕ್ತಿಯಿಂದಲೇ ಪತಿವ್ರತೆಯಾದ ಪತ್ನಿಯು ದೊರಕುವಳು.

೬೪. ಗೃಹಸ್ಥನಿಗೆ ಹೆಂಡತಿಯೇ ಗಾರ್ಹಸ್ಥ್ಯಕ್ಕೂ, ಸುಖಕ್ಕೂ, ಧರ್ಮಫಲಕ್ಕೂ, ಸಂತತಿವೃದ್ಧಿಗೂ ಕಾರಣಳು.

೬೫. ಪತಿಯು ಹೆಂಡತಿಯಿಂದಲೇ ಇಹಪರಲೋಕಗಳನ್ನು ಗೆಲ್ಲುವನು. ಮನೆಯಲ್ಲಿ ಪತ್ನಿಯಿಂದಲೇ ದೇವತೆಗಳಿಗೂ, ಪಿತೃಗಳಿಗೂ, ಅತಿಥಿಗಳಿಗೂ ತೃಪ್ತಿಯಾಗುವುದು. ಯಾವನ ಮನೆಯಲ್ಲಿ ಪತಿವ್ರತೆಯಿರುವಳೊ, ಅವನೇ ಗೃಹಸ್ಥನು.

CC-0. Jangamwadi Math Collection. Digitized by eGangotri

ಯಥಾ ಗಂಗಾಽವಗಾಹೇನ ಶರೀರಂ ಪಾವನಂ ಭವೇತ್ ।
ತಥಾ ಪತಿವ್ರತಾಂ ದೃಷ್ಟ್ವಾ ಸದನಂ ಪಾವನಂ ಭವೇತ್ ॥ ೬೩ ॥
ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ಪತಿಂ ।
ತಸ್ಮಾದ್ಭೂಶಯನಂ ಕಾರ್ಯಂ ಪತಿಸೌಖ್ಯಸಮೀಹಯಾ ॥ ೬೭ ॥
ನೈವಾಂಗೋದ್ವರ್ತನಂ ಕಾರ್ಯಂ ಸ್ತ್ರಿಯಾ ವಿಧವಯಾ ಕ್ವಚಿತ್ ।
ಗಂಧದ್ರವ್ಯಸ್ಯ ಸಂಭೋಗೋ ನೈವಕಾರ್ಯಸ್ತಯಾ ಕ್ವಚಿತ್ ॥ ೬೮ ॥
ತರ್ಪಣಂ ಪ್ರತ್ಯಹಂ ಕಾರ್ಯಂ ಭರ್ತುಃ ಕುಶತಿಲೋದಕೈಃ ।
ತತ್ಪಿತುಸ್ತತ್ಪಿತುಶ್ಚಾಽಪಿ ನಾಮಗೋತ್ರಾದಿ ಪೂರ್ವಕಂ ॥ ೬೯ ॥
ವಿಷ್ಣೋಃ ಸಂಪೂಜನಂ ಕಾರ್ಯಂ ಪತಿಬುದ್ಧ್ಯಾ ನ ಚಾಽನ್ಯಥಾ ।
ಪತಿಮೇವ ಸದಾ ಧ್ಯಾಯೇದ್ವಿಷ್ಣುರೂಪಧರಂ ಹರಿಂ ॥ ೭೦ ॥
ಯದ್ಯದಿಷ್ಟತಮಂ ಲೋಕೇ ಯದ್ಯತ್ಪತ್ಯುಃ ಸಮೀಹಿತಂ ।
ತತ್ತದ್ಗುಣವತೇ ದೇಯಂ ಪತಿಪ್ರೀಣನಕಾಮ್ಯಯಾ ॥ ೭೧ ॥
ವೈಶಾಖೇ ಕಾರ್ತಿಕೇ ಮಾಸೇ ವಿಶೇಷನಿಯಮಾಂಶ್ಚರೇತ್ ।
ಸ್ನಾನಂ ದಾನಂ ತೀರ್ಥಯಾತ್ರಾಂ ಪುರಾಣಶ್ರವಣಂ ಮುಹುಃ ॥ ೭೨ ॥

---

೬೬. ಗಂಗೆಯಲ್ಲಿ ಸ್ನಾನಮಾಡುವುದರಿಂದ ಶರೀರವು ಪವಿತ್ರವಾಗುತ್ತದೆ. ಪತಿವ್ರತೆಯನ್ನು ನೋಡಿದರೆಯೆ ಮನೆಯು ಪಾವನವಾಗುವುದು.

೬೭–೬೯. ಮಂಚದಲ್ಲಿ ಮಲಗುವ ವಿಧವೆಯು ಗಂಡನನ್ನು ನರಕಕ್ಕೆ ತಳ್ಳುವಳು. ಆದುದರಿಂದ ವಿಧವೆಯು ಪರಲೋಕದಲ್ಲಿ ಪತಿಯ ಸೌಖ್ಯಕ್ಕೋಸ್ಕರವೇ ಭೂಮಿಯಲ್ಲಿ ಮಲಗಬೇಕು. ವಿಧವೆಯು ಯಾವಾಗಲೂ ತನ್ನ ಅಂಗಗಳಿಗೆ ಲೇಪನದ್ರವ್ಯಗಳನ್ನು ಹಚ್ಚಿಕೊಳ್ಳಕೂಡದು. ಅವಳು ಸುವಾಸನೆಯ ವಸ್ತುಗಳನ್ನು ಉಪಯೋಗಿಸಬಾರದು. ವಿಧವೆಯು ದರ್ಭೆ, ಎಳ್ಳು, ನೀರುಗಳಿಂದ ಪ್ರತಿದಿನವೂ ಗಂಡನಿಗೂ, ಅವನ ತಂದೆಗೂ, ಅಜ್ಜನಿಗೂ ನಾಮಗೋತ್ರೋಚ್ಚಾರಣಪುರಸ್ಸರವಾಗಿ ತರ್ಪಣಕೊಡಬೇಕು.

೭೦. ಪತಿಯೆಂದು ತಿಳಿದು ವಿಷ್ಣುವನ್ನು ಪೂಜಿಸಬೇಕು. ವಿಷ್ಣುವನ್ನು ವಿಷ್ಣುರೂಪಧಾರಿಯಾದ ಪತಿಯನ್ನಾಗಿಯೇ ಭಾವಿಸಿ ಧ್ಯಾನಿಸಬೇಕು.

೭೧. ಲೋಕದಲ್ಲಿ ಗಂಡನಿಗೆ ಯಾವ ಯಾವ ವಸ್ತುಗಳು ಪ್ರಿಯವಾದುವೊ, ಆಯಾ ವಸ್ತುಗಳನ್ನು ಗಂಡನ ಪ್ರೀತಿಯನ್ನು ಪಡೆಯಲೋಸುಗ ಗುಣಶಾಲಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು.

೭೨. ವಿಧವೆಯು ವೈಶಾಖ, ಕಾರ್ತಿಕಮಾಸಗಳಲ್ಲಿ ಸ್ನಾನ, ದಾನ, ತೀರ್ಥಯಾತ್ರೆ, ಪುರಾಣಶ್ರವಣ ರೂಪಗಳಾದ ವಿಶೇಷ ನಿಯಮಗಳನ್ನಾಚರಿಸಬೇಕು.

CC-0. Jangamwadi Math Collection. Digitized by eGangotri

ವೈಶಾಖೇ ಜಲಕುಂಭಾಶ್ಚ ಕಾರ್ತಿಕೇ ಘೃತದೀಪಿಕಾಃ ।
ಮಾಘೇ ಧಾನ್ಯತಿಲೋತ್ಸರ್ಗಃ ಸ್ವರ್ಗಲೋಕೇ ವಿಶಿಷ್ಯತೇ ॥ ೭೩ ॥
ಪ್ರಪಾ ಕಾರ್ಯಾಚ ವೈಶಾಖೇ ದೇವೇ ದೇಯಾ ಗಲಂತಿಕಾ ।
ಉಶೀರಂ ವ್ಯಜನಂ ಛತ್ರಂ ಸೂಕ್ಷ್ಮವಾಸಾಂಸಿ ಚಂದನಂ ॥ ೭೪ ॥
ಸಕರ್ಪೂರಂ ಚ ತಾಂಬೂಲಂ ಪುಷ್ಪದಾನಂ ತಥೈವ ಚ ।
ಜಲಪಾತ್ರಾಣ್ಯನೇಕಾನಿ ತಥಾ ಪುಷ್ಪಗೃಹಾಣಿ ಚ ॥ ೭೫ ॥
ಪಾನಾನಿ ಚ ವಿಚಿತ್ರಾಣಿ ದ್ರಾಕ್ಷಾರಂಭಾಫಲಾನಿ ಚ ।
ದೇಯಾನಿ ದ್ವಿಜಮುಖ್ಯೇಭ್ಯಃ ಪತಿರ್ಮೇ ಪ್ರೀಯತಾಮಿತಿ ॥ ೭೬ ॥
ಊರ್ಜೇ ಯವಾಽನ್ನಮಶ್ನೀಯಾದೇಕಾನ್ನಮಥವಾ ಪುನಃ ।
ವೃಂತಾಕಂ ಸೂರಣಂ ಚೈವ ಶೂಕಶಿಂಬೀಂ ಚ ವರ್ಜಯೇತ್ ॥ ೭೭ ॥
ಕಾರ್ತಿಕೇ ವರ್ಜಯೇತ್ತೈಲಂ ಕಾಂಸ್ಯಂ ಚಾಽಪಿ ವಿವರ್ಜಯೇತ್ ।
ಕಾರ್ತಿಕೇ ಮೌನನಿಯಮೇ ಚಾರುಘಂಟಾಂ ಪ್ರದಾಪಯೇತ್ ॥ ೭೮ ॥
ಪತ್ರಭೋಜೀ ಕಾಂಸ್ಯಪಾತ್ರಂ ಘೃತಪೂರ್ಣಂ ಪ್ರಯಚ್ಛತಿ ।
ಭೂಮಿಶಯ್ಯಾವ್ರತೇ ದೇಯಾ ಶಯ್ಯಾ ಶ್ಲಕ್ಷ್ಣಾ ಸ ತೂಲಿಕಾ ॥ ೭೯ ॥

---

೭೩. ವೈಶಾಖಮಾಸದಲ್ಲಿ ನೀರಿನ ಕಲಶಗಳನ್ನೂ, ಕಾರ್ತಿಕಮಾಸದಲ್ಲಿ ತುಪ್ಪದ ದೀವಿಗೆಗಳನ್ನೂ, ಮಾಘಮಾಸದಲ್ಲಿ ಧಾನ್ಯ ಮತ್ತು ಎಳ್ಳುಗಳನ್ನೂ ದಾನಮಾಡಿದರೆ ಅವು ಸ್ವರ್ಗಲೋಕದಲ್ಲಿ ಅನಂತವಾಗುವುವು.

೭೪–೭೬. ವೈಶಾಖಮಾಸದಲ್ಲಿ ಅರವಟ್ಟಿಗೆಗಳನ್ನಿಡಬೇಕು. ದೇವರಿಗೆ ತೀರ್ಥದ ಗಿಂಡಿಯನ್ನು ದಾನಮಾಡಬೇಕು. ಲಾವಂಚ, ಬೀಸಣಿಗೆ, ಕೊಡೆ, ತೆಳುವಾದ ಬಟ್ಟೆ, ಗಂಧ, ಕರ್ಪೂರಸಹಿತವಾದ ತಾಂಬೂಲ, ಹೂವು, ಅನೇಕ ವಿಧಗಳಾದ ಜಲಪಾತ್ರೆಗಳು, ಹೂವಿನ ಮನೆಗಳು, ಅನೇಕ ಬಗೆಯ ಪಾನೀಯಗಳು, ದ್ರಾಕ್ಷಿ, ಬಾಳೆಹಣ್ಣು, ಇವುಗಳನ್ನು "ನನ್ನ ಪತಿಯು ತೃಪ್ತನಾಗ" ಲೆಂದು ಉತ್ತಮಬ್ರಾಹ್ಮಣರಿಗೆ ದಾನಮಾಡಬೇಕು.

೭೭. ಕಾರ್ತಿಕಮಾಸದಲ್ಲಿ ಯಾವುದಾದರೂ ಒಂದು ಧಾನ್ಯದ ಅನ್ನವನ್ನೊ ಅಥವಾ ಯಾವುದಾದರೊಂದನ್ನವನ್ನೊ ಊಟಮಾಡಬೇಕು. ಬದನೆಕಾಯಿ, ಸುವರ್ಣಗಡ್ಡೆ, ನಸುಗುನ್ನಿಗಳನ್ನು ಬಿಡಬೇಕು.

೭೮. ಕಾರ್ತಿಕಮಾಸದಲ್ಲಿ ಎಣ್ಣೆಯನ್ನೂ, ಕಂಚನ್ನೂ ತ್ಯಜಿಸಬೇಕು. ಈ ಮಾಸದಲ್ಲಿ ಮೌನವ್ರತವನ್ನಾಚರಿಸಿ ಸುಂದರವಾದ ಘಂಟೆಯನ್ನು ದಾನ ಮಾಡಬೇಕು.

೭೯. ಎಲೆಯಲ್ಲಿ ಭೋಜನಮಾಡುವವಳು ತುಪ್ಪತುಂಬಿದ ಕಂಚಿನ ಪಾತ್ರೆಯನ್ನು ದಾನಮಾಡಬೇಕು. ನೆಲದಲ್ಲಿ ಮಲಗುವ ವ್ರತವನ್ನು ಹಿಡಿದರೆ ಮೃದುವಾದ ಹಾಸಿಗೆಯನ್ನು ದಾನಮಾಡಬೇಕು.

F

CC-0. Jangamwadi Math Collection. Digitized by eGangotri

ಫಲತ್ಯಾಗೇ ಫಲಂ ದೇಯಂ ರಸತ್ಯಾಗೇ ಚ ತದ್ರಸಃ ।
ಧಾನ್ಯತ್ಯಾಗೇ ಚ ತದ್ಧಾನ್ಯಮಥವಾ ಶಾಲಯಃ ಸ್ಮೃತಾಃ ।
ಧೇನುಂ ದದ್ಯಾತ್ಪ್ರಯತ್ನೇನ ಸಾಲಂಕಾರಾಂ ಸ ಕಾಂಚನಾಂ ॥ ೮೦ ॥
ಏಕತಃ ಸರ್ವದಾನಾನಿ ದೀಪದಾನಂ ತಥೈಕತಃ ।
ಕಾರ್ತಿಕೇ ದೀಪದಾನಸ್ಯ ಕಲಾಂ ನಾಽರ್ಹಂತಿ ಷೋಡಶೀಂ ॥ ೮೧ ॥
ಇತ್ಯಾದಿ ವಿಧವಾನಾಂ ಚ ನಿಯಮಾಃ ಸಂಪ್ರಕೀರ್ತಿತಾಃ ।
ತೇಷಾಂ ಫಲಮಿದಂ ರಾಜನ್ನಾಽನ್ಯೇಷಾಂ ಚ ಕದಾಚನ ॥ ೮೨ ॥
ಧರ್ಮವಾಪೀಂ ಸಮಾಸಾದ್ಯ ದಾನಂ ದದ್ಯಾದ್ವಿಚಕ್ಷಣಃ ।
ಕೋಟಿಧಾ ವರ್ಧತೇ ನಿತ್ಯಂ ಬ್ರಹ್ಮಣೋ ವಚನಂ ಯಥಾ ॥ ೮೩ ॥
ತಿಲಧೇನುಂ ಚ ಯೋ ದದ್ಯಾದ್ಧರ್ಮೇಶ್ವರಪುರಃಸ್ಥಿತಃ ।
ತಿಲಸಂಖ್ಯಾನಿ ವರ್ಷಾಣಿ ಸ್ವರ್ಗೇ ಲೋಕೇ ಮಹೀಯತೇ ॥ ೮೪ ॥
ಧರ್ಮಕ್ಷೇತ್ರೇ ತು ಸಂಪ್ರಾಪ್ಯ ಶ್ರಾದ್ಧಂ ಕುರ್ಯಾದತಂದ್ರಿತಃ ।
ತಸ್ಯ ಸಂವತ್ಸರಂ ಯಾವತ್ತೃಪ್ತಾಃ ಸ್ಯುಃ ಪಿತರೋ ಧ್ರುವಂ ॥ ೮೫ ॥
ಯೇ ಚಾಽನ್ಯೇ ಪೂರ್ವಜಾಃ ಸ್ವರ್ಗೇ ಯೇ ಚಾಽನ್ಯೇ ನರಕೌಕಸಃ ।
ಯೇ ಚ ತಿರ್ಯಕ್ತ್ವಮಾಪನ್ನಾ ಯೇ ಚ ಭೂತಾದಿ ಸಂಸ್ಥಿತಾಃ ॥ ೮೬ ॥

---

೮೦. ಫಲವನ್ನು ಬಿಟ್ಟದ್ದರೆ ಫಲವನ್ನೂ, ರಸ ಪದಾರ್ಥಗಳನ್ನು ಬಿಟ್ಟದ್ದರೆ ರಸ ಪದಾರ್ಥಗಳನ್ನೂ, ಧಾನ್ಯವನ್ನು ಬಿಟ್ಟದ್ದರೆ ಆ ಧಾನ್ಯವನ್ನೂ, ಅಥವಾ ಬತ್ತ ವನ್ನೂ ದಾನಮಾಡಬೇಕು. ಪ್ರಯತ್ನದಿಂದಲಾದರೂ ಅಲಂಕಾರಗಳಿಂದಲೂ, ಸುವರ್ಣದಿಂದಲೂ ಸಹಿತವಾದ ಗೋವನ್ನು ದಾನಮಾಡಬೇಕು.

೮೧. ಒಂದೆಡೆ ಸಕಲದಾನಗಳನ್ನೂ, ಒಂಡೆದೆ ದೀಪದಾನವನ್ನೂ ತುಲನ ಮಾಡಿದರೆ ಕಾರ್ತಿಕಮಾಸದಲ್ಲಿ ದೀಪದಾನಕ್ಕೆ ಒಂದು ಕಲೆಯಷ್ಟಾದರೂ ಸಮ ವಾಗುವುದಿಲ್ಲ.

೮೨. ಅರಸ! ವಿಧವೆಯರ ನಿಯಮಗಳನ್ನು ಈ ರೀತಿ ನಿನಗೆ ಹೇಳಿದೆನು. ಅವುಗಳ ಫಲವು ಇತರ ನಿಯಮಗಳಿಂದಾಗುವುದಿಲ್ಲ.

೮೩. ಜಾಣನು ಧರ್ಮವಾಪಿಯನ್ನು ಹೊಂದಿ ದಾನವನ್ನಿತ್ತರೆ ಅದು ಬ್ರಹ್ಮನ ವಚನದಂತೆ ನಿತ್ಯವೂ ಕೋಟಿ ಪ್ರಕಾರವಾಗಿ ಹೆಚ್ಚುವುದು.

೮೪. ಧರ್ಮೇಶ್ವರನ ಮುಂದೆ ನಿಂತು ಯಾವನು ತಿಲಧೇನುವನ್ನು ದಾನ ಮಾಡುವನೊ, ಅವನು ತಿಲಸಂಖ್ಯೆಯಷ್ಟು ವರ್ಷಕಾಲ ಸ್ವರ್ಗಲೋಕದಲ್ಲಿ ಪೂಜ್ಯನಾಗುವನು.

೮೫. ಧರ್ಮಕ್ಷೇತ್ರವನ್ನು ಹೊಂದಿ ಆಲಸ್ಯವಿಲ್ಲದೆ ಶ್ರಾದ್ಧವನ್ನು ಮಾಡಿ ದರೆ ಅವನ ಪಿತೃಗಳು ಒಂದು ವರ್ಷಕಾಲ ತೃಪ್ತರಾಗಿರುವರು.

೮೬–೮೭. ಯಾವನ ಪೂರ್ವಪಿತೃಗಳು ಸ್ವರ್ಗವಾಸಿಗಳಾಗಿರುವರೊ,

CC-0. Jangamwadi Math Collection. Digitized by eGangotri

ತಾನ್ಸರ್ವಾನ್ಧರ್ಮಕೂಪೇ ವೈ ಶ್ರಾದ್ಧಂ ಕುರ್ಯಾದ್ಯಥಾವಿಧಿ ।
ಅತ್ರ ಪ್ರಕಿರಣಂ ಯತ್ತು ಮನುಷ್ಯೈಃ ಕ್ರಿಯತೇ ಭುವಿ ।
ತೇನ ತೇ ತೃಪ್ತಿಮಾಯಾಂತಿ ಯೇ ಪಿಶಾಚತ್ವಮಾಗತಾಃ ॥ ೮೭ ॥
ಯೇಷಾಂ ತು ಸ್ನಾನವಸ್ತ್ರೋತ್ಥಂ ಭೂಮೌ ಪತತಿ ಪುತ್ರಕ ।
ತೇನ ಯೇ ತರುತಾಂ ಪ್ರಾಪ್ತಾಸ್ತೇಷಾಂ ತೃಪ್ತಿಃ ಪ್ರಜಾಯತೇ ॥ ೮೮ ॥
ಯಾ ವೈ ಯವಾನಾಂ ಕಣಿಕಾಃ ಪತಂತಿ ಧರಣೀತಲೇ ।
ತಾಭಿರಾಪ್ಯಾಯನಂ ತೇಷಾಂ ಯೇ ತು ದೇವತ್ವಮಾಗತಾಃ ॥ ೮೯ ॥
ಉದ್ಧೃತೇಷ್ವಥ ಪಿಂಡೇಷು ಯಾವಾನ್ನ ಕಣಿಕಾ ಭುವಿ ।
ತಾಭಿರಾಪ್ಯಾಯನಂ ತೇಷಾಂ ಯೇಽಚ ಪಾತಾಲಮಾಗತಾಃ ॥ ೯೦ ॥
ಯೇ ವಾ ವರ್ಣಾಶ್ರಮಾಚಾರಕ್ರಿಯಾಲೋಪಾ ಹ್ಯಸಂಸ್ಕೃತಾಃ ।
ವಿಪನ್ನಾಸ್ತೇ ಭವಂತ್ಯತ್ರ ಸಮ್ಮಾರ್ಜನಜಲಾಽಶಿನಃ ॥ ೯೧ ॥
ಭುಕ್ತ್ವಾ ವಾಽಚಮನಂ ಯಚ್ಚ ಜಲಂ ಪತತಿ ಭೂತಲೇ ।
ಬ್ರಾಹ್ಮಣಾನಾಂ ತಥೈವಾಽನ್ಯೇ ತೇನ ತೃಪ್ತಿಂ ಪ್ರಯಾಂತಿ ವೈ ॥ ೯೨ ॥
ಏವಂ ಯೋ ಯಜಮಾನಶ್ಚ ಯಚ್ಚ ತೇಷಾಂ ದ್ವಿಜನ್ಮನಾಂ ।
ಕ್ವಚಿಜ್ಜಲಾನ್ನವಿಕ್ಷೇಪಃ ಶುಚಿರಪ್ಸ್ಪೃಷ್ಟ ಏವ ಚ ॥ ೯೩ ॥

---

ಯಾರು ನರಕವಾಸಿಗಳಾಗಿರುವರೊ, ಯಾರು ಪಶುಪಕ್ಷಿಭೂತಾದಿಗಳಾಗಿರುವರೊ, ಅವರೆಲ್ಲರನ್ನೂ ಉದ್ದೇಶಿಸಿ ಧರ್ಮವಾಪಿಯಲ್ಲಿ ವಿಹಿತಕ್ರಮದಿಂದ ಶ್ರಾದ್ಧ ಮಾಡಬೇಕು. ಇಲ್ಲಿ ನೆಲದಮೇಲೆ ಅನ್ನವನ್ನು ಎರಚಿದರೆ ಪಿಶಾಚಜನ್ಮವನ್ನು ಪಡೆದ ಪಿತೃಗಳು ತೃಪ್ತರಾಗುವರು.

೮೮. ಇಲ್ಲಿ ಸ್ನಾನಮಾಡುವಾಗ ಬಟ್ಟೆಯಿಂದ ಸುರಿದ ನೀರಿನಿಂದ ವೃಕ್ಷ ಜನ್ಮವನ್ನು ಪಡೆದ ಪಿತೃಗಳು ತೃಪ್ತರಾಗುವರು.

೮೯. ಇಲ್ಲಿ ನೆಲದಮೇಲೆ ಬಿದ್ದ ಅಕ್ಕಿಯ ಕಾಳುಗಳಿಂದ ದೇವತ್ವವನ್ನು ಹೊಂದಿದ ಪಿತೃಗಳಿಗೆ ಸುಖವಾಗುವುದು.

೯೦. ಪಿಂಡೋದ್ಧರಣಮಾಡಿದ ಮೇಲೆ ಭೂಮಿಲ್ಲಿರುವ ಅನ್ನದಗಳುಗಳಿಂದ ಪಾತಾಳವಾಸಿಗಳಾದ ಪಿತೃಗಳು ಸುಖಪಡುವರು.

೯೧. ಯಾರು ಜಾತಿ ಮತ್ತು ಆಶ್ರಮಗಳ ಆಚಾರ ಕ್ರಿಯೆಗಳಿಲ್ಲದೆಯೂ, ಸಂಸ್ಕಾರವಿಲ್ಲದೆಯೂ ಮೃತರಾಗಿರುವರೊ, ಅವರು ಇಲ್ಲಿ ಸಂಮಾರ್ಜನದ ನೀರನ್ನು ಕುಡಿಯುವರು.

೯೨. ಇತರರು ಬ್ರಾಹ್ಮಣರ ಊಟ ಮತ್ತು ಆಚಮನವಾದ ಬಳಿಕ ನೆಲದಮೇಲೆ ಬಿದ್ದ ನೀರಿನಿಂದ ತೃಪ್ತರಾಗುವರು.

೯೩–೯೪. ಸರಿಯಾಗಿ ಶ್ರಾದ್ಧವನ್ನು ಮಾಡುವ ಬ್ರಾಹ್ಮಣರ ಸಂಬಂಧ

CC-0. Jangamwadi Math Collection. Digitized by eGangotri

ಯೇ ಚಾऽನ್ಯೇ ನರಕೇ ಜಾತಾಸ್ತತ್ರ ಯೋನ್ಯಂತರಂ ಗತಾಃ ।
ಪ್ರಯಾಂತ್ಯಾಪ್ಯಾಯನಂ ವತ್ಸ ಸಮ್ಯಕ್ಛ್ರಾದ್ಧಕ್ರಿಯಾವತಾಂ ॥ ೯೪ ॥
ಅನ್ಯಾಯೋಪಾರ್ಜಿತೈರ್ದ್ರವ್ಯೈಃ ಶ್ರಾದ್ಧಂ ಯತ್ಕ್ರಿಯತೇ ನರೈಃ ।
ತೃಪ್ಯಂತಿ ತೇನ ಚಂಡಾಲಪುಲ್ಕಸಾದಿಷು ಯೋನಿಷು ॥ ೯೫ ॥
ಏವಮಾಪ್ಯಾಯಿತಾ ವತ್ಸ ತೇನ ಚಾऽನೇಕ ಬಾಂಧವಾಃ ।
ಶ್ರಾದ್ಧಂ ಕರ್ತುಮಶಕ್ತಿಶ್ಚೇಚ್ಛಾಕೈರಪಿ ಹಿ ಜಾಯತೇ ॥ ೯೬ ॥
ತಸ್ಮಾಚ್ಛ್ರಾದ್ಧಂ ನರೋ ಭಕ್ತ್ಯಾ ಶಾಕೈರಪಿ ಯಥಾವಿಧಿ ।
ಕುರುತೇ ಕುರ್ವತಃ ಶ್ರಾದ್ಧಂ ಕುಲಂ ಕ್ವಚಿನ್ನ ಸೀದತಿ ॥ ೯೭ ॥
ಪಾಪಂ ಯದಿ ಕೃತಂ ಸರ್ವಂ ಪಾಪಂ ಚ ವರ್ಧತೇ ಧ್ರುವಂ ।
ಕುರ್ವಾಣೋ ನರಕೇ ಘೋರೇ ಪಚ್ಯತೇ ನಾऽತ್ರ ಸಂಶಯಃ ॥ ೯೮ ॥
ಯಥಾ ಪುಣ್ಯಂ ತಥಾ ಪಾಪಂ ಕೃತಂ ಕರ್ಮ ಶುಭಾऽಶುಭಂ ।
ತತ್ಸರ್ವಂ ವರ್ಧತೇ ನೂನಂ ಧರ್ಮಾऽರಣ್ಯೇ ನೃಪೋತ್ತಮ ॥ ೯೯ ॥

---

ವಾದ ಶುದ್ಧವೂ, ಯಾರೂ ಮುಟ್ಟದೆಯೂ ಇರುವ ಕೆಳಗೆ ಬಿದ್ದಿರುವ ನೀರು ಮತ್ತು ಅನ್ನಗಳಿಂದ ನರಕವನ್ನು ಹೊಂದಿ ಬೇರೆ ಜನ್ಮವನ್ನು ಪಡೆದಿರುವ ಪಿತೃಗಳು ತೃಪ್ತಿಗೊಳ್ಳುವರು.

೯೫. ಅನ್ಯಾಯದಿಂದ ಸಂಪಾದಿಸಿದ ದ್ರವ್ಯಗಳಿಂದ ದ್ವಿಜನು ಶ್ರಾದ್ಧ ಮಾಡಿದರೆ ಅದರಿಂದ ಹೊಲೆಯ ಮತ್ತು ಮಾದಿಗರ ಜಾತಿಯಲ್ಲಿ ಹುಟ್ಟಿದವರು ತೃಪ್ತರಾಗುವರು.

೯೬. ಹೀಗೆ ಈ ಧರ್ಮಾರಣ್ಯದಲ್ಲಿ ವಿಧಿಯಂತೆ ಶ್ರಾದ್ಧಮಾಡುವವನಿಂದ ಅನೇಕ ಮಂದಿ ಬಂಧುಗಳು ಸಂತೋಷಗೊಳ್ಳುವರು. ಈ ರೀತಿ ಶ್ರಾದ್ಧ ಮಾಡಲಾಗದಿದ್ದರೆ ತರಕಾರಿಯಿಂದಲಾದರೂ ಆ ಶ್ರಾದ್ಧವನ್ನು ಮಾಡ ಬಹುದು.

೯೭. ಆದ್ದರಿಂದ ಮನುಷ್ಯನು ಭಕ್ತಿಯಿಂದ ತರಕಾರಿಯಿಂದಲಾದರೂ ವಿಹಿತಕ್ರಮದಿಂದ ಶ್ರಾದ್ಧಮಾಡಬೇಕು. ಶ್ರಾದ್ಧಮಾಡುವವನ ವಂಶವು ಯಾವಾಗಲೂ ಕೆಡುವುದಿಲ್ಲ.

೯೮. ಪಾಪವನ್ನು ಮಾಡಿದರೆ ಆ ಪಾಪವು ಹೆಚ್ಚುತ್ತಲೇ ಹೋಗುವುದು. ಪಾಪ ಮಾಡುವವನು ಘೋರ ನರಕದಲ್ಲಿ ಬಿದ್ದು ದುಃಖಪಡುವನು.

೯೯. ನರೇಂದ್ರ! ಈ ಧರ್ಮಾರಣ್ಯದಲ್ಲಿ ಮಾಡಿದ ಪುಣ್ಯವು ಹೆಚ್ಚಾಗುವಂತೆ ಪಾಪವೂ ಹೆಚ್ಚುವುದು.

CC-0. Jangamwadi Math Collection. Digitized by eGangotri

ಕಾಮಿನಾಂ ಕಾಮದಂ ಚೈವ ಯೋಗಿನಾಂ ಮುಕ್ತಿದಾಯಕಂ ।
ಸಿದ್ಧಾನಾಂ ಸಿದ್ಧಿದಂ ಪ್ರೋಕ್ತಂ ಧರ್ಮಾರಣ್ಯಂ ತು ಸರ್ವದಾ ॥ ೧೦೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಧರ್ಮಾಚಾರ ವರ್ಣನಂ"ನಾಮ ಸಪ್ತಮೋಽಧ್ಯಾಯಃ

---

೧೦೦. ಈ ಧರ್ಮಾರಣ್ಯವು ಕಾಮಿಗಳಿಗೆ ಕಾಮವನ್ನೂ, ಯೋಗಿಗಳಿಗೆ ಮುಕ್ತಿಯನ್ನೂ, ಸಿದ್ಧರಿಗೆ ಕಾರ್ಯಸಿದ್ಧಿಯನ್ನೂ ಯಾವಾಗಲೂ ಕೊಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯಯಲ್ಲಿ "ಧರ್ಮಾಚಾರವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥಾಽಷ್ಟಮೋಽಧ್ಯಾಯಃ

## ವಿಷ್ಣುಸಮಾಗಮಃ

ಯುಧಿಷ್ಠಿರ ಉವಾಚ :—

ಧರ್ಮಾಽರಣ್ಯಕಥಾಂ ಪುಣ್ಯಾಂ ಶ್ರುತ್ವಾ ತೃಪ್ತಿರ್ನ ಮೇ ವಿಭೋ ।
ಯದಾ ಯದಾ ಕಥಯಸಿ ತದಾ ಪ್ರೋತ್ಸಹತೇ ಮನಃ ।
ಅತಃಪರಂ ಕಿಮಭವತ್ಪರಂ ಕೌತೂಹಲಂ ಹಿ ಮೇ ॥ ೧ ॥

ವ್ಯಾಸ ಉವಾಚ :—

ಶೃಣು ಪಾರ್ಥ ಮಹಾಪುಣ್ಯಾಂ ಕಥಾಂ ಸ್ಕಂದಪುರಾಣಜಾಂ ।
ಸ್ಥಾಣುನೋಕ್ತಾಂ ಚ ಸ್ಕಂದಾಯ ಧರ್ಮಾಽರಣ್ಯೋದ್ಭವಾಂ ಶುಭಾಂ॥೨॥
ಸರ್ವತೀರ್ಥಸ್ಯ ಫಲದಾಂ ಸರ್ವೋಪದ್ರವನಾಶಿನೀಂ ।
ಕೈಲಾಸಶಿಖರಾಸೀನಂ ದೇವದೇವಂ ಜಗದ್ಗುರುಂ ।
ಪಂಚವಕ್ತ್ರಂ ದಶಭುಜಂ ತ್ರಿಣೇತ್ರಂ ಶೂಲಪಾಣಿನಂ ॥ ೩ ॥
ಕಪಾಲ ಖಟ್ವಾಂಗಕರಂ ನಾಗಯಜ್ಞೋಪವೀತಿನಂ ।
ಗಣೈಃ ಪರಿವೃತಂ ತತ್ರ ಸುರಾಽಸುರನಮಸ್ಕೃತಂ ॥ ೪ ॥

---

## ಕನ್ನಡದ ಅನುವಾದ

### ವಿಷ್ಣುಸಮಾಗಮ

೧. ಯುಧಿಷ್ಠಿರನು ಕೇಳುತ್ತಾನೆ:—ಸ್ವಾಮಿನ್! ಪವಿತ್ರವಾದ ಧರ್ಮಾರಣ್ಯದ ಕಥೆಯನ್ನು ಕೇಳಿ ನನಗೆ ಇನ್ನೂ ತೃಪ್ತಿಯಾಗಲಿಲ್ಲ. ನೀನು ಹೇಳಿದ ಹಾಗೆಲ್ಲ ನನ್ನ ಮನಸ್ಸು ಉತ್ಸಾಹಗೊಳ್ಳುತ್ತಲೇ ಇರುವುದು. ಮುಂದೇನಾಯಿತು? ನನಗೆ ಕೇಳಲು ಬಹಳ ಕುತೂಹಲವುಂಟಾಗಿದೆ.

೨–೪. ವ್ಯಾಸನು ಹೇಳುತ್ತಾನೆ:–ಯುಧಿಷ್ಠಿರ! ಸ್ಕಂದಪುರಾಣದಲ್ಲಿರುವಂತೆ ಶಿವನು ಸ್ಕಂದನಿಗೆ ಹೇಳಿದುದೂ, ಸಕಲ ತೀರ್ಥಗಳ ಫಲವನ್ನು ಕೊಡುವುದೂ, ಸಮಸ್ತ ಕಷ್ಟಗಳನ್ನು ನಾಶಗೊಳಿಸುವುದೂ ಆದ ಧರ್ಮಾರಣ್ಯದ ಕಥೆಯನ್ನು ಕೇಳು. ಕೈಲಾಸಶಿಖರದಲ್ಲಿ ಕುಳಿತವನೂ, ಜಗತ್ತುಗಳಿಗೆ ಗುರುವೂ, ಐದು ಮುಖಗಳುಳ್ಳವನೂ, ಹತ್ತು ತೋಳುಗಳುಳ್ಳವನೂ, ಮೂರು ಕಣ್ಣುಗಳುಳ್ಳವನೂ, ಶೂಲವನ್ನೂ ಬ್ರಹ್ಮಕಪಾಲ ಮತ್ತು ಖಟ್ವಾಂಗಗಳನ್ನೂ ಕೈಯಲ್ಲಿ ಹಿಡಿದವನೂ, ಸರ್ಪದ ಜನಿವಾರವುಳ್ಳವನೂ, ಪ್ರಮಥಗಣಗಳಿಂದ ಸುತ್ತುವರಿಯಲ್ಪಟ್ಟವನೂ, ದೇವಾಸುರರಿಂದ ನಮಸ್ಕೃತನೂ, ನಾನಾ ವಿಧ ರೂಪಗುಣ

CC-0. Jangamwadi Math Collection. Digitized by eGangotri

ನಾನಾರೂಪಗಣೈರ್ಗೀತಂ ನಾರದಪ್ರಮುಖೈರ್ಯುತಂ ।
ಗಂಧರ್ವೈಶ್ಚಾಽಪ್ಸರೋಭಿಶ್ಚ ಸೇವಿತಂ ತಮುಮಾಪತಿಂ ।
ತತ್ರಸ್ಥಂ ಚ ಮಹಾದೇವಂ ಪ್ರಣಿಪತ್ಯಾಽಬ್ರವೀತ್ಸುತಃ ॥ ೫ ॥

ಸ್ಕಂದ ಉವಾಚ :—

ಸ್ವಾಮಿನ್ನಿಂದ್ರಾದಯೋ ದೇವಾ ಬ್ರಹ್ಮಾದ್ಯಾಶ್ಚೈವ ಸರ್ವಶಃ ।
ತವ ದ್ವಾರೇ ಸಮಾಯಾತಾಸ್ತ್ವದ್ದರ್ಶನೈಕಲಾಲಸಾಃ ।
ಕಿಮಾಜ್ಞಾಪಯಸೇ ದೇವ ಕರವಾಣಿ ತವಾಽಗ್ರತಃ ॥ ೬ ॥

ವ್ಯಾಸ ಉವಾಚ :—

ಸ್ಕಂದಸ್ಯ ವಚನಂ ಶ್ರುತ್ವಾ ಆಸನಾದುತ್ಥಿತೋ ಹರಃ ।
ವೃಷಭಂ ಸ ಸಮಾರೂಢೋ ಗಂತುಕಾಮೋಽಭವತ್ತದಾ ॥ ೭ ॥
ಗಂತುಕಾಮಂ ಶಿವಂ ದೃಷ್ಟ್ವಾ ಸ್ಕಂದೋ ವಾಕ್ಯಮಥಾಽಬ್ರವೀತ್ ॥ ೮ ॥

ಸ್ಕಂದ ಉವಾಚ :—

ಕಿಂ ಕಾರ್ಯಂ ದೇವ ದೇವಾನಾಂ ಯತ್ತ್ವಮಾಹೂಯಸೇ ತ್ವರಂ ।
ವೃಷಂ ತ್ಯಕ್ತ್ವಾ ಕೃಪಾಸಿಂಧೋ ಕೃಪಾಽಸ್ತಿ ಯದಿ ಮೇ ವದ ॥ ೯ ॥
ದೇವದಾನವಯುದ್ಧಂ ವಾ ಕಿಂ ಕಾರ್ಯಂ ವಾ ಮಹತ್ತರಂ ॥ ೧೦ ॥

---

ಗಳಿಂದ ಸ್ತೋತ್ರಮಾಡಲ್ಪಟ್ಟವನೂ, ನಾರದಾದಿ ಮುನಿವರೇಣ್ಯರೊಡಗೂಡಿದವನೂ, ಗಂಧರ್ವರಿಂದಲೂ, ಅಪ್ಸರರಿಂದಲೂ ಸೇವಿತನೂ ಆಗಿರುವ ಭವಾನೀಪ್ರಿಯನಾದ ಮಹಾದೇವನನ್ನು ವಂದಿಸಿ ಮಗನಾದ ಕುಮಾರಸ್ವಾಮಿಯು ಕೇಳಿದನು.

೬. ಸ್ಕಂದನು ಕೇಳುತ್ತಾನೆ:—"ಸ್ವಾಮಿನ್! ಬ್ರಹ್ಮೇಂದ್ರಾದಿ ದಿವಿಜರೆಲ್ಲರೂ ನಿನ್ನನ್ನು ನೋಡಲು ಕುತೂಹಲವುಳ್ಳವರಾಗಿ ಬಾಗಿಲಿನಲ್ಲಿ ಬಂದು ನಿಂತಿದ್ದಾರೆ. ನನಗೇನಪ್ಪಣೆ? ಮುಂದೆ ನಾನೇನುಮಾಡಲಿ?

೭–೮. ವ್ಯಾಸನು ಹೇಳುತ್ತಾನೆ:—ಆಗ ಕುಮಾರಸ್ವಾಮಿಯ ವಚನವನ್ನು ಕೇಳಿ ಮಹೇಶ್ವರನು ಪೀಠದಿಂದೆದ್ದು ವೃಷಭವನ್ನೇರದೆಯೆ ಹೊರಡಲು ಬಯಸಿದನು. ಬಳಿಕ ಸ್ಕಂದನು ಹಾಗೆ ಹೊರಡಲಪೇಕ್ಷೆಯುಳ್ಳ ಶಿವನನ್ನು ಕಂಡು ಇಂತೆಂದು ಕೇಳಿದನು.

೯–೧೦. ಸ್ಕಂದನು ಕೇಳುತ್ತಾನೆ:— ಎಲೈ ದಯಾಳುವೆ! ಸ್ವಾಮಿನ್! ನೀನು ವೃಷಭವನ್ನೂ ಬಿಟ್ಟುಹೊರಡುತ್ತಿರುವೆ. ದೇವತೆಗಳು ನಿನ್ನನ್ನು ತ್ವರೆಯಿಂದ ಕರೆಯುತ್ತಿರುವರು. ಅವರ ಕಾರ್ಯವೇನಿದೆ? ದೇವಾಸುರರ ಕಾಳೆಗವೊ? ಅಥವಾ ಇನ್ನಾವುದಾದರೂ ಮಹತ್ತರವಾದ ಕಾರ್ಯವಿರುವುದೊ? ನನ್ನಮೇಲೆ ದಯೆಯಿದ್ದರೆ ಅದನ್ನು ನನಗೆ ಹೇಳು.

CC-0. Jangamwadi Math Collection. Digitized by eGangotri

ಶಿವ ಉವಾಚ :—

ಶೃಣುಷ್ವೈಕಾಗ್ರಮನಸಾ ಯೇನಾಽಹಂ ವ್ಯಗ್ರಚೇತಸಃ ।
ಅಸ್ತಿ ಸ್ಥಾನಂ ಮಹಾಪುಣ್ಯಂ ಧರ್ಮಾರಣ್ಯಂ ಚ ಭೂತಲೇ ॥ ೧೧ ॥
ತತ್ರಾಽಪಿ ಗಂತುಕಾಮೋಽಹಂ ದೇವೈಃ ಸಹ ಷಡಾನನ ॥ ೧೨ ॥

ಸ್ಕಂದ ಉವಾಚ :—

ತತ್ರ ಗತ್ವಾ ಮಹಾದೇವ ಕಿಂ ಕರಿಷ್ಯಸಿ ಸಾಂಪ್ರತಂ ।
ತನ್ಮೇ ಬ್ರೂಹಿ ಜಗನ್ನಾಥ ಕೃತ್ಯಂ ಸರ್ವಮಶೇಷತಃ ॥ ೧೩ ॥

ಶಿವ ಉವಾಚ :—

ಶ್ರೂಯತಾಂ ವಚನಂ ಪುತ್ರ ಮನಸೋಲ್ಹಾದಕಾರಣಂ ।
ಆದಿತಃ ಸರ್ವವೃತ್ತಾನಾಂ ಸೃಷ್ಟಿಸ್ಥಿತಿಕರಂ ಮಹತ್ ॥ ೧೪ ॥
ಪರಂತು ಪ್ರಲಯೇ ಜಾತೇ ಸರ್ವತಸ್ತಮಸಾ ವೃತಂ ।
ಆಸೀದೇಕಂ ತದಾ ಬ್ರಹ್ಮ ನಿರ್ಗುಣಂ ಬೀಜಮವ್ಯಯಂ ॥ ೧೫ ॥
ನಿರ್ಮಿತಂ ವೈ ಗುಣೈರಾದೌ ಮಹದ್ದ್ರವ್ಯಂ ಪ್ರಚಕ್ಷತೇ ॥ ೧೬ ॥
ಮಹಾಕಲ್ಪೇ ಚ ಸಂಪ್ರಾಪ್ತೇ ಚರಾಽಚರೇ ಕ್ಷಯಂ ಗತೇ ।
ಜಲರೂಪೀ ಜಗನ್ನಾಥೋ ರಮಮಾಣಸ್ತು ಲೀಲಯಾ ॥ ೧೭ ॥

---

೧೧–೧೨. ಶಿವನು ಹೇಳುತ್ತಾನೆ:—ಷಣ್ಮುಖ! ಒಮ್ಮನಸ್ಸಿನಿಂದ ಕೇಳು, ಭೂಮಿಯಲ್ಲಿ ಪವಿತ್ರವಾದ ಧರ್ಮಾರಣ್ಯವೆಂಬ ಕ್ಷೇತ್ರವಿದೆ. ಅಲ್ಲಿಗೆ ನಾನು ಹೋಗಲಿಚ್ಛಿಸುವೆನು. ಅದರಿಂದಲೇ ಈ ರೀತಿ ತ್ವರೆಗೊಳ್ಳುತ್ತಿರುವೆನು.

೧೩. ಸ್ಕಂದನು ಹೇಳುತ್ತಾನೆ:—ಮಹೇಶ್ವರ! ಈಗ ಅಲ್ಲಿಗೆ ಹೋಗಿ ಏನನ್ನು ಮಾಡುವೆ? ಜಗದೊಡೆಯ! ಆ ಕಾರ್ಯವನ್ನೆಲ್ಲ ಸಮಗ್ರವಾಗಿ ನನಗೆ ತಿಳಿಸು.

೧೪. ಶಿವನು ಹೇಳುತ್ತಾನೆ:—ಮಗು! ಮನಸ್ಸಿಗೆ ಆನಂದವನ್ನುಂಟು ಮಾಡುವ ಸೃಷ್ಟಿ ಸ್ಥಿತಿ ವಿಷಯಕವಾದ ಈ ವೃತ್ತಾಂತವನ್ನು ಮೊದಲಿನಿಂದ ಹೇಳುವೆನು ಕೇಳು.

೧೫. ಪ್ರಳಯವಾದ ಬಳಿಕ ಕತ್ತಲೆಯಿಂದ ಆವೃತನಾಗಿಯೂ, ನಿರ್ಗುಣ ನಾಗಿಯೂ, ಜಗತ್ತಿಗೆ ಬೀಜರೂಪನಾಗಿಯೂ ನಾಶರಹಿತನಾಗಿಯೂ ಇರುವ ಬ್ರಹ್ಮನೊಬ್ಬನುಮಾತ್ರ ಉಳಿದಿದ್ದನು.

೧೬–೧೭. ಮೊದಲು ಸತ್ತ್ವರಜಸ್ತಮೋಗುಣಗಳಿಂದ ನಿರ್ಮಿತವಾದ ವಸ್ತುವು ಮಹತ್ತತ್ವವೆಂದು ಹೇಳಿಸಿಕೊಳ್ಳಲ್ಪಡುವುದು. ಮಹಾಕಲ್ಪವು ಪ್ರಾಪ್ತ ವಾಗಿ ಚೇತನಾಚೇತನಾತ್ಮಕವಾದ ಪ್ರಪಂಚವು ನಷ್ಟವಾಗಲು, ಜಗನ್ನಾಥನಾದ ಬ್ರಹ್ಮನು ಲೀಲೆಯಿಂದ ವಿನೋದಪಡುತ್ತ ಜಲರೂಪಿಯಾಗಿದ್ದನು.

CC-0. Jangamwadi Math Collection. Digitized by eGangotri

ಚಿರಕಾಲೇ ಗತೇ ಸೋಽಪಿ ಪೃಥಿವ್ಯಾದಿಸುತತ್ತ್ವಕೈಃ ।
ವೃಕ್ಷಮುತ್ಪಾದಯಾಮಾಸಾಽಯುತಶಾಖಾಮನೋರಮಂ ॥ ೧೮ ॥
ಫಲೈರ್ವಿಶಾಲೈರಾಕೀರ್ಣಂ ಸ್ಕಂಧಕಾಂಡಾದಿಶೋಭಿತಂ ।
ಫಲೌಘಾಢ್ಯೋ ಜಟಾಯುಕ್ತೋ ನ್ಯಗ್ರೋಧೋ ವಿಟಪೋ ಮಹಾನ್ ॥
ಬಾಲಭಾವಂ ತತಃ ಕೃತ್ವಾ ವಾಸುದೇವೋ ಜನಾರ್ದನಃ ।
ಶೇತೇಽಸೌ ವಟಪತ್ರೇಷು ವಿಶ್ವಂ ನಿರ್ಮಾತುಮುತ್ಸುಕಃ ॥ ೨೦ ॥
ಸ ನಾಭಿಕಮಲೇ ವಿಷ್ಣೋರ್ಜಾತೋ ಬ್ರಹ್ಮಾ ಹಿ ಲೋಕಕೃತ್ ।
ಸರ್ವಂ ಜಲಮಯಂ ಪಶ್ಯನ್ನಾನಾಕಾರಮರೂಪಕಂ ॥ ೨೧ ॥
ತಂ ದೃಷ್ಟ್ವಾ ಸಹಸೋದ್ವೇಗಾದ್ಬ್ರಹ್ಮಾ ಲೋಕಪಿತಾಮಹಃ ।
ಇದಮಾಹ ತದಾ ಪುತ್ರ ಕಿಂ ಕರೋಮೀತಿ ನಿಶ್ಚಿತಂ ॥ ೨೨ ॥
ಖೇ ಜಗಾದ ತತೋ ವಾಣೀ ದೈವಾತ್ಸಾ ಚಾಽಶರೀರಿಣೀ ।
ತಪಸ್ತಪ ವಿಧೇ ಧಾತರ್ಯಥಾ ಮೇ ದರ್ಶನಂ ಭವೇತ್ ॥ ೨೩ ॥
ತಚ್ಛ್ರುತ್ವಾ ವಚನಂ ತತ್ರ ಬ್ರಹ್ಮಾ ಲೋಕಪಿತಾಮಹಃ ।
ಪ್ರಾತಪ್ಯತ ತಪೋ ಘೋರಂ ಪರಮಂ ದುಷ್ಕರಂ ಮಹತ್ ॥ ೨೪ ॥
ಪ್ರಹಸನ್ಸ ತದಾ ಬಾಲರೂಪೇಣ ಕಮಲಾಪತಿಃ ।
ಉವಾಚ ಮಧುರಾಂ ವಾಚಂ ಕೃಪಾಲುರ್ಬಾಲಲೀಲಯಾ ॥ ೨೫ ॥

---

೧೮. ಹೀಗೆ ಅನೇಕ ವರ್ಷಕಾಲವು ಕಳೆಯಲು ಆ ಬ್ರಹ್ಮನು ಹತ್ತು ಸಾವಿರ ಕೊಂಬೆಗಳಿಂದ ರಮ್ಯವಾದ ಒಂದು ಆಲದಮರವನ್ನು ಸೃಷ್ಟಿಸಿದನು.

೧೯. ಈ ದೊಡ್ಡ ಮರವು ದೊಡ್ಡ ದೊಡ್ಡ ಹಣ್ಣುಗಳಿಂದ ತುಂಬಿದುದೂ, ಕಾಂಡಾದಿಗಳಿಂದ ಶೋಭಾಯಮಾನವೂ, ಬಿಳಲುಗಳಿಂದ ಸಹಿತವೂ ಆಗಿದ್ದಿತು.

೨೦. ಬಳಿಕ ಈ ಬ್ರಹ್ಮನು ಪ್ರಪಂಚದ ಸೃಷ್ಟಿಗಾಗಿ ವಾಸುದೇವರೂಪಿಯಾಗಿ ಬಾಲಕನ ರೂಪವನ್ನು ತಾಳಿ ಆಲದೆಲೆಯಲ್ಲಿ ಮಲಗುತ್ತಾನೆ.

೨೧-೨೨. ಆಗ ಆ ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದ ಲೋಕಗಳನ್ನು ಸೃಜಿಸುವ ಚತುರ್ಮುಖಬ್ರಹ್ಮನು ಬಗೆಬಗೆಯ ಆಕಾರವುಳ್ಳ ಜಲಮಯವಾದ ಪ್ರಪಂಚವನ್ನು ಕಂಡು ಕೂಡಲೆ ವ್ಯಾಕುಲಗೊಂಡು ಈಗ ನಾನೇನು ಮಾಡಲೆಂದು ಕೇಳಿದನು.

೨೩. ಬಳಿಕ "ವಿಧಿಯೆ! ನೀನು ತಪಸ್ಸನ್ನು ಮಾಡು. ಅದರಿಂದ ನೀನು ನನ್ನನ್ನು ನೋಡುವೆ" ಎಂದು ಆಕಾಶದಲ್ಲಿ ಅಶರೀರವಾಣಿಯಾಯಿತು.

೨೪-೨೫. ಆ ಮಾತನ್ನು ಕೇಳಿ ಬ್ರಹ್ಮನು ದುಷ್ಕರವಾಗಿಯೂ, ಘೋರವಾಗಿಯೂ ಇರುವ ಮಹಾತಪಸ್ಸನ್ನು ಮಾಡಿದನು. ಆಗ ಲಕ್ಷ್ಮೀಪತಿಯಾದ ವಿಷ್ಣುವು ನಗುತ್ತ ದಯೆಯುಳ್ಳವನಾಗಿ ಬಾಲಲೀಲೆಯಿಂದ ಇಂಪಾದ ಮಾತನ್ನಾಡಿದನು.

CC-0. Jangamwadi Math Collection. Digitized by eGangotri

ಶ್ರೀ ವಿಷ್ಣುರುವಾಚ :—

ಪುತ್ರ ತ್ವಂ ವಿಧಿನಾ ಚಾಽದ್ಯ ಕುರು ಬ್ರಹ್ಮಾಂಡಗೋಲಕೇ ।
ಪಾತಾಲಂ ಭೂತಲಂ ಚೈವ ಸಿಂಧುಸಾಗರಕಾನನಂ ॥ ೨೬ ॥
ದ್ವಿಪದಾ ಗಿರಯೋ ವೃಕ್ಷಾಸ್ತಥಾ ಪಶುಮೃಗಾದಯಃ ।
ಪಕ್ಷಿಣಶ್ಚೈವ ಗಂಧರ್ವಾಃ ಸಿದ್ಧಾ ಯಕ್ಷಾಶ್ಚ ರಾಕ್ಷಸಾಃ ॥ ೨೭ ॥
ಶ್ವಾಪದಾದ್ಯಾಶ್ಚ ಯೇ ಜೀವಾಶ್ಚತುರಾಶೀತಿಯೋನಯಃ ।
ಉದ್ಭಿಜ್ಜಾಃ ಸ್ವೇದಜಾಶ್ಚೈವ ಜರಾಯುಜಾಸ್ತಥಾಂಡಜಾಃ ॥ ೨೮ ॥
ಏಕವಿಂಶತಿಲಕ್ಷಾಣಿ ಏಕೈಕಸ್ಯ ಚ ಯೋನಯಃ ।
ಕುರು ತ್ವಂ ಸಕಲಂ ಚಾಶು ಇತ್ಯುಕ್ತ್ವಾಽಂತರಧೀಯತ ।
ಬ್ರಹ್ಮಣಾ ನಿರ್ಮಿತಂ ಸರ್ವಂ ಬ್ರಹ್ಮಾಂಡಂ ಚ ಯಥೋದಿತಂ ॥ ೨೯ ॥
ಯಸ್ಮಿನ್ಪಿತಾಮಹೋ ಜಜ್ಞೇ ಪ್ರಭುರೇಕಃ ಪ್ರಜಾಪತಿಃ ।
ಸ್ಥಾಣುಃ ಸುರಗುರುರ್ಭಾನುಃ ಪ್ರಚೇತಾಃ ಪರಮೇಷ್ಠಿನಃ ॥ ೩೦ ॥
ಯಥಾ ದಕ್ಷೋ ದಕ್ಷಪುತ್ರಾಸ್ತಥಾ ಸಪ್ತರ್ಷಯಶ್ಚ ಯೇ ।
ತತಃ ಪ್ರಜಾನಾಂ ಪತಯಃ ಪ್ರಾಽಭವನ್ನೇಕವಿಂಶತಿಃ ॥ ೩೧ ॥
ಪುರುಷಶ್ಚಾಽಪ್ರಮೇಯಶ್ಚ ಏವಂ ವಂಶ್ಯರ್ಷಯೋ ವಿದುಃ ।
ವಿಶ್ವೇದೇವಾಸ್ತಥಾದಿತ್ಯಾ ವಸವಶ್ಚಾಽಶ್ವಿನಾವಪಿ ॥ ೩೨ ॥
ಯಕ್ಷಾಃ ಪಿಶಾಚಾಃ ಸಾಧ್ಯಾಶ್ಚ ಪಿತರೋ ಗುಹ್ಯಕಾಸ್ತಥಾ ।
ತತಃ ಪ್ರಸೂತಾ ವಿದ್ವಾಂಸೋ ಹ್ಯಷ್ಟೌ ಬ್ರಹ್ಮರ್ಷಯೋಽಮಲಾಃ ॥ ೩೩ ॥

---

೨೬–೨೯. ಶ್ರೀ ವಿಷ್ಣುವು ಹೇಳುತ್ತಾನೆ:—ಮಗು! ನೀನು ಈಗ ಕ್ರಮದಂತ ಬ್ರಹ್ಮಾಂಡಗೋಲಕದಲ್ಲಿ ಪಾತಾಳವನ್ನೂ, ಭೂಮಿಯನ್ನೂ, ನದಿ, ಸಮುದ್ರ, ಕಾಡುಗಳನ್ನೂ, ಮರ, ಬೆಟ್ಟ, ಮನುಷ್ಯ, ಪಶುಗಳನ್ನೂ, ಪಕ್ಷಿ, ಗಂಧರ್ವ, ಸಿದ್ಧ, ಯಕ್ಷ, ರಾಕ್ಷಸರನ್ನೂ, ಸಿಂಹಾದಿಗಳನ್ನೂ, ಹೀಗೆ ಒಂದೊಂದಕ್ಕೆ ಇಪ್ಪತ್ತೊಂದು ಲಕ್ಷಗಳಂತೆ ಉದ್ಭಿಜ್ಜ, ಸ್ವೇದಜ, ಜರಾಯುಜ, ಅಂಡಜಗಳ ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು ಸೃಷ್ಟಿಸೆಂದು ಹೇಳಿ ಅಂತರ್ಧಾನನಾದನು. ಬ್ರಹ್ಮನು ವಿಷ್ಣುವು ಹೇಳಿದಂತೆ ಸಕಲಬ್ರಹ್ಮಾಂಡವನ್ನು ನಿರ್ಮಿಸಿದನು.

೩೦–೩೩. ಈ ಬ್ರಹ್ಮಾಂಡದಲ್ಲಿ ಪಿತಾಮಹ, ಮಹೇಶ್ವರ, ಬೃಹಸ್ಪತಿ, ಸೂರ್ಯ, ವರುಣ, ದಕ್ಷ, ದಕ್ಷಪುತ್ರರು, ಸಪ್ತರ್ಷಿಗಳು, ಇಪ್ಪತ್ತೊಂದು ಮಂದಿ ಪ್ರಜಾಪತಿಗಳು, ಪುರುಷ, ಅಪ್ರಮೇಯ, ವಿಶ್ವೇದೇವರು, ಆದಿತ್ಯರು, ವಸುಗಳು, ಅಶ್ವಿನೀದೇವತೆಗಳು, ಯಕ್ಷರು, ಪಿಶಾಚಗಳು, ಸಾಧ್ಯರು, ಪಿತೃಗಳು, ಗುಹ್ಯಕರು, ವಿದ್ವಾಂಸರಾದ ಎಂಟು ಜನ ಬ್ರಹ್ಮರ್ಷಿಗಳು, ಗುಣಶಾಲಿಗಳಾದ ಬಹುಮಂದಿ ರಾಜರ್ಷಿಗಳು, ಸ್ವರ್ಗ, ನೀರು, ಭೂಮಿ, ವಾಯು,

CC-0. Jangamwadi Math Collection. Digitized by eGangotri

ರಾಜರ್ಷಯಶ್ಚ ಬಹವಃ ಸರ್ವೇ ಸಮುದಿತಾ ಗುಣೈಃ ।
ದ್ಯೌರಾಪಃ ಪೃಥಿವೀ ವಾಯುರಂತರಿಕ್ಷಂ ದಿಶಸ್ತಥಾ ॥ ೩೪ ॥
ಸಂವತ್ಸರಾರ್ತವೋ ಮಾಸಾಃ ಪಕ್ಷಾಃಽಹೋರಾತ್ರಯಃ ಕ್ರಮಾತ್ ।
ಕಲಾ ಕಾಷ್ಠಾ ಮುಹೂರ್ತಾದಿ ನಿಮೇಷಾದಿ ಲವಾಸ್ತಥಾ ॥ ೩೫ ॥
ಗ್ರಹಚಕ್ರಂ ಸನಕ್ಷತ್ರಂ ಯುಗಾ ಮನ್ವಂತರಾದಯಃ ।
ಯಚ್ಚಾಽನ್ಯದಪಿ ತತ್ಸರ್ವಂ ಸಂಭೂತಂ ಲೋಕಸಾಕ್ಷಿಕಂ ॥ ೩೬ ॥
ಯದಿದಂ ದೃಶ್ಯತೇ ಚಕ್ರಂ ಕಿಂಚಿತ್ಸ್ಥಾವರಜಂಗಮಂ ।
ಪುನಃ ಸಂಕ್ಷಿಪ್ಯತೇ ಪುತ್ರ ಜಗತ್ಪ್ರಾಪ್ತೇ ಯುಗಕ್ಷಯೇ ॥ ೩೭ ॥
ಯಥರ್ತಾವೃತುಲಿಂಗಾನಿ ನಾಮರೂಪಾಣಿ ಪರ್ಯಯೇ ।
ದೃಶ್ಯಂತೇ ತಾನಿ ತಾನ್ಯೇವ ತಥಾ ವತ್ಸ ಯುಗಾದಿಕಂ ॥ ೩೮ ॥

ಶಿವ ಉವಾಚ:—

ಅತಃ ಪರಂ ಪ್ರವಕ್ಷ್ಯಾಮಿ ಕಥಾಂ ಪೌರಾಣಿಕೀಂ ಶುಭಾಂ ।
ಬ್ರಹ್ಮಣಶ್ಚ ತಥಾ ಪುತ್ರ ವಂಶಸ್ಯೈವಾಽನುಕೀರ್ತನಂ ॥ ೩೯ ॥
ಬ್ರಹ್ಮಣೋ ಮಾನಸಾಃ ಪುತ್ರಾ ವಿದಿತಾಃ ಷಣ್ಮಹರ್ಷಯಃ ।
ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ॥ ೪೦ ॥
ಮರೀಚೇಃ ಕಶ್ಯಪಃ ಪುತ್ರಃ ಕಶ್ಯಪಾಚ್ಚ ರಮಾಃ ಪ್ರಜಾಃ ।
ಪ್ರಜಜ್ಞಿರೇ ಮಹಾಭಾಗಾ ದಕ್ಷಕನ್ಯಾಸ್ತ್ರಯೋದಶ ॥ ೪೧ ॥

---

ಆಕಾಶ, ದಿಕ್ಕುಗಳು, ಸಂವತ್ಸರ, ಋತುಗಳು, ಮಾಸಗಳು, ಪಕ್ಷಗಳು, ಹಗಲು ರಾತ್ರಿಗಳು, ಕಲಾ, ಕಾಷ್ಠ, ಮುಹೂರ್ತಗಳು, ಲವನಿಮಿಷಗಳು, ಗ್ರಹಗಳು, ನಕ್ಷತ್ರಗಳು, ಯುಗಗಳು, ಮನ್ವಂತರಾದಿಗಳು, ಇನ್ನೂ ಇತರ ಪ್ರಪಂಚ ಸಾಕ್ಷಿಗಳಾದ ವಸ್ತುಗಳೆಲ್ಲವೂ ಹುಟ್ಟಿದುವು.

೩೭. ಮಗು ! ಕಣ್ಣಿಗೆ ಕಾಣುವ ಈ ಚರಾಚರಾತ್ಮಕವಾದ ಈ ಪ್ರಪಂಚವು ಯುಗಾಂತ್ಯದಲ್ಲಿ ತಿರುಗಿ ಸಂಕ್ಷಿಪ್ತವಾಗುವುದು.

೩೮. ಮಗು ! ಋತುಗಳಲ್ಲಿ ಅವುಗಳ ಚಿಹ್ನೆಗಳು ಕಾಣುವಂತೆ ಯುಗವು ಆರಂಭಿಸಿದಾಗ ಮತ್ತೆ ಅದೇ ನಾಮರೂಪಗಳು ಕಾಣಿಸುವುವು.

೩೯. ಶಿವನು ಹೇಳುತ್ತಾನೆ:—ವತ್ಸ! ಇನ್ನುಮುಂದೆ ಬ್ರಹ್ಮನ ವಂಶವನ್ನು ತಿಳಿಸುವ ಪೌರಾಣಿಕ ಕಥೆಯನ್ನು ಹೇಳುವೆನು.

೪೦. ಬ್ರಹ್ಮನ ಮನಸ್ಸಿನಿಂದ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತುಗಳೆಂಬ ಪ್ರಸಿದ್ಧರಾದ ಆರು ಜನ ಮಹರ್ಷಿಗಳು ಉದ್ಭವಿಸಿದರು.

೪೧. ಮರೀಚಿಯಿಂದ ಕಶ್ಯಪನೂ, ಕಶ್ಯಪನಿಂದ ಉಳಿದ ಪ್ರಜೆಗಳೂ, ದಕ್ಷನಿಂದ ಹದಿಮೂರು ಜನ ಹೆಣ್ಣುಮಕ್ಕಳೂ ಹುಟ್ಟಿದರು.

CC-0. Jangamwadi Math Collection. Digitized by eGangotri

ಅದಿತಿರ್ದಿತಿರ್ದನುಃ ಕಾಲಾ ದನಾಯುಃ ಸಿಂಹಿಕಾ ತಥಾ ।
ಕ್ರೋಧಾ ಪ್ರೋವಾ ವಸಿಷ್ಠಾ ಚ ವಿನತಾ ಕಪಿಲಾ ತಥಾ ॥ ೪೨ ॥
ಕಂಡೂಶ್ಚೈವ ಸುನೇತ್ರಾ ಚ ಕಶ್ಯಪಾಯ ದದೌ ತದಾ ।
ಅದಿತ್ಯಾಂ ದ್ವಾದಶಾದಿತ್ಯಾಃ ಸಂಜಾತಾ ಹಿ ಶುಭಾನನಾಃ ॥ ೪೩ ॥
ಸೂರ್ಯಾದ್ವೈ ಧರ್ಮರಾಡ್ಜಜ್ಞೇ ತೇನೇದಂ ನಿರ್ಮಿತಂ ಪುರಾ ।
ಧರ್ಮೇಣ ನಿರ್ಮಿತಂ ದೃಷ್ಟ್ವಾ ಧರ್ಮಾರಣ್ಯಮನುತ್ತಮಂ ।
ಧರ್ಮಾರಣ್ಯಮಿತಿಪ್ರೋಕ್ತಂ ಯನ್ಮಯಾ ಸ್ಕಂದ ಪುಣ್ಯದಂ ॥ ೪೪ ॥

ಸ್ಕಂದ ಉವಾಚ:—

ಧರ್ಮಾರಣ್ಯಸ್ಯ ಚಾಖ್ಯಾನಂ ಪರಮಂ ಪಾವನಂ ತಥಾ ।
ಶ್ರೋತುಮಿಚ್ಛಾಮಿ ತತ್ಸರ್ವಂ ಕಥಯಸ್ವ ಮಹೇಶ್ವರ ॥ ೪೫ ॥

ಈಶ್ವರ ಉವಾಚ:—

ಇಂದ್ರಾದ್ಯಾಃ ಸಕಲಾ ದೇವಾ ಅನ್ವಯುರ್ಬ್ರಹ್ಮಣಾ ಸಹ ।
ಅಹಂ ವೈ ತತ್ರ ಯಸ್ಯಾಮಿ ಕ್ಷೇತ್ರಂ ಪಾಪನಿಷೂದನಂ ॥ ೪೬ ॥

ಸ್ಕಂದ ಉವಾಚ:—

ಅಹಮಪ್ಯಾಗಮಿಷ್ಯಾಮಿ ತಂ ದ್ರಷ್ಟುಂ ಶಶಿಶೇಖರ ॥ ೪೭ ॥

---

೪೨–೪೩. ಈ ಹದಿಮೂರು ಜನರು ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಕ್ರೋಧಾ, ಪ್ರೋವಾ, ವಸಿಷ್ಠಾ, ವಿನತಾ, ಕಪಿಲಾ, ಕಂಡೂ, ಸುನೇತ್ರಾ ಎಂಬವರು. ಈ ಕನ್ಯೆಯರನ್ನು ದಕ್ಷನು ಕಶ್ಯಪನಿಗೆ ಮದುವೆಮಾಡಿಕೊಟ್ಟನು. ಅವರಲ್ಲಿ ಅದಿತಿಯಲ್ಲಿ ಸುಂದರರಾದ ಹನ್ನೆರಡು ಜನ ಆದಿತ್ಯರು ಜನಿಸಿದರು.

೪೪. ಸೂರ್ಯನೆಂಬ ಆದಿತ್ಯನಿಂದ ಯಮನು ಹುಟ್ಟಿದನು. ಅವನಿಂದ ಈ ಧರ್ಮಾರಣ್ಯವು ನಿರ್ಮಿತವಾಗಲು ನಾನು ಪವಿತ್ರವಾದ ಈ ಕ್ಷೇತ್ರಕ್ಕೆ ಧರ್ಮಾರಣ್ಯವೆಂದು ಹೆಸರನ್ನಿಟ್ಟೆನು.

೪೫. ಸ್ಕಂದನು ಕೇಳುತ್ತಾನೆ:—ಮಹೇಶ್ವರ! ಧರ್ಮಾರಣ್ಯದ ಪವಿತ್ರವಾದ ಕಥೆಯನ್ನು ಕೇಳಲಿಚ್ಛಿಸುವೆನು. ಅದನ್ನೆಲ್ಲ ನನಗೆ ಹೇಳು.

೪೬. ಈಶ್ವರನು ಹೇಳುತ್ತಾನೆ:— ಮಗು! ಇಂದ್ರಾದಿ ದೇವತೆಗಳು ಬ್ರಹ್ಮನೊಡನೆ ಇಲ್ಲಿಗೆ ಬಂದಿದ್ದಾರೆ. ನಾನು ಪಾಪವಿನಾಶಕವಾದ ಆ ಕ್ಷೇತ್ರಕ್ಕೆ ತೆರಳುವೆನು.

೪೭. ಸ್ಕಂದನು ಹೇಳುತ್ತಾನೆ:—ಓ ಚಂದ್ರಮೌಳಿ! ನಾನೂ ಅದನ್ನು ನೋಡಲು ಬರುವೆನು.

CC-0. Jangamwadi Math Collection. Digitized by eGangotri

ಸೂತ ಉವಾಚ :—

ತತಃ ಸ್ಕಂದಸ್ತಥಾ ರುದ್ರಃ ಸೂರ್ಯಶ್ಚೈವಾಽನಿಲೋಽನಲಃ ।
ಸಿದ್ಧಾಶ್ಚೈವ ಸಗಂಧರ್ವಾಸ್ತಥೈವಾಽಪ್ಸರಸಃ ಶುಭಾಃ ॥ ೪೮ ॥
ಪಿಶಾಚಾ ಗುಹ್ಯಕಾಃ ಸರ್ವ ಇಂದ್ರೋ ವರುಣ ಏವ ಚ ।
ನಾಗಾಃ ಸರ್ವಾಃ ಸಮಾಜಗ್ಮುಃ ಶುಕ್ರೋ ವಾಚಸ್ಪತಿಸ್ತಥಾ ॥ ೪೯ ॥
ಗ್ರಹಾಃ ಸರ್ವೇ ಸನಕ್ಷತ್ರಾ ವಸವೋಽಷ್ಟೌ ಧ್ರುವಾದಯಃ ।
ಅಂತರಿಕ್ಷಚರಾಃ ಸರ್ವೇ ಯೇ ಚಾಽನ್ಯೇ ನಗವಾಸಿನಃ ॥ ೫೦ ॥
ಬ್ರಹ್ಮಾದಯಃ ಸುರಾಃ ಸರ್ವೇ ವೈಕುಂಠಂ ಪರಯಾ ಮುದಾ ।
ಮಂತ್ರಣಾರ್ಥಂ ತದಾ ಬ್ರಹ್ಮಾ ವಿಷ್ಣವೇಽಮಿತತೇಜಸೇ ॥ ೫೧ ॥
ಗತ್ವಾ ತಸ್ಮಿಂಶ್ಚ ವೈಕುಂಠೇ ಬ್ರಹ್ಮಾ ಲೋಕಪಿತಾಮಹಃ ।
ಧ್ಯಾತ್ವಾ ಮುಹೂರ್ತಮಾಚಷ್ಟ ವಿಷ್ಣುಂ ಪ್ರತಿ ಸುಹರ್ಷಿತಃ ॥ ೫೨ ॥

ಬ್ರಹ್ಮೋವಾಚ :—

ಕೃಷ್ಣ ಕೃಷ್ಣ ಮಹಾಬಾಹೋ ಕೃಪಾಲೋ ಪರಮೇಶ್ವರ ।
ಸ್ರಷ್ಟಾ ತ್ವಂ ಚೈವ ಹರ್ತಾ ತ್ವಂ ತ್ವಮೇವ ಜಗತಃ ಪಿತಾ ॥ ೫೩ ॥
ನಮಸ್ತೇ ವಿಷ್ಣವೇ ಸೌಮ್ಯ ನಮಸ್ತೇ ಗರುಡಧ್ವಜ ।
ನಮಸ್ತೇ ಕಮಲಾಕಾಂತ ನಮಸ್ತೇ ಬ್ರಹ್ಮರೂಪಿಣೇ ॥ ೫೪ ॥

---

೪೮–೫೧. ಸೂತನು ಹೇಳುತ್ತಾನೆ:—ಬಳಿಕ ಸ್ಕಂದ, ರುದ್ರ, ಸೂರ್ಯ, ವಾಯು, ಅಗ್ನಿ, ಸಿದ್ಧರು, ಗಂಧರ್ವರು, ಮಂಗಳಕರರಾದ ಅಪ್ಸರಸ್ತ್ರೀಯರು, ಪಿಶಾಚರು, ಗುಹ್ಯಕರು, ಇಂದ್ರ, ವರುಣ, ಸಕಲನಾಗಗಳು, ಶುಕ್ರ, ಬೃಹಸ್ಪತಿ, ಸಕಲ ಗ್ರಹಗಳು, ನಕ್ಷತ್ರಗಳು, ಅಷ್ಟವಸುಗಳು, ಧ್ರುವಾದಿಗಳು, ಆಕಾಶಚಾರಿಗಳು, ಬೆಟ್ಟಗಳಲ್ಲಿ ವಾಸಿಸುವವರು, ಬ್ರಹ್ಮಾದಿ ಸಕಲ ಸುರರು, ಇವರೆಲ್ಲರೂ ವಿಷ್ಣುವಿನೊಡನೆ ಆಲೋಚಿಸುವುದಕ್ಕಾಗಿ ಅತಿ ಸಂತೋಷದಿಂದ ವೈಕುಂಠಲೋಕಕ್ಕೆ ಹೋದರು.

೫೨. ಅಲ್ಲಿ ಚತುರ್ಮುಖಬ್ರಹ್ಮನು ಮುಹೂರ್ತಕಾಲ ವಿಷ್ಣುವನ್ನು ಧ್ಯಾನಿಸಿ ಸಂತೋಷದಿಂದ ಹೀಗೆ ಸ್ತುತಿಸಿದನು.

೫೩. ಬ್ರಹ್ಮನು ಹೇಳುತ್ತಾನೆ:—ಪಾಪನಾಶಕನೂ, ಆಜಾನುಬಾಹುವೂ, ದಯಾಳುವೂ, ಮಹಾಪ್ರಭುತ್ವವುಳ್ಳವನೂ ಆದ ಓ ನಾರಾಯಣ! ನೀನೆ ಜಗತ್ತನ್ನು ಸೃಷ್ಟಿಸುವವನೂ, ಪಾಲಿಸುವವನೂ, ನಾಶಗೊಳಿಸುವವನೂ ಆಗಿರುವೆ.

೫೪. ಸೌಮ್ಯನೂ, ಗರುಡವಾಹನನೂ, ಲಕ್ಷ್ಮೀಪತಿಯೂ, ಬ್ರಹ್ಮ ರೂಪಿಯೂ ಆಗಿರುವ ವಿಷ್ಣುವೆ! ನಿನಗೆ ನಮಸ್ಕಾರವು.

CC-0. Jangamwadi Math Collection. Digitized by eGangotri

ನಮಸ್ತೇ ಮತ್ಸ್ಯರೂಪಾಯ ವಿಶ್ವರೂಪಾಯ ವೈ ನಮಃ ।
ನಮಸ್ತೇ ದೈತ್ಯನಾಶಾಯ ಭಕ್ತಾನಾಮಭಯಾಯ ಚ ॥ ೫೫ ॥
ಕಂಸಘ್ನಾಯ ನಮಸ್ತೇಽಸ್ತು ಬಲದೈತ್ಯಜಿತೇ ನಮಃ ।
ಬ್ರಹ್ಮಣೈವಂ ಸ್ತುತಶ್ಚಾಸೀತ್ಪ್ರತ್ಯಕ್ಷೋಽಸೌ ಜನಾರ್ದನಃ ॥ ೫೬ ॥
ಪೀತಾಂಬರೋ ಘನಶ್ಯಾಮೋ ನಾಗಾರಿಕೃತವಾಹನಃ ।
ಚತುರ್ಭುಜೋ ಮಹಾತೇಜಾಃ ಶಂಖಚಕ್ರಗದಾಧರಃ ॥ ೫೭ ॥
ಸ್ತೂಯಮಾನಃ ಸುರೈಃ ಸರ್ವೈಃ ಸ ದೇವೋಽಮಿತವಿಕ್ರಮಃ ।
ವಿದ್ಯಾಧರೈಸ್ತಥಾ ನಾಗೈಃ ಸ್ತೂಯಮಾನಶ್ಚ ಸರ್ವಶಃ ॥ ೫೮ ॥
ಉತ್ತಸ್ಥೌ ಸ ತದಾ ದೇವೋ ಭಾಸ್ಕರಾಽಮಿತದೀಪ್ತಿಮಾನ್ ।
ಕೋಟಿರತ್ನಪ್ರಭಾಭಾಸ್ವನ್ಮುಕುಟಾದಿವಿಭೂಷಿತಃ ॥ ೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ವಿಷ್ಣುಸಮಾಗಮೋ"ನಾಮಾಽಷ್ಟಮೋಽಧ್ಯಾಯಃ

---

೫೫. ಮತ್ಸ್ಯರೂಪನೂ, ವಿಶ್ವರೂಪನೂ, ದೈತ್ಯನಾಶಕನೂ, ಭಕ್ತರಿಗೆ ಅಭಯಪ್ರದನೂ ಆಗಿರುವ ನಿನಗೆ ನಮಸ್ಕಾರವು.

೫೬. ಕಂಸಾಂತಕನೂ, ಬಲದೈತ್ಯನನ್ನು ಗೆದ್ದವನೂ ಆಗಿರುವ ನಿನಗೆ ವಂದನೆಯು. ಎಂದು ಬ್ರಹ್ಮನು ಸ್ತೋತ್ರಮಾಡಲು ವಿಷ್ಣುವು ಪ್ರತ್ಯಕ್ಷನಾದನು.

೫೭–೫೯. ಬಳಿಕ ಪೀತಾಂಬರಧಾರಿಯೂ, ಮೇಘದಂತೆ ಕಪ್ಪು ಬಣ್ಣವುಳ್ಳವನೂ, ಗರುಡನನ್ನೇರಿದವನೂ, ನಾಲ್ಕು ತೋಳುಗಳುಳ್ಳವನೂ, ಅತ್ಯಂತ ತೇಜಸ್ವಿಯೂ, ಶಂಖ, ಚಕ್ರ, ಗದೆಗಳನ್ನು ಕೈಯಲ್ಲಿ ಹಿಡಿದವನೂ, ಸೂರ್ಯನಂತೆ ಅತ್ಯಂತ ಕಾಂತಿಯುಳ್ಳವನೂ, ಅನೇಕ ರತ್ನಗಳ ಕಾಂತಿಗಳಿಂದ ಬೆಳಗುವ ಕಿರೀಟಾದಿಗಳಿಂದ ಅಲಂಕೃತನೂ ಆಗಿರುವ ಶ್ರೀ ಮಹಾವಿಷ್ಣುವು ಸಕಲ ದೇವತೆಗಳಿಂದಲೂ, ವಿದ್ಯಾಧರರಿಂದಲೂ, ನಾಗರಿಂದಲೂ ಸ್ತುತಿಸಲ್ಪಡುತ್ತ ಆವಿರ್ಭವಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯೆಯಲ್ಲಿ "ವಿಷ್ಣುಸಮಾಗಮ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ನವಮೋಽಧ್ಯಾಯಃ

## ಗೋತ್ರಪ್ರವರ ಗೋತ್ರದೇವಿಕಥನಂ

ವ್ಯಾಸ ಉವಾಚ :—

ಶ್ರೂಯತಾಂ ರಾಜಶಾರ್ದೂಲ ಪುಣ್ಯಮಾಖ್ಯಾನಮುತ್ತಮಂ ।
ಸ್ತೂಯಮಾನೋ ಜಗನ್ನಾಥ ಇದಂ ವಚನಮಬ್ರವೀತ್ ॥ ೧ ॥

ವಿಷ್ಣುರುವಾಚ :—

ಕಿಮರ್ಥಮಾಗತಾಃ ಸರ್ವೇ ಬ್ರಹ್ಮಾದ್ಯಾಃ ಸುರಸತ್ತಮಾಃ ।
ಪೃಥಿವ್ಯಾಂ ಕುಶಲಂ ಕಚ್ಚಿತ್ಕುತೋ ವೋ ಭಯಮಾಗತಂ ॥ ೨ ॥
ತತಃ ಪ್ರೋವಾಚ ವೈ ಹೃಷ್ಟೋ ಬ್ರಹ್ಮಾ ತಂ ಕೇಶವಂ ವಚಃ ।
ನ ಭಯಂ ವಿದ್ಯತೇಽಸ್ಮಾಕಂ ತ್ರೈಲೋಕ್ಯೇ ಸಚರಾಚರೇ ॥ ೩ ॥
ಏಕಂ ವಿಜ್ಞಾಪನಾರ್ಥಾಯ ಆಗತೋಽಹಂ ತವಾಂತಿಕೇ ।
ತದಹಂ ಸಂಪ್ರವಕ್ಷ್ಯಾಮಿ ತದೇತಚ್ಛೃಣು ಮೇ ವಚಃ ॥ ೪ ॥
ಪರಂ ತು ಪೂರ್ವಂ ಧರ್ಮೇಣ ಸ್ಥಾಪಿತಂ ತೀರ್ಥಮುತ್ತಮಂ ।
ತದ್ದ್ರಷ್ಟುಕಾಮೋಽಹಂ ದೇವ ತ್ವತ್ಪ್ರಸಾದಾಜ್ಜನಾರ್ದನ ॥ ೫ ॥

---

## ಕನ್ನಡದ ಅನುವಾದ

### ಗೋತ್ರಪ್ರವರ ಗೋತ್ರದೇವೀಕಥನ

೧. ವ್ಯಾಸನು ಹೇಳುತ್ತಾನೆ:—ರಾಜೇಂದ್ರ! ಉತ್ತಮವಾದ ಈ ಕಥೆಯನ್ನು ಕೇಳು. ದೇವತೆಗಳು ಸ್ತೋತ್ರಮಾಡಲು ವಿಷ್ಣುವು ಈ ಮಾತನ್ನಾಡಿದನು.

೨. ವಿಷ್ಣುವು ಹೇಳುತ್ತಾನೆ:— "ಎಲೈ ಬ್ರಹ್ಮಾದಿ ಸುರೋತ್ತಮರೆ! ನೀವೆಲ್ಲರೂ ಇಲ್ಲಿಗೆ ಏಕೆ ಬಂದಿದ್ದೀರಿ? ಭೂಮಿಯಲ್ಲೆಲ್ಲ ಕ್ಷೇಮವಷ್ಟೆ. ನಿಮಗೆ ಯಾರಿಂದ ಭಯವು ಸಂಭವಿಸಿರುವುದು?"

೩. ಬಳಿಕ ಸಂತೋಷಗೊಂಡ ಬ್ರಹ್ಮನು ಶ್ರೀವಿಷ್ಣುವನ್ನು ಕುರಿತು ಇಂತೆಂದನು:—"ನಮಗೆ ಚರಾಚರಾತ್ಮಕವಾದ ಈ ಮೂರು ಲೋಕಗಳಲ್ಲಿ ಯಾವ ಹೆದರಿಕೆಯೂ ಇರುವುದಿಲ್ಲ.

೪. ಒಂದನ್ನುಮಾತ್ರ ಅರಿಕೆಮಾಡಿಕೊಳ್ಳುವುದಕ್ಕಾಗಿ ನಾನು ನಿನ್ನೆಡೆಗೆ ಬಂದಿರುವೆನು. ಅದನ್ನು ಹೇಳುವೆನು, ಲಾಲಿಸಬೇಕು.

೫. ಜನಾರ್ದನ! ನಾನು ನಿನ್ನ ಅನುಗ್ರಹದಿಂದ ಯಮನು ಹಿಂದೆ ಸ್ಥಾಪಿಸಿದ ಉತ್ತಮ ತೀರ್ಥವನ್ನು ನೋಡಲು ಬಯಸುವೆನು.

CC-0. Jangamwadi Math Collection. Digitized by eGangotri

ತತ್ರ ತ್ವಂ ದೇವದೇವೇಶ ಗಮನೇ ಕುರು ಮಾನಸಂ ।
ಯಥಾ ಸತ್ತೀರ್ಥತಾಂ ಯಾತಿ ಧರ್ಮಾರಣ್ಯಮನುತ್ತಮಂ ॥ ೬ ॥

ವಿಷ್ಣುರುವಾಚ :—

ಸಾಧು ಸಾಧು ಮಹಾಭಾಗ ತ್ವರ್ಯತಾಂ ತತ್ರ ಮಾ ಚಿರಂ ।
ಮಮಾಽಪಿ ಚಿತ್ತಂ ತತ್ರೈವ ತದ್ದರ್ಶನೇಽಸ್ತಿ ಲಾಲಸಂ ॥ ೭ ॥

ವ್ಯಾಸ ಉವಾಚ :—

ತಾರ್ಕ್ಷ್ಯಮಾರುಹ್ಯ ಗೋವಿಂದಸ್ತತ್ರಾಗಾಚ್ಛೀಘ್ರಮೇವ ಹಿ ।
ತತೋ ಧರ್ಮೇಣ ತೇ ದೇವಾಃ ಸೇಂದ್ರಾಃ ಸರ್ಷಿಗಣಾಸ್ತಥಾ ॥ ೮ ॥
ಬ್ರಹ್ಮವಿಷ್ಣುಮಹೇಶಾದ್ಯಾ ದೃಷ್ಟಾ ದೂರಾನ್ಮನೋದ ಚ ।
ಧರ್ಮರಾಜೋಽಪಿ ತಾನ್ದೃಷ್ಟ್ವಾ ದೇವಾನ್ವಿಷ್ಣುಪುರೋಗಮಾನ್ ॥ ೯ ॥
ಆಗತಃ ಸ್ವಾಶ್ರಮಾತ್ತತ್ರಪೂಜಾಂ ಪ್ರಗೃಹ್ಯ ತತ್ಪರಃ ।
ಆಸನಾದುತ್ಥಿತಃ ಶೀಘ್ರಂ ಸಪರ್ಯಾದ್ಯಂ ಪ್ರಗೃಹ್ಯ ಚ ।
ಏಕೈಕಸ್ಯ ಚಕಾರಾಽಥ ಪೂಜಾಂ ಚೈವ ಪೃಥಕ್ಪೃಥಕ್ ॥ ೧೦ ॥
ಚಕಾರ ಪೂಜಾಂ ವಿಧಿವತ್ತೇಷಾಂ ತತ್ರಾರ್ಕನಂದನಃ ।
ಆಸನೇಷೂಪವೇಶ್ಯಾಥ ಪೂಜಾಂ ಕೃತ್ವಾ ಗರೀಯಸೀಂ ॥ ೧೧ ॥

ಯಮ ಉವಾಚ :—

ತೀರ್ಥರೂಪಮಿದಂ ಕ್ಷೇತ್ರಂ ಪ್ರಸಾದಾದ್ದೇವಕೀಸುತ ।
ತ್ವತ್ತೋಽಷವಿಧಿನಾ ಚಾಽದ್ಯ ಕೃಪಯಾ ಚ ಶಿವಸ್ಯ ಚ ॥ ೧೨ ॥

---

೬. ದೇವತೆಗಳಿಗೊಡೆಯನಾದ ಇಂದ್ರನಿಗೂ ಸ್ವಾಮಿಯಾದ ಓ ನಾರಾಯಣ! ಅಲ್ಲಿಗೆ ಹೋಗಲು ನೀನು ಮನಸ್ಸನ್ನು ಮಾಡು. ಆ ಧರ್ಮಾರಣ್ಯವು ನಿನ್ನ ಸನ್ನಿಧಾನದಿಂದ ಉತ್ತಮ ತೀರ್ಥವಾಗಲಿ.

೭. ವಿಷ್ಣುವು ಹೇಳುತ್ತಾನೆ:—ಮಹಾಭಾಗ್ಯಶಾಲಿಯಾದ ಪಿತಾಮಹನೇ! ಒಳ್ಳೆಯದು, ತ್ವರೆಮಾಡು. ನನ್ನ ಮನಸ್ಸೂ ಆ ತೀರ್ಥವನ್ನು ನೋಡಲು ಕುತೂಹಲವುಳ್ಳದಾಗಿದೆ.

೮–೧೧. ವ್ಯಾಸನು ಹೇಳುತ್ತಾನೆ:—ವಿಷ್ಣುವು ಗರುಡನನ್ನೇರಿ ಶೀಘ್ರವಾಗಿ ಆ ಧರ್ಮಾರಣ್ಯಕ್ಕೆ ಹೋದನು. ಬಳಿಕ ಯಮಧರ್ಮನು ತನ್ನ ತೀರ್ಥಕ್ಕೆ ಬಂದಿರುವ ಬ್ರಹ್ಮಾದಿಗಳನ್ನು ಕಂಡು ಸಂತೋಷದಿಂದ ಆಸನದಿಂದೆದ್ದು ಆಶ್ರಮದಿಂದ ಹೊರಕ್ಕೆ ಬಂದು ಅವರ ಮುಂದೆ ಪೂಜಾಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ಒಬ್ಬೊಬ್ಬರಿಗೂ ಬೇರೆಬೇರೆಯಾಗಿ ಪೂಜೆಮಾಡಿದನು. ಹೀಗೆ ಆ ಯಮನು ಶಾಸ್ತ್ರೋಕ್ತರೀತಿಯಿಂದ ಆ ವಿಷ್ಣುವೇ ಮೊದಲಾದವರಿಗೆ ಅತಿಶಯ ಪೂಜೆಯನ್ನರ್ಪಿಸಿ ಅವರನ್ನು ಉಚಿತಾಸನಗಳಲ್ಲಿ ಕುಳ್ಳಿರಿಸಿದನು.

೧೨. ಯಮನು ಹೇಳುತ್ತಾನೆ:—ದೇವಕೀಪುತ್ರನಾದ ಎಲೈ ಶ್ರೀಕೃಷ್ಣನೇ!

CC-0. Jangamwadi Math Collection. Digitized by eGangotri

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ।
ಅದ್ಯ ಮೇ ಸಫಲಂ ಸ್ಥಾನಂ ಕಾಜೇಶಾನಾಂ ಸಮಾಗಮಾತ್ ॥ ೧೩ ॥

ವ್ಯಾಸ ಉವಾಚ :—

ಏವಂ ಸ್ತುತಸ್ತದಾ ವಿಷ್ಣುಃ ಪ್ರೋವಾಚ ಮಧುರಂ ವಚಃ ।
ತುಷ್ಟೋಽಸ್ಮಿ ಧರ್ಮರಾಜೇಂದ್ರ ಅಹಂ ಸ್ತೋತ್ರೇಣ ತೇ ವಿಭೋ ॥ ೧೪ ॥
ಕಿಂಚಿತ್ಪ್ರಾರ್ಥಯ ಮತ್ತೋಽಹಂ ಕರೋಮಿ ತವ ವಾಂಛಿತಂ ।
ಯತ್ತೇಽಸ್ತ್ಯಭೀಪ್ಸಿತಂ ತುಭ್ಯಂ ತದ್ದದಾಮಿ ನ ಸಂಶಯಃ ॥ ೧೫ ॥

ಯಮ ಉವಾಚ :—

ಯದಿ ತುಷ್ಟೋಽಸಿ ದೇವೇಶ ವಾಂಛಿತಂ ಕುರುಷೇ ಯದಿ ।
ಧರ್ಮಾರಣ್ಯೇ ಮಹಾಪುಣ್ಯೇ ಋಷೀಣಾಮಾಶ್ರಮಾನ್ಕುರು ॥ ೧೬ ॥
ವಸಂತಿ ವಾಡವಾ ಯತ್ರ ಯಜಂತಿ ಚೈವ ಯಾಜ್ಞಿಕಾಃ ।
ವೇದನಿರ್ಘೋಷಸಂಯುಕ್ತಂ ಭಾತಿ ತತ್ತೀರ್ಥಮುತ್ತಮಂ ॥ ೧೭ ॥
ಅಬ್ರಾಹ್ಮಣಮಿದಂ ತೀರ್ಥಂ ಪೀಡಯಿಷ್ಯಂತಿ ಜಂತವಃ ।
ತಸ್ಮಾತ್ತ್ವಂ ವಾಡವಾಂಛೌರೇ ಸಮಾನಯ ಋಷೀನ್ಬಹೂನ್ ।
ಧರ್ಮಾರಣ್ಯಂ ಯಥಾ ಭಾತಿ ತ್ರೈಲೋಕ್ಯೇ ಸಚರಾಚರೇ ॥ ೧೮ ॥

---

ಈಗ ಈ ಕ್ಷೇತ್ರವು ನಿನ್ನನ್ನು ಸಂತೋಷಪಡಿಸಿದುದರಿಂದಲೂ, ಶಿವನ ದಯೆಯಿಂದಲೂ, ತೀರ್ಥವಾಯಿತು.

೧೩. ಬ್ರಹ್ಮ ವಿಷ್ಣು ಮಹೇಶ್ವರರ ಸಮಾಗಮದಿಂದ ನನ್ನ ಈ ಜನ್ಮವೂ, ತಪಸ್ಸೂ, ಕ್ಷೇತ್ರವೂ ಸಫಲವಾದುವು.

೧೪–೧೫. ವ್ಯಾಸನು ಹೇಳುತ್ತಾನೆ:—ಆಗ ಈ ರೀತಿ ಸ್ತೋತ್ರಮಾಡಲ್ಪಟ್ಟ ವಿಷ್ಣುವು, "ಧರ್ಮರಾಜ! ನಿನ್ನ ಸ್ತೋತ್ರಕ್ಕೆ ನಾನು ಮೆಚ್ಚಿದೆನು. ನಿನಗೆ ಇಷ್ಟವಾದುದನ್ನು ಏನನ್ನಾದರೂ ನನ್ನಿಂದ ಕೇಳಿಕೊ. ಆ ನಿನ್ನ ಅಭೀಪ್ಸಿತವನ್ನು ಕೊಡುವೆನು. ಸಂಶಯಪಡಬೇಡ" ಎಂದು ಸವಿನುಡಿಗಳನ್ನಾಡಿದನು.

೧೬. ಯಮನು ಹೇಳುತ್ತಾನೆ:—ಸ್ವಾಮಿ! ನೀನು ಸಂತೋಷಗೊಂಡಿರುವುದು ದಿಟವಾದರೆ ನನ್ನ ಇಷ್ಟಾರ್ಥವನ್ನು ಕೊಡುವುದಾದರೆ ಮಹಾಪುಣ್ಯಕರವಾದ ಈ ಧರ್ಮಾರಣ್ಯದಲ್ಲಿ ಮುನಿಗಳ ಆಶ್ರಮಗಳನ್ನು ನಿರ್ಮಿಸು.

೧೭–೧೮. ಎಲ್ಲಿ ಬ್ರಾಹ್ಮಣರು ವಾಸಮಾಡುವರೊ, ಋತ್ವಿಜರು ಯಜ್ಞ ಮಾಡುವರೊ, ವೇದಘೋಷಸಹಿತವಾದ ಆ ಸ್ಥಳವು ಉತ್ತಮ ತೀರ್ಥವಾಗಿ ಬೆಳಗುವುದು. ಬ್ರಾಹ್ಮಣರಿಲ್ಲದ ಈ ತೀರ್ಥವನ್ನು ಪ್ರಾಣಿಗಳು ಪೀಡಿಸುವುವು. ಕೃಷ್ಣ! ಆದುದರಿಂದ ಬಹುಮಂದಿ ಋಷಿಗಳನ್ನು ಇಲ್ಲಿಗೆ ಕರೆಯಿಸು. ಧರ್ಮಾರಣ್ಯವನ್ನು ಮೂರುಲೋಕದಲ್ಲೆಲ್ಲ ಪ್ರಕಾಶಿಸುವಂತೆ ಮಾಡು.

CC-0. Jangamwadi Math Collection. Digitized by eGangotri

ತತೋ ವಿಷ್ಣುಃ ಸಹಸ್ರಾಕ್ಷಃ ಸಹಸ್ರಶೀರ್ಷಃ ಸಹಸ್ರಪಾತ್ ।
ಸಹಸ್ರಶಸ್ತದಾರೂಪಂ ಕೃತವಾನ್ಧರ್ಮವತ್ಸಲಃ ।
ಯಸ್ಮಿನ್ಸ್ಥಾನೇ ಚ ಯೇ ವಿಪ್ರಾಃ ಸದಾಚಾರಾಃ ಶುಭವ್ರತಾಃ ॥ ೧೯ ॥
ಅಶೇಷಧರ್ಮಕುಶಲಾಃ ಸರ್ವಶಾಸ್ತ್ರವಿಶಾರದಾಃ ।
ತಪೋಜ್ಞಾನೇ ಮಹಾಖ್ಯಾತಾ ಬ್ರಹ್ಮಯಜ್ಞಪರಾಯಣಾಃ ।
ಸ್ಥಾಪಿತಾ ಋಷಯಃ ಸರ್ವೇ ಸಹಸ್ರಾಣ್ಯಷ್ಟಾದಶೈವ ತು ॥ ೨೦ ॥
ನಾನಾದೇಶಾತ್ಸಮಾನೀಯ ಸ್ಥಾಪಿತಾಸ್ತತ್ರ ತೈಃ ಸುರೈಃ ।
ಆಶ್ರಮಾಂಶ್ಚ ಬಹೂಂಸ್ತತ್ರ ಕಾಜೇಶೈರಪಿ ನಿರ್ಮಿತಾನ್ ॥ ೨೧ ॥
ಧರ್ಮೋಪದೇಶಾತ್ಕೃಷ್ಣೇನ ಬ್ರಹ್ಮಣಾ ಚ ಶಿವೇನ ಚ ।
ಸ್ವೇ ಸ್ವೇ ಸ್ಥಾನೇ ಯಥಾಯೋಗ್ಯೇ ಸ್ಥಾಪಯಾಮಾಸ ಕೇಶವಃ ॥ ೨೨ ॥

ಯುಧಿಷ್ಠಿರ ಉವಾಚ :–

ಕಸ್ಮಿನ್ವಂಶೇ ಸಮುತ್ಪನ್ನಾ ಬ್ರಾಹ್ಮಣಾ ವೇದಪಾರಗಾಃ
ಸ್ಥಾಪಿತಾಃ ಸಪರೀವಾರಾಃ ಪುತ್ರಪೌತ್ರಸಮಾವೃತಾಃ ।
ಶಿಷ್ಯೈಶ್ಚ ಬಹುಭಿರ್ಯುಕ್ತಾ ಅಗ್ನಿಹೋತ್ರಪರಾಯಣಾಃ
ತೇಷಾಂ ಸ್ಥಾನಾನಿ ನಾಮಾನಿ ಯಥಾವಚ್ಚ ವದಸ್ವ ಮೇ ॥ ೨೩ ॥

---

೧೯–೨೧. ತರುವಾಯ ಧರ್ಮರಾಜನಲ್ಲಿ ಪ್ರೀತಿಯುಳ್ಳ ವಿಷ್ಣುವು ಸಹಸ್ರ ನೇತ್ರಗಳುಳ್ಳವನೂ, ಸಾವಿರ ತಲೆಗಳುಳ್ಳವನೂ, ಸಹಸ್ರ ಪಾದಗಳುಳ್ಳವನೂ ಆಗಿರುವ ತನ್ನ ಸಾವಿರಾರು ರೂಪಗಳನ್ನುಂಟುಮಾಡಿದನು. ನಾನಾ ದೇಶಗಳಿಂದ ಸದಾಚಾರಸಂಪನ್ನರೂ, ಒಳ್ಳೆ ನಿಯಮವುಳ್ಳವರೂ, ಸಕಲ ಧರ್ಮಗಳಲ್ಲಿ ನಿಪುಣರೂ, ಸಕಲ ಶಾಸ್ತ್ರಪಂಡಿತರೂ, ತಪಸ್ಸು ಮತ್ತು ಜ್ಞಾನದಲ್ಲಿ ಪ್ರಸಿದ್ಧರೂ, ಬ್ರಹ್ಮಯಜ್ಞದಲ್ಲಾಸಕ್ತರೂ ಆಗಿರುವ ಹದಿನೆಂಟುಸಾವಿರ ಮಂದಿ ಬ್ರಾಹ್ಮಣರನ್ನೂ, ಋಷಿಗಳನ್ನೂ ಕರೆಯಿಸಿ ದೇವತೆಗಳೂ, ತಾನೂ, ಬ್ರಹ್ಮರುದ್ರರೂ ನಿರ್ಮಿಸಿದ ಆಶ್ರಮಗಳಲ್ಲಿ ನೆಲೆಸುವಂತೆ ಮಾಡಿದನು.

೨೨. ಧರ್ಮೋಪದೇಶಕ್ಕಾಗಿ ಬ್ರಹ್ಮ ವಿಷ್ಣು ಮಹೇಶ್ವರರು ಅಲ್ಲಿ ಉಚಿತವಾದ ತಮ್ಮ ತಮ್ಮ ಸ್ಥಾನಗಳಲ್ಲಿ ನೆಲೆಸಿದರು.

೨೩. ಯುಧಿಷ್ಠಿರನು ಕೇಳುತ್ತಾನೆ:—ಶ್ರೀಕೃಷ್ಣನು ಯಾವ ವಂಶದಲ್ಲಿ ಹುಟ್ಟಿದ ವೇದಪಾರಂಗತರೂ, ಪರಿವಾರಯುಕ್ತರೂ, ಮಕ್ಕಳು ಮೊಮ್ಮಕ್ಕಳಿಂದಲೂ, ಶಿಷ್ಯರಿಂದಲೂ ಸಹಿತರೂ, ಅಗ್ನಿಹೋತ್ರನಿರತರೂ ಆಗಿರುವ ಬ್ರಾಹ್ಮಣರನ್ನು ಕರೆಯಿಸಿ ಸ್ಥಾಪಿಸಿದನು? ಅವರ ಸ್ಥಳ ಮತ್ತು ಹೆಸರುಗಳನ್ನು ನನಗೆ ಹೇಳ

CC-0. Jangamwadi Math Collection. Digitized by eGangotri

ವ್ಯಾಸ ಉವಾಚ:—

ಶ್ರೂಯತಾಂ ನೃಪಶಾರ್ದೂಲ ಧರ್ಮಾರಣ್ಯನಿವಾಸಿನಾಂ ॥ ೨೪ ॥
ಮಹಾತ್ಮನಾಂ ಬ್ರಾಹ್ಮಣಾನಾಮೃಷೀಣಾಮೂರ್ಧ್ವರೇತಸಾಂ ।
ತೇಷಾಂ ವೈ ಪುತ್ರಪೌತ್ರಾಣಾಂ ನಾಮಾನಿ ಚ ವದಾಮ್ಯಹಂ ॥ ೨೫ ॥
ಚತುರ್ವಿಂಶತಿಗೋತ್ರಾಣಿ ದ್ವಿಜಾನಾಂ ಪಾಂಡವರ್ಷಭ ।
ತೇಷಾಂ ಶಾಖಾಃ ಪ್ರಶಾಖಾಶ್ಚ ಪುತ್ರಪೌತ್ರಾದಯಸ್ತಥಾ ॥ ೨೬ ॥
ಜಜ್ಞಿರೇ ಬಹವಃ ಪುತ್ರಾಃ ಶತಶೋಽಥ ಸಹಸ್ರಶಃ ।
ಚತುರ್ವಿಂಶತಿಮುಖ್ಯಾನಾಂ ನಾಮಾನಿ ಪ್ರವದಾಮಿ ತೇ ।
ದ್ವಿಜಾನಾಮೃಷಯಃ ಪ್ರೋಕ್ತಾಃ ಪ್ರವರಾಣಿ ತಥಾ ಶೃಣು ॥ ೨೭ ॥
ಭಾರದ್ವಾಜಸ್ತಥಾ ವತ್ಸಃ ಕೌಶಿಕಃ ಕುಶ ಏವ ಚ ।
ಶಾಂಡಿಲ್ಯಃ ಕಾಶ್ಯಪಶ್ಚೈವ ಗೌತಮಶ್ಛಾಂಧನಸ್ತಥಾ ॥ ೨೮ ॥
ಜಾತೂಕರ್ಣ್ಯಸ್ತಥಾ ವತ್ಸೋ ವಸಿಷ್ಠೋ ಧಾರಣಸ್ತಥಾ ।
ಆತ್ರೇಯೋ ಭಾಂಡಿಲಶ್ಚೈವ ಲೌಕಿಕಾಶ್ಚ ಇತಃ ಪರಂ ॥ ೨೯ ॥
ಕೃಷ್ಣಾಯನೋಪಮನ್ಯುಶ್ಚ ಗಾರ್ಗ್ಯಮುದ್ಗಲಮೌಷಕಾಃ ।
ಪುಣ್ಯಾಸನಃ ಪರಾಶರಃ ಕೌಂಡಿನ್ಯಶ್ಚ ತತಃ ಪರಂ ॥ ೩೦ ॥
ತಥಾ ಗಾನ್ಯಾಸನಶ್ಚೈವ ಪ್ರವರಾಣಿ ಚತುರ್ವಿಂಶತಿಃ ।
ಜಾಮದಗ್ನ್ಯಸ್ಯ ಗೋತ್ರಸ್ಯ ಪ್ರವರಾಃ ಪಂಚ ಏವ ಹಿ ॥ ೩೧ ॥

---

೨೪–೨೫. ವ್ಯಾಸನು ಹೇಳುತ್ತಾನೆ:—ಮಹಾರಾಜ! ಕೇಳು. ಧರ್ಮಾರಣ್ಯದಲ್ಲಿ ವಾಸಮಾಡುವ ಮಹಾತ್ಮರಾದ ಬ್ರಾಹ್ಮಣರ, ಬ್ರಹ್ಮಚಾರಿಗಳಾದ ಮಹರ್ಷಿಗಳ ಮತ್ತು ಅವರ ಪುತ್ರ ಪೌತ್ರರ ಹೆಸರುಗಳನ್ನು ನಾನು ಹೇಳುವೆನು.

೨೬–೨೭. ಪಾಂಡವಶ್ರೇಷ್ಠ! ಬ್ರಾಹ್ಮಣರಿಗೆ ಇಪ್ಪತ್ತುನಾಲ್ಕು ಗೋತ್ರಗಳಿರುವುವು. ಆ ಬ್ರಾಹ್ಮಣರಿಂದ ಶಾಖೆ ಪ್ರಶಾಖೆಗಳೂ, ಮಕ್ಕಳು ಮೊಮ್ಮಕ್ಕಳೂ, ಅವರಿಗೆ ಸಾವಿರಾರು ಮಕ್ಕಳೂ ಹುಟ್ಟಿದರು. ಇಪ್ಪತ್ತುನಾಲ್ಕು ಮುಖ್ಯ ಗೋತ್ರಗಳ ಹೆಸರನ್ನು ನಿನಗೆ ಹೇಳುತ್ತೇನೆ. ಬ್ರಾಹ್ಮಣರಿಗೆ ಋಷಿಗಳು ಪ್ರವರ್ತಕರಾಗಿರುವರು.

೨೮–೩೨. ಭಾರದ್ವಾಜ, ವತ್ಸ, ಕೌಶಿಕ, ಕುಶ, ಶಾಂಡಿಲ್ಯ, ಕಶ್ಯಪ, ಗೌತಮ, ಛಾಂದನ, ಜಾತೂಕರ್ಣ್ಯ, ವತ್ಸ, ವಸಿಷ್ಠ, ಧಾರಣ, ಆತ್ರೇಯ, ಭಾಂಡಿಲ, ಲೌಕಿಕ, ಕೃಷ್ಣಾಯನ, ಉಪಮನ್ಯು, ಗಾರ್ಗ್ಯ, ಮುದ್ಗಲ, ಮೌಷಕ, ಪುಣ್ಯಾಸನ, ಪರಾಶರ, ಕೌಂಡಿನ್ಯ, ಗಾನ್ಯಾಸನ ಎಂದು ಇಪ್ಪತ್ತು

CC-0. Jangamwadi Math Collection. Digitized by eGangotri

ಭಾರ್ಗವಶ್ಚ್ಯವನಾಪ್ನುವಾನೌರ್ವಶ್ಚ ಜಮದಗ್ನಿಕಃ ।
ಪಂಚೈತೇ ಪ್ರವರಾ ರಾಜನ್ವಿಖ್ಯಾತಾ ಲೋಕವಿಶ್ರುತಾಃ ॥ ೩೨ ॥
ಏವಂ ಗೋತ್ರಸಮುತ್ಪನ್ನಾ ವಾಡವಾ ವೇದಪಾರಗಾಃ ।
ದ್ವಿಜಪೂಜಾಕ್ರಿಯಾಯುಕ್ತಾ ನಾನಾಕ್ರತುಕ್ರಿಯಾಪರಾಃ ॥ ೩೩ ॥
ಗುಣೇನ ಸಂಹಿತಾ ಆಸನ್ ಷಟ್ಕರ್ಮನಿರತಾಶ್ಚ ಯೇ ।
ಏವಂವಿಧಾ ಮಹಾಭಾಗಾ ನಾನಾದೇಶಭವಾ ದ್ವಿಜಾಃ ॥ ೩೪ ॥
ಭಾರ್ಮೇವಸಂ ತೃತೀಯಂ ಚ ಪ್ರವರಾಃ ಪಂಚ ಏವ ಹಿ ।
ಭಾರ್ಗವಚ್ಯಾವನಾಪ್ನುವಾನೌರ್ವಜಾಮದಗ್ನ್ಯ ಸಂಯುತಾಃ ।
ಆತ್ರೇಯೋಽರ್ಚನಾನಸಶ್ಚ ಶ್ಯಾವಾಸ್ಯೇತಿ ತೃತೀಯಕಃ ॥ ೩೫ ॥
ಅಸ್ಮಿನ್ಗೋತ್ರೇ ಭವಾ ವಿಪ್ರಾ ದುಷ್ಟಾಃ ಕುಟಿಲಗಾಮಿನಃ ।
ಧನಿನೋ ಧರ್ಮನಿಷ್ಠಾಶ್ಚ ವೇದವೇದಾಂಗಪಾರಗಾಃ ॥ ೩೬ ॥
ದಾನಭೋಗರತಾಃ ಸರ್ವೇ ಶ್ರೌತಸ್ಮಾರ್ತೇಷು ಸಂಮತಾಃ ।
ಮಾಂಡವ್ಯಗೋತ್ರೇ ವಿಜ್ಞೇಯಾಃ ಪ್ರವರೈಃ ಪಂಚಭಿರ್ಯುತಾಃ ॥ ೩೭ ॥
ಭಾರ್ಗವಶ್ಚ್ಯಾವನೋಽತ್ರಿಶ್ಚಾಪ್ನುವಾನೌರ್ವಸ್ತಥೈವ ಚ ।
ಅಸ್ಮಿನ್ಗೋತ್ರೇ ಭವಾ ವಿಪ್ರಾಃ ಶ್ರುತಿಸ್ಮೃತಿಪರಾಯಣಾಃ ॥ ೩೮ ॥
ರೋಗಿಣೋ ಲೋಭಿನೋ ದುಷ್ಟಾ ಯಜನೇ ಯಾಜನೇ ರತಾಃ ।
ಬ್ರಹ್ಮಕ್ರಿಯಾಪರಾಃ ಸರ್ವೇ ಮಾಂಡವ್ಯಾಃ ಕುರುಸತ್ತಮ ॥ ೩೯ ॥

---

ನಾಲ್ಕು ಪ್ರವರಗಳು. ಜಾಮದಗ್ನ್ಯಗೋತ್ರಕ್ಕೆ ಭಾರ್ಗವ, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿ ಎಂದು ಲೋಕಪ್ರಸಿದ್ಧವಾದ ಐದು ಪ್ರವರಗಳು.

೩೩. ಈ ಗೋತ್ರದಲ್ಲಿ ಹುಟ್ಟಿದ ನಾನಾದೇಶದ ಬ್ರಾಹ್ಮಣರು ವೇದಾಧ್ಯಯನಪರರೂ, ಬ್ರಾಹ್ಮಣ ಪೂಜಾನಿರತರೂ, ಅನೇಕ ಯಜ್ಞಗಳಲ್ಲಿ ಆಸಕ್ತರೂ, ಗುಣಶಾಲಿಗಳೂ, ಷಟ್ಕರ್ಮನಿರತರೂ ಆಗಿರುವರು.

೩೪-೩೯. ಭಾರ್ಮೇವಸ ಗೋತ್ರಕ್ಕೆ ಭಾರ್ಗವ, ಚ್ಯಾವನ, ಆಪ್ನುವಾನ, ಔರ್ವ, ಜಾಮದಗ್ನ್ಯ ಎಂಬ ಐದು ಪ್ರವರಗಳಿರುವುವು. ಆತ್ರೇಯ, ಅರ್ಚನಾನಸ, ಶ್ಯಾವಾಸ್ಯಪ್ರವರಗಳುಳ್ಳ ಗೋತ್ರದ ಜನರು ದುಷ್ಟರೂ, ವಕ್ರಮಾರ್ಗದವರೂ, ಹಣಗಾರರೂ, ಧರ್ಮಪರಾಯಣರೂ, ವೇದ ಮತ್ತು ವೇದಾಂಗಗಳನ್ನು ಅಧ್ಯಯನಮಾಡಿದವರೂ, ದಾನ ಮತ್ತು ಸುಖಾನುಭವಗಳಲ್ಲಿ ಆಸಕ್ತರೂ, ಶ್ರೌತಸ್ಮಾರ್ತ ಕರ್ಮಗಳಲ್ಲಿ ನಿರತರೂ ಆಗಿರುವರು. ಮಾಂಡವ್ಯ ಗೋತ್ರಕ್ಕೆ ಭಾರ್ಗವ, ಚ್ಯಾವನ, ಅತ್ರಿ, ಆಪ್ನುವಾನ, ಔರ್ವವೆಂಬ ಐದು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಶೃತಿಸ್ಮೃತಿನಿರತರೂ, ಅತ್ಯಾಶೆಯುಳ್ಳವರೂ, ದುಷ್ಟರೂ, ಯಾಗಮಾಡುವುದು, ಯಾಗಮಾಡಿಸುವುದು ಇವುಗಳಲ್ಲಿ ಆಸಕ್ತರೂ, ಬ್ರಾಹ್ಮಣಧರ್ಮಪರರೂ ಆಗಿರುವರು.

CC-0. Jangamwadi Math Collection. Digitized by eGangotri

ಗಾರ್ಗ್ಯಸ್ಯ ಗೋತ್ರೇ ಯೇ ಜಾತಾಸ್ತೇಷಾಂ ತು ಪ್ರವರಾಸ್ತ್ರಯಃ ।
ಅಂಗಿರಾಶ್ಚಾಽಂಬರೀಷಶ್ಚ ಯೌವನಾಶ್ವಸ್ತೃತೀಯಕಃ ॥ ೪೦ ॥
ಅಸ್ಮಿನ್ಗೋತ್ರೇ ಸಮುತ್ಪನ್ನಾಃ ಸದ್ವೃತ್ತಾಃ ಸತ್ಯಭಾಷಿಣಃ ।
ಶಾಂತಾಶ್ಚ ಭಿನ್ನವರ್ಣಾಶ್ಚ ನಿರ್ಧನಾಶ್ಚ ಕುಚೈಲಿನಃ ॥ ೪೧ ॥
ಸಂಗವಾತ್ಸಲ್ಯಯುಕ್ತಾಶ್ಚ ವೇದಶಾಸ್ತ್ರೇಷು ನಿಶ್ಚಲಾಃ ।
ವತ್ಸಗೋತ್ರೇ ದ್ವಿಜಾ ಭೂಪ ಪ್ರವರಾಃ ಪಂಚ ಏವ ಹಿ ॥ ೪೨ ॥
ಭಾರ್ಗವಶ್ಚ್ಯವನಾಪ್ನುವಾನೌರ್ವಶ್ಚ ಜಮದಗ್ನಿಕಃ ।
ಏಭಿಸ್ತು ಪಂಚ ವಿಖ್ಯಾತಾ ದ್ವಿಜಾ ಬ್ರಹ್ಮಸ್ವರೂಪಿಣಃ ॥ ೪೩ ॥
ಶಾಂತಾ ದಾಂತಾಃ ಸುಶೀಲಾಶ್ಚ ಧರ್ಮಪುತ್ರೈಃ ಸುಸಂಯುತಾಃ ।
ವೇದಾಽಧ್ಯಯನಹೀನಾಶ್ಚ ಕುಶಲಾಃ ಸರ್ವಕರ್ಮಸು ॥ ೪೪ ॥
ಸುರೂಪಾಶ್ಚ ಸದಾಚಾರಾಃ ಸರ್ವಧರ್ಮೇಷು ನಿಷ್ಠಿತಾಃ ।
ದಾನಧರ್ಮರತಾಃ ಸರ್ವೇ ಅನ್ನದಾ ಜಲದಾ ದ್ವಿಜಾಃ ॥ ೪೫ ॥
ದಯಾಲವಃ ಸುಶೀಲಾಶ್ಚ ಸರ್ವಭೂತಹಿತೇ ರತಾಃ ।
ಕಾಶ್ಯಪಾ ಬ್ರಾಹ್ಮಣಾ ರಾಜನ್ಪ್ರವರತ್ರಯಸಂಯುತಾಃ ॥ ೪೬ ॥
ಕಾಶ್ಯಪಶ್ಚಾಪವತ್ಸಾರೋ ನೈಧ್ರುವಶ್ಚ ತೃತೀಯಕಃ ।
ವೇದಜ್ಞಾ ಗೌರವರ್ಣಾಶ್ಚ ನೈಷ್ಠಿಕಾ ಯಜ್ಞಕಾರಕಾಃ ॥ ೪೭ ॥
ಪ್ರಿಯವಾಸಾ ಮಹಾದಕ್ಷಾ ಗುರುಭಕ್ತಿರತಾಃ ಸದಾ ।
ಪ್ರತಿಷ್ಠಾಮಾನವಂತಶ್ಚ ಸರ್ವಭೂತಹಿತೇ ರತಾಃ ॥ ೪೮ ॥

---

೪೦–೫೩. ಗಾರ್ಗ್ಯಗೋತ್ರದವರಿಗೆ ಅಂಗಿರಾ, ಅಂಬರೀಷ, ಯೌವನಾಶ್ವವೆಂದು ಮೂರು ಪ್ರವರಗಳಿರುವುವು. ಈ ಗೋತ್ರದವರು ಒಳ್ಳೆನಡತೆಯುಳ್ಳವರೂ, ನಿಜವನ್ನಾಡುವವರೂ, ಶಾಂತರೂ, ಬೇರೆಬೇರೆ ಬಣ್ಣದವರೂ, ಬಡವರೂ, ಕೊಳೆಬಟ್ಟೆಯುಳ್ಳವರೂ, ಸಹವಾಸ ಪ್ರಿಯರೂ, ವೇದಶಾಸ್ತ್ರಗಳಲ್ಲಿ ದೃಢಮನಸ್ಸುಳ್ಳವರೂ ಆಗಿರುವರು. ವತ್ಸಗೋತ್ರದ ಬ್ರಾಹ್ಮಣರಿಗೆ ಭಾರ್ಗವ, ಚ್ಯವನ, ಆಪ್ನುವಾನ, ಓರ್ವ, ಜಮದಗ್ನಿ ಎಂಬ ಐದು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಪ್ರಸಿದ್ಧರೂ ಬ್ರಹ್ಮರೂಪಿಗಳೂ, ಶಾಂತರೂ, ಜಿತೇಂದ್ರಿಯರೂ, ಒಳ್ಳೆನಡತೆಯುಳ್ಳವರೂ, ಧರ್ಮಾತ್ಮರಾದ ಮಕ್ಕಳುಳ್ಳವರೂ, ವೇದಾಧ್ಯಯನವಿಲ್ಲದವರೂ, ಸಕಲಕಾರ್ಯಗಳಲ್ಲಿ ನಿಪುಣರೂ, ಸುಂದರರೂ, ಸದಾಚಾರವುಳ್ಳವರೂ, ಸಮಸ್ತಧರ್ಮಗಳಲ್ಲಿ ನಿರತರೂ, ದಾನಧರ್ಮಪರರೂ, ಅನ್ನನೀರನ್ನು ದಾನಮಾಡುವವರೂ, ದಯಾವಂತರೂ, ಸಕಲಪ್ರಾಣಿಗಳ ಹಿತಗಳಲ್ಲಿ ನಿರತರೂ ಆಗಿರುವರು. ಕಾಶ್ಯಪಗೋತ್ರದ ಬ್ರಾಹ್ಮಣರಿಗೆ ಕಾಶ್ಯಪ, ಅಪವತ್ಸಾರ, ನೈಧ್ರುವವೆಂಬ ಮೂರು ಪ್ರವರಗಳಿರುವುವು. ಈ ಬ್ರಾಹ್ಮ

CC-0. Jangamwadi Math Collection. Digitized by eGangotri

ಯಜಂತೇ ಚ ಮಹಾಯಜ್ಞಾನ್ಯಾಕ್ಯಪೇಯಾ ದ್ವಿಜಾತಯಃ ।
ಧಾರೀಣಸಗೋತ್ರಜಾಶ್ಚ ಪ್ರವರೈಸ್ತ್ರಿಭಿರನ್ವಿತಾಃ ॥ ೪೯ ॥
ಅಗಸ್ತಿದರ್ವಿಶ್ವೇತಾಶ್ವದಧ್ಯವಾಹನಸಂಜ್ಞಕಾಃ ।
ಅಸ್ಮಿನ್ಗೋತ್ರೇ ಚ ಯೇ ಜಾತಾ ಧರ್ಮಕರ್ಮಸಮಾಶ್ರಿತಾಃ ॥ ೫೦ ॥
ಕರ್ಮಕ್ರೂರಾಶ್ಚ ತೇ ಸರ್ವೇ ತಥೈವೋದರಿಣಸ್ತು ತೇ ।
ಲಂಬಕರ್ಣಾ ಮಹಾದಂಷ್ಟ್ರಾ ದ್ವಿಜಾ ಧನಪರಾಯಣಾಃ ॥ ೫೧ ॥
ಕ್ರೋಧಿನೋ ದ್ವೇಷಿಣಶ್ಚೈವ ಸರ್ವಸತ್ವಭಯಂಕರಾಃ ।
ಲೌಗಾಕ್ಷಸೋದ್ಭವಾ ಯೇ ವೈ ವಾಡವಾಃ ಸತ್ಯಸಂಶ್ರಿತಾಃ ॥ ೫೨ ॥
ಪ್ರವರಾಶ್ಚ ತ್ರಯಸ್ತೇಷಾಂ ತತ್ರ ಜ್ಞಾನಸ್ವರೂಪಕಾಃ ।
ಕಶ್ಯಪಶ್ಚೈವ ವತ್ಸಶ್ಚ ವಸಿಷ್ಠಶ್ಚ ತೃತೀಯಕಃ ॥ ೫೩ ॥
ಸದಾಚಾರಾಸ್ತು ವಿಖ್ಯಾತಾ ವೈಷ್ಣವಾ ಬಹುವೃತ್ತಯಃ ।
ರೋಮಭಿರ್ಬಹುಭಿರ್ವ್ಯಾಪ್ತಾಃ ಕೃಷ್ಣವರ್ಣಾಸ್ತು ವಾಡವಾಃ ॥ ೫೪ ॥
ಶಾಂತಾ ದಾಂತಾಃ ಸುಶೀಲಾಶ್ಚ ಸ್ವದಾರನಿರತಾಃ ಸದಾ ।
ಕುಶಿಕಸಗೋತ್ರೇ ಯೇ ಜಾತಾಃ ಪ್ರವರೈಸ್ತ್ರಿಭಿರನ್ವಿತಾಃ ॥ ೫೫ ॥
ವಿಶ್ವಾಮಿತ್ರೋ ದೇವರಾತ ಔದಲಶ್ಚ ತ್ರಯಶ್ಚ ಯೇ ।
ಅಸ್ಮಿನ್ಗೋತ್ರೇ ತು ಯೇ ಜಾತಾ ದುರ್ಬಲಾ ದೀನಮಾನಸಾಃ ॥ ೫೬ ॥

---

ಣರು ವೇದಜ್ಞರೂ, ಹಳದಿಬಣ್ಣದವರೂ, ಯಜ್ಞಮಾಡುವವರೂ, ಬಟ್ಟೆಯಲ್ಲಿ ಪ್ರೀತಿಯುಳ್ಳವರೂ, ಅತ್ಯಂತಕುಶಲರೂ, ಗುರುಗಳಲ್ಲಿ ಭಕ್ತಿಯುಳ್ಳವರೂ, ಗೌರವವುಳ್ಳವರೂ, ಸಕಲಪ್ರಾಣಿಗಳ ಹಿತಗಳಲ್ಲಿ ನಿರತರೂ, ದೊಡ್ಡದೊಡ್ಡ ಯಜ್ಞಗಳನ್ನು ಮಾಡುವವರೂ ಆಗಿರುವರು. ಧಾರೀಣಸಗೋತ್ರಜರಿಗೆ ಅಗಸ್ತಿದರ್ವಿ, ಶ್ವೇತಾಶ್ವ, ದಧ್ಯವಾಹನ ಎಂಬ ಮೂರು ಪ್ರವರಗಳು. ಈ ಗೋತ್ರದವರು ಧರ್ಮಕಾರ್ಯಗಳನ್ನು ಮಾಡುವವರೂ, ಕಠಿನಕಾರ್ಯವುಳ್ಳವರೂ, ಹೊಟ್ಟೆಬಾಕರೂ, ಜೋಲು ಕಿವಿಯುಳ್ಳವರೂ, ದೊಡ್ಡ ಹಲ್ಲುಳ್ಳವರೂ, ಧನಾಸಕ್ತರೂ, ಕೋಪಿಷ್ಠರೂ, ದ್ವೇಷಮಾಡುವವರೂ, ಸಕಲಪ್ರಾಣಿಗಳಿಗೆ ಭಯವನ್ನುಂಟುಮಾಡುವವರೂ ಆಗಿರುವರು. ಲೌಗಾಕ್ಷಸಗೋತ್ರದ ಸತ್ಯವಂತರೂ, ತತ್ತ್ವಜ್ಞಾನಿಗಳೂ ಆಗಿರುವ ಬ್ರಾಹ್ಮಣರಿಗೆ ಕಶ್ಯಪ, ವತ್ಸ, ವಸಿಷ್ಠ ಎಂಬ ಮೂರು ಪ್ರವರಗಳು.

೫೪–೫೭. ಈ ಗೋತ್ರದ ಬ್ರಾಹ್ಮಣರು ಸದಾಚಾರಸಂಪನ್ನರೂ, ಪ್ರಸಿದ್ಧರೂ, ವಿಷ್ಣುಭಕ್ತರೂ, ನಾನಾ ವೃತ್ತಿಯುಳ್ಳವರೂ, ಹೆಚ್ಚು ರೋಮವುಳ್ಳವರೂ, ಕಪ್ಪು ಬಣ್ಣದವರೂ, ಶಾಂತರೂ, ಜಿತೇಂದ್ರಿಯರೂ, ಸುಶೀಲರೂ, ತಮ ಸತ್ನಿಯರಲ್ಲಿ ಮಾತ್ರವೆ ಆಸಕ್ತರೂ ಆಗಿರುವರು. ಕುಶಿಕಗೋತ್ರದ

CC-0. Jangamwadi Math Collection. Digitized by eGangotri

ಅಸತ್ಯಭಾಷಿಣೋ ವಿಪ್ರಾಃ ಸುರೂಪಾ ನೃಪಸತ್ತಮಾಃ ।
ಸರ್ವವಿದ್ಯಾಕುಶಲಿನೋ ಬ್ರಾಹ್ಮಣಾ ಬ್ರಹ್ಮಸತ್ತಮಾಃ ॥ ೫೭ ॥
ಉಪಮನ್ಯುಸಗೋತ್ರೇಯಾಃ ಪ್ರವರತ್ರಯಸಂಯುತಾಃ ।
ವಸಿಷ್ಠಶ್ಚ ಭರದ್ವಾಜಸ್ತ್ರಿಂದ್ರಪ್ರಮುದ ಏವ ವಾ ॥ ೫೮ ॥
ಅಸ್ಮಿನ್ಗೋತ್ರೇ ತು ಯೇ ವಿಪ್ರಾಃ ಕ್ರೂರಾಃ ಕುಟಿಲಗಾಮಿನಃ ।
ದೂಷಣಾ ದ್ವೇಷಿಣಸ್ತುಚ್ಛಾಃ ಸರ್ವಸಂಗ್ರಹತತ್ಪರಾಃ ॥ ೫೯ ॥
ಕಲಹೋತ್ಪಾದನೇ ದಕ್ಷಾ ಧನಿನೋ ಮಾನಿನಸ್ತಥಾ ।
ಸರ್ವದೈವ ಪ್ರದುಷ್ಟಾಶ್ಚ ದುಷ್ಟಸಂಗರತಾಸ್ತಥಾ ॥ ೬೦ ॥
ರೋಗಿಣೋ ದುರ್ಬಲಾಶ್ಚೈವ ವೃತ್ತ್ಯುಪಕಲ್ಪವರ್ಜಿತಾಃ ।
ವಾತ್ಸ್ಯಗೋತ್ರೇ ಭವಾ ವಿಪ್ರಾಃ ಪ್ರವರೈಃ ಪಂಚಭಿರ್ಯುತಾಃ ॥ ೬೧ ॥
ಭಾರ್ಗವಚ್ಯಾವನಾಪ್ನುವಾನೌರ್ವಶ್ಚ ಜಮದಗ್ನಿಕಃ ।
ಅಸ್ಮಿನ್ಗೋತ್ರೇ ಭವಾ ವಿಪ್ರಾಃ ಸ್ಥೂಲಾಶ್ಚ ಬಹುಬುದ್ಧಯಃ ॥ ೬೨ ॥
ಸರ್ವಕರ್ಮರತಾಶ್ಚೈವ ಸರ್ವಧರ್ಮೇಷು ನಿಶ್ಚಲಾಃ ।
ವೇದಶಾಸ್ತ್ರಾರ್ಥನಿಪುಣಾ ಯಜನೇ ಯಾಜನೇ ರತಾಃ ॥ ೬೩ ॥
ಸದಾಚಾರಾಃ ಸುರೂಪಾಶ್ಚ ಬುದ್ಧಿತೋ ದೀರ್ಘದರ್ಶಿನಃ ।
ವಾತ್ಸ್ಯಾಯನಸಗೋತ್ರೇ ಯಾಃ ಪ್ರವರೈಃ ಪಂಚಭಿರ್ಯುತಾಃ ॥ ೬೪ ॥

---

ಬ್ರಾಹ್ಮಣರಿಗೆ ವಿಶ್ವಾಮಿತ್ರ, ದೇವರಾತ, ಔದಲವೆಂಬ ಮೂರು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ದುರ್ಬಲರೂ, ದೀನವಾದ ಮನಸ್ಸುಳ್ಳವರೂ, ಸುಳ್ಳನ್ನಾಡುವವರೂ, ಸಮಸ್ತವಿದ್ಯಾನಿಪುಣರೂ, ಬ್ರಹ್ಮಜ್ಞಾನಿಗಳೂ ಆಗಿರುವರು. ಈ ಗೋತ್ರದ ರಾಜರು ಸುಂದರರಾಗಿರುವರು.

೫೮-೬೫. ಉಪಮನ್ಯುಗೋತ್ರದವರಿಗೆ ವಸಿಷ್ಠ, ಭರದ್ವಾಜ, ಇಂದ್ರಪ್ರಮದ ಎಂಬ ಮೂರು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಕಠಿನರೂ, ವಕ್ರಮಾರ್ಗದಲ್ಲಿ ನಡೆಯುವವರೂ, ಪರರನ್ನು ದೂಷಿಸುವವರೂ, ದ್ವೇಷಿಗಳೂ, ಅಲ್ಪರೂ, ಸಕಲವಸ್ತುಗಳನ್ನು ಕೂಡಿಡುವುದರಲ್ಲಿ ಆಸಕ್ತರೂ, ಜಗಳವನ್ನೆಬ್ಬಿಸುವುದರಲ್ಲಿ ಕುಶಲರೂ, ಹಣವಂತರೂ, ಮಾನವಂತರೂ, ಯಾವಾಗಲೂ ದುಷ್ಟರೂ, ದುಷ್ಟಸಹವಾಸಿಗಳೂ, ರೋಗಿಗಳೂ, ಅಶಕ್ತರೂ, ಜೀವನವೃತ್ತಿಯನ್ನು ಕಲ್ಪಿಸಿಕೊಳ್ಳದಿರುವವರೂ ಆಗಿರುವರು. ವಾತ್ಸ್ಯಗೋತ್ರದವರಿಗೆ ಭಾರ್ಗವ, ಚ್ಯಾವನ, ಆಪ್ನುವಾನ, ಔರ್ವ, ಜಮದಗ್ನಿ ಎಂಬ ಐದು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ದಪ್ಪಗೂ, ಅತಿ ಬುದ್ಧಿಯುಳ್ಳವರೂ, ಸಕಲ ಕರ್ಮಗಳಲ್ಲಿ ನಿರತರೂ, ಸಮಸ್ತಧರ್ಮಗಳಲ್ಲಿ ದೃಢಮನಸ್ಸುಳ್ಳ

CC-0. Jangamwadi Math Collection. Digitized by eGangotri

ಭಾರ್ಗವಚ್ಯಾವನಾಪ್ನುವಾನೌರ್ವಶ್ಚ ಜಮದಗ್ನಿಕಃ ।
ಪೂರ್ವೋಕ್ತಾಃ ಪ್ರವರಾಶ್ಚಾಽಸ್ಯ ಕಥಿತಾಸ್ತವ ಭಾರತ ॥ ೬೫ ॥
ಅಸ್ಮಿನ್ಗೋತ್ರೇ ತು ಯೇ ಜಾತಾ ಪಾಕಯಜ್ಞರತಾಃ ಸದಾ ।
ಲೋಭಿನಃ ಕ್ರೋಧಿನಶ್ಚೈವ ಪ್ರಜಾಯಂತೇ ಬಹುಪ್ರಜಾಃ ॥ ೬೬ ॥
ಸ್ನಾನದಾನಾದಿನಿರತಾಃ ಸರ್ವದಾಶ್ಚ ಜಿತೇಂದ್ರಿಯಾಃ ।
ವಾಪೀಕೂಪತಟಾಕಾನಾಂ ಕರ್ತಾರಶ್ಚ ಸಹಸ್ರಶಃ ।
ವ್ರತಶೀಲಾ ಗುಣಜ್ಞಾಶ್ಚ ಮೂರ್ಖಾ ವೇದವಿವರ್ಜಿತಾಃ ॥ ೬೭ ॥
ಕೌಶಿಕವಂಶೇ ಯೇ ಜಾತಾಃ ಪ್ರವರತ್ರಯಸಂಯುತಾಃ ।
ವಿಶ್ವಾಮಿತ್ರೋಽಘಮರ್ಷೀ ಚ ಕೌಶಿಕಶ್ಚ ತೃತೀಯಕಃ ॥ ೬೮ ॥
ಅಸ್ಮಿನ್ಗೋತ್ರೇ ಚ ಯೇ ಜಾತಾ ಬ್ರಾಹ್ಮಣಾ ಬ್ರಹ್ಮವೇದಿನಃ ।
ಶಾಂತಾ ದಾಂತಾಃ ಸುಶೀಲಾಶ್ಚ ಸರ್ವಧರ್ಮಪರಾಯಣಾಃ ॥ ೬೯ ॥
ಅಪುತ್ರಿಣಸ್ತಥಾ ರೂಕ್ಷಾಸ್ತೇಜೋಹೀನಾ ದ್ವಿಜೋತ್ತಮಾಃ ।
ಭಾರದ್ವಾಜಸಗೋತ್ರೇಯಾಃ ಪ್ರವರೈಃ ಪಂಚಭಿರ್ಯುತಾಃ ॥ ೭೦ ॥
ಆಂಗಿರಸೋ ಬಾರ್ಹಸ್ಪತ್ಯೋ ಭಾರದ್ವಾಜಸ್ತು ಸೈನ್ಯಸಃ ।
ಗಾರ್ಗ್ಯಶ್ಚೈವೇತಿ ವಿಜ್ಞೇಯಾಃ ಪ್ರವರಾಃ ಪಂಚ ಏವ ಚ ॥ ೭೧ ॥

---

ವರೂ, ವೇದ ಮತ್ತು ಶಾಸ್ತ್ರಾರ್ಥಗಳಲ್ಲಿ ಕುಶಲರೂ, ಯಜನ ಮತ್ತು ಯಾಜನದಲ್ಲಿ ನಿರತರೂ, ಸದಾಚಾರಸಂಪನ್ನರೂ, ಸುಂದರರೂ, ದೂರದೃಷ್ಟಿಯುಳ್ಳವರೂ ಆಗಿರುವರು. ವಾತ್ಸ್ಯಾಯನ ಗೋತ್ರದವರಿಗೆ ಭಾರ್ಗವ, ಚ್ಯಾವನ, ಆಪ್ನುವಾನ, ಓರ್ವ, ಜಮದಗ್ನಿ ಎಂಬ ಹಿಂದೆ ಹೇಳಿದ ಐದು ಪ್ರವರಗಳು.

೬೬–೬೭. ಈ ಗೋತ್ರದವರು ಯಾವಾಗಲೂ ಪಾಕ ಯಜ್ಞಾಸಕ್ತರೂ, ಲೋಭಿಗಳೂ, ಕೋಪಿಷ್ಠರೂ, ಬಹುಮಂದಿ ಮಕ್ಕಳುಳ್ಳವರೂ, ಸ್ನಾನದಾನಾದಿಗಳಲ್ಲಿ ನಿರತರೂ, ಸಮಸ್ತವನ್ನೂ ದಾನಮಾಡುವವರೂ, ಜಿತೇಂದ್ರಿಯರೂ, ಸಾವಿರಾರು ಕೊಳ, ಬಾವಿ, ಕೆರೆಗಳನ್ನು ಕಟ್ಟಿಸುವವರೂ, ನಿಯಮಶೀಲರೂ, ಗುಣಜ್ಞರೂ, ಮೂರ್ಖರೂ, ವೇದಾಧ್ಯಯನಮಾಡದವರೂ ಆಗಿರುವರು.

೬೮–೭೧. ಕೌಶಿಕವಂಶದ ಬ್ರಾಹ್ಮಣರಿಗೆ ವಿಶ್ವಾಮಿತ್ರ, ಅಘಮರ್ಷೀ, ಕೌಶಿಕವೆಂಬ ಮೂರು ಪ್ರವರಗಳು. ಈ ಗೋತ್ರದಲ್ಲಿ ಜನಿಸಿದ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೂ, ಶಾಂತರೂ, ಜಿತೇಂದ್ರಿಯರೂ, ಸುಶೀಲರೂ, ಸಕಲ ಧರ್ಮನಿರತರೂ, ಪುತ್ರರಿಲ್ಲದವರೂ, ಕಠಿನರೂ, ತೇಜಸ್ಸಿಲ್ಲದವರೂ ಆಗಿರುವರು. ಭಾರದ್ವಾಜಗೋತ್ರದ ಬ್ರಾಹ್ಮಣರಿಗೆ, ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ, ಸೈನ್ಯಸ, ಗಾರ್ಗ್ಯ ಎಂಬ ಐದು ಪ್ರವರಗಳು.

CC-0. Jangamwadi Math Collection. Digitized by eGangotri

ಅಸ್ಮಿನ್ಗೋತ್ರೇ ಚ ಯೇ ಜಾತಾ ವಾಡವಾ ಧನಿನಃ ಶುಭಾಃ ।
ವಸ್ತ್ರಾಽಲಂಕರಣೋಪೇತಾ ದ್ವಿಜಭಕ್ತಿಪರಾಯಣಾಃ ॥ ೭೨ ॥
ಬ್ರಹ್ಮಭೋಜ್ಯಪರಾಃ ಸರ್ವೇ ಸರ್ವಧರ್ಮಪರಾಯಣಾಃ ।
ಕಾಶ್ಯಪಗೋತ್ರೇ ಯೇ ಜಾತಾಃ ಪ್ರವರತ್ರಯಸಂಯುತಾಃ ॥ ೭೩ ॥
ಕಾಶ್ಯಪಶ್ಚಾಪವತ್ಸಾರೋ ರೈಭ್ಯೇತಿ ವಿಶ್ರುತಾಸ್ತ್ರಯಃ ।
ಅಸ್ಮಿನ್ಗೋತ್ರೇ ಭವಾ ವಿಪ್ರಾ ರಕ್ತಾಕ್ಷಾಃ ಕ್ರೂರದೃಷ್ಟಯಃ ॥ ೭೪ ॥
ಜಿಹ್ವಾಲೌಲ್ಯರತಾಃ ಸರ್ವೇ ಸರ್ವೇ ತೇ ಪಾರಮಾರ್ಥಿನಃ ।
ನಿರ್ಧನಾ ರೋಗಿಣಶ್ಚೈತೇ ತಸ್ಕರಾಽನೃತಭಾಷಿಣಃ ॥ ೭೫ ॥
ಶಾಸ್ತ್ರಾರ್ಥಾಽವೇದಿನಃ ಸರ್ವೇ ವೇದಸ್ಮೃತಿವಿವರ್ಜಿತಾಃ ।
ಶುನಕೇಷು ಚ ಯೇ ಜಾತಾ ವಿಪ್ರಾ ಧ್ಯಾನಪರಾಯಣಾಃ ॥ ೭೬ ॥
ತಪಸ್ವಿನೋ ಯೋಗಿನಶ್ಚ ವೇದವೇದಾಂಗಪಾರಗಾಃ ।
ಸಾಧವಶ್ಚ ಸದಾಚಾರಾ ವಿಷ್ಣುಭಕ್ತಿಪರಾಯಣಾಃ ॥ ೭೭ ॥
ಹ್ರಸ್ವಕಾಯಾ ಭಿನ್ನವರ್ಣಾ ಬಹುರಾಮಾ ದ್ವಿಜೋತ್ತಮಾಃ ।
ದಯಾಲಾಃ ಸರಲಾಃ ಶಾಂತಾ ಬ್ರಹ್ಮಭೋಜ್ಯಪರಾಯಣಾಃ ॥ ೭೮ ॥
ಶೌನಕೇಷು ಚ ಯೇ ಜಾತಾಃ ಪ್ರವರತ್ರಯಸಂಯುತಾಃ ।
ಭಾರ್ಗವ ಶೌನಹೋತ್ರೇತಿ ಗಾತ್ಸರ್ಯಪ್ರಮುದ ಇತಿ ತ್ರಯಃ ॥ ೭೯ ॥

---

೭೨–೭೮. ಈ ಗೋತ್ರದಲ್ಲಿ ಹುಟ್ಟಿದವರು ಹಣಗಾರರೂ, ಮಂಗಳಕರರೂ, ಒಡವೆ ವಸ್ತ್ರಗಳಿಂದ ಕೂಡಿದವರೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಬ್ರಾಹ್ಮಣಭೋಜ್ಯವಾದ ವಸ್ತುಗಳಲ್ಲಿ ಆಸಕ್ತರೂ, ಸರ್ವಧರ್ಮನಿರತರೂ ಆಗಿರುವರು. ಕಾಶ್ಯಪಗೋತ್ರದ ಬ್ರಾಹ್ಮಣರಿಗೆ ಕಾಶ್ಯಪ, ಅಪವತ್ಸಾರ, ರೈಭ್ಯ ಎಂಬ ಮೂರು ಪ್ರಸಿದ್ಧಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಕೆಂಗಣ್ಣುಳ್ಳವರೂ, ಕ್ರೂರದೃಷ್ಟಿಯುಳ್ಳವರೂ, ಜಿಹ್ವಾಚಾಪಲ್ಯವುಳ್ಳವರೂ, ಪಾರಮಾರ್ಥಿಕ ದೃಷ್ಟಿಯುಳ್ಳವರೂ, ಬಡವರೂ, ರೋಗಿಗಳೂ, ಕಳ್ಳರೂ, ಸುಳ್ಳಾಡುವವರೂ, ಶಾಸ್ತ್ರಾರ್ಥಜ್ಞಾನವಿಲ್ಲದವರೂ, ವೇದ ಮತ್ತು ಸ್ಮೃತಿಗಳನ್ನರಿಯದವರೂ, ಆಗಿರುವರು. ಶುನಕಗೋತ್ರಜರು ಧ್ಯಾನಾಸಕ್ತರೂ, ತಪಸ್ವಿಗಳೂ, ಯೋಗಿಗಳೂ, ವೇದ ಮತ್ತು ವೇದಾಂಗಗಳನ್ನರಿತವರೂ, ಸಜ್ಜನರೂ, ಸದಾಚಾರ ಸಂಪನ್ನರೂ, ವಿಷ್ಣುಭಕ್ತರೂ, ಕುಳ್ಳರೂ, ನಾನಾ ವರ್ಣದವರೂ, ಬಹಳ ಕೂದಲುಳ್ಳವರೂ, ಬ್ರಾಹ್ಮಣೋತ್ತಮರೂ, ದಯೆಯುಳ್ಳವರೂ, ಸರಳಸ್ವಭಾವದವರೂ, ಶಾಂತರೂ, ಬ್ರಾಹ್ಮಣರು ತಿನ್ನಲು ಯೋಗ್ಯವಾದ ವಸ್ತುಗಳಲ್ಲಿ ಮಾತ್ರವೇ ಆಸಕ್ತರೂ ಆಗಿರುವರು.

೭೯. ಶೌನಕಸಗೋತ್ರದಲ್ಲಿ ಜನಿಸಿದ ಬ್ರಾಹ್ಮಣರಿಗೆ ಭಾರ್ಗವ, ಶೌನಹೋತ್ರ, ಗಾತ್ಸರ್ಯಪ್ರಮುದ ಎಂಬ ಮೂರು ಪ್ರವರಗಳು.



CC-0. Jangamwadi Math Collection. Digitized by eGangotri

ಅಸ್ಮಿನ್ವಂಶೇ ಸಮುತ್ಪನ್ನಾ ವಾಡವಾ ದುಃಸಹಾ ನೃಪ ।
ಮಹೋತ್ಕಟಾ ಮಹಾಕಾಯಾಃ ಪ್ರಲಂಬಾಶ್ಚ ಮಹೋದ್ಧತಾಃ ॥ ೮೦ ॥
ಕ್ಲೇಶರೂಪಾಃ ಕೃಷ್ಣವರ್ಣಾಃ ಸರ್ವಶಾಸ್ತ್ರವಿಶಾರದಾಃ ।
ಬಹುಭುಜೋ ಮಾನಿನೋ ದಕ್ಷಾ ರಾಗದ್ವೇಷೋಪವರ್ಜಿತಾಃ ॥ ೮೧ ॥
ಸುವಸ್ತ್ರಭೂಷಾ ರೂಪಾ ವೈ ಬ್ರಾಹ್ಮಣಾ ಬ್ರಹ್ಮವಾದಿನಃ ।
ವಸಿಷ್ಠಗೋತ್ರೇ ಯೇ ಜಾತಾಃ ಪ್ರವರತ್ರಯಸಂಯುತಾಃ ॥ ೮೨ ॥
ವಸಿಷ್ಠೋ ಭಾರದ್ವಾಜಶ್ಚ ಇಂದ್ರ ಪ್ರಮದ ಏವ ಚ ।
ಅಸ್ಮಿನ್ಗೋತ್ರೇ ಭವಾ ವಿಪ್ರಾ ವೇದವೇದಾಂಗಪಾರಗಾಃ ॥ ೮೩ ॥
ಯಾಜ್ಞಿಕಾ ಯಜ್ಞಶೀಲಾಶ್ಚ ಸುಸ್ವರಾಃ ಸುಖಿನಸ್ತಥಾ ।
ದ್ವೇಷಿಣೋ ಧನವಂತಶ್ಚ ಪುತ್ರಿಣೋ ಗುಣಿನಸ್ತಥಾ ॥ ೮೪ ॥
ವಿಶಾಲಹೃದಯಾ ರಾಜಂ ಛೂರಾಃ ಶತ್ರುನಿಬರ್ಹಣಾಃ ।
ಗೌತಮಸಗೋತ್ರೇ ಯೇ ಜಾತಾಃ ಪ್ರವರಾಃ ಪಂಚ ಏವ ಹಿ ॥ ೮೫ ॥
ಕೌತ್ಸಗಾರ್ಗ್ಯೋರ್ಮವಾಹಾಶ್ಚ ಅಸಿತೋ ದೇವಲಸ್ತಥಾ ।
ಅಸ್ಮಿನ್ಗೋತ್ರೇ ಚ ಯೇ ಜಾತಾ ವಿಪ್ರಾಃ ಪರಮಪಾವನಾಃ ॥ ೮೬ ॥
ಪರೋಪಕಾರಿಣಃ ಸರ್ವೇ ಶ್ರುತಿಸ್ಮೃತಿಪರಾಯಣಾಃ ।
ಬಕಾಸನಾಶ್ಚ ಕುಟಿಲಾ ಚ್ಛದ್ಮವೃತ್ತಿಪರಾಸ್ತಥಾ ॥ ೮೭ ॥

---

೮೦–೮೮. ಅರಸ! ಈ ವಂಶದಲ್ಲಿ ಉತ್ಪನ್ನರಾದ ಬ್ರಾಹ್ಮಣರು ಅಸಹನರಾಗಿ ಇತರರಿಂದಲೂ ಸಹಿಸಲಾಗದವರೂ, ದೊಡ್ಡ ದೇಹವುಳ್ಳವರೂ, ಉದ್ಧವಾದವರೂ, ಮದದಿಂದ ಕೊಬ್ಬಿದವರೂ, ಕಷ್ಟಕರವಾದ ರೂಪವುಳ್ಳವರೂ, ಕಪ್ಪುಬಣ್ಣದವರೂ, ಸಕಲಶಾಸ್ತ್ರನಿಷ್ಣಾತರೂ, ಬಹಳವಾಗಿ ತಿನ್ನುವವರೂ, ಮಾನವಂತರೂ, ಕುಶಲರೂ, ರಾಗದ್ವೇಷವಿಲ್ಲದವರೂ, ಒಳ್ಳೆಯ ಬಟ್ಟೆ ಒಡವೆಗಳನ್ನು ತೊಡುವವರೂ, ಒಳ್ಳೆಯ ಆಕೃತಿಯುಳ್ಳವರೂ, ವೇದಾಧ್ಯಯನಮಾಡಿದವರೂ ಆಗಿರುವರು. ವಸಿಷ್ಠಗೋತ್ರದವರಿಗೆ ವಸಿಷ್ಠ, ಭಾರದ್ವಾಜ, ಇಂದ್ರ ಪ್ರಮದ ಎಂಬ ಮೂರು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ವೇದ ಮತ್ತು ವೇದಾಂಗಗಳಲ್ಲಿ ವಿಶಾರದರೂ, ಯಜ್ಞಮಾಡುವವರೂ, ಒಳ್ಳೆಯ ಸ್ವರವುಳ್ಳವರೂ, ಸೌಖ್ಯವುಳ್ಳವರೂ, ದ್ವೇಷವುಳ್ಳವರೂ, ಹಣಗಾರರೂ, ಪುತ್ರರುಳ್ಳವರೂ, ಗುಣಶಾಲಿಗಳೂ, ಅಗಲವಾದ ಎದೆಯುಳ್ಳವರೂ, ಶೂರರೂ, ಶತ್ರುನಾಶಕರೂ ಆಗಿರುವರು. ಗೌತಮಗೋತ್ರದವರಿಗೆ ಕೌತ್ಸ, ಗಾರ್ಗ್ಯ, ಉಮವಾಹ, ಅಸಿತ, ದೇವಲ ಎಂದು ಐದು ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಅತ್ಯಂತ ಪವಿತ್ರರೂ, ಪರೋಪಕಾರಿಗಳೂ, ವೇದ ಮತ್ತು ಸ್ಮೃತಿಗಳಲ್ಲಿ ನಿರತರೂ, ಕೊಕ್ಕರೆಯಂತೆ ಮೌನವಾಗಿ ಕುಳಿತು ಕಾರ್ಯವನ್ನು ಸಾಧಿಸುವವರೂ, ವಕ್ರಸ್ವಭಾವದವರೂ, ಕಪಟವೃತ್ತಿಯುಳ್ಳವರೂ, ನಾನಾ ಶಾಸ್ತ್ರಾರ್ಥಗಳಲ್ಲಿ

CC-0. Jangamwadi Math Collection. Digitized by eGangotri

ನಾನಾಶಾಸ್ತ್ರಾರ್ಥನಿಪುಣಾ ನಾನಾಭರಣಭೂಷಿತಾಃ ।
ವೃಕ್ಷಾದಿಕರ್ಮಕುಶಲಾ ದೀರ್ಘರೋಷಾಶ್ಚ ರೋಗಿಣಃ ॥ ೮೮ ॥
ಆಂಗಿರಸಗೋತ್ರೇ ಯೇ ಜಾತಾಃ ಪ್ರವರತ್ರಯಸಂಯುತಾಃ ।
ಆಂಗಿರಸೋಽಂಬರೀಷಶ್ಚ ಯೌವನಾಶ್ವಸ್ತೃತೀಯಕಃ ॥ ೮೯ ॥
ಅಸ್ಮಿನ್ಗೋತ್ರೇ ಚ ಯೇ ಜಾತಾಃ ಸತ್ಯಸಂಭಾಷಿಣಸ್ತಥಾ ।
ಜಿತೇಂದ್ರಿಯಾಃ ಸುರೂಪಾಶ್ಚ ಅಲ್ಪಾಹಾರಾಃ ಶುಭಾನನಾಃ ॥ ೯೦ ॥
ಮಹಾವ್ರತಾಃ ಪುರಾಣಜ್ಞಾ ಮಹಾದಾನಪರಾಯಣಾಃ ।
ನಿರ್ದ್ವೇಷಿಣೋ ಲೋಭಯುತಾ ವೇದಾಧ್ಯಯನತತ್ಪರಾಃ ॥ ೯೧ ॥
ದೀರ್ಘದರ್ಶಿಮಹಾತೇಜೋ ಮಹಾಮಾಯಾವಿಮೋಹಿತಾಃ ।
ಶಾಂಡಿಲ್ಯಸಗೋತ್ರೇ ಯೇ ಪ್ರವರತ್ರಯಸಂಯುತಾಃ ॥ ೯೨ ॥
ಅಸಿತೋ ದೇವಲಶ್ಚೈವ ಶಾಂಡಿಲಸ್ತು ತೃತೀಯಕಃ ।
ಅಸ್ಮಿನ್ಗೋತ್ರೇ ಮಹಾಭಾಗಾಃ ಕುಬ್ಜಾಶ್ಚ ದ್ವಿಜಸತ್ತಮಾಃ ॥ ೯೩ ॥
ನೇತ್ರರೋಗೀ ಮಹಾದುಷ್ಟಾ ಮಹಾತ್ಯಾಗಾ ಅನಾಯುಷಃ ।
ಕಲಹೋತ್ಪಾದನೇ ದಕ್ಷಾಃ ಸರ್ವಸಂಗ್ರಹತತ್ಪರಾಃ ॥ ೯೪ ॥
ಮಲಿನಾ ಮಾನಿನಶ್ಚೈವ ಜ್ಯೋತಿಃಶಾಸ್ತ್ರವಿಶಾರದಾಃ ।
ಆತ್ರೇಯಸಗೋತ್ರೇ ಯೇ ಜಾತಾಃ ಪಂಚಪ್ರವರಸಂಯುತಾಃ ॥ ೯೫ ॥

---

ಕುಶಲರೂ, ನಾನಾ ವಿಧಗಳಾದ ಒಡವೆಗಳಿಂದ ಅಲಂಕೃತರೂ, ಮರವನ್ನು ಬೆಳಿಸುವುದೇ ಮೊದಲಾದ ಕೆಲಸಗಳಲ್ಲಿ ನಿಪುಣರೂ, ಬಹುಕಾಲ ಕೋಪವುಳ್ಳವರೂ, ರೋಗಿಗಳೂ ಆಗಿರುವರು.

೮೯–೯೫. ಆಂಗಿರಸ ಗೋತ್ರದಲ್ಲಿ ಹುಟ್ಟಿದವರಿಗೆ ಆಂಗಿರಸ, ಅಂಬರೀಷ, ಯೌವನಾಶ್ವವೆಂಬ ಮೂರುಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಸತ್ಯವನ್ನು ನುಡಿಯುವವರೂ, ಜಿತೇಂದ್ರಿಯರೂ, ಸುಂದರರೂ, ಸ್ವಲ್ಪಾಹಾರವನ್ನು ತಿನ್ನುವವರೂ, ಮಂಗಳಕರವಾದ ಮುಖವುಳ್ಳವರೂ, ಮಹಾ ವ್ರತವುಳ್ಳವರೂ, ಪುರಾಣಾಭಿಜ್ಞರೂ, ಅತ್ಯಂತದಾನಾಸಕ್ತರೂ, ದ್ವೇಷವಿಲ್ಲದವರೂ, ಅತ್ಯಾಶೆಯುಳ್ಳವರೂ, ವೇದಾಧ್ಯಯನ ನಿರತರೂ, ದೂರದೃಷ್ಟಿಯುಳ್ಳವರೂ, ಮಹಾತೇಜಸ್ವಿಗಳೂ, ಅತ್ಯಂತವಾಗಿ ಮಾಯೆಯಿಂದ ಮೋಹಗೊಂಡವರೂ ಆಗಿರುವರು. ಶಾಂಡಿಲ್ಯಗೋತ್ರಜರಿಗೆ ಅಸಿತ, ದೇವಲ, ಶಾಂಡಿಲವೆಂಬ ಮೂರು ಪ್ರವರಗಳು. ಈ ಗೋತ್ರದವರು ಅತ್ಯಂತ ಭಾಗ್ಯಶಾಲಿಗಳೂ, ಗೂನುಬೆನ್ನಿನವರೂ, ಬ್ರಾಹ್ಮಣಶ್ರೇಷ್ಠರೂ, ಕಣ್ಣಿನ ರೋಗವುಳ್ಳವರೂ, ಅತಿ ದುಷ್ಟರೂ, ಅತ್ಯಂತ ದಾನಶೀಲರೂ, ಆಯುಷ್ಯವಿಲ್ಲದವರೂ, ಜಗಳವನ್ನುಂಟುಮಾಡುವುದರಲ್ಲಿ ನಿಪುಣರೂ, ಸಮಸ್ತವನ್ನೂ ಕೂಡಿಡುವುದರಲ್ಲಿ ಆಸಕ್ತರೂ, ಮಲಿನರೂ,

CC-0. Jangamwadi Math Collection. Digitized by eGangotri

ಆತ್ರೇಯೋಽರ್ಚನಾನಸಶ್ಯಾವಾಶ್ವೋಽಂಗಿರಸೋಽತ್ರಿಶ್ಚ ।
ಅಸ್ಮಿನ್ವಂಶೇ ಚ ಯೇ ಜಾತಾ ದ್ವಿಜಾಸ್ತೇ ಸೂರ್ಯವರ್ಚಸಃ ॥ ೯೬ ॥
ಚಂದ್ರವಚ್ಛೀತಲಾಃ ಸರ್ವೇ ಧರ್ಮಾರಣ್ಯೇ ವ್ಯವಸ್ಥಿತಾಃ ।
ಸದಾಚಾರಾ ಮಹಾದಕ್ಷಾಃ ಶ್ರುತಿಶಾಸ್ತ್ರಪರಾಯಣಾಃ ॥ ೯೭ ॥
ಯಾಜ್ಞಿಕಾಶ್ಚ ಶುಭಾಚಾರಾಃ ಸತ್ಯಶೌಚಪರಾಯಣಾಃ ।
ಧರ್ಮಜ್ಞಾ ದಾನಶೀಲಾಶ್ಚ ನಿರ್ಮಲಾಶ್ಚ ಮಹೋತ್ಸುಕಾಃ ॥ ೯೮ ॥
ತಪಃಸ್ವಾಧ್ಯಾಯನಿರತಾ ನ್ಯಾಯಧರ್ಮಪರಾಯಣಾಃ ॥ ೯೯ ॥

ಯುಧಿಷ್ಠಿರ ಉವಾಚ :—

ಕಥಯಸ್ವ ಮಹಾಬಾಹೋ ಧರ್ಮಾರಣ್ಯಕಥಾಽಮೃತಂ ।
ಯಚ್ಛ್ರುತ್ವಾ ಮುಚ್ಯತೇ ಪಾಪಾದ್ಘೋರಾದ್ಬ್ರಹ್ಮವಧಾದಪಿ ॥ ೧೦೦ ॥

ವ್ಯಾಸ ಉವಾಚ :—

ಶೃಣು ರಾಜನ್ಪ್ರವಕ್ಷ್ಯಾಮಿ ಕಥಾಮೇತಾಂ ಸುದುರ್ಲಭಾಂ ॥ ೧೦೧ ॥
ಯಕ್ಷರಕ್ಷಃ ಪಿಶಾಚಾದ್ಯಾ ಉದ್ವೇಜಯಂತಿ ವಾಡವಾನ್ ।
ಜೃಂಭಕೋ ನಾಮ ಯಕ್ಷೋಽಭೂದ್ಧರ್ಮಾರಣ್ಯಸಮೀಪತಃ ॥ ೧೦೨ ॥
ಉದ್ವೇಜಯತಿ ನಿತ್ಯಂ ಸ ಧರ್ಮಾರಣ್ಯನಿವಾಸಿನಃ ।
ತತಸ್ತೈಶ್ಚ ದ್ವಿಜಾಗ್ರ್ಯೈಸ್ತು ದೇವೇಭ್ಯೋ ವಿನಿವೇದಿತಂ ॥ ೧೦೩ ॥

---

ಮಾನವಂತರೂ, ಜ್ಯೋತಿಶ್ಶಾಸ್ತ್ರದಲ್ಲಿ ನಿಪುಣರೂ ಆಗಿರುವರು. ಆತ್ರೇಯಸ ಗೋತ್ರದವರಿಗೆ ಆತ್ರೇಯ, ಅರ್ಚನಾನಸ, ಶ್ಯಾವಾಶ್ವ, ಅಂಗಿರಸ, ಅತ್ರಿ ಎಂದು ಐದು ಪ್ರವರಗಳು. ಈ ವಂಶದ ಬ್ರಾಹ್ಮಣರು ಸೂರ್ಯನಂತೆ ವರ್ಚಸ್ಸುಳ್ಳವರೂ, ಚಂದ್ರನಂತೆ, ತಣ್ಣಗಿರುವವರೂ, ಸದಾಚಾರವುಳ್ಳವರೂ, ಅತ್ಯಂತ ನಿಪುಣರೂ, ವೇದಶಾಸ್ತ್ರನಿರತರೂ, ಯಜ್ಞಮಾಡುವವರೂ, ಮಂಗಳಕರವಾದ ನಡತೆಯುಳ್ಳವರೂ, ಸತ್ಯ, ಶೌಚಗಳಲ್ಲಿ ಆಸಕ್ತರೂ, ಧರ್ಮಜ್ಞರೂ, ದಾನಶೀಲರೂ, ಶುದ್ಧರೂ ಅತ್ಯಂತ ಔತ್ಸುಕ್ಯವುಳ್ಳವರೂ, ತಪಸ್ಸು, ವೇದಾಧ್ಯಯನಗಳಲ್ಲಿ ನಿರತರೂ, ನ್ಯಾಯ ಮತ್ತು ಧರ್ಮಗಳಲ್ಲಿ ಆಸಕ್ತರೂ ಆಗಿರುವರು.

೧೦೦. ಯುಧಿಷ್ಠಿರನು ಕೇಳುತ್ತಾನೆ :—ಎಲೈ ವ್ಯಾಸಮುನಿಯೆ ! ಯಾವುದನ್ನು ಕೇಳಿ ಮನುಷ್ಯನು ಘೋರವಾದ ಬ್ರಹ್ಮಹತ್ಯಾಪಾಪದಿಂದ ಮುಕ್ತನಾಗುವನೊ ಅಂತಹ ಧರ್ಮಾರಣ್ಯದ ಕಥೆಯನ್ನು ಹೇಳು.

೧೦೧. ವ್ಯಾಸನು ಹೇಳುತ್ತಾನೆ :—ದೊರೆಯೆ ! ಅಪೂರ್ವವಾದ ಈ ಕಥೆಯನ್ನು ಹೇಳುವೆನು ಕೇಳು.

೧೦೨. ಯಕ್ಷರೂ, ರಾಕ್ಷಸರೂ, ಪಿಶಾಚಾದಿಗಳೂ ಬ್ರಾಹ್ಮಣರನ್ನು ಹೆದರಿಸುತ್ತಾರೆ. ಧರ್ಮಾರಣ್ಯದ ಬಳಿ ಜೃಂಭಕನೆಂಬ ಯಕ್ಷನೊಬ್ಬನಿದ್ದನು.

೧೦೩–೧೦೮. ಅವನು ಧರ್ಮಾರಣ್ಯವಾಸಿಗಳಾದ ಬ್ರಾಹ್ಮಣರನ್ನು ಯಾವಾ

CC-0. Jangamwadi Math Collection. Digitized by eGangotri

ಯಕ್ಷರಕ್ಷಾದಿನಾ ಚೈವ ಪರಿಭೂತಾ ವಯಂ ಸುರಾಃ ।
ತ್ಯಕ್ಷ್ಯಾಮೋಽದ್ಯ ವರಂ ಸ್ಥಾನಂ ತದ್ಭಯಾನ್ನಾತ್ರ ಸಂಶಯಃ ॥ ೧೦೪ ॥
ತತೋ ದೇವೈಃ ಸಗಂಧರ್ವೈಃ ಸ್ಥಾಪಿತಾಸ್ತತ್ರ ಭೂಮಿಷು ।
ಸಿದ್ಧಾಶ್ಚ ವರಯೋಗಿನ್ಯಃ ಶ್ರೀಮಾತೃಪ್ರಭೃತಯಸ್ತಥಾ ॥ ೧೦೫ ॥
ರಕ್ಷಣಾರ್ಥಂ ಹಿ ವಿಪ್ರಾಣಾಂ ಲೋಕಾನಾಂ ಹಿತಕಾಮ್ಯಯಾ ।
ಗೋತ್ರಾನ್ಪ್ರತಿ ತಥೈಕೈಕಾ ಸ್ಥಾಪಿತಾ ಯೋಗಿನೀ ತದಾ ॥ ೧೦೬ ॥
ಯಸ್ಯ ಗೋತ್ರಸ್ಯ ಯಾ ಶಕ್ತೀ ರಕ್ಷಣೇ ಪಾಲನೇ ಕ್ಷಮಾ ।
ಸಾ ತಸ್ಯ ಕುಲದೇವೀತಿ ಸಾಕ್ಷಾತ್ತತ್ರ ಬಭೂವ ಹ ॥ ೧೦೭ ॥
ಶ್ರೀಮಾತಾ ತಾರಣೀ ದೇವೀ ಆಶಾಪೂರೀ ಚ ಗೋತ್ರಪಾ ।
ಇಚ್ಛಾಽಽರ್ತಿನಾಶಿನೀ ಚೈವ ಪಿಪ್ಪಲೀ ವಿಕಾರವಶಾ ॥ ೧೦೮ ॥
ಜಗನ್ಮಾತಾ ಮಹಾಮಾತಾ ಸಿದ್ಧಾ ಭಟ್ಟಾರಿಕಾ ತಥಾ ।
ಕದಂಬಾ ವಿಕರಾ ಮಿಠಾ ಸುಪರ್ಣಾ ವಸುಜಾ ತಥಾ ॥ ೧೦೯ ॥
ಮಾತಂಗೀ ಚ ಮಹಾದೇವೀ ವಾಣೀ ಚ ಮುಕುಟೇಶ್ವರೀ ।
ಭದ್ರೀ ಚೈವ ಮಹಾಶಕ್ತಿಃ ಸಂಹಾರೀ ಚ ಮಹಾಬಲಾ ॥ ೧೧೦ ॥

---

ಗಲೂ ಹೆದರಿಸುತ್ತಿದ್ದನು. ಆಗ ಅಲ್ಲಿರುವ ಬ್ರಾಹ್ಮಣರು "ದೇವತೆಗಳೆ! ಯಕ್ಷರು, ರಾಕ್ಷಸರೇ ಮೊದಲಾದವರು ನಮ್ಮನ್ನು ಬಾಧಿಸುತ್ತಿದ್ದಾರೆ. ಅವರ ಭಯದಿಂದ ಈಗ ನಾವು ಉತ್ತಮವಾದ ಈ ಸ್ಥಳವನ್ನು ನಿಶ್ಚಯವಾಗಿಯೂ ಬಿಟ್ಟುಬಿಡುವೆವು" ಎಂದು ದೇವತೆಗಳಿಗೆ ತಿಳಿಸಿದರು.

೧೦೫. ಬಳಿಕ ದೇವತೆಗಳೂ ಗಂಧರ್ವರೂ ಸೇರಿ ಆ ಧರ್ಮಾರಣ್ಯದಲ್ಲಿ ಸಿದ್ಧರನ್ನೂ, ಶ್ರೀಮಾತೆಯೇ ಮೊದಲಾದ ಯೋಗಿನಿಯರನ್ನೂ ನೆಲೆಗೊಳಿಸಿದರು.

೧೦೬. ಬ್ರಾಹ್ಮಣರ ರಕ್ಷಣೆಗಾಗಿಯೂ, ಲೋಕಕ್ಕೆ ಹಿತವನ್ನುಂಟು ಮಾಡುವುದಕ್ಕಾಗಿಯೂ ಒಂದೊಂದ ಗೋತ್ರದ ಜನರಿಗೆ ಒಬ್ಬೊಬ್ಬ ಯೋಗಿನಿಯನ್ನು ಏರ್ಪಡಿಸಿಕೊಟ್ಟರು.

೧೦೭. ಯಾವ ಶಕ್ತಿದೇವತೆಯು ಯಾವ ಗೋತ್ರದವರನ್ನು ಪೋಷಿಸುವುದರಲ್ಲಿಯೂ ರಕ್ಷಿಸುವುದರಲ್ಲಿಯೂ ಶಕ್ತಳೊ, ಅವಳು ಅವರಿಗೆ ಕುಲದೇವಿಯಾಗಿ ನೆಲೆಸಿ ಹೆಸರಾದಳು.

೧೦೮–೧೧೧. ಶ್ರೀಮಾತಾ, ತಾರಣೀ, ಆಶಾಪೂರೀ, ಗೋತ್ರಪಾ, ಇಚ್ಛಾ, ಆರ್ತಿನಾಶಿನೀ, ಪಿಪ್ಪಲೀ, ವಿಕಾರವಶಾ, ಜಗನ್ಮಾತಾ, ಮಹಾಮಾತಾ, ಸಿದ್ಧಾ, ಭಟ್ಟಾರಿಕಾ, ಕದಂಬಾ, ವಿಕಿರಾ, ಮಿಠಾ, ಸುಪರ್ಣಾ, ವಸುಜಾ, ಮಾತಂಗೀ, ವಾಣೀ, ಮುಕುಟೇಶ್ವರೀ, ಭದ್ರೀ, ಮಹಾಶಕ್ತಿ, ಅತ್ಯಂತ

CC-0. Jangamwadi Math Collection. Digitized by eGangotri

ಚಾಮುಂಡಾ ಚ ಮಹಾದೇವೀ ಇತ್ಯೇತಾ ಗೋತ್ರಮಾತರಃ ।
ಬ್ರಹ್ಮವಿಷ್ಣುಮಹೇಶಾದ್ಯೈಃ ಸ್ಥಾಪಿತಾಸ್ತತ್ರ ರಕ್ಷಣೇ ॥ ೧೧೧ ॥
ತಾಃ ಪೂಜಯಂತಿ ವಿಪ್ರೇಂದ್ರಾಃ ಸ್ವಧರ್ಮನಿರತಾಃ ಸದಾ ।
ತತಃ ಪ್ರಭೃತಿ ಯೋಗಿನ್ಯಃ ಸ್ವೇ ಸ್ವೇ ಕಾಲೇ ಸುರಕ್ಷಿತಾಃ ॥ ೧೧೨ ॥
ವಾಡವಾಃ ಸ್ವಸ್ಥತಾಂ ಜಗ್ಮುಃ ಪುತ್ರಪೌತ್ರೈಃ ಸಮಾವೃತಾಃ ।
ತತೋ ದೇವಾಃ ಸ ಗಂಧರ್ವಾ ಹರ್ಷನಿರ್ಭರಮಾನಸಾಃ ।
ವಿಮಾನವರಮಾರೂಢಾ ಜಗ್ಮುರ್ನಾಕೇಽಮೃತಾಶನಾಃ ॥ ೧೧೩ ॥
ಗತೇ ವರ್ಷಶತೇ ರಾಜನ್ಬ್ರಹ್ಮವಿಷ್ಣುಮಹೇಶ್ವರಾಃ ।
ಸ್ಮೃತ್ವಾ ತು ಧರ್ಮಾರಣ್ಯಸ್ಯ ಪ್ರೇಕ್ಷಣಾರ್ಥಂ ಕುತೂಹಲಾತ್ ॥ ೧೧೪ ॥
ಸಮಾಜಗ್ಮುಸ್ತದಾ ರಾಜನ್ಪ್ರಭಾತೇ ಉದಿತೇ ರವೌ ।
ವಿಮಾನವರಮಾರುಹ್ಯ ಅಪ್ಸರೋಗಣಸೇವಿತಾಃ ॥ ೧೧೫ ॥
ಗಂಧರ್ವೈರ್ಗೀಯಮಾನಾಸ್ತೇ ಸ್ತೂಯಮಾನಾಃ ಪ್ರಬೋಧಕೈಃ ।
ತತ್ರ ಸ್ಥಾನೇ ದ್ವಿಜಾ ರಾಜನ್ಸಮಿತ್ಪುಷ್ಪಕುಶಾನ್ಬಹೂನ್ ॥ ೧೧೬ ॥
ಆಶ್ರಮಾಂಸ್ತಾನ್ಪರಿತ್ಯಜ್ಯ ಗತಾಃ ಸರ್ವೇ ದಿಶೋದಶ ।
ತಮಾಶ್ರಮಪದಂ ದೃಷ್ಟ್ವಾ ಶೂನ್ಯಂ ಚೈವ ಮಹೇಶ್ವರಃ ॥ ೧೧೭ ॥
ಉವಾಚ ವಾಕ್ಯಂ ಧರ್ಮಜ್ಞೋ ವಾಡವಾನ್ಕ್ವ ಗತೇ ವಿಭೋ ।
ಶುಶ್ರೂಷಾರ್ಥಂ ಹಿ ಶುಶ್ರೂಷೂನ್ ಕಲ್ಪಯೇದಿತಿ ಮೇ ಮತಿಃ॥ ೧೧೮ ॥

---

ಬಲವುಳ್ಳ ಸಂಹಾರೀ, ಚಾಮುಂಡಾ ಎಂಬ ಗೋತ್ರದೇವಿಯರನ್ನು ಅಲ್ಲಿ ಬ್ರಹ್ಮಾದಿ ದೇವತೆಗಳು ಬ್ರಾಹ್ಮಣರ ರಕ್ಷಣೆಗಾಗಿ ಸ್ಥಾಪಿಸಿದರು.

೧೧೨-೧೧೩. ಬ್ರಾಹ್ಮಣರು ಯಾವಾಗಲೂ ಸ್ವಧರ್ಮನಿರತರಾಗಿ ಆ ದೇವಿಯರನ್ನು ಪೂಜಿಸಿದರು. ಅದು ಮೊದಲ್ಗೊಂಡು ಆಯಾ ಕಾಲದಲ್ಲಿ ಯೋಗಿನಿಯರಿಂದ ರಕ್ಷಿಸಲ್ಪಟ್ಟ ಬ್ರಾಹ್ಮಣರು ಮಕ್ಕಳು ಮೊಮ್ಮಕ್ಕಳೊಡನೆ ಸುಖವಾಗಿದ್ದರು. ಬಳಿಕ ದೇವತೆಗಳು ಸಂತೋಷಗೊಂಡು ಗಂಧರ್ವರೊಡನೆ ವಿಮಾನವನ್ನೇರಿ ದೇವಲೋಕಕ್ಕೆ ತೆರಳಿದರು.

೧೧೪-೧೧೮. ಹೀಗೆ ನೂರು ವರ್ಷಗಳು ಕಳೆಯಲು ಬ್ರಹ್ಮ, ವಿಷ್ಣು ಮಹೇಶ್ವರರು ಧರ್ಮಾರಣ್ಯವನ್ನು ಜ್ಞಾಪಿಸಿಕೊಂಡು ಅದನ್ನು ನೋಡುವ ಕುತೂಹಲದಿಂದ ವಿಮಾನದಲ್ಲಿ ಕುಳಿತು ಅಪ್ಸರರ ವೃಂದದಿಂದ ಸೇವಿಸಲ್ಪಡುವವರೂ, ಗಂಧರ್ವರಿಂದ ಗಾನಮಾಡಿಸಿಕೊಳ್ಳಲ್ಪಡುವವರೂ, ವಂದಿಮಾಗಧರಿಂದ ಸ್ತುತಿಸಲ್ಪಡುವವರೂ ಆಗಿ ಸೂರ್ಯೋದಯಕಾಲಕ್ಕೆ ಸರಿಯಾಗಿ ಆ ಧರ್ಮಾರಣ್ಯಕ್ಕೆ ಬಂದರು. ಆಗ ಅಲ್ಲಿರುವ ಬ್ರಾಹ್ಮಣರು ಕಟ್ಟಿಗೆ, ಹೂವು, ದರ್ಭೆಗಳುಳ್ಳ ಆಶ್ರಮಸ್ಥಾನಗಳನ್ನು ಬಿಟ್ಟು ಎಲ್ಲರೂ ದಿಕ್ಕುದಿಕ್ಕಿಗೂ ಹೊರಟುಹೋಗಿದ್ದರು.

CC-0. Jangamwadi Math Collection. Digitized by eGangotri

ಶ್ರುತ್ವಾ ತು ವಚನಂ ಶಂಭೋರ್ದೇವದೇವೋ ಜನಾರ್ದನಃ ।
ಸತ್ಯಂ ಸತ್ಯಮಿತಿ ಪ್ರೋಚ್ಯ ಬ್ರಹ್ಮಾಣಮಿದಮಬ್ರವೀತ್ ॥ ೧೧೯ ॥
ಭೋ ಭೋ ಬ್ರಹ್ಮನ್ದ್ವಿಜಾತೀನಾಂ ಶುಶ್ರೂಷಾರ್ಥಂ ಪ್ರಕಲ್ಪಯ ।
ಸೃಷ್ಟಿರ್ಹಿ ಶಾಶ್ವತೀವಾಽದ್ಯ ದ್ವಿಜೌಘೋಽಪಿ ಸುಖೀಭವೇತ್ ।
ವಿಷ್ಣೋರ್ವಾಕ್ಯಮಭಿಶ್ರುತ್ಯ ಬ್ರಹ್ಮಾ ಲೋಕಪಿತಾಮಹಃ ॥ ೧೨೦ ॥
ಸಂಸ್ಮರನ್ಕಾಮಧೇನುಂ ವೈ ಸ್ಮರಣೇನೈವ ತತ್ಕ್ಷಣೇ ।
ಆಗತಾ ತತ್ರ ಸಾ ಧೇನುರ್ಧರ್ಮಾಽರಣ್ಯೇ ಪವಿತ್ರಕೇ ॥ ೧೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಗೋತ್ರ ಪ್ರವರ ಗೋತ್ರದೇವಿಕಥನಂ" ನಾಮ ನವಮೋಽಧ್ಯಾಯಃ

---

ಮಹೇಶ್ವರನು ಬರಿದಾದ ಆಶ್ರಮಗಳನ್ನು ನೋಡಿ ವಿಷ್ಣುವನ್ನು ಕುರಿತು, 'ಇಲ್ಲಿ ಬ್ರಾಹ್ಮಣರಿಗೆ ಬಹಳ ಕಷ್ಟವಾಗಿದೆ. ಆದುದರಿಂದ ಇವರ ಸೇವೆಗಾಗಿ ಸೇವಕರನ್ನು ಏರ್ಪಡಿಸಬೇಕೆಂದು ನನಗೆ ಇಷ್ಟವಿದೆ' ಎಂದನು.

೧೧೯. ಶ್ರೀಮಹಾವಿಷ್ಣುವು ಶಿವನ ಮಾತನ್ನು ಕೇಳಿ ನಿಜವೆಂದುಸುರಿ ಬ್ರಹ್ಮನನ್ನು ಕುರಿತು ಇಂತೆಂದನು.

೧೨೦–೧೨೧. "ಎಲೈ ಬ್ರಹ್ಮನೆ! ಬ್ರಾಹ್ಮಣರ ಸೇವೆಗಾಗಿ ಸ್ಥಿರವಾಗಿ ನೆಲೆಸುವ ಜನರನ್ನು ಸೃಜಿಸು. ಅವರಿಂದ ಬ್ರಾಹ್ಮಣರು ಸುಖವಾಗಿರಬೇಕು" ಎಂದನು. ಶ್ರೀವಿಷ್ಣುವಿನ ಈ ಮಾತನ್ನು ಕೇಳಿ ಲೋಕಪಿತಾಮಹನಾದ ಬ್ರಹ್ಮನು ಕಾಮಧೇನುವನ್ನು ಸ್ಮರಿಸಿದನು. ಕೂಡಲೆ ಕಾಮಧೇನುವು ಆ ಧರ್ಮಾರಣ್ಯಕ್ಕೆ ಬಂದಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಗೋತ್ರಪ್ರವರ ಗೋತ್ರದೇವೀಕಥನ"ವೆಂಬ ಒಂಬತ್ತನೆ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ವಣಿಕ್ಪರಿಗ್ರಹವರ್ಣನಂ

ವ್ಯಾಸ ಉವಾಚ :—

ಶೃಣು ರಾಜನ್ಯಥಾವೃತ್ತಂ ಧರ್ಮಾರಣ್ಯೇ ಶುಭಂ ಮತಂ ।
ಯದಿದಂ ಕಥಯಿಷ್ಯಾಮಿ ಅಶೇಷಾಘೌಘನಾಶನಂ ॥ ೧ ॥
ಅಜೇಶೇನ ತದಾರಾಜನ್ಪ್ರೇರಿತೇನ ಸ್ವಯಂಭುವಾ ।
ಕಾಮಧೇನುಃ ಸಮಾಹೂತಾ ಕಥಯಾಮಾಸ ತಾಂ ಪ್ರತಿ ॥ ೨ ॥
ವಿಪ್ರೇಭ್ಯೋಽನುಚರಾನ್ದೇಹಿ ಏಕೈಕಸ್ಮೈ ದ್ವಿಜಾತಯೇ ।
ದ್ವೌ ದ್ವೌ ಶುದ್ಧಾತ್ಮಕೌ ಚೈವಂ ದೇಹಿ ಮಾತಃ ಪ್ರಸೀದ ಮೇ ॥ ೩ ॥
ತಥೇತ್ಯುಕ್ತ್ವಾ ಮಹಾಧೇನುಃ ಕ್ಷೀರೇಣೋಲ್ಲೇಖಯದ್ಧರಾಂ ।
ಹುಂಕಾರಾತ್ತಸ್ಯ ನಿಷ್ಕ್ರಾಂತಾಃ ಶಿಖಾಸೂತ್ರಧರಾ ನರಾಃ ॥ ೪ ॥
ಷಟ್ತ್ರಿಂಶಚ್ಚ ಸಹಸ್ರಾಣಿ ವಣಿಜಶ್ಚ ಮಹಾಬಲಾಃ ।
ಸೋಪವೀತಾ ಮಹಾದಕ್ಷಾಃ ಸರ್ವಶಾಸ್ತ್ರವಿಶಾರದಾಃ ॥ ೫ ॥
ದ್ವಿಜಭಕ್ತಿಸಮಾಯುಕ್ತಾ ಬ್ರಹ್ಮಣ್ಯಾಸ್ತೇ ತಪೋಽನ್ವಿತಾಃ ।
ಪುರಾಣಜ್ಞಾಃ ಸದಾಚಾರಾ ಧಾರ್ಮಿಕಾ ಬ್ರಹ್ಮಭೋಜಕಾಃ ॥ ೬ ॥

---

## ಕನ್ನಡದ ಅನುವಾದ

### ವಣಿಕ್ಪರಿಗ್ರಹವರ್ಣನ

೧. ವ್ಯಾಸರು ಹೇಳುತ್ತಾರೆ:—ಯುಧಿಷ್ಠಿರ! ಸಕಲ ಪಾಪಗಳ ಸಮೂಹವನ್ನು ನಾಶಗೊಳಿಸುವ ಧರ್ಮಾರಣ್ಯದಲ್ಲಿ ನಡೆದ ಸಮಾಚಾರವನ್ನು ಹೇಳುವೆನು; ಕೇಳು.

೨. ವಿಷ್ಣುವಿನಿಂದ ಪ್ರೇರಿತನಾದ ಬ್ರಹ್ಮನು ಕಾಮಧೇನುವನ್ನು ಕರೆದು ಹೀಗೆಂದನು.

೩. "ತಾಯಿ! ಪ್ರಸನ್ನಳಾಗು. ಇಲ್ಲಿರುವ ಒಬೊಬ್ಬ ಬ್ರಾಹ್ಮಣನಿಗೂ ಶುದ್ಧರಾದ ಇಬ್ಬಿಬ್ಬರು ಸೇವಕರನ್ನು ಕೊಡು."

೪–೬. ಕಾಮಧೇನುವು ಅದನ್ನು ಕೇಳಿ ಭೂಮಿಯನ್ನು ಹಾಲಿನ ಧಾರೆಯಿಂದ ಒರೆಯಿತು. ಆ ಧೇನುವಿನ ಹುಂಕಾರದಿಂದ ಜುಟ್ಟು ಜನಿವಾರಗಳುಳ್ಳವರೂ, ವರ್ತಕರೂ, ಬಲಿಷ್ಠರೂ, ಅತ್ಯಂಶ ಕುಶಲರೂ, ಸಕಲಶಾಸ್ತ್ರ ಪಾರಂಗತರೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಬ್ರಹ್ಮನಿಷ್ಠರೂ, ತಪಸ್ವಿಗಳೂ, ಪುರಾಣವನ್ನರಿತವರೂ, ಸದಾಚಾರವುಳ್ಳವರೂ, ಧರ್ಮಿಷ್ಠರೂ, ಬ್ರಾಹ್ಮಣರನ್ನು ಭೋಜನಮಾಡಿಸುವವರೂ ಆಗಿರುವ ಮೂವತ್ತಾರು ಸಾವಿರ ಮನುಷ್ಯರು ಉದ್ಭವಿಸಿದರು.

CC-0. Jangamwadi Math Collection. Digitized by eGangotri

ಸ್ವರ್ಗೇ ದೇವಾಃ ಪ್ರಶಂಸಂತಿ ಧರ್ಮಾರಣ್ಯನಿವಾಸಿನಃ ।
ತಪೋಽಧ್ಯಯನದಾನೇಷು ಸರ್ವಕಾಲೇಽಪ್ಯತೀಂದ್ರಿಯಾಃ ॥ ೭ ॥
ಏಕೈಕಸ್ಮೈ ದ್ವಿಜಾಯೈವ ದತ್ತಂ ಜಾತು ಚರದ್ವಯಂ ।
ವಾಡವಸ್ಯ ಚ ಯದ್ಗೋತ್ರಂ ಪುರಾ ಪ್ರೋಕ್ತಂ ಮಹೀಪತೇ ॥ ೮ ॥
ಪರಸ್ಪರಂ ಚ ತದ್ಗೋತ್ರಂ ತಸ್ಯ ಚಾಽನುಚರಸ್ಯ ಚ ।
ಇತಿ ಕೃತ್ವಾ ವ್ಯವಸ್ಥಾಂ ಚ ನ್ಯವಸಂಸ್ತತ್ರ ಭೂಮಿಷು ॥ ೯ ॥
ತತಶ್ಚ ಶಿಷ್ಯತಾ ದೇವೈರ್ದತ್ತಾ ಚಾಽನುಚರಾನ್ಭುವಿ ।
ಬ್ರಹ್ಮಣಾ ಕಥಿತಂ ಸರ್ವಂ ತೇಷಾಮನುಹಿತಾಯ ವೈ ॥ ೧೦ ॥
ಕುರುಧ್ವಂ ವಚನಂ ಚೈಷಾಂ ದದಧ್ವಂ ಚ ಯದಿಚ್ಛಿತಂ ।
ಸಮಿತ್ಪುಷ್ಪಕುಶಾದೀನಿ ಆನಯಧ್ವಂ ದಿನೇ ದಿನೇ ॥ ೧೧ ॥
ಅನುಜ್ಞಯೈಷಾಂ ವರ್ತಧ್ವಂ ಮಾಽವಜ್ಞಾಂ ಕುರುತ ಕ್ವಚಿತ್ ।
ಜಾತಕಂ ನಾಮಕರಣಂ ತಥಾಽನ್ನಪ್ರಾಶನಂ ಶುಭಂ ॥ ೧೨ ॥
ಕ್ಷೌರಂ ಚೈವೋಪನಯನಂ ಮಹಾನಾಮ್ನ್ಯಾದಿಕಂ ತಥಾ ।
ಕ್ರಿಯಾ ಕರ್ಮಾದಿಕಂ ಯಚ್ಚ ವ್ರತಂ ದಾನೋಪವಾಸಕಂ ॥ ೧೩ ॥
ಅನುಜ್ಞಯೈಷಾಂ ಕರ್ತವ್ಯಂ ಕಾಜೇಶಾ ಇದಮಬ್ರುವನ್ ।
ಅನುಜ್ಞಯಾ ವಿನೈಷಾಂ ಯಃ ಕಾರ್ಯಮಾರಭತೇ ಯದಿ ॥ ೧೪ ॥
ದರ್ಶಂ ವಾ ಶ್ರಾದ್ಧಕಾರ್ಯಂ ವಾ ಶುಭಂ ವಾ ಯದಿ ವಾಽಶುಭಂ ।
ದಾರಿದ್ರ್ಯಂ ಪುತ್ರಶೋಕಂ ಚ ಕೀರ್ತಿನಾಶಂ ತಥೈವ ಚ ॥ ೧೫ ॥

---

೭. ಈ ಧರ್ಮಾರಣ್ಯದಲ್ಲಿ ವಾಸಮಾಡುವವರಾಗಿರಿ. ತಪಸ್ಸು, ವೇದಾಧ್ಯಯನ, ದಾನಗಳಲ್ಲಿ ನಿರತರೂ, ಯಾವಾಗಲೂ ಜ್ಞಾನದೃಷ್ಟಿಯುಳ್ಳವರೂ, ಆಗಿರುವ ಅವರನ್ನು ಸ್ವರ್ಗಲೋಕದಲ್ಲಿ ದೇವತೆಗಳೂ ಹೊಗಳುತ್ತಾರೆ.

೮-೯. ಬ್ರಹ್ಮನು ಒಬ್ಬೊಬ್ಬ ಬ್ರಾಹ್ಮಣನಿಗೆ ಇಂತಹ ಇಬ್ಬರು ಸೇವಕರಂತೆ ಅವರನ್ನು ಹಂಚಿದನು. ಅಲ್ಲಿರುವ ಬ್ರಾಹ್ಮಣರ ಗೋತ್ರವೇ ಆ ಸೇವಕರಿಗೂ ಇರತಕ್ಕದೆಂದು ವ್ಯವಸ್ಥೆಮಾಡಿ ಅವರನ್ನು ಅಲ್ಲಿ ವಾಸಿಸುವಂತೆ ಕಟ್ಟುಮಾಡಿದನು.

೧೦-೧೨. ಮತ್ತು ಅವರನ್ನು ಬ್ರಾಹ್ಮಣರಿಗೆ ಶಿಷ್ಯರನ್ನಾಗಿಸಿ "ನೀವು ಈ ಬ್ರಾಹ್ಮಣರ ಮಾತನ್ನು ನೆರವೇರಿಸಿಕೊಂಡಿರಿ. ಇವರಿಗೆ ಇಷ್ಟವಾದುದನ್ನು ಕೊಡಿರಿ. ಪ್ರತಿದಿನವೂ ಸಮಿತ್ತು, ಹೂವು, ದರ್ಭೆಗಳನ್ನು ತೆಗೆದುಕೊಂಡು ಬನ್ನಿ. ಇವರ ಅಪ್ಪಣೆಯಂತೆ ನಡೆಯಿರಿ. ಒಂದುವೇಳೆಯೂ ಇವರಿಗೆ ಅಪಮಾನಮಾಡಬೇಡಿರಿ. ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಮಹಾನಾಮ್ನ್ಯಾದಿವ್ರತಗಳು, ಇತರ ಕರ್ಮಗಳು, ದಾನ ಮತ್ತು ಉಪವಾಸಾದಿ ವ್ರತಗಳು ಇವುಗಳನ್ನು ಇವರ ಅಪ್ಪಣೆಯಂತೆ ಮಾಡಬೇಕು. ಇವರ ಆಣತಿ

CC-0. Jangamwadi Math Collection. Digitized by eGangotri

ರೋಗೈರ್ನಿಪೀಡ್ಯತೇ ನಿತ್ಯಂ ನ ಕ್ವಚಿತ್ಸುಖಮಾಪ್ನುಯುಃ ।
ತಥೇತಿ ಚ ತತೋ ದೇವಾಃ ಶಕ್ರಾದ್ಯಾಃ ಸುರಸತ್ತಮಾಃ ॥ ೧೬ ॥
ಸ್ತುತಿಂ ಕುರ್ವಂತಿ ತೇ ಸರ್ವೇ ಕಾಮಧೇನೋಃ ಪುರಃ ಸ್ಥಿತಾಃ ।
ಕೃತಕೃತ್ಯಾಸ್ತದಾ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ॥ ೧೭ ॥
ತ್ವಂ ಮಾತಾ ಸರ್ವದೇವಾನಾಂ ತ್ವಂ ಚ ಯಜ್ಞಸ್ಯ ಕಾರಣಂ ।
ತ್ವಂ ತೀರ್ಥಂ ಸರ್ವತೀರ್ಥಾನಾಂ ನಮಸ್ತೇಽಸ್ತು ಸದಾಽನಘೇ ॥ ೧೮ ॥
ಶಶಿಸೂರ್ಯಾಽರುಣಾ ಯಸ್ಯಾ ಲಲಾಟೇ ವೃಷಭಧ್ವಜಃ ।
ಸರಸ್ವತೀ ಚ ಹುಂಕಾರೇ ಸರ್ವೇ ನಾಗಾಶ್ಚ ಕಂಬಲೇ ॥ ೧೯ ॥
ಕ್ಷುರಪೃಷ್ಠೇ ಚ ಗಂಧರ್ವಾ ವೇದಾಶ್ಚತ್ವಾರ ಏವ ಚ ।
ಮುಖಾಗ್ರೇ ಸರ್ವತೀರ್ಥಾನಿ ಸ್ಥಾವರಾಣಿ ಚರಾಣಿ ಚ ॥ ೨೦ ॥
ಏವಂ ವಿಧೈಶ್ಚ ಬಹುಶೋ ವಚನೈಸ್ತೋಷಿತಾ ಚ ಸಾ ।
ಸುಪ್ರಸನ್ನಾ ತದಾ ಧೇನುಃ ಕಿಂಕರೋಮೀತಿ ಚಾಽಬ್ರವೀತ್ ॥ ೨೧ ॥

ದೇವಾ ಊಚುಃ:—

ಸೃಷ್ಟಾಃ ಸರ್ವೇ ತ್ವಯಾ ಮಾತರ್ದೇವ್ಯೈತೇಽನುಚರಾಃ ಶುಭಾಃ ।
ತ್ವತ್ಪ್ರಸಾದಾನ್ಮಹಾಭಾಗೇ ಬ್ರಾಹ್ಮಣಾಃ ಸುಖಿನೋಽಭವನ್ ॥ ೨೨ ॥

---

ಇಲ್ಲದೆ ಯಾರು ದರ್ಶ, ಶ್ರಾದ್ಧ ಮೊದಲಾದ ಶುಭಾಶುಭಕಾರ್ಯಗಳನ್ನು ಮಾಡುವರೊ, ಅವರು ಬಡತನ, ಪುತ್ರಶೋಕ, ಕೀರ್ತಿನಾಶಗಳನ್ನು ಹೊಂದುವುದಲ್ಲದೆ ನಿತ್ಯವೂ ರೋಗಪೀಡಿತರಾಗಿ ಸುಖಿಗಳಾಗಿರುವುದಿಲ್ಲ'' ಎಂದು ಬ್ರಹ್ಮನು ಹೇಳಲು ಇಂದ್ರಾದಿ ದೇವತೆಗಳೂ ಅದನ್ನು ಅನುಮೋದಿಸಿ ಕೃತಕೃತ್ಯರಾಗಿ ಬ್ರಹ್ಮಾದಿಗಳೊಡನೆ ಕಾಮಧೇನುವಿನ ಮುಂದೆ ನಿಂತು ಹೀಗೆ ಸ್ತುತಿಸಿದರು.

೧೮. “ನೀನು ಸಕಲ ದೇವತೆಗಳಿಗೂ ಮಾತೆಯು. ನೀನೇ ಯಜ್ಞಕ್ಕೆ ಕಾರಣಳು. ನೀನು ಸಕಲ ತೀರ್ಥಗಳಿಗೂ ತೀರ್ಥರೂಪಳು. ಯಾವಾಗಲೂ ನಿರ್ದುಷ್ಟಳಾದ ನಿನಗೆ ನಮಸ್ಕಾರವು.

೧೯–೨೦. ನಿನ್ನ ಹಣೆಯಲ್ಲಿ ಸೂರ್ಯ, ಚಂದ್ರ, ಅರುಣ, ಮಹೇಶ್ವರರೂ, ಹುಂಕಾರದಲ್ಲಿ ಸರಸ್ವತಿಯೂ, ಕುತ್ತಿಗೆಯ ಪಟ್ಟೆಯಲ್ಲಿ (ಗಂಗದೊಗಲಿನಲ್ಲಿ) ಸರ್ಪಗಳೂ, ಗೊರಸಿನ ಕೆಳಗೆ ಗಂಧರ್ವರೂ, ನಾಲ್ಕು ವೇದಗಳೂ, ಬಾಯಿಯ ಕೊನೆಯಲ್ಲಿ ಸಕಲ ತೀರ್ಥಗಳೂ, ಸ್ಥಾವರ ಜಂಗಮಗಳೂ ಇರುವುವು.

೨೧. ದೇವತೆಗಳು ಇಂತಹ ಮಾತುಗಳಿಂದ ಬಹಳವಾಗಿ ಸ್ತೋತ್ರಮಾಡಲು ಸಂತೋಷಗೊಂಡ ಕಾಮಧೇನುವು, ''ನಿಮಗಾಗಿ ಏನನ್ನು ಮಾಡಲಿ'' ಎಂದಿತು.

೨೨. ದೇವತೆಗಳು ಹೇಳುತ್ತಾರೆ:—ದೇವಿ! ನೀನು ಸೃಷ್ಟಿಸಿದ ಎಲ್ಲಾ ಸೇವಕರೂ ಒಳ್ಳೆಯವರು. ನಿನ್ನ ಅನುಗ್ರಹದಿಂದ ಬ್ರಾಹ್ಮಣರು ಸುಖಿಗಳಾದರು.

CC-0. Jangamwadi Math Collection. Digitized by eGangotri

ತತೋಽಸೌ ಸುರಭೀ ರಾಜನ್ಗತಾ ನಾಕಂ ಯಶಸ್ವಿನೀ ।
ಬ್ರಹ್ಮವಿಷ್ಣುಮಹೇಶಾದ್ಯಾಸ್ತತ್ರೈವಾಂತರಧುಸ್ತತಃ ॥ ೨೩ ॥

ಯುಧಿಷ್ಠಿರ ಉವಾಚ:—

ಅಭಾರ್ಯಾಸ್ತೇ ಮಹಾತೇಜಾ ಗೋಜಾ ಅನುಚರಾಸ್ತಥಾ ।
ಉದ್ವಾಹಿತಾಃ ಕಥಂ ಬ್ರಹ್ಮನ್ಸುತಾಸ್ತೇಷಾಂ ಕದಾಽಭವನ್ ॥ ೨೪ ॥

ವ್ಯಾಸ ಉವಾಚ:—

ಪರಿಗ್ರಹಾರ್ಥಂ ವೈ ತೇಷಾಂ ರುದ್ರೇಣ ಚ ಯಮೇನ ಚ ।
ಗಂಧರ್ವಕನ್ಯಾ ಆಹೃತ್ಯ ದಾರಾಸ್ತತ್ರೋಪಕಲ್ಪಿತಾಃ ॥ ೨೫ ॥

ಯುಧಿಷ್ಠಿರ ಉವಾಚ:—

ಕೋವಾ ಗಂಧರ್ವರಾಜೋಽಸೌ ಕಿಂ ನಾಮಾ ಕುತ್ರ ವಾ ಸ್ಥಿತಃ ।
ಕಿಯನ್ಮಾತ್ರಾಸ್ತಸ್ಯ ಕನ್ಯಾಃ ಕಿಮಾಚಾರಾ ಬ್ರವೀಹಿ ಮೇ ॥ ೨೬ ॥

ವ್ಯಾಸ ಉವಾಚ:—

ವಿಶ್ವಾವಸುರಿತಿ ಖ್ಯಾತೋ ಗಂಧರ್ವಾಽಧಿಪತಿರ್ನೃಪ ।
ಷಷ್ಟಿಕನ್ಯಾಸಹಸ್ರಾಣಿ ಆಸತೇ ತಸ್ಯ ವೇಶ್ಮನಿ ॥ ೨೭ ॥
ಅಂತರಿಕ್ಷೇ ಗೃಹಂ ತಸ್ಯ ಗಂಧರ್ವನಗರಂ ಶುಭಂ ।
ಯೌವನಸ್ಥಾಃ ಸುರೂಪಾಶ್ಚ ಕನ್ಯಾ ಗಂಧರ್ವಜಾಃ ಶುಭಾಃ ॥ ೨೮ ॥

---

೨೩. ಬಳಿಕ ಕಾಮಧೇನುವು ದೇವಲೋಕಕ್ಕೆ ತೆರಳಿತು. ಬ್ರಹ್ಮವಿಷ್ಣು ಮಹೇಶ್ವರರೇ ಮೊದಲಾದ ದೇವತೆಗಳೂ ಅಂತರ್ಧಾನರಾದರು.

೨೪. ಯುಧಿಷ್ಠಿರನು ಕೇಳುತ್ತಾನೆ:—ಎಲೈ ಮುನಿವರ್ಯನೇ! ಕಾಮಧೇನು ಸಂಭೂತರಾದವರೂ ತೇಜಸ್ವಿಗಳೂ ಆದ ಆ ಸೇವಕರು ಹೆಂಡತಿಯರಿಲ್ಲದವರಾಗಿದ್ದರಷ್ಟೆ! ಅವರು ವಿವಾಹ ಮಾಡಿಕೊಂಡುದೆಂತು? ಅವರಿಗೆ ಮಕ್ಕಳು ಯಾವಾಗ ಹುಟ್ಟಿದರು.

೨೫. ವ್ಯಾಸನು ಹೇಳುತ್ತಾನೆ:—ಯಮ ರುದ್ರರು ಆ ಸೇವಕರಿಗಾಗಿ ಗಂಧರ್ವರಾಜನ ಕನ್ಯೆಯರನ್ನು ಕರೆಯಿಸಿ ಮದುವೆಮಾಡಿಕೊಟ್ಟರು.

೨೬. ಯುಧಿಷ್ಠಿರನು ಕೇಳುತ್ತಾನೆ:—ಮುನಿಯೆ! ಈ ಗಂಧರ್ವರಾಜನಾರು? ಇವನ ಹೆಸರೇನು? ಇವನು ಎಲ್ಲಿರುವನು? ಇವನಿಗೆಷ್ಟುಜನ ಕನ್ಯೆಯರಿರುವರು? ಆ ಕನ್ಯೆಯರ ನಡತೆಯು ಹೇಗೆ? ಅದನ್ನು ನನಗೆ ತಿಳಿಯಹೇಳು.

೨೭–೨೮. ವ್ಯಾಸನು ಹೇಳುತ್ತಾನೆ:—ಅಯ್ಯಾ ಧರ್ಮರಾಜನೇ! ವಿಶ್ವಾವಸುವೆಂಬ ಗಂಧರ್ವರಾಜನಿರುವನು. ಅವನ ಮನೆಯಲ್ಲಿ ಅರುವತ್ತು ಸಾವಿರ ಮಂದಿ ಕನ್ಯೆಯರಿರುವರು. ಆ ಗಂದರ್ವರಾಜನ ಶುಭನಗರವು ಆಕಾಶದಲ್ಲಿರುವುದು. ಆ ಕನ್ಯೆಯರೆಲ್ಲ ಯುವತಿಯರೂ, ಮಂಗಳಕರರೂ ಆಗಿರುವರು.

CC-0. Jangamwadi Math Collection. Digitized by eGangotri

ರುದ್ರಸ್ಯಾಽನುಚರೌ ರಾಜನ್ನಂದೀ ಭೃಂಗೀ ಶುಭಾನನೌ ।
ಪೂರ್ವದೃಷ್ಟಾಶ್ಚ ತಾಃ ಕನ್ಯಾಃ ಕಥಯಾಮಾಸತುಃ ಶಿವಮ್ ॥ ೨೯ ॥
ದೃಷ್ಟಾಃ ಪುರಾ ಮಹಾದೇವ ಗಂಧರ್ವನಗರೇ ವಿಭೋ ।
ವಿಶ್ವಾವಸುಗೃಹೇ ಕನ್ಯಾ ಅಸಂಖ್ಯಾತಾಃ ಸಹಸ್ರಶಃ ॥ ೩೦ ॥
ತಾ ಆನೀಯ ಬಲಾದೇವ ಗೋಭುಜೇಭ್ಯಃ ಪ್ರಯಚ್ಛ ಭೋ ।
ಏವಂ ಶ್ರುತ್ವಾ ತತೋ ದೇವಸ್ತ್ರಿಪುರಘ್ನಃ ಸದಾಶಿವಃ ॥ ೩೧ ॥
ಪ್ರೇಷಯಾಮಾಸ ದೂತಂ ತು ವಿಜಯಂ ನಾಮ ಭಾರತ ।
ಸ ತತ್ರ ಗತ್ವಾ ಯತ್ರಾಸ್ತೇ ವಿಶ್ವಾವಸುರರಿಂದಮಃ ॥ ೩೨ ॥
ಉವಾಚ ವಚನಂ ಚೈವ ಪಥ್ಯಂ ಚೈವ ಶಿವೇರಿತಮ್ ।
ಧರ್ಮಾರಣ್ಯೇ ಮಹಾಭಾಗ ಕಾಜೇಶೇನ ವಿನಿರ್ಮಿತಾಃ ॥ ೩೩ ॥
ಸ್ಥಾಪಿತಾ ವಾಡವಾಸ್ತತ್ರ ವೇದವೇದಾಂಗಪಾರಗಾಃ ।
ತೇಷಾಂ ವೈ ಪರಿಚರ್ಯಾರ್ಥಂ ಕಾಮಧೇನುಶ್ಚ ಪ್ರಾರ್ಥಿತಾ ॥ ೩೪ ॥
ತಯಾ ಕೃತಾಃ ಶುಭಾಚಾರಾ ವಣಿಜಸ್ತೇ ಹ್ಯಯೋನಿಜಾಃ ।
ಷಟ್ತ್ರಿಂಶಚ್ಚ ಸಹಸ್ರಾಣಿ ಕುಮಾರಾಸ್ತೇ ಮಹಾಬಲಾಃ ॥ ೩೫ ॥
ಶಿವೇನ ಪ್ರೇಷಿತೋಽಹಂ ವೈ ತ್ವತ್ಸಮೀಪಮುಪಾಗತಃ ।
ಕನ್ಯಾರ್ಥಂ ಹಿ ಮಹಾಭಾಗ ದೇಹಿ ದೇಹೀತ್ಯುವಾಚ ಹ ॥ ೩೬ ॥

---

೨೯. ಆ ಕನ್ಯೆಯರನ್ನು ಮಹೇಶ್ವರನ ಸೇವಕರಾದ ನಂದಿ ಮತ್ತು ಭೃಂಗಿಗಳು ಮೊದಲು ನೋಡಿ ಶಿವನನ್ನು ಕುರಿತು ಹೀಗೆಂದರು.

೩೦. "ಮಹಾದೇವ! ಹಿಂದೆ ನಾವು ಗಂಧರ್ವನಗರದಲ್ಲಿರುವ ವಿಶ್ವಾವಸುವಿನ ಮನೆಯಲ್ಲಿ ಎಣಿಕೆಯಿಲ್ಲದಷ್ಟು ಮಂದಿ ಕನ್ಯೆಯರನ್ನು ನೋಡಿದ್ದೇವೆ.

೩೧–೩೬. ಅವರನ್ನು ಕರೆತಂದು ಈ ವೈಶ್ಯರಿಗೆ ಕೊಡು!'' ಇದನ್ನು ಕೇಳಿ ತ್ರಿಪುರಾರಿಯಾದ ಸದಾಶಿವನು ವಿಜಯನೆಂಬ ದೂತನನ್ನು ಕಳುಹಿಸಿದನು. ಅವನು ವಿಶ್ವಾವಸುವಿನ ಹತ್ತಿರಕ್ಕೆ ಹೋಗಿ ಶಿವನು ಹೇಳಿ ಕಳುಹಿಸಿದ ಹಿತವಚನವನ್ನು ಹೇಳಿದನು. "ಎಲೈ ಭಾಗ್ಯಶಾಲಿಯಾದ ಗಂಧರ್ವರಾಜನೇ! ಧರ್ಮಾರಣ್ಯದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ವೇದವೇದಾಂಗಗಳಲ್ಲಿ ಪಂಡಿತರಾದ ಬ್ರಾಹ್ಮಣರನ್ನು ಸ್ಥಾಪಿಸಿದ್ದಾರೆ. ಆ ಬ್ರಾಹ್ಮಣರ ಸೇವೆಗಾಗಿ ಬ್ರಹ್ಮಾದಿಗಳೂ ಕಾಮಧೇನುವನ್ನು ಪ್ರಾರ್ಥಿಸಲಾಗಿ ಅದು ಅಯೋನಿಜರೂ, ಬಲಿಷ್ಠರೂ, ಒಳ್ಳೆ ನಡತೆಯುಳ್ಳವರೂ ಆಗಿರುವ ಮೂವತ್ತಾರು ಸಾವಿರ ವೈಶ್ಯಕುಮಾರರನ್ನು ಸೃಷ್ಟಿಸಿತು. ನಿನ್ನ ಕನ್ಯೆಯರಿಗೋಸುಗ ಶಿವನು ನಿನ್ನೆಡೆಗೆ ನನ್ನನ್ನು ಕಳುಹಿಸಿದನು. ಅವರನ್ನು ಆ ವಣಿಕ್ಪುತ್ರರಿಗಾಗಿ ಕೊಡು'' ಎಂದನು.

CC-0. Jangamwadi Math Collection. Digitized by eGangotri

ಗಂಧರ್ವ ಉವಾಚ :—

ದೇವಾನಾಂ ಚೈವ ಸರ್ವೇಷಾಂ ಗಂಧರ್ವಾಣಾಂ ಮಹಾಮತೇ ।
ಪರಿತ್ಯಜ್ಯ ಕಥಂ ಲೋಕೇ ಮಾನುಷಾಣಾಂ ದದಾಮಿ ವೈ ॥ ೩೭ ॥
ಶ್ರುತ್ವಾ ತು ವಚನಂ ತಸ್ಯ ನಿವೃತ್ತೋ ವಿಜಯಸ್ತದಾ ।
ಕಥಯಾಮಾಸ ತತ್ಸರ್ವಂ ಗಂಧರ್ವಚರಿತಂ ಮಹತ್ ॥ ೩೮ ॥

ವ್ಯಾಸ ಉವಾಚ :—

ತತಃ ಕೋಪಸಮಾವಿಷ್ಟೋ ಭಗವಾಂಲ್ಲೋಕಶಂಕರಃ ।
ವೃಷಭೇ ಚ ಸಮಾರೂಢಃ ಶೂಲಹಸ್ತಃ ಸದಾಶಿವಃ ॥ ೩೯ ॥
ಭೂತಪ್ರೇತಪಿಶಾಚಾದ್ಯೈಃ ಸಹಸ್ರೈರಾವೃತಃ ಪ್ರಭುಃ ।
ತತೋ ದೇವಾಸ್ತಥಾ ನಾಗಾ ಭೂತವೇತಾಲಖೇಚರಾಃ ॥ ೪೦ ॥
ಕ್ರೋಧೇನ ಮಹತಾವಿಷ್ಟಾಃ ಸಮಾಜಗ್ಮುಃ ಸಹಸ್ರಶಃ ।
ಹಾಹಾಕಾರೋ ಮಹಾನಾಸೀತ್ತಸ್ಮಿನ್ಸೈನ್ಯೇ ವಿಸರ್ಪತಿ ॥ ೪೧ ॥
ಪ್ರಕಂಪಿತಾ ಧರಾದೇವೀ ದಿಶಾಪಾಲಾ ಭಯಾತುರಾಃ ।
ಘೋರಾ ವಾತಾಸ್ತದಾಽಶಾಂತಾಃ ಶಬ್ದಂ ಕುರ್ವಂತಿ ದಿಗ್ಗಜಾಃ ॥ ೪೨ ॥

ವ್ಯಾಸ ಉವಾಚ :—

ತದಾಗತಂ ಮಹಾಸೈನ್ಯಂ ದೃಷ್ಟ್ವಾ ಭಯವಿಲೋಲಿತಂ ।
ಗಂಧರ್ವನಗರಾತ್ಸರ್ವೇ ವಿವೇಶುಸ್ತೇ ದಿಶೋದಶ ॥ ೪೩ ॥

---

೩೭–೩೮. ಗಂಧರ್ವನು ಹೇಳುತ್ತಾನೆ :—"ಎಲೈ ಪ್ರಾಜ್ಞನೇ! ದೇವತೆಗಳನ್ನೂ ಗಂಧರ್ವರನ್ನೂ ಬಿಟ್ಟು ಭೂಲೋಕದ ಮನುಷ್ಯರಿಗೆ ಈ ಕನ್ಯೆಯರನ್ನು ಹೇಗೆ ಕೊಡಲಿ." ವಿಜಯನು ಅವನ ಮಾತನ್ನು ಕೇಳಿ ಹಿಂದಿರುಗಿ ಬಂದು ಶಿವನಿಗೆ ಆ ಗಂಧರ್ವನ ಚರಿತ್ರೆಯೆಲ್ಲವನ್ನೂ ತಿಳಿಸಿದನು.

೩೯–೪೨. ವ್ಯಾಸನು ಹೇಳುತ್ತಾನೆ :—ಬಳಿಕ ಶಂಕರನು ಕೋಪಗೊಂಡು ವೃಷಭವನ್ನೇರಿ ಶೂಲಪಾಣಿಯಾಗಿ ಸಾವಿರಾರು ಭೂತಪ್ರೇತ ಪಿಶಾಚಾದಿಗಳಿಂದ ಕೂಡಿ ಅಲ್ಲಿಗೆ ಹೊರಟನು. ಅವನನ್ನು ದೇವತೆಗಳೂ, ನಾಗಗಳೂ, ಭೂತಾದಿಗಳೂ ಅತ್ಯಂತ ಕೋಪಾವಿಷ್ಟರಾಗಿ ಅನುಸರಿಸಿದರು. ಆ ಸೈನ್ಯವು ಮುನ್ನುಗ್ಗುತ್ತಿರುವಾಗ ಮಹತ್ತಾದ ಹಾಹಾಕಾರವು ಉಂಟಾಯಿತು. ಭೂಮಿಯು ನಡುಗಿತು. ದಿಕ್ಪಾಲಕರು ಭಯಗೊಂಡರು. ಬಿರುಗಾಳಿಯೆದ್ದಿತು. ದಿಗ್ಗಜಗಳು ಭಯಂಕರವಾಗಿ ಕೂಗಿದವು.

೪೩. ವ್ಯಾಸನು ಹೇಳುತ್ತಾನೆ :—ಭಯಂಕರವಾದ ಆ ಪರಶಿವನ ಸೇನೆಯನ್ನು ಕಂಡು ಗಂಧರ್ವನಗರವಾಸಿಗಳೆಲ್ಲರೂ ದಶದಿಕ್ಕುಗಳಲ್ಲಿಯೂ ಅಡಗಿಕೊಂಡರು.

CC-0. Jangamwadi Math Collection. Digitized by eGangotri

ಗಂಧರ್ವರಾಜೋ ನಗರಂ ತ್ಯಕ್ತ್ವಾ ಮೇರುಂ ಗತೋ ನೃಪ ।
ತಾಃ ಕನ್ಯಾ ಯೌವನೋಪೇತಾ ರೂಪೌದಾರ್ಯಸಮನ್ವಿತಾಃ ॥ ೪೪ ॥
ಗೃಹೀತ್ವಾ ಪ್ರದದೌ ಸರ್ವಾ ವಣಿಗ್ಭ್ಯಶ್ಚ ತದಾ ನೃಪ ।
ವೇದೋಕ್ತೇನ ವಿಧಾನೇನ ತಥಾ ವೈ ದೇವಸನ್ನಿಧೌ ॥ ೪೫ ॥
ಆಜ್ಯಭಾಗಂ ತದಾ ದತ್ವಾ ಗಂಧರ್ವಾಯ ಗವಾತ್ಮಜಾಃ ।
ದೇವಾನಾಂ ಪೂರ್ವಜಾನಾಂ ಚ ಸೂರ್ಯಾಚಂದ್ರಮಸೋಸ್ತಥಾ ॥ ೪೬ ॥
ಯಮಾಯ ಮೃತ್ಯವೇ ಚೈವ ಆಜ್ಯಭಾಗಂ ತದಾ ದದುಃ ।
ದತ್ವಾಜ್ಯಭಾಗಾನ್ವಿಧಿವದ್ವವ್ರಿರೇ ತೇ ಶುಭವ್ರತಾಃ ॥ ೪೭ ॥
ತತಃ ಪ್ರಭೃತಿ ಗಾಂಧರ್ವವಿವಾಹೇ ಸಮುಪಸ್ಥಿತೇ ।
ಆಜ್ಯಭಾಗಂ ಪ್ರಗೃಹ್ಣಂತಿ ಅದ್ಯಾಽಪಿ ಸರ್ವತೋ ಭೃಶಂ ॥ ೪೮ ॥
ಷಟ್ತ್ರಿಂಶಚ್ಚ ಸಹಸ್ರಾಣಿ ಕುಮಾರಾ ಯನ್ನ್ಯವೇದಯನ್ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥ ೪೯ ॥
ಅತ ಏವಹಿ ತಾಃ ಸರ್ವಾ ದಾಸತ್ವೇ ಹಿ ವಿನಿರ್ಮಿತಾಃ ।
ಕ್ಷತ್ರಿಯಾಶ್ಚ ಮಹಾವೀರಾ ಕಿಂಕರತ್ವೇ ಹಿ ನಿರ್ಮಿತಾಃ ॥ ೫೦ ॥
ತತೋ ದೇವಾಸ್ತದಾ ರಾಜಂ ಜಗ್ಮುಃ ಸರ್ವೇ ಯಥಾ ತಥಾ ।
ಗತೇ ದೇವೇ ದ್ವಿಜಾಃ ಸರ್ವೇ ಸ್ಥಾನೇಽಸ್ಮಿನ್ನಿವಸಂತಿ ತೇ ॥ ೫೧ ॥

---

೪೪–೪೭. ಗಂಧರ್ವರಾಜನು ಪಟ್ಟಣವನ್ನು ತ್ಯಜಿಸಿ ಮೇರುಪರ್ವತಕ್ಕೆ ಹೋದನು. ಆಗ ಪರಮೇಶ್ವರನು ಸೌಂದರ್ಯ ಮತ್ತು ಔದಾರ್ಯಾದಿಗುಣವುಳ್ಳ ಯುವತಿಯರಾದ ಆ ಗಂಧರ್ವಕನ್ಯೆಯರನ್ನು ಕರೆದುಕೊಂಡು ಬಂದು ಆ ವರ್ತಕರಿಗೆ ಕೊಟ್ಟನು. ಆಗ ಅವರು ವೇದೋಕ್ತಕ್ರಮದಿಂದ ದೇವಸನ್ನಿಧಿಯಲ್ಲಿ ಗಂಧರ್ವನಿಗೆ ಆಜ್ಯಭಾಗವನ್ನು ಸಲ್ಲಿಸಿ ದೇವತೆಗಳಿಗೂ, ತಮ್ಮ ಪೂರ್ವಜರಿಗೂ, ಸೂರ್ಯ ಚಂದ್ರರಿಗೂ, ಯಮಧರ್ಮನಿಗೂ ಆಜ್ಯಭಾಗವನ್ನು ಕೊಟ್ಟರು. ಹೀಗೆ ಕ್ರಮವಾಗಿ ಆಜ್ಯಭಾಗವನ್ನಿತ್ತು ಆ ಕನ್ಯೆಯರನ್ನು ವಿವಾಹಮಾಡಿಕೊಂಡರು.

೪೮. ಅದು ಮೊದಲುಗೊಂಡು ಗಾಂಧರ್ವವಿವಾಹವು ನಡೆಯುವಾಗ ಎಲ್ಲೆಡೆಯಲ್ಲಿಯೂ ಆಜ್ಯಭಾಗವನ್ನು ದೇವತೆಗಳು ಸ್ವೀಕರಿಸುವರು.

೪೯. ತರುವಾಯ ಈ ಮೂವತ್ತಾರುಸಾವಿರ ಮಂದಿ ವೈಶ್ಯಕುಮಾರರಿಗೆ ಸಾವಿರಾರು ಮಂದಿ ಪುತ್ರಪೌತ್ರರು ಜನಿಸಿದರು.

೫೦. ಆದ್ದರಿಂದಲೇ ಅವರೆಲ್ಲರೂ ದಾಸ್ಯಕ್ಕಾಗಿಯೂ, ವೀರರಾದ ಕ್ಷತ್ರಿಯರ ಕೈಂಕರ್ಯಕ್ಕಾಗಿಯೂ ನಿರ್ಮಿತರಾಗಿರುವರು.

೫೧. ದೇವತೆಗಳೆಲ್ಲ ತಮ್ಮತಮ್ಮ ಸ್ಥಾನಗಳಿಗೆ ತೆರಳಲು ಬ್ರಾಹ್ಮಣರೆಲ್ಲರೂ ಈ ಧರ್ಮಾರಣ್ಯದಲ್ಲಿ ಸುಖವಾಗಿ ವಾಸಿಸುತ್ತಿದ್ದಾರೆ.

CC-0. Jangamwadi Math Collection. Digitized by eGangotri

ಪುತ್ರಪೌತ್ರಯುತಾ ರಾಜನ್ನಿವಸಂತ್ಯಕುತೋ ಭಯಾಃ ।
ಪಠಂತಿ ವೇದಾನ್ವೇದಜ್ಞಾಃ ಕ್ವಚಿಚ್ಛಾಸ್ತ್ರಾರ್ಥಮುದ್ಗಿರನ್ ॥ ೫೨ ॥
ಕೇಚಿದ್ವಿಷ್ಣುಂ ಜಪಂತೀಹ ಶಿವಂ ಕೇಚಿಜ್ಜಪಂತಿ ಹಿ ।
ಬ್ರಹ್ಮಾಣಂ ಚ ಜಪಂತ್ಯೇಕೇ ಯಮಸೂಕ್ತಂ ಹಿ ಕೇಚನ ॥ ೫೩ ॥
ಯಜಂತಿ ಯಾಜಕಾಶ್ಚೈವ ಅಗ್ನಿಹೋತ್ರಮುಪಾಸತೇ ।
ಸ್ವಾಹಾಕಾರ ಸ್ವಧಾಕಾರವಷಟ್ಕಾರೈಶ್ಚ ಸುವ್ರತ ॥ ೫೪ ॥
ಶಬ್ದೈರಾಪೂರ್ಯತೇ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ವಣಿಜಶ್ಚ ಮಹಾದಕ್ಷಾ ದ್ವಿಜಶುಶ್ರೂಷಣೋತ್ಸುಕಾಃ ॥ ೫೫ ॥
ಧರ್ಮಾರಣ್ಯೇ ಶುಭೇ ದಿವ್ಯೇ ತೇ ವಸಂತಿ ಸುನಿಶ್ಚಿತಾಃ ।
ಅನ್ನಪಾನಾದಿಕಂ ಸರ್ವಂ ಸಮಿತ್ಕುಶಫಲಾದಿಕಂ ॥ ೫೬ ॥
ಆಪೂರಯನ್ದ್ವಿಜಾತೀನಾಂ ವಣಿಜಸ್ತೇ ಗವಾತ್ಮಜಾಃ ॥ ೫೭ ॥
ಪುಷ್ಪೋಪಹಾರನಿಚಯಂ ಸ್ನಾನವಸ್ತ್ರಾದಿಧಾವನಂ ।
ಉಪಲಾದಿಕ ನಿರ್ಮಾಣಂ ಮಾರ್ಜನಾದಿ ಶುಭಕ್ರಿಯಾಃ ॥ ೫೮ ॥
ವಣಿಕ್ಸ್ತ್ರಿಯಃ ಪ್ರಕುರ್ವಂತಿ ಕಂಡನಂ ಪೇಷಣಾದಿಕಂ ।
ಶುಶ್ರೂಷಂತಿ ಚ ತಾನ್ವಿಪ್ರಾನ್ಬ್ರಾಜೇಶವಚನೇನ ಹಿ ॥ ೫೯ ॥

---

೫೨. ಇಲ್ಲಿ ಬ್ರಾಹ್ಮಣರು ಪುತ್ರಪೌತ್ರಯುತರಾಗಿ ಭಯವಿಲ್ಲದೆ ವೇದ ಪಠನಮಾಡುತ್ತಲೂ, ಶಾಸ್ತ್ರಾರ್ಥಗಳನ್ನು ಹೇಳುತ್ತಲೂ ವಾಸಮಾಡುತ್ತಿದ್ದಾರೆ.

೫೩. ಕೆಲವರು ವಿಷ್ಣುಮಂತ್ರವನ್ನೂ, ಕೆಲವರು ಶಿವಮಂತ್ರವನ್ನೂ, ಕೆಲವರು ಬ್ರಹ್ಮಮಂತ್ರವನ್ನೂ ಜಪಿಸುತ್ತಾರೆ. ಕೆಲವರು ಯಮಸೂಕ್ತವನ್ನು ಪಠಿಸುತ್ತಾರೆ.

೫೪–೬೦. ಕೆಲವರು ಋತ್ವಿಜರು ಯಾಗಮಾಡುತ್ತಾರೆ. ಕೆಲವರು ಅಗ್ನಿಹೋತ್ರವನ್ನು ಮಾಡುತ್ತಾರೆ. ಇವರ ಸ್ವಾಹಾ, ಸ್ವಧಾ, ವಷಟ್ಕಾರಗಳ ಶಬ್ದಗಳಿಂದ ಚರಾಚರಾತ್ಮಕವಾದ ಮೂರು ಲೋಕವೂ ತುಂಬಿರುವುದು. ಧರ್ಮಾರಣ್ಯದಲ್ಲಿ ವಾಸಿಸುವ ಕಾಮಧೇನುಸಂಭೂತರಾದ ವೈಶ್ಯರು ಅತ್ಯಂತ ಕುಶಲರೂ, ಬ್ರಾಹ್ಮಣಸೇವೆಯಲ್ಲಿ ಉತ್ಸುಕರೂ ಆಗಿ ಬ್ರಾಹ್ಮಣರಿಗೆ ಅನ್ನ, ನೀರು, ಸಮಿತ್ತು, ದರ್ಭೆ, ಹಣ್ಣು, ಹೂವು ಮೊದಲಾದುವುಗಳನ್ನು ಒದಗಿಸುತ್ತಾರೆ. ಮತ್ತು ಸ್ನಾನವಸ್ತ್ರಗಳನ್ನು ಒಗೆಯುವುದು, ಕಲ್ಲು ಮೊದಲಾದುವುಗಳನ್ನು ಮಾಡಿಕೊಡುವುದು, ಗುಡಿಸುವುದು ಇವೇ ಮೊದಲಾದ ಶುಭಕಾರ್ಯಗಳಲ್ಲಿ ಸಹಾಯ ಮಾಡುತ್ತಾರೆ. ವೈಶ್ಯರ ಹೆಂಗಸರು ಬ್ರಹ್ಮಾದಿದೇವತೆಗಳ ಮಾತಿನಿಂದ ಕುಟ್ಟುವುದು, ಬೀಸುವುದು ಮೊದಲಾದ ಕೆಲಸಗಳನ್ನು ಆ ಬ್ರಾಹ್ಮಣರಿಗೆ ಮಾಡಿಕೊಟ್ಟು

CC-0. Jangamwadi Math Collection. Digitized by eGangotri

ಸ್ವಸ್ಥಾ ಜಾತಾಸ್ತದಾ ಸರ್ವೇ ದ್ವಿಜಾ ಹರ್ಷಪರಾಯಣಾಃ ।
ಕಾಜೇಶಾದೀನುಪಾಸಂತೇ ದಿವಾರಾತ್ರೌ ಹಿ ಸಂಧ್ಯಯೋಃ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ವಣಿಕ್ಪುರಿ ಗೃಹವರ್ಣನಂ" ನಾಮ ದಶಮೋಽಧ್ಯಾಯಃ

---

ಅವರನ್ನು ಸೇವಿಸುತ್ತಿರುತ್ತಾರೆ. ಇದರಿಂದ ಬ್ರಾಹ್ಮಣರು ಸಂತೋಷಗೊಂಡವರಾಗಿ ಹಗಲು ರಾತ್ರಿಯೂ, ಸಂಧ್ಯಾಕಾಲಗಳಲ್ಲಿಯೂ ಬ್ರಹ್ಮಾದಿದೇವತೆಗಳನ್ನು ಪೂಜಿಸುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ವಣಿಕ್ಪುರಿಗೃಹವರ್ಣನವೆಂಬ" ಹತ್ತನೆ ಅಧ್ಯಾಯವು ಮುಗಿದುದು

DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

### ಲೋಲಜಿಹ್ವಾಽಸುರವಧಪೂರ್ವಕಂ ಸತ್ಯಮಂದಿರ ಸಂಸ್ಥಾಪನವರ್ಣನಂ

ಯುಧಿಷ್ಠಿರ ಉವಾಚ :—

ಅತಃಪರಂ ಕಿಮಭವದ್ಬ್ರವೀತು ದ್ವಿಜಸತ್ತಮ ।
ತ್ವದ್ವಚನಾಮೃತಂ ಪೀತ್ವಾ ತೃಪ್ತಿರ್ನಾಸ್ತಿ ಮಮ ಪ್ರಭೋ ॥ ೧ ॥

ವ್ಯಾಸ ಉವಾಚ :—

ಅಥ ಕಿಂಚಿದ್ಗತೇ ಕಾಲೇ ಯುಗಾಂತಸಮಯೇ ಸತಿ ।
ತ್ರೇತಾದೌ ಲೋಲಜಿಹ್ವಾಕ್ಷ ಅಭವದ್ರಾಕ್ಷಸೇಶ್ವರಃ ॥ ೨ ॥
ತೇನ ವಿದ್ರಾವಿತಂ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಜಿತ್ವಾ ಸ ಸಕಲಾಂಲ್ಲೋಕಾನ್ಧರ್ಮಾಽರಣ್ಯೇ ಸಮಾಗತಃ ॥ ೩ ॥
ತದ್ದೃಷ್ಟ್ವಾ ಸಕಲಂ ಪುಣ್ಯಂ ರಮ್ಯಂ ದ್ವಿಜನಿಷೇವಿತಂ ।
ಬ್ರಹ್ಮದ್ವೇಷಾಚ್ಚ ತೇನೈವ ದಾಹಿತಂ ಚ ಪುರಂ ಶುಭಂ ॥ ೪ ॥
ದಹ್ಯಮಾನಂ ಪುರಂ ದೃಷ್ಟ್ವಾ ಪ್ರಣಷ್ಟಾ ದ್ವಿಜಸತ್ತಮಾಃ ।
ಯಥಾಗತಂ ಪ್ರಜಗ್ಮುಸ್ತೇ ಧರ್ಮಾಽರಣ್ಯನಿವಾಸಿನಃ ॥ ೫ ॥

---

## ಕನ್ನಡದ ಅನುವಾದ

### ಲೋಲಜಿಹ್ವಾಸುರವಧ—ಸತ್ಯಮಂದಿರ ಸಂಸ್ಥಾಪನ ವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ:—ಎಲೈ ವ್ಯಾಸಮುನಿಯೆ! ತರುವಾಯ ಏನಾಯಿತೆಂಬುದನ್ನು ಹೇಳುವವನಾಗು! ನಿನ್ನ ವಚನಾಮೃತವನ್ನು ಪಾನ ಮಾಡಿ ನನಗೆ ಇನ್ನೂ ತೃಪ್ತಿಯಾಗಲಿಲ್ಲ.

೨. ವ್ಯಾಸನು ಹೇಳುತ್ತಾನೆ:—ತರುವಾಯ ಕೆಲವುಕಾಲ ಕಳೆಯಲು ಯುಗಾವಸಾನ ಸಮಯವೊದಗಿತು. ಆಗ ತ್ರೇತಾಯುಗದ ಆದಿಯಲ್ಲಿ ಲೋಲ ಜಿಹ್ವಾಕ್ಷನೆಂಬ ರಾಕ್ಷಸನು ಹುಟ್ಟಿದನು.

೩. ಅವನು ಚರಚರಾತ್ಮಕವಾದ ತ್ರೈಲೋಕ್ಯವನ್ನು ಕೊಳ್ಳೆಹೊಡೆದು ಸಕಲ ಲೋಕಗಳನ್ನೂ ಜಯಿಸಿ ಧರ್ಮಾರಣ್ಯಕ್ಕೆ ಬಂದನು.

೪. ಅವನು ಪವಿತ್ರವಾಗಿಯೂ, ಮನೋಹರವಾಗಿಯೂ, ಬ್ರಾಹ್ಮಣರಿಂದ ಸೇವಿತವಾಗಿಯೂ ಇರುವ ಆ ಧರ್ಮಾರಣ್ಯವನ್ನು ಕಂಡು ಬ್ರಹ್ಮದ್ವೇಷದಿಂದ ಆ ಪಟ್ಟಣವನ್ನು ಸುಟ್ಟನು.

೫. ಸುಡುತ್ತಿರುವ ಆ ಪಟ್ಟಣವನ್ನು ನೋಡಿ ಅಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣೋತ್ತಮರು ತಾವು ಬಂದ ಸ್ಥಳಗಳಿಗೆ ಮತ್ತೆ ಹೊರಟುಹೋದರು.

CC-0. Jangamwadi Math Collection. Digitized by eGangotri

ಶ್ರೀಮಾತಾದ್ಯಾಸ್ತದಾ ದೇವ್ಯಃ ಕೋಪಿತಾ ರಾಕ್ಷಸೇನ ವೈ ।
ಘಾತಯಂತ್ಯೇವ ಶಬ್ದೇನ ತರ್ಜಯಿತ್ವಾ ಚ ರಾಕ್ಷಸಂ ॥ ೬ ॥
ಸಮುಚ್ಚಿಪ್ರತಾಸ್ತದಾ ದೇವ್ಯಃ ಶತಶೋಽಥ ಸಹಸ್ರಶಃ ।
ತ್ರಿಶೂಲವರಧಾರಿಣ್ಯಃ ಶಂಖಚಕ್ರಗದಾಧರಾಃ ॥ ೭ ॥
ಕಮಂಡಲುಧರಾಃ ಕಾಶ್ಚಿತ್ಕಶಾಖಡ್ಗಧರಾಃ ಪರಾಃ ।
ಪಾಶಾಂಕುಶಧರಾ ಕಾಚಿತ್ಖಡ್ಗಖೇಟಕಧಾರಿಣೀ ॥ ೮ ॥
ಕಾಚಿತ್ಪರಶುಹಸ್ತಾ ಚ ದಿವ್ಯಾಯುಧಧರಾ ಪರಾ ।
ನಾನಾಭರಣಭೂಷಾಢ್ಯಾ ನಾನಾರತ್ನಾಽಭಿಶೋಭಿತಾ ॥ ೯ ॥
ರಾಕ್ಷಸಾನಾಂ ವಿನಾಶಾಯ ಬ್ರಾಹ್ಮಣಾನಾಂ ಹಿತಾಯ ಚ ।
ಆಜಗ್ಮುಸ್ತತ್ರ ಯತ್ರಾಸ್ತೇ ಲೋಲಜಿಹ್ವೋ ಹಿ ರಾಕ್ಷಸಃ ॥ ೧೦ ॥
ಮಹಾದಂಷ್ಟ್ರೋ ಮಹಾಕಾಯೋ ವಿದ್ಯುಜ್ಜಿಹ್ವೋ ಭಯಂಕರಃ ।
ದೃಷ್ಟ್ವಾ ತಾ ರಾಕ್ಷಸೋ ಘೋರಂ ಸಿಂಹನಾದಮಥಾಽಕರೋತ್ ॥೧೧॥
ತೇನ ನಾದೇನ ಮಹತಾ ತ್ರಾಸಿತಂ ಭುವನತ್ರಯಂ ।
ಆಪೂರಿತಾ ದಿಶಃ ಸರ್ವಾಃ ಕ್ಷುಭಿತಾಽನೇಕಸಾಗರಾಃ ॥ ೧೨ ॥
ಕೋಲಾಹಲೋ ಮಹಾನಾಸೀದ್ಧರ್ಮಾಽರಣ್ಯೇ ತದಾ ನೃಪ ।
ತಚ್ಛ್ರುತ್ವಾ ವಾಸವೇನಾಽಥ ಪ್ರೇಷಿತೋ ನಲಕೂಬರಃ ॥ ೧೩ ॥

---

೬–೧೦. ಆ ರಾಕ್ಷಸನಿಂದ ಕೋಪಗೊಳಿಸಲ್ಪಟ್ಟ ಶ್ರೀಮಾತಾದಿ ಸಾವಿರಾರು ಮಂದಿ ದೇವಿಯರು ಆ ರಾಕ್ಷಸನನ್ನು ಹೊಡೆಯುತ್ತಾ, ಹೆದರಿಸುತ್ತ ನುಗ್ಗಿ ಹೊರಟರು. ಕೆಲವರು ತ್ರಿಶೂಲ, ಶಂಖ, ಚಕ್ರ, ಗದೆ, ಕಮಂಡಲಗಳನ್ನು ಧರಿಸಿದವರೂ, ಮತ್ತೆ ಕೆಲವರು ಛಾವುಟಿ, ಕತ್ತಿಗಳನ್ನು ಧರಿಸಿದವರೂ, ಒಬ್ಬಳು ಪಾಶ, ಅಂಕುಶಗಳನ್ನು ಧರಿಸಿದವಳೂ, ಒಬ್ಬಳು ಕತ್ತಿ, ಗುರಾಣಿಗಳನ್ನು ಹಿಡಿದವಳೂ, ಒಬ್ಬಳು ಕೊಡಲಿಯನ್ನು ಹಿಡಿದವಳೂ, ಮತ್ತೊಬ್ಬಳು ದಿವ್ಯಾಸ್ತ್ರಗಳನ್ನು ಧರಿಸಿದವಳೂ, ಬಗೆ ಬಗೆಯ ಒಡವೆಗಳನ್ನು ತೊಟ್ಟವಳೂ, ನಾನಾ ವಿಧ ರತ್ನಗಳಿಂದ ವಿರಾಜಿಸುವವಳೂ ಆಗಿ ಎಲ್ಲರೂ ಸೇರಿ ಆ ರಾಕ್ಷಸನಾಶಕ್ಕಾಗಿಯೂ, ಬ್ರಾಹ್ಮಣರ ಹಿತಕ್ಕಾಗಿಯೂ ಲೋಲಜಿಹ್ವನಿದ್ದೆಡೆಗೆ ನುಗ್ಗಿ ಬಂದರು.

೧೧–೧೨. ದೊಡ್ಡ ಹಲ್ಲುಗಳುಳ್ಳವನೂ, ದೊಡ್ಡ ದೇಹವುಳ್ಳವನೂ, ಮಿಂಚಿನಂತೆ ನಾಲಿಗೆಯುಳ್ಳವನೂ ಭಯಂಕರನೂ ಆದ ಆ ರಾಕ್ಷಸನು ಆ ದೇವಿಯರನ್ನು ನೋಡಿ ಸಿಂಹನಾದ ಮಾಡಿದನು. ಆ ಘೋರ ನಾದದಿಂದ ಮೂರು ಲೋಕವೂ ಭಯಗೊಂಡಿತು. ಸಕಲ ದಿಕ್ಕುಗಳು ಆ ನಾದದಿಂದ ತುಂಬಿಹೋದುವು. ಅನೇಕ ಸಾಗರಗಳು ಉಲ್ಲೋಲಕಲ್ಲೋಲವಾದುವು.

೧೩–೧೪. ಆಗ ಧರ್ಮಾರಣ್ಯದಲ್ಲಿ ಬಹಳ ಗದ್ದಲವಾಯಿತು. ಅದನ್ನು

CC-0. Jangamwadi Math Collection. Digitized by eGangotri

ಕಿಮಿದಂ ಪಶ್ಯ ಗತ್ವಾ ತ್ವಂ ದೃಷ್ಟ್ವಾ ಮಹ್ಯಂ ನಿವೇದಯ ।
ತತ್ತಸ್ಯ ವಚನಂ ಶ್ರುತ್ವಾ ಗತೋ ವೈ ನಲಕೂಬರಃ ॥ ೧೪ ॥
ದೃಷ್ಟ್ವಾ ತತ್ರ ಮಹಾಯುದ್ಧಂ ಶ್ರೀಮಾತಾಲೋಲಜಿಹ್ವಯೋಃ ।
ಯಥಾದೃಷ್ಟಂ ಯಥಾಜಾತಂ ಶಕ್ರಾಗ್ರೇ ಸ ನ್ಯವೇದಯತ್ ॥ ೧೫ ॥
ಉದ್ವೇಜಯತಿ ಲೋಕಾಂಸ್ತ್ರೀನ್ಧರ್ಮಾರಣ್ಯಮಿತೋ ಗತಃ ।
ತಚ್ಛ್ರುತ್ವಾ ವಾಸವೋ ವಿಷ್ಣುಂ ನಿವೇದ್ಯ ಕ್ಷಿತಿಮಾಗಮತ್ ॥ ೧೬ ॥
ಪಾಹಿತಂ ತತ್ಪುರಂ ರಮ್ಯಂ ದೇವಾನಾಮಪಿ ದುರ್ಲಭಂ ।
ನ ದೃಷ್ಟ್ವಾ ವಾಡವಾಸ್ತತ್ರ ಗತಾಃ ಸರ್ವೇ ದಿಶೋದಶ ॥ ೧೭ ॥
ಶ್ರೀಮಾತಾ ಯೋಗಿನೀ ತತ್ರ ಕುರುತೇ ಯುದ್ಧಮುತ್ತಮಂ ।
ಹಾಹಾಭೂತಾಃ ಪ್ರಜಾಃ ಸರ್ವಾ ಇತಶ್ಚೇತಶ್ಚ ಧಾವತಿ ॥ ೧೮ ॥
ತಚ್ಛ್ರುತ್ವಾ ವಾಸುದೇವೋ ಹಿ ಗೃಹೀತ್ವಾ ಚ ಸುದರ್ಶನಂ ।
ಸತ್ಯಲೋಕಾತ್ತದಾ ರಾಜನ್ಸಮಾಗಚ್ಛನ್ಮಹೀತಲೇ ॥ ೧೯ ॥
ಧರ್ಮಾರಣ್ಯಂ ತತೋ ಗತ್ವಾ ತಚ್ಚಕ್ರಂ ಪ್ರಮುಮೋಚ ಹ ।
ಲೋಲಜಿಹ್ವಸ್ತದಾ ರಕ್ಷೋ ಮೂರ್ಛಿತೋ ನಿಪಪಾತ ಸಃ ॥ ೨೦ ॥

---

ಕೇಳಿ ದೇವರಾಜನು ನಳಕೂಬರನನ್ನು ಕರೆದು "ನೀನು ಧರ್ಮಾರಣ್ಯಕ್ಕೆ ಹೋಗಿ ಅಲ್ಲಿ ನಡೆಯುತ್ತಿರುವುದನ್ನು ನೋಡಿಬಂದು ನನಗೆ ತಿಳಿಸು" ಎಂದು ಅವನನ್ನು ಧರ್ಮಾರಣ್ಯಕ್ಕೆ ಕಳುಹಿಸಿದನು. ಅವನು ಶುಕ್ರನ ವಚನದಂತೆ ಅಲ್ಲಿಗೆ ಹೋದನು.

೧೫-೧೬. ಅವನು ಅಲ್ಲಿ ಶ್ರೀಮಾತಾ ಲೋಲಜಿಹ್ವರಿಗೆ ನಡೆಯುತ್ತಿದ್ದ ಯುದ್ಧವನ್ನು ನೋಡಿ ತಾನು ಕಂಡಂತೆ "ಲೋಲಜಿಹ್ವನು ಇಲ್ಲಿಂದ ಧರ್ಮಾರಣ್ಯಕ್ಕೆ ಹೋಗಿ ಮೂರು ಲೋಕಗಳನ್ನು ಭಯಗೊಳಿಸುತ್ತಿದ್ದಾನೆ" ಎಂದು ದೇವೇಂದ್ರನಿಗೆ ತಿಳಿಸಿದನು. ಅದನ್ನು ಕೇಳಿ ದೇವರಾಜನು ಈ ವಿಷಯವನ್ನು ವಿಷ್ಣುವಿಗೆ ವಿಜ್ಞಾಪಿಸಿ ತಾನೂ ಭೂಮಿಗೆ ಬಂದನು.

೧೭. ದೇವದುರ್ಲಭವಾಗಿಯೂ, ಮನೋಹರವಾಗಿಯೂ ಇರುವ ಆ ಧರ್ಮನಗರವು ಭಸ್ಮವಾಗಿದ್ದಿತು. ಬ್ರಾಹ್ಮಣರೆಲ್ಲರೂ ದಶದಿಕ್ಕುಗಳಿಗೆ ಹೊರಟು ಹೋಗಿದ್ದುದರಿಂದ ಅವರೂ ಕಾಣಿಸಲಿಲ್ಲ.

೧೮. ಶ್ರೀಮಾತಾದೇವಿಯು ಅಲ್ಲಿ ಘೋರಯುದ್ಧ ಮಾಡುತ್ತಿದ್ದಳು. ಜನರೆಲ್ಲರೂ ಹಾಹಾಕಾರಮಾಡುತ್ತ ಇಲ್ಲಿ ಅಲ್ಲಿ ಓಡಾಡುತ್ತಿದ್ದರು.

೧೯. ಯುಧಿಷ್ಠಿರ! ವಾಸುದೇವನು ಅದನ್ನು ಕೇಳಿ ಚಕ್ರವನ್ನು ಹಿಡಿದು ಸತ್ಯಲೋಕದಿಂದ ಭೂಮಿಗೆ ಇಳಿದುಬಂದನು.

೨೦. ಬಳಿಕ ಧರ್ಮಾರಣ್ಯಕ್ಕೆ ಹೋಗಿ ಲೋಲಜಿಹ್ವನಮೇಲೆ ಚಕ್ರವನ್ನು ಪ್ರಯೋಗಿಸಲು ಅವನು ಮೂರ್ಛೆಗೊಂಡು ಕೆಳಗೆ ಬಿದ್ದನು.

CC-0. Jangamwadi Math Collection. Digitized by eGangotri

ತ್ರಿಶೂಲೇನ ತತೋ ಭಿನ್ನಃ ಶಕ್ತಿಭಿಃ ಕ್ರೋಧಮೂರ್ಛಿತಃ ।
ಹನ್ಯಮಾನಸ್ತದಾ ರಕ್ಷಃ ಪ್ರಾಣಾಂಸ್ತ್ಯಕ್ತ್ವಾ ದಿವಂ ಗತಃ ॥ ೨೧ ॥
ತತೋ ದೇವಾಃ ಸಗಂಧರ್ವಾ ಹರ್ಷನಿರ್ಭರಮಾನಸಾಃ ।
ತುಷ್ಟುವುಸ್ತಂ ಜಗನ್ನಾಥಂ ಸತ್ಯಲೋಕಾತ್ಸಮಾಗತಾಃ ॥ ೨೨ ॥
ಉದ್ವಸಂ ತತ್ಸಮಾಲೋಕ್ಯ ವಿಷ್ಣುರ್ವಚನಮಬ್ರವೀತ್ ।
ಕ್ವಚ ತೇ ಬ್ರಾಹ್ಮಣಾಃ ಸರ್ವೇ ಋಷೀಣಾಮಾಶ್ರಮೇ ಪುನಃ ॥ ೨೩ ॥
ತತೋ ದೇವಾಃ ಸ ಗಂಧರ್ವಾ ಇತಸ್ತತಃ ಪಲಾಯಿತಾನ್ ।
ಸಂಶೋಧ್ಯ ತರಸಾ ರಾಜನ್ಬ್ರಾಹ್ಮಣಾನಿದಮಬ್ರುವನ್ ॥ ೨೪ ॥
ಶ್ರೂಯತಾಂ ನೋ ವಚೋ ವಿಪ್ರಾ ನಿಹತೋ ರಾಕ್ಷಸಾಧಮಃ ।
ವಾಸುದೇವೇನ ದೇವೇನ ಚಕ್ರೇಣ ನಿರಕೃಂತತ ॥ ೨೫ ॥
ತಚ್ಛ್ರುತ್ವಾ ವಾಡವಾಃ ಸರ್ವೇ ಪ್ರಹರ್ಷೋತ್ಫುಲ್ಲಲೋಚನಾಃ ।
ಸಮಾಜಗ್ಮುಸ್ತದಾ ರಾಜನ್ಸ್ವಸ್ವಸ್ಥಾನೇ ಸಮಾವಿಶನ್ ॥ ೨೬ ॥
ಶ್ರೀಕಾಂತಾಯ ತದಾ ರಾಜನ್ವಾಕ್ಯಮುಕ್ತಂ ಮನೋರಮಂ ।
ಯಸ್ಮಾತ್ತ್ವಂ ಸತ್ಯಲೋಕಾಚ್ಚ ಆಗತೋಽಸಿ ಜಗತ್ಪ್ರಭುಃ ।
ಸ್ಥಾಪಿತಂ ಚ ಪುರಂ ಚೇದಂ ಹಿತಾಯ ಚ ದ್ವಿಜಾತ್ಮನಾಂ ॥ ೨೭ ॥

---

೨೧. ತರುವಾಯ ಶ್ರೀಮಾತಾದಿ ದೇವಿಯರು ತ್ರಿಶೂಲದಿಂದ ಸೀಳಿ, ಶಕ್ತ್ಯಾಯುಧದಿಂದ ಹೊಡೆದು ಘಾಸಿಗೊಳಿಸಲು ಆ ರಾಕ್ಷಸನು ಅಸುವನ್ನು ನೀಗಿ ದೇವಲೋಕಕ್ಕೆ ತೆರಳಿದನು.

೨೨. ಆ ಮೇಲೆ ಸತ್ಯಲೋಕದಿಂದ ಬಂದ ದೇವತೆಗಳೂ, ಗಂಧರ್ವರೂ ಆ ವಾಸುದೇವನನ್ನು ಸ್ತುತಿಸಿದರು.

೨೩. ಯಾರೂ ವಾಸವಾಗಿಲ್ಲದ ಆ ಧರ್ಮಾರಣ್ಯವನ್ನು ಕಂಡು ವಿಷ್ಣುವು ಋಷ್ಯಾಶ್ರಮದಲ್ಲಿ ವಾಸಮಾಡುತ್ತಿದ್ದ ಆ ಬ್ರಾಹ್ಮಣರೆಲ್ಲಿ ಎಂದು ಕೇಳಿದನು.

೨೪. ಬಳಿಕ ದೇವತೆಗಳು ಗಂಧರ್ವರೊಡನೆ ಇಲ್ಲಿ ಅಲ್ಲಿ ಓಡಿಹೋಗಿದ್ದ ಬ್ರಾಹ್ಮಣರನ್ನು ಹುಡುಕಿ ಅವರನ್ನು ಕರೆತಂದು ಇಂತೆಂದರು.

೨೫. "ಅಯ್ಯಾ ಬ್ರಾಹ್ಮಣರೇ! ನಮ್ಮ ಮಾತನ್ನು ಕೇಳಿರಿ. ವಿಷ್ಣುವು ಚಕ್ರದಿಂದ ಕತ್ತರಿಸಿ ಆ ಲೋಲಜಿಹ್ವಾಧಮನನ್ನು ಕೊಂದನು."

೨೬. ಅದನ್ನು ಕೇಳಿ ಸಕಲ ದ್ವಿಜರೂ ಹರ್ಷಚಿತ್ತರಾಗಿ ಅಲ್ಲಿಗೆ ಬಂದು ತಮ್ಮ ತಮ್ಮ ಸ್ಥಳಗಳಲ್ಲಿ ನೆಲೆಸಿದರು.

೨೭–೨೮. ಆ ಬ್ರಾಹ್ಮಣರು ಆ ಕಮಲಾಪತಿಯನ್ನು ಕುರಿತು, "ಎಲೈ ಹರಿಯೆ! ನೀನು ಸತ್ಯಲೋಕದಿಂದ ಇಲ್ಲಿಗೆ ಬಂದು ಬ್ರಾಹ್ಮಣರ ಹಿತಕ್ಕಾಗಿ ಈ ಪಟ್ಟಣವನ್ನು ಸ್ಥಾಪಿಸಿರುವೆ. ಆದುದರಿಂದ ಕೃತಯುಗದಲ್ಲಿ ಧರ್ಮಾರಣ್ಯ

CC-0. Jangamwadi Math Collection. Digitized by eGangotri

ಸತ್ಯಮಂದಿರಮಿತಿ ಖ್ಯಾತಂ ತದಾಲೋಕೇ ಭವಿಷ್ಯತಿ ।
ಕೃತೇ ಯುಗೇ ಧರ್ಮಾರಣ್ಯಂ ತ್ರೇತಾಯಾಂ ಸತ್ಯಮಂದಿರಂ ॥ ೨೮ ॥
ತಚ್ಛ್ರುತ್ವಾ ವಾಸುದೇವೇನ ತಥೇತಿ ಪ್ರತಿಪದ್ಯ ಚ ।
ತತಸ್ತೇ ವಾಡವಾಃ ಸರ್ವೇ ಪುತ್ರಪೌತ್ರಸಮನ್ವಿತಾಃ ॥ ೨೯ ॥
ಸಪತ್ನೀಕಾಃ ಸಾಽನುಚರಾ ಯಥಾಪೂರ್ವಂ ನ್ಯವಾತ್ಸಿಷುಃ ।
ತಪೋಯಜ್ಞಕ್ರಿಯಾದ್ಯೇಷು ವರ್ತಂತೇಽಧ್ಯಯನಾದಿಷು ।
ಏವಂ ತೇ ಸರ್ವಮಾಖ್ಯಾತಂ ಧರ್ಮೇ ವೈ ಸತ್ಯಮಂದಿರೇ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಲೋಲಜಿಹ್ವಾಽಸುರವಧಪೂರ್ವಕಂ ಸತ್ಯಮಂದಿರ ಸಂಸ್ಥಾಪನವರ್ಣನಂ" ನಾಮ ಏಕಾದಶೋಽಧ್ಯಾಯಃ

---

ವೆಂದು ಪ್ರಸಿದ್ಧವಾದ ಈ ಪಟ್ಟಣವು ತ್ರೇತಾಯುಗದಲ್ಲಿ ಸತ್ಯಮಂದಿರವೆಂದು ವಿಖ್ಯಾತವಾಗಲಿ" ಎಂದು ವಿಜ್ಞಾಪಿಸಿದರು.

೨೯–೩೧. ಅದನ್ನು ಕೇಳಿ ವಾಸುದೇವನು ಹಾಗೆಯೇ ಆಗಲೆಂದು ಒಪ್ಪಿದನು. ಬಳಿಕ ಬ್ರಾಹ್ಮಣರೆಲ್ಲರೂ ಪುತ್ರಪೌತ್ರರಿಂದಲೂ, ಪತ್ನಿಯರಿಂದಲೂ, ಸೇವಕರಿಂದಲೂ ಸಹಿತರಾಗಿ ತಪಸ್ಸು, ಯಜ್ಞ, ಅಧ್ಯಯನಾದಿಗಳಲ್ಲಿ ನಿರತರಾಗಿ ಅಲ್ಲಿ ಮೊದಲಿನಂತೆಯೆ ವಾಸಮಾಡತೊಡಗಿದರು. ಹೀಗೆ ನಿನಗೆ ಸತ್ಯಮಂದಿರದ ವೃತ್ತಾಂತವನ್ನೆಲ್ಲ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದ "ಲೋಲಜಿಹ್ವಾಸುರ ವಧ ಪೂರ್ವಕ ಸತ್ಯಮಂದಿರ ಸಂಸ್ಥಾಪನವರ್ಣನ" ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಗಣೇಶಪ್ರಸ್ಥಾಪನಾವರ್ಣನಂ

ವ್ಯಾಸ ಉವಾಚ:—

ತತೋ ದೇವೈರ್ನೃಪಶ್ರೇಷ್ಠ ರಕ್ಷಾರ್ಥಂ ಸತ್ಯಮಂದಿರಂ ।
ಸ್ಥಾಪಿತಂ ತತ್ತದಾದ್ಯೈವ ಸತ್ಯಾಽಭಿಖ್ಯಾಹಿ ಸಾ ಪುರೀ ॥ ೧ ॥
ಪೂರ್ವಂ ಧರ್ಮೇಶ್ವರೋ ದೇವೋ ದಕ್ಷಿಣೇನ ಗಣಾಧಿಪಃ ।
ಪಶ್ಚಿಮೇ ಸ್ಥಾಪಿತೋ ಭಾನುರುತ್ತರೇ ಚ ಸ್ವಯಂಭುವಃ ॥ ೨ ॥

ಯುಧಿಷ್ಠಿರ ಉವಾಚ:—

ಗಣೇಶಃ ಸ್ಥಾಪಿತಃ ಕೇನ ಕಸ್ಮಾತ್ಸಾಸ್ಥಾಪಿತವಾನಸೌ ।
ಕಿನ್ನಾಮಾಽಸೌ ಮಹಾಭಾಗ ತನ್ಮೇ ಕಥಯ ಮಾಚಿರಂ ॥ ೩ ॥

ವ್ಯಾಸ ಉವಾಚ:—

ಅಧುನಾಽಹಂ ಪ್ರವಕ್ಷ್ಯಾಮಿ ಗಣೇಶೋತ್ಪತ್ತಿಕಾರಣಂ ॥ ೪ ॥
ಸಮಯೇ ಮಿಲಿತಾಃ ಸರ್ವೇ ದೇವತಾ ಮಾತರಸ್ತಥಾ ।
ಧರ್ಮಾರಣ್ಯೇ ಮಹಾರಾಜ ಸ್ಥಾಪಿತಶ್ಚಂಡಿಕಾಸುತಃ ॥ ೫ ॥
ಆದೌ ದೇವೈರ್ನೃಪಶ್ರೇಷ್ಠ ಭೂಮೌ ವೈ ಸತ್ಯಯೋಷಿತಾಂ ।
ಪ್ರಾಕಾರಶ್ಚಾಽಭವತ್ತತ್ರ ಪತಾಕಾಧ್ವಜಶೋಭಿತಃ ॥ ೬ ॥

---

### ಕನ್ನಡದ ಅನುವಾದ

#### ಗಣೇಶಪ್ರಸ್ಥಾಪನಾವರ್ಣನ

೧–೨. ವ್ಯಾಸನು ಹೇಳುತ್ತಾನೆ:—ಯುಧಿಷ್ಠಿರ! ಅದುಮೊದಲ್ಗೊಂಡು ಸತ್ಯಮಂದಿರವೆಂದು ಹೆಸರನ್ನು ಪಡೆದ ಆ ಪಟ್ಟಣದ ರಕ್ಷಣೆಗಾಗಿ ಪೂರ್ವ ದಿಕ್ಕಿನಲ್ಲಿ ಧರ್ಮೇಶ್ವರನನ್ನೂ, ದಕ್ಷಿಣದಲ್ಲಿ ಗಣೇಶನನ್ನೂ, ಪಶ್ಚಿಮದಲ್ಲಿ ಸೂರ್ಯನನ್ನೂ, ಉತ್ತರದಲ್ಲಿ ಬ್ರಹ್ಮನನ್ನೂ ಸ್ಥಾಪಿಸಲಾಯಿತು.

೩. ಯುಧಿಷ್ಠಿರನು ಕೇಳುತ್ತಾನೆ:—ಗಣೇಶನನ್ನು ಯಾರು ಸ್ಥಾಪಿಸಿದರು? ಏತಕ್ಕೆ ಪ್ರತಿಷ್ಠಿಸಿದರು? ಇವನ ಹೆಸರೇನು? ವಿಳಂಬಮಾಡದೆ ನನಗೆ ತಿಳಿಸು.

೪. ವ್ಯಾಸನು ಹೇಳುತ್ತಾನೆ:—ಈಗ ನಾನು ಗಣೇಶನ ಉತ್ಪತ್ತಿಯ ಕಾರಣವನ್ನು ಹೇಳುವೆನು; ಕೇಳು.

೫. ಮಹಾರಾಜ! ಧರ್ಮಾರಣ್ಯದಲ್ಲಿ ದೇವತೆಗಳೂ ಶ್ರೀಮಾತಾದಿ ದೇವಿಯರೂ ಸೇರಿದ ಸಮಯದಲ್ಲಿ ಚಂಡಿಕೆಯ ಮಗನಾದ ಗಣೇಶನು ಅಲ್ಲಿ ಸ್ಥಾಪಿಸಲ್ಪಟ್ಟನು.

೬–೯. ನೃಪೇಂದ್ರ! ಮೊದಲು ಭೂಮಿಯಲ್ಲಿ ದೇವತೆಗಳು ಸತ್ಯದೇವಿಯರ

CC-0. Jangamwadi Math Collection. Digitized by eGangotri

ಬ್ರಾಹ್ಮಣಾಯತನೇ ತತ್ರ ಪ್ರಾಕಾರಮಂಡಲಾಂತರೇ ।
ತನ್ಮಧ್ಯೇ ರಚಿತಂ ಪೀಠಮಿಷ್ಟಕಾಭಿಃ ಸುಶೋಭಿತಂ ॥ ೭ ॥
ಪ್ರತೋಲ್ಯಶ್ಚ ಚತಸ್ರೋ ವೈ ಶುದ್ಧಾ ಏವ ಸತೋರಣಾಃ ।
ಪೂರ್ವೇ ಧರ್ಮೇಶ್ವರೋ ದೇವೋ ದಕ್ಷಿಣೇ ಗಣನಾಯಕಃ ॥ ೮ ॥
ಪಶ್ಚಿಮೇ ಸ್ಥಾಪಿತೋ ಭಾನುರುತ್ತರೇ ಚ ಸ್ವಯಂಭುವಃ ।
ಧರ್ಮೇಶ್ವರೋತ್ಪತ್ತಿವೃತ್ತಮಾಖ್ಯಾತಂ ತತ್ತವಾಽಗ್ರತಃ ॥ ೯ ॥
ಅಧುನಾಽಹಂ ಪ್ರವಕ್ಷ್ಯಾಮಿ ಗಣೇಶೋತ್ಪತ್ತಿಹೇತುಕಂ ।
ಕದಾಚಿತ್ಪಾರ್ವತೀ ಗಾತ್ರೋದ್ವರ್ತನಂ ಕೃತವತ್ಯಭೂತ್ ॥ ೧೦ ॥
ಮಲಂ ತಜ್ಜನಿತಂ ದೃಷ್ಟ್ವಾ ಹಸ್ತೇ ಧೃತ್ವಾ ಸ್ವಗಾತ್ರಜಂ ।
ಪ್ರತಿಮಾಂ ಚ ತತಃ ಕೃತ್ವಾ ಸುರೂಪಂ ಚ ದದರ್ಶ ಹ ॥ ೧೧ ॥
ಜೀವಂ ತಸ್ಯಾಂ ಚ ಸಂಚಾರ್ಯ ಉದತಿಷ್ಠತ್ತದಗ್ರತಃ ।
ಮಾತರಂ ಸ ತದೋವಾಚ ಕಿಂ ಕರೋಮಿ ತವಾಜ್ಞಯಾ ॥ ೧೨ ॥

ಪಾರ್ವತ್ಯುವಾಚ :—

ಯಾವತ್ಸ್ನಾನಂ ಕರಿಷ್ಯಾಮಿ ತಾವತ್ತ್ವಂ ದ್ವಾರಿ ತಿಷ್ಠ ಮೇ ।
ಆಯುಧಾನಿ ಚ ಸರ್ವಾಣಿ ಪರಶ್ವಾದೀನಿ ಯಾನಿ ತು ॥ ೧೩ ॥

---

ಪತಾಕೆಯಿಂದಲೂ, ಧ್ವಜದಿಂದಲೂ ಶೋಭಾಯಮಾನವಾದ ಪ್ರಾಕಾರವನ್ನು ರಚಿಸಿದರು. ಆ ಪ್ರಾಕಾರಸಮೂಹದ ಮಧ್ಯದಲ್ಲಿ ಬ್ರಾಹ್ಮಣರ ಮನೆಗಳನ್ನೂ, ಆ ಮನೆಗಳ ಮಧ್ಯದಲ್ಲಿ ಇಟ್ಟಿಗೆಗಳಿಂದ ಕಟ್ಟಿದ ರಮ್ಯವಾದ ಪೀಠವನ್ನೂ, ಶುದ್ಧವಾಗಿಯೂ, ತೋರಣಸಹಿತವಾಗಿಯೂ ಇರುವ ನಾಲ್ಕುಬೀದಿಗಳನ್ನೂ ನಿರ್ಮಿಸಿ ಪೂರ್ವದಿಕ್ಕಿನಲ್ಲಿ ಧರ್ಮೇಶ್ವರನನ್ನೂ, ದಕ್ಷಿಣದಲ್ಲಿ ಗಣೇಶನನ್ನೂ, ಪಶ್ಚಿಮದಲ್ಲಿ ಸೂರ್ಯನನ್ನೂ, ಉತ್ತರದಲ್ಲಿ ಬ್ರಹ್ಮನನ್ನೂ ಸ್ಥಾಪಿಸಿದರು. ಧರ್ಮೇಶ್ವರನ ಉತ್ಪತ್ತಿವೃತ್ತಾಂತವನ್ನು ನಿನಗೆ ಹಿಂದೆಯೇ ತಿಳಿಸಿರುತ್ತೇನೆ.

೧೦–೧೨. ಈಗ ಗಣೇಶನ ಉತ್ಪತ್ತಿಕಾರಣವನ್ನು ಹೇಳುವೆನು. ಒಂದಾನೊಂದು ದಿನ ಪಾರ್ವತಿಯು ಮೈಯನ್ನುಜ್ಜಿಕೊಳ್ಳುತ್ತಿದ್ದಳು. ಆಗ ತನ್ನ ದೇಹದಲ್ಲಿ ಹುಟ್ಟಿದ ಕೊಳೆಯನ್ನು ನೋಡಿ ಅದನ್ನು ಕೈಯಲ್ಲಿ ತೆಗೆದುಕೊಂಡು ಒಂದು ಪ್ರತಿಮೆಯನ್ನು ಮಾಡಿ ಅದರ ಆಕೃತಿಯನ್ನು ನೋಡಿ ಅದಕ್ಕೆ ಜೀವಕಳೆಯನ್ನು ತುಂಬಿದಳು. ಆಗ ಅದು ಅವಳ ಮುಂದೆ ಎದ್ದುನಿಂತು, ''ಜನನಿ! ಅಪ್ಪಣೆಮಾಡು; ನಾನು ಮಾಡಬೇಕಾದುದೇನು?'' ಎಂದಿತು.

೧೩. ಪಾರ್ವತಿಯು ಹೇಳುತ್ತಾಳೆ:—ನಾನು ಸ್ನಾನಮಾಡುವವರೆಗೆ ನೀನು ಪರಶು ಮೊದಲಾದ ಆಯುಧಗಳೊಡನೆ ಬಾಗಿಲಿನಲ್ಲಿ ನಿಂತಿರು.

CC-0. Jangamwadi Math Collection. Digitized by eGangotri

ತ್ವಯಿ ತಿಷ್ಠತಿ ಮದ್ದ್ವಾರೇ ಕೋಽಪಿ ವಿಘ್ನಂ ಕರೋತು ನ ।
ಏವಮುಕ್ತೋ ಮಹಾದೇವ್ಯಾ ದ್ವಾರೇಽತಿಷ್ಠತ್ಸಸಾಯುಧಃ ॥ ೧೪ ॥
ಏತಸ್ಮಿನ್ನಂತರೇ ದೇವೋ ಮಹಾದೇವೋ ಜಗಾಮ ಹ ।
ಅಭ್ಯಂತರೇ ಪ್ರವೇಷ್ಟುಂ ಚ ಮತಿಂ ದಧ್ರೇ ಮಹೇಶ್ವರಃ ॥ ೧೫ ॥
ದ್ವಾರಸ್ಥೇನ ಗಣೇಶೇನ ಪ್ರವೇಶೋಽದಾಯಿ ತಸ್ಯ ನ ।
ತತಃ ಕ್ರುದ್ಧೋ ಮಹಾದೇವಃ ಪರಸ್ಪರಮಯುಧ್ಯತ ॥ ೧೬ ॥
ಯುದ್ಧಂ ಕೃತ್ವಾ ತತಶ್ಚೋಭೌ ಪರಸ್ಪರವಧೈಷಿಣೌ ।
ಪರಶುಂ ಜಘ್ನಿವಾನ್ದೇವಲಲಾಟೇ ಪರಮೇ ಶುಭೇ ॥ ೧೭ ॥
ತತೋ ದೇವೋ ಮಹಾದೇವಃ ಶೂಲಮುದ್ಯಮ್ಯ ಚಾಽಹನತ್ ।
ಶಿರಶ್ಚಿಚ್ಛೇದ ಶೂಲೇನ ತದ್ಭೂಮೌ ನಿಪಪಾತ ಹ ॥ ೧೮ ॥
ತಂ ದೃಷ್ಟ್ವಾ ಪತಿತಂ ಪುತ್ರಂ ಪಾರ್ವತೀ ಪ್ರರುರೋದ ಹ ।
ಹಾಹಾಕಾರೋ ಮಹಾನಾಸೀತ್ತದಾ ತತ್ರ ನಿಪಾತಿತೇ ॥ ೧೯ ॥
ಪಾರ್ವತೀಂ ವಿಕಲಾಂ ದೃಷ್ಟ್ವಾ ದೇವದೇವೋ ಮಹೇಶ್ವರಃ ।
ಚಿಂತಯಾಮಾಸ ದೇವೋಽಪಿ ಕಿಂ ಕೃತಂ ವಾ ಮುಧಾ ಮಯಾ ॥ ೨೦ ॥
ಏತಸ್ಮಿನ್ನಂತರೇ ತತ್ರ ಗಜಾಽಸುರಮುಪಶ್ಯತ ।
ತಂ ದೃಷ್ಟ್ವಾ ಚ ಮಹಾದೈತ್ಯಂ ಸರ್ವಲೋಕೈಕಪೂಜಿತಃ ॥ ೨೧ ॥

---

೧೪–೧೫. ನೀನು ಬಾಗಿಲಿನಲ್ಲಿ ನಿಂತಿರುವಾಗ ಯಾರೂ ವಿಘ್ನವನ್ನುಂಟು ಮಾಡದಿರಲಿ" ಎಂದು ಪಾರ್ವತಿಯು ಹೇಳಲು ಗಣೇಶನು ಆಯುಧಗಳನ್ನು ಹಿಡಿದುಕೊಂಡು ಬಾಗಿಲಿನಲ್ಲಿ ನಿಂತನು. ಈ ಮಧ್ಯದಲ್ಲಿ ಮಹೇಶ್ವರನು ಅಲ್ಲಿಗೆ ಬಂದು ಒಳಗೆ ಪ್ರವೇಶಿಸಲು ಅಪೇಕ್ಷಿಸಿದನು.

೧೬. ಬಾಗಿಲಿನಲ್ಲಿರುವ ಗಣೇಶನು ಅವನಿಗೆ ಒಳಗೆ ಪ್ರವೇಶಿಸಲು ಅಡ್ಡಿ ಮಾಡಿದನು. ಆಗ ಶಿವನು ಕುಪಿತನಾದನು. ಇಬ್ಬರಿಗೂ ಕಾಳಗವು ನಡೆಯಿತು.

೧೭. ಒಬ್ಬರನ್ನೊಬ್ಬರು ವಧಿಸಲಿಚ್ಛೆಯಿಂದ ಯುದ್ಧಮಾಡುತ್ತಿರಲು ಗಣೇಶನು ತನ್ನ ಕೊಡಲಿಯಿಂದ ಶಂಕರನ ಮಂಗಳಕರವಾದ ಹಣೆಗೆ ಹೊಡೆದನು.

೧೮. ಬಳಿಕ ಮಹಾದೇವನು ಶೂಲವನ್ನೆತ್ತಿ ಬಡಿದು ಗಣೇಶನ ತಲೆಯನ್ನು ಕತ್ತರಿಸಿದನು. ಆ ತಲೆಯು ನೆಲದಲ್ಲಿ ಬಿದ್ದಿತು.

೧೯. ತನಯನಾದ ಆ ಗಣೇಶನು ಭೂಮಿಯಲ್ಲಿ ಬೀಳಲು ಅವನನ್ನು ಕಂಡು ಶರ್ವಾಣಿಯು ಹಾಹಾಕಾರಮಾಡುತ್ತ ಗೋಳಾಡಿದಳು.

೨೦. ದುಃಖಿತಳಾದ ಆ ಭವಾನಿಯನ್ನು ನೋಡಿ ಭವನು, "ನಾನು ವ್ಯರ್ಥವಾಗಿ ಎಂತಹ ಕಾರ್ಯವನ್ನು ಮಾಡಿದೆನು" ಎಂದು ಚಿಂತಿಸಿದನು.

೨೧–೨೨. ಈ ಮಧ್ಯದಲ್ಲಿ ಸಕಲಲೋಕಪೂಜಿತನಾದ ಆ ಮಹೇಶ್ವರನು

CC-0. Jangamwadi Math Collection. Digitized by eGangotri

ಜಘ್ನಿವಾಂಸ್ತಚ್ಛಿರೋ ಗೃಹ್ಯ ಪಾರ್ವತ್ಯಾ ಕೃತಮರ್ಭಕಂ ।
ಉತ್ತಸ್ಥೌ ಸಗಣಸ್ತತ್ರ ಮಹಾದೇವಸ್ಯ ಸನ್ನಿಧೌ ॥ ೨೨ ॥
ತತೋ ನಾಮ ಚಕಾರಾಽಸ್ಯ ಗಜಾನನ ಇತಿ ಸ್ಫುಟಂ ।
ಸುರಾಃ ಸರ್ವೇ ಚ ಸಂಪೃಕ್ತಾ ಹರ್ಷಿತಾ ಮುನಯಸ್ತಥಾ ॥ ೨೩ ॥
ಸ್ತುವಂತಿ ಸ್ತುತಿಭಿಃ ಶಶ್ವತ್ಕುಟುಂಬಕುಶಲಂಕರಂ ।
ವಿಕ್ರೀಣಾತಿ ಕುಟುಂಬಂ ಯೋ ಮೋದಕಾಽರ್ಥಂ ಸಮರ್ಚಕೇ ॥ ೨೪ ॥
ದಕ್ಷಿಣಸ್ಯಾಂ ಪ್ರತೋಲ್ಯಾಂ ತಮೇಕದಂತಂ ಚ ಪೀವರಂ ।
ಅರ್ಚಯಚ್ಚ ಮಹಾದೇವಂ ಸ್ವಯಂಭೂಃ ಸುರಪೂಜಿತಂ ॥ ೨೫ ॥
ಜಟಿಲಂ ವಾಮನಂ ಚೈವ ನಾಗಯಜ್ಞೋಪವೀತಕಂ ।
ತ್ರ್ಯಕ್ಷಂ ಚೈವ ಮಹಾಕಾಯಂ ಕರಧ್ವಜಕುಠಾರಕಂ ॥ ೨೬ ॥
ದಧಾನಂ ಕಮಲಂ ಹಸ್ತೇ ಸರ್ವವಿಘ್ನವಿನಾಶನಂ ।
ರಕ್ಷಣಾಯ ಚ ಲೋಕಾನಾಂ ನಗರಾದ್ದಕ್ಷಿಣಾಶ್ರಿತಂ ॥ ೨೭ ॥
ಸುಪ್ರಸನ್ನಂ ಗಣಾಽಧ್ಯಕ್ಷಂ ಸಿದ್ಧಿ ಬುದ್ಧಿನಮಸ್ಕೃತಂ ।
ಸಿಂದೂರಾಭಂ ಸುರಶ್ರೇಷ್ಠಂ ತೀವ್ರಾಂಕುಶಧರಂ ಶುಭಂ ॥ ೨೮ ॥
ಶತಪುಷ್ಪೈಃ ಶುಭ್ರೈಃ ಪುಷ್ಪೈರರ್ಚಿತಂ ಹ್ಯಮರಾಽಧಿಪಃ ।
ಪ್ರಣಮ್ಯ ಚ ಮಹಾಭಕ್ತ್ಯಾ ತುಷ್ಟುವುಸ್ತಂ ಸುರಾಸ್ತತಃ ॥ ೨೯ ॥

---

ಅಲ್ಲಿರುವ ಗಜಾಸುರನೆಂಬ ದೈತ್ಯನನ್ನು ಕಂಡು ಅವನ ತಲೆಯನ್ನು ಕತ್ತರಿಸಿ ಆ ಪಾರ್ವತಿಕುಮಾರನ ಕುತ್ತಿಗೆಯಲ್ಲಿಟ್ಟನು. ಆ ಬಾಲಕನು ಗಣಗಳೊಡನೆ ಮಹಾದೇವನ ಹತ್ತಿರದಲ್ಲಿಯೇ ಜೀವತಾಳಿ ಮೇಲಕ್ಕೆದ್ದನು.

೨೩–೨೪. ಬಳಿಕ ಅವನಿಗೆ ಶಿವನು ಗಜಾನನ ಎಂದು ನಾಮಕರಣ ಮಾಡಿದನು. ದೇವತೆಗಳೂ, ಮುನಿಗಳೂ ಸೇರಿ ಹರ್ಷಗೊಂಡು ಮೋದಕದಿಂದ ಪೂಜಿಸುವ ಭಕ್ತನಿಗೆ ಕುಟುಂಬವನ್ನಿತ್ತು ಯಾವಾಗಲೂ ಕ್ಷೇಮವನ್ನೀಯುವ ಆ ಗಣೇಶನನ್ನು ಸ್ತುತಿಸಿದರು.

೨೫. ದಕ್ಷಿಣವೀಥಿಯಲ್ಲಿ ಸುರಪೂಜಿತನಾಗಿಯೂ, ಪುಷ್ಟನಾಗಿಯೂ, ಇರುವ ಆ ಗಣೇಶನನ್ನು ಬ್ರಹ್ಮನೂ ಅರ್ಚಿಸಿದನು.

೨೬–೨೯. ಬಳಿಕ ದೇವೇಂದ್ರನು ದೇವತೆಗಳೊಡನೆ ಜಟಾಧಾರಿಯೂ. ಕುಳ್ಳನೂ, ಸರ್ಪಯಜ್ಞೋಪವೀತವುಳ್ಳವನೂ, ಮುಕ್ಕಣ್ಣನೂ, ಮಹಾಕಾಯನೂ, ಧ್ವಜ ಮತ್ತು ಕೊಡಲಿಗಳನ್ನು ಕೈಯಲ್ಲಿ ಹಿಡಿದವನೂ, ಕಮಲಪಾಣಿಯೂ, ಸಕಲವಿಘ್ನನಾಶಕನೂ, ಪ್ರಪಂಚದ ರಕ್ಷಣೆಗಾಗಿ ಪಟ್ಟಣದ ದಕ್ಷಿಣ ದಿಕ್ಕಿನಲ್ಲಿರುವವನೂ, ಪ್ರಸನ್ನನೂ, ಸಿದ್ಧಿಬುದ್ಧಿಗಳಿಂದ ನಮಸ್ಕಾರ ಮಾಡಲ್ಪಟ್ಟವನೂ, ಸಿಂದೂರದಂತೆ ಕಾಂತಿಯುಳ್ಳವನೂ, ಸುರೋತ್ತಮನೂ, ತೀಕ್ಷ್ಣವಾದ

CC-0. Jangamwadi Math Collection. Digitized by eGangotri

ದೇವಾ ಊಚುಃ:—
ನಮಸ್ತೇಽಸ್ತು ಸುರೇಶಾಯ ಗಣಾನಾಂ ಪತಯೇ ನಮಃ ।
ಗಜಾನನ ನಮಸ್ತುಭ್ಯಂ ಮಹಾದೇವಾಧಿದೈವತ ॥ ೩೦ ॥
ಭಕ್ತಿಪ್ರಿಯಾಯ ದೇವಾಯ ಗಣಾಧ್ಯಕ್ಷ ನಮೋಽಸ್ತು ತೇ ।
ಇತ್ಯೇತೈಶ್ಚ ಶುಭೈಃ ಸ್ತೋತ್ರೈಃ ಸ್ತೂಯಮಾನೋ ಗಣಾಧಿಪಃ ।
ಸುಪ್ರೀತಶ್ಚ ಗಣಾಧ್ಯಕ್ಷಸ್ತದಾಽಸೌ ವಾಕ್ಯಮಬ್ರವೀತ್ ॥ ೩೧ ॥
ಗಣಾಧ್ಯಕ್ಷ ಉವಾಚ:—
ತುಷ್ಟೋಽಹಂ ವೋ ಸುರಾ ಬ್ರೂತ ವಾಂಛಿತಂ ಚ ದದಾಮಿ ವಃ ॥ ೩೨ ॥
ದೇವಾ ಊಚುಃ:—
ತ್ವಮತ್ರಸ್ಥೋ ಮಹಾಭಾಗ ಕುರು ಕಾರ್ಯಂ ಚ ನಃ ಪ್ರಭೋ ।
ಧರ್ಮಾರಣ್ಯೇ ಚ ವಿಪ್ರಾಣಾಂ ವಣಿಗ್ಜನನಿವಾಸಿನಾಂ ॥ ೩೩ ॥
ಬ್ರಹ್ಮಚರ್ಯಾದಿ ಯುಕ್ತಾನಾಂ ಧಾರ್ಮಿಕಾಣಾಂ ಗಣೇಶ್ವರ ।
ವರ್ಣಾಶ್ರಮೇತರಾಣಾಂ ಚ ರಕ್ಷಿತಾ ಭವ ಸರ್ವದಾ ॥ ೩೪ ॥
ತ್ವತ್ಪ್ರಸಾದಾನ್ಮಹಾಭಾಗ ಧನಸೌಖ್ಯಯುತಾ ದ್ವಿಜಾಃ ।
ಭವಂತು ಸರ್ವೇ ಸತತಂ ವಣಿಜಶ್ಚ ಮಹಾಬಲಾಃ ॥ ೩೫ ॥

---

ಅಂಕುಶಧರನೂ, ಮಂಗಳಕರನೂ ಆಗಿರುವ ಗಜಾನನನನ್ನು ತಾವರೆ ಮೊದಲಾದ ಶುಭ ಪುಷ್ಪಗಳಿಂದ ಪೂಜಿಸಿ ಭಕ್ತಿಯಿಂದ ವಂದಿಸಿ ಸ್ತೋತ್ರಮಾಡಿದರು.

೩೦. ದೇವತೆಗಳು ಸ್ತುತಿಸುತ್ತಾರೆ:— ಸುರೇಶ್ವರನೂ, ಗಣಗಳೊಡೆಯನೂ, ಮಹಾದೇವನಿಗೆ ದೇವತೆಯೂ ಆಗಿರುವ ಓ ಗಣೇಶ! ನಿನಗೆ ನಮಸ್ಕಾರವು.

೩೧. ಭಕ್ತಿಗೆ ಮೆಚ್ಚುವ ಓ ಗಣಾಧ್ಯಕ್ಷ! ನಿನಗೆ ವಂದನೆಯು" ಎಂದು ಸ್ತೋತ್ರಮಾಡಲು ಗಣಪತಿಯು ಸಂತುಷ್ಟನಾಗಿ ಇಂತೆಂದನು.

೩೨. ಗಣಪತಿಯು ಹೇಳುತ್ತಾನೆ:—ಅಯ್ಯಾ ದೇವತೆಗಳೇ! ಸಂತುಷ್ಟನಾಗಿದ್ದೇನೆ. ನಿಮ್ಮ ಈಪ್ಸಿತವೇನು? ಹೇಳಿರಿ. ಕೊಡುವೆನು.

೩೩–೩೪. ದೇವತೆಗಳು ಹೇಳತ್ತಾರೆ:—ಗಣೇಶ್ವರ! ನೀನಿಲ್ಲಿಯೆ ನೆಲೆಸಿ ನಮ್ಮ ಕಾರ್ಯವನ್ನು ಆಗಮಾಡುತ್ತಿರು. ಧರ್ಮಾರಣ್ಯದಲ್ಲಿ ವಾಸಿಸುವ ಬ್ರಹ್ಮಚರ್ಯಾದಿಗಳಿಂದ ಕೂಡಿದ ಧಾರ್ಮಿಕರಾದ ಬ್ರಾಹ್ಮಣರನ್ನೂ, ವೈಶ್ಯರನ್ನೂ, ವರ್ಣಾಶ್ರಮಗಳಿಲ್ಲದ ಇತರ ಜನರನ್ನೂ ಯಾವಾಗಲೂ ಕಾಪಾಡು.

೩೫. ಮಹಾಭಾಗ್ಯಶಾಲಿಯಾದ ಎಲೈ ಗಣೇಶನೇ! ನಿನ್ನ ಅನುಗ್ರಹದಿಂದ ಬ್ರಾಹ್ಮಣರು ಧನ ಮತ್ತು ಸೌಖ್ಯವುಳ್ಳವರೂ, ವೈಶ್ಯರು ಬಲಿಷ್ಠರೂ ಆಗಿರಲಿ.

CC-0. Jangamwadi Math Collection. Digitized by eGangotri

ರಕ್ಷಿತವ್ಯಾಸ್ತ್ವಯಾ ದೇವ ಯಾವಚ್ಚಂದ್ರಾರ್ಕಮೇದಿನೀ ।
ಏವಮಸ್ತ್ವಿತಿ ಸೋಽವಾದೀದ್ಗಣನಾಥೋ ಮಹೇಶ್ವರಃ ॥ ೩೭ ॥
ದೇವಾಶ್ಚ ಹರ್ಷಮಾಪನ್ನಾಃ ಪೂಜಯಂತಿ ಗಣಾಧಿಪಂ ।
ತತೋ ದೇವಾ ಮುದಾಯುಕ್ತಾಃ ಪುಷ್ಪಧೂಪಾದಿತರ್ಪಣೈಃ ॥ ೩೮ ॥
ಯೇ ಚಾನ್ಯೇ ಮನುಜಾ ಲೋಕೇ ನಿರ್ವಿಘ್ನಾರ್ಥಂ ಚ ಪೂಜಯನ್ ॥
ವಿವಾಹೋತ್ಸವಯಜ್ಞೇಷು ಪೂರ್ವಮಾರಾಧಿತೋ ಭವೇತ್ ।
ಧರ್ಮಾರಣ್ಯೋದ್ಭವಾನಾಂ ಚ ಪ್ರಸನ್ನಃ ಸ ಹಿ ಸರ್ವದಾ ॥ ೩೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಗಣೇಶ ಪ್ರಸ್ಥಾಪನಾವರ್ಣನಂ" ನಾಮ ದ್ವಾದಶೋಽಧ್ಯಾಯಃ

---

೩೭. ನೀನು ಇವರನ್ನೆಲ್ಲ ಚಂದ್ರ ಸೂರ್ಯ ಭೂಮಿಗಳಿರುವವರೆಗೂ ಕಾಪಾಡುತ್ತಿರು" ಎಂದರು. ಗಣನಾಥನು ಹಾಗೆಯೇ ಆಗಲೆಂದು ಹೇಳಿದನು.

೩೮–೩೯. ದೇವತೆಗಳೂ ಸಂತೋಷಗೊಂಡವರಾಗಿ ಹೂವು, ಧೂಪ, ಅರ್ಘ್ಯಾದಿಗಳಿಂದ ಗಣೇಶನನ್ನು ಪೂಜಿಸುತ್ತಾರೆ. ಇತರ ಮನುಷ್ಯರೂ ಗಣಾಧಿಪನನ್ನು ವಿವಾಹದಲ್ಲಿಯೂ, ಯಜ್ಞಗಳಲ್ಲಿಯೂ ನಿರ್ವಿಘ್ನತೆಗೋಸ್ಕರ ಪೂಜಿಸುತ್ತಾರೆ. ಧರ್ಮಾರಣ್ಯ ನಿವಾಸಿಗಳಿಗೆ ಆ ವಿಘ್ನೇಶ್ವರನು ಯಾವಾಗಲೂ ಪ್ರಸನ್ನನಾಗಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಗಣೇಶ ಪ್ರಸ್ಥಾಪನಾವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಬಕುಲಾರ್ಕಮಾಹಾತ್ಮ್ಯಕಥನಂ

ವ್ಯಾಸ ಉವಾಚ :—

ಶಂಭೋಶ್ಚ ಪಶ್ಚಿಮೇ ಭಾಗೇ ಸ್ಥಾಪಿತಃ ಕಶ್ಯಪಾತ್ಮಜಃ ।
ತತ್ರಾಽಸ್ತಿ ತನ್ಮಹಾಭಾಗ ರವಿಕ್ಷೇತ್ರಂ ತದುಚ್ಯತೇ ॥ ೧ ॥
ತತ್ರೋತ್ಪನ್ನೌ ಮಹಾದಿವ್ಯೌ ರೂಪಯೌವನಸಂಯುತೌ ।
ನಾಸತ್ಯಾವಶ್ವಿನೌ ದೇವೌ ವಿಖ್ಯಾತೌ ಗದನಾಶನೌ ॥ ೨ ॥

ಯುಧಿಷ್ಠಿರ ಉವಾಚ :—

ಪಿತಾಮಹ ಮಹಾಭಾಗ ಕಥಯಸ್ವ ಪ್ರಸಾದತಃ ।
ಉತ್ಪತ್ತಿರಶ್ವಿನೋಶ್ಚೈವ ಮೃತ್ಯುಲೋಕೇ ಚ ತತ್ಕಥಂ ॥ ೩ ॥
ರವಿಲೋಕಾತ್ಕಥಂ ಸೂರ್ಯೋ ಧರಾಯಾಮವತಾರಿತಃ ।
ಏತತ್ಸರ್ವಂ ಪ್ರಯತ್ನೇನ ಕಥಯಸ್ವ ಪ್ರಸಾದತಃ ॥ ೪ ॥
ಯಚ್ಛ್ರುತ್ವಾ ಹಿ ಮಹಾಭಾಗ ಸರ್ವಪಾಪೈಃ ಪ್ರಮುಚ್ಯತೇ ॥ ೫ ॥

ವ್ಯಾಸ ಉವಾಚ :—

ಸಾಧು ಪೃಷ್ಟಂ ತ್ವಯಾ ಭೂಪ ಊರ್ಧ್ವಲೋಕಕಥಾನಕಂ ।
ಯಚ್ಛ್ರುತ್ವಾ ನರಶಾರ್ದೂಲ ಸರ್ವರೋಗಾತ್ಪ್ರಮುಚ್ಯತೇ ।
ವಿಶ್ವಕರ್ಮಸುತಾ ಸಂಜ್ಞಾ ಅಂಶುಮದ್ರವಿಣಾ ವೃತಾ ॥ ೬ ॥

---

## ಕನ್ನಡದ ಅನುವಾದ

### ಬಹುಲಾರ್ಕ ಮಾಹಾತ್ಮ್ಯ ಕಥನ

೧–೨. ವ್ಯಾಸರು ಹೇಳುತ್ತಾರೆ:— ಮಹೇಶ್ವರನ ಪಶ್ಚಿಮದಿಗ್ಭಾಗದಲ್ಲಿ ಕಶ್ಯಪಸುತನಾದ ಸೂರ್ಯನನ್ನು ಸ್ಥಾಪಿಸಲಾಯಿತು. ಆ ಸ್ಥಳವನ್ನು ರವಿಕ್ಷೇತ್ರವೆನ್ನುವರು. ಅಲ್ಲಿ ರೂಪಯೌವನವಂತರೂ, ಪ್ರಸಿದ್ಧರೂ, ರೋಗನಾಶಕರೂ ಆಗಿರುವ ಅಶ್ವಿನೀ ದೇವತೆಗಳು ಸ್ಥಾಪಿತರಾಗಿ ಪ್ರಸಿದ್ಧರಾಗಿರುವರು.

೩–೫. ಯುಧಿಷ್ಠಿರನು ಕೇಳುತ್ತಾನೆ:—ಪಿತಾಮಹ! ಧರ್ಮಾರಣ್ಯದಲ್ಲಿ ಅಶ್ವಿನೀದೇವತೆಗಳ ಉತ್ಪತ್ತಿಯು ಹೇಗಾಯಿತೆಂಬುದನ್ನು ಅನುಗ್ರಹಮಾಡಿ ಹೇಳು. ಸೂರ್ಯಲೋಕದಿಂದ ಸೂರ್ಯನು ಭೂಮಿಗೆ ಇಳಿದುಬಂದುದು ಹೇಗೆ? ಇದನ್ನೂ ತಿಳಿಸು. ಸಕಲ ಜನರು ಇದನ್ನು ಕೇಳಿ ಪಾಪಮುಕ್ತರಾಗುವರು.

೬–೭. ವ್ಯಾಸನು ಹೇಳುತ್ತಾನೆ:—ರಾಜೇಂದ್ರ! ಸಕಲ ರೋಗಗಳನ್ನೂ ಪರಿಹರಿಸುವ ಊರ್ಧ್ವಲೋಕದ ಕಥೆಯನ್ನು ಕೇಳಿದೆ. ವಿಶ್ವಕರ್ಮನ ಮಗಳಾದ ಸಂಜ್ಞೆಯನ್ನು ಸೂರ್ಯನು ವಿವಾಹ ಮಾಡಿಕೊಂಡನು. ಸಂಜ್ಞೆಯು ಸೂರ್ಯ

CC-0. Jangamwadi Math Collection. Digitized by eGangotri

ಸೂರ್ಯಂ ದೃಷ್ಟ್ವಾ ಸದಾ ಸಂಜ್ಞಾ ಸ್ವಾಽಕ್ಷಿಸಂಯಮನಂ ವ್ಯಧಾತ್ ।
ಯತಸ್ತತಃ ಸರೋಷೋಽರ್ಕಃ ಸಂಜ್ಞಾಂ ವಚನಮಬ್ರವೀತ್ ॥ ೭ ॥

ಸೂರ್ಯ ಉವಾಚ :—

ಮಯಿ ದೃಷ್ಟೇ ಸದಾ ಯಸ್ಮಾತ್ಕುರುಷೇ ಸ್ವಾಽಕ್ಷಿಸಂಯಮಮ್ ।
ತಸ್ಮಾಜ್ಜನಿಷ್ಯತೇ ಮೂಢೇ ಪ್ರಜಾಸಂಯಮನೋ ಯಮಃ ॥ ೮ ॥
ತತಃ ಸಾ ಚಪಲಂ ದೇವೀ ದದರ್ಶ ಚ ಭಯಾಕುಲಂ ।
ವಿಲೋಲಿತದೃಶಂ ದೃಷ್ಟ್ವಾ ಪುನರಾಹ ಚ ತಾಂ ರವಿಃ ॥ ೯ ॥
ಯಸ್ಮಾದ್ವಿಲೋಲಿತಾದೃಷ್ಟಿರ್ಮಯಿ ದೃಷ್ಟೇ ತ್ವಯಾಽಧುನಾ ।
ತಸ್ಮಾದ್ವಿಲೋಲಿತಾಂ ಸಂಜ್ಞೇ ತನಯಾಂ ಪ್ರಸವಿಷ್ಯಸಿ ॥ ೧೦ ॥

ವ್ಯಾಸ ಉವಾಚ :—

ತತಸ್ತಸ್ಯಾಸ್ತು ಸಂಜಜ್ಞೇ ಭರ್ತೃಶಾಪೇನ ತೇನ ವೈ ।
ಯಮಶ್ಚ ಯಮುನಾ ಚೇಯಂ ವಿಖ್ಯಾತಾ ಸುಮಹಾನದೀ ॥ ೧೧ ॥
ಸಾ ಚ ಸಂಜ್ಞಾ ರವೇಸ್ತೇಜೋ ಮಹದ್ದುಃಖೇನ ಭಾಮಿನೀ ।
ಅಸಹಂತೀವ ಸಾ ಚಿತ್ತೇ ಚಿಂತಯಾಮಾಸ ವೈ ತದಾ ॥ ೧೨ ॥
ಕಿಂಕರೋಮಿ ಕ್ವ ಗಚ್ಛಾಮಿ ಕ್ವ ಗತಾಯಾಶ್ಚ ನಿರ್ವೃತಿಃ ।
ಭವೇನ್ಮಮ ಕಥಂ ಭರ್ತುಃ ಕೋಪಮರ್ಕಸ್ಯ ನಶ್ಯತಿ ॥ ೧೩ ॥

---

ನನ್ನು ಕಂಡು ಕಣ್ಣುಗಳನ್ನು ಮುಚ್ಚಿಕೊಂಡಳು. ಆದರಿಂದ ಕೋಪಗೊಂಡ ರವಿಯು ಮಡದಿಯಾದ ಆ ಸಂಜ್ಞೆಯನ್ನು ಕುರಿತು ಹೀಗೆಂದನು.

೮–೯. ಸೂರ್ಯನು ಹೇಳುತ್ತಾನೆ:—"ಮೂಢಳೆ! ನನ್ನನ್ನು ನೋಡಿದ ಕೂಡಲೆ ನೀನು ಕಣ್ಣನ್ನು ಮುಚ್ಚಿಕೊಂಡುದರಿಂದ ನಿನ್ನಲ್ಲಿ ಪ್ರಜೆಗಳನ್ನು ದಂಡಿಸುವ ಯಮನು ಜನಿಸುವನು." ಬಳಿಕ ಅವಳು ಚಂಚಲನೇತ್ರಳಾಗಿ ಭಯಗೊಂಡು ಸೂರ್ಯನನ್ನು ನೆಟ್ಟನೆ ನೋಡಿದಳು. ಹಾಗೆ ಚಂಚಲದೃಷ್ಟಿ ಬೀರಿದ ಅವಳನ್ನು ಕಂಡು ಸೂರ್ಯನು ಮತ್ತೆ ಹೀಗೆಂದನು.

೧೦. "ಸಂಜ್ಞೆ! ನಾನು ನೋಡಿದಕೂಡಲೆ ನೀನು ಚಂಚಲದೃಷ್ಟಿಯುಳ್ಳವಳಾದೆಯಾದುದರಿಂದ ಚಂಚಲಳಾದ ಓರ್ವ ಮಗಳನ್ನು ಪಡೆಯುವೆ.

೧೧. ವ್ಯಾಸನು ಹೇಳುತ್ತಾನೆ:—ಬಳಿಕ ಗಂಡನ ಶಾಪದಿಂದ ಸಂಜ್ಞೆಯಲ್ಲಿ ಯಮನೂ, ಪ್ರಸಿದ್ಧಳಾದ ಯಮುನೆ (ನದಿ)ಯೂ ಹುಟ್ಟಿದರು.

೧೨. ತರುವಾಯ ಆ ಸಂಜ್ಞೆಯು ಸೂರ್ಯನ ತೇಜಸ್ಸನ್ನು ಸಹಿಸದವಳಾಗಿ ಅತಿ ದುಃಖದಿಂದ ಹೀಗೆ ಆಲೋಚಿಸಿದಳು.

೧೩. "ಏನು ಮಾಡಲಿ? ಎಲ್ಲಿಗೆ ಹೋಗಲಿ? ಎಲ್ಲಿಗೆ ಹೋದರೆ ಸೌಖ್ಯವಾದೀತು? ಪತಿಯ ಕೋಪವು ಹೇಗೆ ಕಳೆದೀತು?"

CC-0. Jangamwadi Math Collection. Digitized by eGangotri

ಇತಿ ಸಂಚಿಂತ್ಯ ಬಹುಧಾ ಪ್ರಜಾಪತಿಸುತಾ ತದಾ ।
ಸಾಧು ಮೇನೇ ಮಹಾಭಾಗಾ ಪಿತೃಸಂಶ್ರಯಮಾಪ ಸಾ ॥ ೧೪ ॥
ತತಃ ಪಿತೃಗೃಹಂ ಗಂತುಂ ಕೃತಬುದ್ಧಿರ್ಯಶಸ್ವಿನೀ ।
ಛಾಯಾಮಾಹೂಯಾತ್ಮನಸ್ತು ಸಾ ದೇವೀ ದಯಿತಾ ರವೇಃ ॥ ೧೫ ॥
ತಾಂ ಚೋವಾಚ ತ್ವಯಾ ಸ್ಥೇಯಮತ್ರ ಭಾನೋರ್ಯಥಾ ಮಯಾ ।
ತಥಾ ಸಮ್ಯಗಪತ್ಯೇಷು ವರ್ತಿತವ್ಯಂ ತಥಾ ರವೌ ॥ ೧೬ ॥
ದುಷ್ಟಮಪಿ ನ ವಾಚ್ಯಂ ತೇ ಯಥಾ ಬಹುಮತಂ ಮಮ ।
ಸೈವಾಽಸ್ಮಿ ಸಂಜ್ಞಾಽಹಮಿತಿ ವಾಚ್ಯಮೇವಂ ತ್ವಯಾಽನಘೇ ॥ ೧೭ ॥

ಛಾಯಾಸಂಜ್ಞೋವಾಚ :—

ಆಕೇಶಗ್ರಹಣಾಚ್ಚಾಽಹಮಾಶಾಪಾಚ್ಚ ವಚಸ್ತಥಾ ।
ಕರಿಷ್ಯೇ ಕಥಯಿಷ್ಯಾಮಿ ಯಾವತ್ಕೇಶಾಽಪಕರ್ಷಣಾತ್ ॥ ೧೮ ॥
ಇತ್ಯುಕ್ತ್ವಾ ಸಾ ತದಾ ದೇವೀ ಜಗಾಮ ಭವನಂ ಪಿತುಃ ।
ದದರ್ಶ ತತ್ರ ತ್ವಷ್ಟಾರಂ ತಪಸಾ ಧೂತಕಿಲ್ಬಿಷಂ ॥ ೧೯ ॥
ಬಹುಮಾನಾಚ್ಚ ತೇನಾಽಪಿ ಪೂಜಿತಾ ವಿಶ್ವಕರ್ಮಣಾ ।
ತಸ್ಥೌ ಪಿತೃಗೃಹೇ ಸಾತು ಕಿಂಚಿತ್ಕಾಲಮನಿಂದಿತಾ ॥ ೨೦ ॥

---

೧೪. ಹೀಗೆ ವಿಶ್ವಕರ್ಮನ ಮಗಳಾದ ಆ ಸಂಜ್ಞೆಯು ಬಹಳವಾಗಿ ಚಿಂತಿಸಿ ತಂದೆಯ ಬಳಿಯನ್ನು ಸೇರುವುದೇ ಒಳ್ಳೆಯದೆಂದು ತಿಳಿದಳು.

೧೫–೧೭. ಹೀಗೆ ತಂದೆಯ ಮನೆಗೆ ಹೋಗಲು ನಿಶ್ಚಯಿಸಿದ ರವಿಪತ್ನಿಯಾದ ಸಂಜ್ಞೆಯು ತನ್ನ ಛಾಯೆಯನ್ನು ಕರೆದು "ನೀನು ನನ್ನ ಹಾಗೆಯೇ ಸೂರ್ಯನಲ್ಲಿ ವರ್ತಿಸಬೇಕು. ನನ್ನ ಮಕ್ಕಳನ್ನು ನನ್ನಂತೆಯೇ ನೋಡಿಕೊಳ್ಳಬೇಕು. ನನ್ನ ಅಭಿಮತದಂತಿದ್ದು ಪತಿಯವಿಷಯದಲ್ಲಿ ಕೆಡುನುಡಿಯಬಾರದು. ಆ ಸಂಜ್ಞೆಯೇ ನಾನೆಂದು ನೀನು ಹೇಳುತ್ತಿರಬೇಕು."

೧೮. ಛಾಯಾಸಂಜ್ಞೆಯು ಹೇಳಿದಳು :—ಪತಿಯು ಕೂದಲನ್ನು ಹಿಡಿದು ಎಳೆಯುವವರೆಗೂ, ಶಾಪವನ್ನೀಯುವವರೆಗೂ ನೀನು ಹೇಳಿದಂತೆ ಮಾಡುವೆನು."

೧೯. ಛಾಯೆಯು ಹೀಗೆ ಹೇಳಲು ಸಂಜ್ಞಾದೇವಿಯು ತವರುಮನೆಯನ್ನು ಸೇರಿ ಅಲ್ಲಿ ತಪಸ್ಸಿನಿಂದ ಕಳೆದುಹೋದ ಪಾಪವುಳ್ಳ ತನ್ನ ತಂದೆಯಾದ ವಿಶ್ವಕರ್ಮನನ್ನು ಕಂಡಳು.

೨೦. ತಂದೆಯು ಬಹುಮಾನದಿಂದ ಅವಳನ್ನು ಕಾಣಲು ಅಲ್ಲಿಯೇ ಅವಳು ಕೆಲವುಕಾಲ ವಾಸವಾಗಿದ್ದಳು.

CC-0. Jangamwadi Math Collection. Digitized by eGangotri

ತತಃ ಪ್ರಾಹ ಸ ಧರ್ಮಜ್ಞಃ ಪಿತಾ ನಾಽತಿಚಿರೋಷಿತಾಂ ।
ವಿಶ್ವಕರ್ಮಾ ಸುತಾಂ ಪ್ರೇಮ್ಣಾ ಬಹುಮಾನಪುರಸ್ಸರಂ ॥ ೨೧ ॥
ತ್ವಾಂ ತು ಮೇ ಪಶ್ಯತೋ ವತ್ಸೇ ದಿನಾನಿ ಸುಬಹೂನ್ಯಪಿ ।
ಮುಹೂರ್ತೇನ ಸಮಾನಿನ್ಯುಃ ಕಿಂ ತು ಧರ್ಮೋ ವಿಲುಪ್ಯತೇ ॥ ೨೨ ॥
ಬಾಂಧವೇಷು ಚಿರಂ ವಾಸೋ ನ ನಾರೀಣಾಂ ಯಶಸ್ಕರಃ ।
ಮನೋರಥೋ ಬಾಂಧವಾನಾಂ ಭಾರ್ಯಾ ಪಿತೃಗೃಹೇ ಸ್ಥಿತಾ ॥ ೨೩ ॥
ಸಾ ತ್ವಂ ತ್ರೈಲೋಕ್ಯನಾಥೇನ ಭರ್ತ್ರಾ ಸೂರ್ಯೇಣ ಸಂಗತಾ ।
ಪಿತುರ್ಗೃಹೇ ಚಿರಂ ಕಾಲಂ ವಸ್ತುಂ ನಾಽರ್ಹಸಿ ಪುತ್ರಿಕೇ ॥ ೨೪ ॥
ಅತೋ ಭರ್ತೃಗೃಹಂ ಗಚ್ಛ ದೃಷ್ಟೋಽಹಂ ಪೂಜಿತಾ ಚ ಮೇ ।
ಪುನರಾಗಮನಂ ಕಾರ್ಯಂ ದರ್ಶನಾಯ ಶುಭೇಕ್ಷಣೇ ॥ ೨೫ ॥

ವ್ಯಾಸ ಉವಾಚ :—

ಇತ್ಯುಕ್ತಾ ಸಾ ತದಾ ಕ್ಷಿಪ್ರಂ ತಥೇತ್ಯುಕ್ತ್ವಾ ಚ ವೈ ಮುನೇ ।
ಪೂಜಯಿತ್ವಾ ತು ಪಿತರಂ ಸಾ ಜಗಾಮೋತ್ತರಾನ್ಕುರೂನ್ ॥ ೨೬ ॥
ಸೂರ್ಯತಾಪಮನಿಚ್ಛಂತೀ ತೇಜಸಸ್ತಸ್ಯ ಬಿಭ್ಯತೀ ।
ತಪಶ್ಚಚಾರ ತತ್ರಾಽಪಿ ವಡವಾರೂಪಧಾರಿಣೀ ॥ ೨೭ ॥

---

೨೧. ಬಳಿಕ ವಿಶ್ವಕರ್ಮನು ಕೆಲವು ಕಾಲದಿಂದ ತನ್ನ ಮನೆಯಲ್ಲಿ ವಾಸ ಮಾಡುತ್ತಿದ್ದ ಮಗಳನ್ನು ಕುರಿತು ಗೌರವದಿಂದ ಹೀಗೆಂದನು.

೨೨. "ಮಗೂ! ನಿನ್ನನ್ನು ನೋಡುತ್ತಿರುವ ನನಗೆ ಅನೇಕ ದಿನಗಳೂ ಒಂದು ಮುಹೂರ್ತಕ್ಕೆ ಸಮಾನವಾಗಿವೆ. ಆದರೆ ಧರ್ಮವು ಕೆಡುವುದು.

೨೩. ಮದುವೆಯಾದ ಮಗಳು ತಂದೆಯ ಮನೆಯಲ್ಲಿರಬೇಕೆಂದು ಬಂಧುಗಳು ಆಶಿಪಡುವರು. ಆದರೆ ಹೆಂಗಸರಿಗೆ ತಂದೆಯ ಮನೆಯಲ್ಲಿ ವಾಸಿಸುವುದು ಯಶಸ್ಕರವಲ್ಲ.

೨೪-೨೫. ಮಗು! ನಿನ್ನನ್ನು ಮೂರು ಲೋಕಗಳಿಗೂ ಒಡೆಯನಾದ ಸೂರ್ಯನು ವಿವಾಹಮಾಡಿಕೊಂಡಿರುವನು. ಅಂತಹನ ಮಡದಿಯಾದ ನೀನು ತಂದೆಯ ಮನೆಯಲ್ಲಿ ವಾಸಮಾಡಲರ್ಹಳಲ್ಲ. ಆದುದರಿಂದ ಪತಿಗೃಹಕ್ಕೆ ತೆರಳು. ನಿನ್ನನ್ನು ನೋಡಿದ್ದೂ ಗೌರವಿಸಿದ್ದೂ ಆಯಿತು. ನನ್ನನ್ನು ನೋಡುವುದಕ್ಕೆ ಆಗಿಂದಾಗ್ಗೆ ಇಲ್ಲಿಗೆ ಬರುತ್ತಿರಬಹುದು.

೨೬. ವ್ಯಾಸನು ಹೇಳುತ್ತಾನೆ:—ತಂದೆಯು ಹೀಗೆ ಹೇಳಿದ ಕೂಡಲೆ ಆ ಸಂಜ್ಞಾದೇವಿಯು ಹಾಗೆಯೇ ಆಗಲೆಂದು ತಂದೆಯನ್ನು ಪೂಜಿಸಿ ಉತ್ತರ ಕುರುದೇಶಕ್ಕೆ ಹೋದಳು.

೨೭. ಸೂರ್ಯನ ತಾಪದಿಂದ ಜುಗುಪ್ಸೆಗೊಂಡು ಅವನ ತೇಜಸ್ಸಿಗೆ

CC-0. Jangamwadi Math Collection. Digitized by eGangotri

ಸಂಜ್ಞಾಮಿತ್ಯೇವ ಮನ್ವಾನೋ ದ್ವಿತೀಯಾಯಾಂ ದಿವಸ್ಪತಿಃ ।
ಜನಯಾಮಾಸ ತನಯೌ ಕನ್ಯಾಂ ಚೈಕಾಂ ಮನೋರಮಾಂ ॥ ೨೮ ॥
ಛಾಯಾ ಸ್ವತನಯೇಷ್ವೇವ ಯಥಾ ಪ್ರೇಮ್ಣಾಽಭ್ಯವರ್ತತ ।
ತಥಾ ನ ಸಂಜ್ಞಾಕನ್ಯಾಯಾಂ ಪುತ್ರಯೋಶ್ಚಾಽಪ್ಯವರ್ತತ ।
ಲಾಲನಾಸು ಚ ಭೋಜ್ಯೇಷು ವಿಶೇಷಮನುವಾಸರಂ ॥ ೨೯ ॥
ಮನುಸ್ತತ್ಕ್ಷಾಂತವಾನಸ್ಯಾ ಯಮಸ್ತಸ್ಯಾ ನಚಾಽಕ್ಷಮತ್ ।
ತಾಡನಾಯ ತತಃ ಕೋಪಾತ್ ಪಾದಸ್ತೇನ ಸಮುದ್ಯತಃ ।
ತಸ್ಯಾಃ ಪುನಃ ಕ್ಷಾಂತಮನಾ ನ ತು ದೇಹೇ ನ್ಯಪಾತಯತ್ ॥ ೩೦ ॥
ತತಃ ಶಶಾಪ ತಂ ಕೋಪಾತ್ ಛಾಯಾಸಂಜ್ಞಾ ಯಮಂ ನೃಪ ।
ಕಿಂಚಿತ್ಪ್ರಸ್ಫುರಮಾಣೋಷ್ಠೀ ವಿಚಲತ್ಪಾಣಿಪಲ್ಲವಾ ॥ ೩೧ ॥
ಪತ್ನ್ಯಾಂ ಪಿತುರ್ಮಯಿ ಯದಿ ಪಾದಮುದ್ಯಚ್ಛಸೇ ಬಲಾತ್ ।
ಭುವಿ ತಸ್ಮಾದಯಂ ಪಾದಸ್ತವಾಽದ್ಯೈವ ಭವಿಷ್ಯತಿ ॥ ೩೨ ॥
ಇತ್ಯಾಕರ್ಣ್ಯ ಯಮಃ ಶಾಪಂ ಮಾತರ್ಯತಿವಿಶಂಕಿತಃ ।
ಅಭ್ಯೇತ್ಯ ಪಿತರಂ ಪ್ರಾಹ ಪ್ರಣಿಪಾತಪುರಸ್ಸರಂ ॥ ೩೩ ॥

---

ಹೆದರುತ್ತ ಆ ಉತ್ತರಕುರುದೇಶದಲ್ಲಿ ಹೆಣ್ಣುಕುದುರೆಯ ರೂಪವನ್ನು ಧರಿಸಿ ತಪಸ್ಸನ್ನಾಚರಿಸಿದಳು.

೨೮. ಆದಿತ್ಯನು ಛಾಯೆಯನ್ನು ಸಂಜ್ಞೆಯನ್ನಾಗಿಯೇ ತಿಳಿದು ಅವಳಲ್ಲಿ ಇಬ್ಬರು ಗಂಡು ಮಕ್ಕಳನ್ನೂ, ಸುಂದರಿಯಾದ ಒಬ್ಬ ಕನ್ಯೆಯನ್ನೂ ಪಡೆದನು.

೨೯. ಛಾಯೆಯು ಲಾಲನೆಗಳಲ್ಲಿಯೂ, ಊಟದ ಪದಾರ್ಥಗಳನ್ನು ನೀಡುವುದರಲ್ಲಿಯೂ ಪ್ರತಿದಿನವೂ ತನ್ನ ಮಕ್ಕಳಲ್ಲಿ ಪ್ರೀತಿಯನ್ನು ತೋರುತ್ತಿದ್ದಂತೆ ಸಂಜ್ಞೆಯ ಮಗಳಲ್ಲಿಯೂ, ಪುತ್ರರಲ್ಲಿಯೂ ತೋರುತ್ತಿರಲಿಲ್ಲ.

೩೦. ಇವಳು ಈ ರೀತಿ ಮಾಡುತ್ತಿರುವುದನ್ನು ಸಂಜ್ಞೆಯ ಸುತನಾದ ವೈವಸ್ವತಮನುವು ಮಾತ್ರ ಸಹಿಸಿಕೊಂಡಿದ್ದನು. ಆದರೆ ಯಮನು ಸಹಿಸದೆ ಕೋಪದಿಂದ ಅವಳನ್ನು ತುಳಿಯುವುದಕ್ಕಾಗಿ ಕಾಲನ್ನು ಎತ್ತಿದನು. ಪುನಃ ಸಹನೆ ತಂದುಕೊಂಡು ಅದನ್ನು ಅವಳ ದೇಹದ ಮೇಲಿಡಲಿಲ್ಲ.

೩೧–೩೨. ಬಳಿಕ ಛಾಯೆಯು ಕೋಪದಿಂದ ನಡುಗುವ ತುಟಿಯುಳ್ಳವಳೂ, ಅಲ್ಲಾಡುತ್ತಿರುವ ಕೈಯುಳ್ಳವಳೂ ಆಗಿ, "ನಿನ್ನ ತಂದೆಯ ಹೆಂಡತಿಯಾದ ನನ್ನಲ್ಲಿ ಛಲದ ಹೆಮ್ಮೆಯಿಂದ ಕಾಲನ್ನು ಎತ್ತಿದೆ. ಆದರೆ ಈ ಪಾದವು ಈಗಲೇ ನೆಲದಮೇಲಿರುವುದು ನೋಡು" ಎಂದು ಯಮನಿಗೆ ಶಾಪವನ್ನಿತ್ತಳು.

೩೩. ಇದನ್ನು ಕೇಳಿ ಯಮನು ಅವಳು ತಾಯಿಯೆಂಬುದರಲ್ಲಿ ಸಂದೇಹಗೊಂಡು ತಂದೆಯ ಹತ್ತಿರ ಹೋಗಿ ನಮಸ್ಕಾರಮಾಡಿ ಇಂತೆಂದನು.

CC-0. Jangamwadi Math Collection. Digitized by eGangotri

ತಾತೈತನ್ಮಹದಾಶ್ಚರ್ಯಮದೃಷ್ಟಮಿತಿ ಚ ಕ್ವಚಿತ್ ।
ಮಾತಾ ವಾತ್ಸಲ್ಯರೂಪೇಣ ಶಾಪಂ ಪುತ್ರೇ ಪ್ರಯಚ್ಛತಿ ॥ ೩೪ ॥
ಯಥಾ ಮಾತಾ ಮಮಾಚಷ್ಟ ನೇಯಂ ಮಾತಾ ತಥಾ ಮಮ ।
ನಿರ್ಗುಣೇಷ್ವಪಿ ಪುತ್ರೇಷು ನ ಮಾತಾ ನಿರ್ಗುಣಾ ಭವೇತ್ ॥ ೩೫ ॥
ಯಮಸ್ಯೈತದ್ವಚಃ ಶ್ರುತ್ವಾ ಭಗವಾಂಸ್ತಿಮಿರಾಪಹಃ ।
ಛಾಯಾಸಂಜ್ಞಾಮಥಾಹೂಯ ಪಪ್ರಚ್ಛ ಕ್ವ ಗತೇತಿ ಚ ॥ ೩೬ ॥
ಸಾ ಚಾಹ ತನಯಾ ತ್ವಷ್ಟುರಹಂ ಸಂಜ್ಞಾ ವಿಭಾವಸೋ ।
ಪತ್ನೀ ತವ ತ್ವಯಾಽಪತ್ಯಾನ್ಯೇತಾನಿ ಜನಿತಾನಿ ಮೇ ॥ ೩೭ ॥
ಇತ್ಥಂ ವಿವಸ್ವತಸ್ತಾಂ ತು ಬಹುಶಃಪೃಚ್ಛತೋ ಯದಾ ।
ನಾಚಚಕ್ಷೇ ತದಾ ಕ್ರುದ್ಧೋ ಭಾಸ್ವಾಂಸ್ತಾಂ ಶಪ್ತುಮುದ್ಯತಃ ॥ ೩೮ ॥
ತತಃ ಸಾ ಕಥಯಾಮಾಸ ಯಥಾವೃತ್ತಂ ವಿವಸ್ವತೇ ।
ವಿದಿತಾಽರ್ಥಶ್ಚ ಭಗವಾಂಜಗಾಮ ತ್ವಷ್ಟುರಾಲಯಂ ॥ ೩೯ ॥
ತತಃ ಸಂಪೂಜಯಾಮಾಸ ತ್ವಷ್ಟಾ ತ್ರೈಲೋಕ್ಯಪೂಜಿತಂ ।
ಭಾಸ್ವನ್ತಿಂ ರಹಿತಾ ಶಕ್ತ್ಯಾ ನಿಜಗೇಹಮುಪಾಗತಃ ॥ ೪೦ ॥

---

೩೪. ಅಪ್ಪಾ! ಮಗನಲ್ಲಿ ಪ್ರೀತಿಯಿರುವ ತಾಯಿಯು ಅವನಿಗೆ ಶಾಪವನ್ನು ಕೊಡುತ್ತಾಳೆಯೆ ? ಇದು ಬಹಳ ಆಶ್ಚರ್ಯವಾದುದು. ಎಲ್ಲಿಯೂ ನೋಡಲಿಲ್ಲ.

೩೫. ನಮ್ಮ ತಾಯಿಯು ನನ್ನೊಡನೆ ಹೇಗೆ ಮಾತನಾಡುತ್ತಿದ್ದಳೊ, ಈ ತಾಯಿಯೆಂದು ಹೇಳಿಕೊಳ್ಳುವ ಇವಳು ಹಾಗೆ ಮಾತನಾಡುತ್ತಿಲ್ಲ. ಪುತ್ರರು ದುಷ್ಟರಾಗಿದ್ದರೂ ತಾಯಿಯು ಅವರ ವಿಷಯದಲ್ಲಿ ದುಷ್ಟಳಾಗಿರುವುದಿಲ್ಲ.

೩೬. ಯಮನ ಈ ಮಾತನ್ನು ಕೇಳಿ ಪೂಜ್ಯನಾದ ಸೂರ್ಯನು ಛಾಯಾಸಂಜ್ಞೆಯನ್ನು ಕರೆದು ಸಂಜ್ಞೆಯು ಎಲ್ಲಿ ಹೋದಳೆಂದು ಪ್ರಶ್ನಿಸಿದನು.

೩೭. ಅವಳು, "ನಾಥ! ನಾನು ವಿಶ್ವಕರ್ಮನ ಮಗಳಾದ ಸಂಜ್ಞೆ. ನಿನ್ನ ಪತ್ನಿ. ಈ ಮಕ್ಕಳು ನನ್ನಲ್ಲಿ ಜನಿಸಿದವರು."

೩೮–೩೯. ಹೀಗೆಯೇ ಸೂರ್ಯನು ಅನೇಕಬಾರಿ ಅವಳನ್ನು ಕೇಳಿದರೂ ಸತ್ಯವನ್ನು ಹೇಳದಿರಲು ಸೂರ್ಯನು ಕೋಪಗೊಂಡು ಅವಳನ್ನು ಶಪಿಸಲುದ್ಯುಕ್ತನಾದನು. ಆಗ ಅವಳು ಸೂರ್ಯನಿಗೆ ನಿಜವಾದ ವಿಷಯವನ್ನು ಹೇಳಲು ಅದನ್ನು ತಿಳಿದು ಅವನು ವಿಶ್ವಕರ್ಮನ ಭವನಕ್ಕೆ ತೆರಳಿದನು.

೪೦. ಆಗ ವಿಶ್ವಕರ್ಮನು ತ್ರೈಲೋಕ್ಯಪೂಜ್ಯನಾದ ಆ ರವಿಯನ್ನು ಅರ್ಚಿಸಿ "ಸೂರ್ಯನೆ ! ಪತ್ನೀರಹಿತನಾಗಿ ಯಾವ ಕಾರಣದಿಂದ ನೀನು ಈ ನನ್ನ ಮನೆಗೆ ಬಂದಿರುವೆ ?" ಎಂದು ಕೇಳಿದನು.



CC-0. Jangamwadi Math Collection. Digitized by eGangotri

ಸಂಜ್ಞಾಂ ಪಪ್ರಚ್ಛ ತಂ ತಸ್ಮೈ ಕಥಯಾಮಾಸ ತತ್ತ್ವವಿತ್ ।
ಆಗತಾ ಸೇಹ ಮೇ ವೇಶ್ಮ ಭವತಃ ಪ್ರೇಷಿತಾ ರವೇ ॥ ೪೧ ॥
ದಿವಾಕರಃ ಸಮಾಧಿಸ್ಥೋ ವಡವಾರೂಪಧಾರಿಣೀಂ ।
ತಪಶ್ಚರಂತೀಂ ದದೃಶೇ ಉತ್ತರೇಷು ಕುರುಷ್ವಥ ॥ ೪೨ ॥
ಅಸಹ್ಯಮಾನಾ ಸೂರ್ಯಸ್ಯ ತೇಜಸ್ತೇನಾಽತಿಪೀಡಿತಾ ।
ವಹ್ನ್ಯಾಭನಿಜರೂಪಂ ತು ಛಾಯಾರೂಪಂ ವಿಮುಚ್ಯಚ ॥ ೪೩ ॥
ಧರ್ಮಾಽರಣ್ಯೇ ಸಮಾಗತ್ಯ ತಪಸ್ತೇಪೇ ಸುದುಷ್ಕರಂ ।
ಛಾಯಾಪುತ್ರಂ ಶನಿಂ ದೃಷ್ಟ್ವಾ ಯಮಂ ಚಾಽನ್ಯಂ ಚ ಭೂಪತೇ ॥ ೪೪ ॥
ತದೈವ ವಿಸ್ಮಿತಃ ಸೂರ್ಯೋ ದುಷ್ಟಪುತ್ರೌ ಸಮೀಕ್ಷ್ಯ ಚ ।
ಜ್ಞಾತುಂ ದಧ್ಯೌ.ಕ್ಷಣಂ ಧ್ಯಾತ್ವಾ ವಿದಿತ್ವಾ ತಚ್ಚ ಕಾರಣಂ ॥ ೪೫ ॥
ಘೃಣ್ಯೈಷ್ಣ್ಯಾದ್ದಗ್ಧದೇಹಾ ಸಾ ತಪಸ್ತೇಪೇ ಪತಿವ್ರತಾ ।
ಯೇನ ಮಾಂ ತೇಜಸಾಽಸಹ್ಯಂ ದ್ರಷ್ಟುಂ ನೈವ ಶಶಾಕ ಹ ॥ ೪೬ ॥
ಪಂಚಾಶದ್ಬಾಯನೇಽತೀತೇ ಗತ್ವಾ ಸಾ ತಪ ಆಚರತ್ ।
ಪ್ರದ್ಯೋತನೋ ವಿಚಾರ್ಯೈವಂ ಗತ್ವಾ ಶೀಘ್ರಂ ಮನೋಜವಃ ॥ ೪೭ ॥
ಧರ್ಮಾಽರಣ್ಯೇ ವರೇ ಪುಣ್ಯೇ ಯತ್ರ ಸಂಜ್ಞಾಸ್ಥಿತಾ ತಪಃ ।
ಆಗತಂ ತಂ ರವಿಂ ದೃಷ್ಟ್ವಾ ವಡವಾ ಸಮಜಾಯತ ॥ ೪೮ ॥
ಸೂರ್ಯಪತ್ನೀ ಸದಾ ಸಂಜ್ಞಾ ಸೂರ್ಯಶ್ಚಾಽಶ್ವಸ್ತತೋ ಭವತ್ ।
ತಾಭ್ಯಾಂ ಸಹಾಽಭೂತ್ಸಂಯೋಗೋ ಘ್ರಾಣೇ ಲಿಂಗಂ ನಿವೇಶ್ಯ ಚ ॥ ೪೯ ॥

---

೪೧–೪೨. ರವಿಯು 'ಸಂಜ್ಞೆಯೆಲ್ಲಿ ?' ಎಂದು ಕೇಳಲು ನಿಜವನ್ನರಿತ ವಿಶ್ವಕರ್ಮನು, "ಅವಳು ನನ್ನ ಭವನಕ್ಕೆ ಬಂದಿದ್ದಳು. ನಿನ್ನೆಡೆಗೆ ಕಳುಹಿಸಿರುವೆನು" ಎಂದು ತಿಳಿಸಿದನು. ಬಳಿಕ ದಿವಾಕರನು ಏಕಾಗ್ರ್ಯದಿಂದ ಚಿಂತಿಸಿ ಉತ್ತರ ಕುರುದೇಶದಲ್ಲಿ ಹೆಣ್ಣುಕುದುರೆಯ ರೂಪದಿಂದ ತಪಸ್ಸನ್ನು ಮಾಡುತ್ತಿರುವ ಅವಳನ್ನು ಕಂಡನು.

೪೩–೫೦. ಅವಳು ತನ್ನ ತೇಜಸ್ಸನ್ನು ಸಹಿಸದೆ ಅತ್ಯಂತ ಪೀಡಿತಳಾಗಿ ಬೆಂಕಿಯಂತಿರುವ ಛಾಯಾರೂಪವನ್ನು ಬಿಟ್ಟು ಧರ್ಮಾರಣ್ಯಕ್ಕೆ ಬಂದು ಕಠಿನ ತಪಸ್ಸನ್ನು ಮಾಡುತ್ತಿರುವ ಸಂಗತಿಯನ್ನು ತಿಳಿದನು. ಛಾಯಾಪುತ್ರನಾದ ಶನಿಯೂ, ಯಮನೂ ದುಷ್ಟರಾಗಿರುವುದನ್ನು ಕಂಡು ಸ್ವಲ್ಪಹೊತ್ತು ಧ್ಯಾನಿಸಿ ಅದರ ಕಾರಣವನ್ನರಿತನು. ಪತಿವ್ರತೆಯಾದ ಸಂಜ್ಞೆಯು ತನ್ನ ಕಿರಣಗಳ ದಾಹದಿಂದ ದಗ್ಧಳಾಗಿ ತೇಜಸ್ಸನ್ನು ನೋಡಲಾರದೆ ಐವತ್ತು ವರ್ಷಗಳು ಕಳೆದ ತರುವಾಯ ಭೂಮಿಯಲ್ಲಿ ತಪಸ್ಸನ್ನಾಚರಿಸಿದಳೆಂದೂ ಅರಿತು ಧರ್ಮಾರಣ್ಯದಲ್ಲಿ ಸಂಜ್ಞೆಯು ತಪಸ್ಸನ್ನು ಮಾಡುತ್ತಿರುವ ಸ್ಥಳಕ್ಕೆ ಬಂದನು. ಆಗ ಸಂಜ್ಞೆಯು

CC-0. Jangamwadi Math Collection. Digitized by eGangotri

ತದಾ ತೌ ಚ ಸಮುತ್ಪನ್ನೌ ಯುಗಲಾವಶ್ವಿನೌ ಭುವಿ ।
ಪ್ರಾದುರ್ಭೂತಂ ಜಲಂ ತತ್ರ ದಕ್ಷಿಣೇನ ಖುರೇಣ ಚ ॥ ೫೦ ॥
ವಿದಲಿತೇ ಭೂಮಿಭಾಗೇ ತತ್ರ ಕುಂಡಂ ಸಮುದ್ಭವೌ ।
ದ್ವಿತೀಯಂ ತು ಪುನಃ ಕುಂಡಂ ಪಶ್ಚಾರ್ಧಚರಣೋದ್ಭವಂ ॥ ೫೧ ॥
ಉತ್ತರವಾಹಿನ್ಯಾಃ ಕಾಶ್ಯಾಃ ಕುರುಕ್ಷೇತ್ರಾದ್ಧಿ ವೈ ತಥಾ ।
ಗಂಗಾಪುರೀಸಮಫಲಂ ಕುಂಡೇಽತ್ರ ಮುನಿನೋದಿತಂ ॥ ೫೨ ॥
ತತ್ಫಲಂ ಸಮವಾಪ್ನೋತಿ ತಪ್ತಕುಂಡೇ ನ ಸಂಶಯಃ ।
ಸ್ನಾನಂ ವಿಧಾಯ ತತ್ರೈವ ಸರ್ವಪಾಪೈಃ ಪ್ರಮುಚ್ಯತೇ ॥ ೫೩ ॥
ನ ಪುನರ್ಜಾಯತೇ ದೇಹಃ ಕುಷ್ಠಾದಿವ್ಯಾಧಿಪೀಡಿತಃ ।
ಏತತ್ತೇ ಕಥಿತಂ ಭೂಪ ದಸ್ರಾಂಶೋತ್ಪತ್ತಿಕಾರಣಂ ॥ ೫೪ ॥
ತದಾ ಬ್ರಹ್ಮಾದಯೋ ದೇವಾ ಆಗತಾಸ್ತತ್ರ ಭೂಪತೇ ।
ದತ್ವಾ ಸಂಜ್ಞಾವರಂ ಶುಭ್ರಂ ಚಿಂತಿತಾದಧಿಕಂ ಹಿ ತೈಃ ॥ ೫೫ ॥
ಸ್ಥಾಪಯಿತ್ವಾ ರವಿಂ ತತ್ರ ಬಕುಲಾಖ್ಯವನಾಽಧಿಪಂ ।
ಆನರ್ಚುಸ್ತೇ ತದಾ ಸಂಜ್ಞಾಂ ಪೂರ್ವರೂಪಾಽಭವತ್ತದಾ ॥ ೫೬ ॥

---

ಬಂದಿರುವ ರವಿಯನ್ನು ಕಂಡು ಹೆಣ್ಣು ಕುದುರೆಯಾದಳು. ಸೂರ್ಯನೂ ಗಂಡು ಕುದುರೆಯಾದನು. ಅವರಿಗೆ ಲಿಂಗಾಘ್ರಾಣಪೂರ್ವಕವಾಗಿ ಸಂಗಮವಾಯಿತು. ಆಗ ಭೂಮಿಯಲ್ಲಿ ಯಮಳರಾದ ಅಶ್ವಿನೀ ದೇವತೆಗಳು ಜನಿಸಿದರು.

೫೧. ಬಲಗಾಲಿನ ಗೊರಸಿನಿಂದ ನೆಲವನ್ನು ಕೆರೆಯಲು ಒಂದು ಕೊಳವು ಉದ್ಭವಿಸಿತು. ಮತ್ತೊಂದು ಕೊಳವು ಹಿಂಗಾಲಿನಿಂದುಂಟಾಯಿತು.

೫೨–೫೩. "ಉತ್ತರವಾಹಿನಿಯಾದ ಕಾಶಿಯ ಗಂಗೆ ಮತ್ತು ಕುರುಕ್ಷೇತ್ರಗಳಿಗೆ ಸಮವಾದ ಫಲವನ್ನು ಈ ಕುಂಡಗಳು ಕೊಡುವುವು" ಎಂದು ಮುನಿಗಳು ಹೇಳಿರುವರು. ನರನು ಈ ತಪ್ತಕುಂಡದಲ್ಲಿ ಸ್ನಾನಮಾಡಿದರೆ ಸಕಲ ಪಾಪಮುಕ್ತನಾಗಿ ಗಂಗಾದಿ ಸ್ನಾನಫಲವನ್ನು ನಿಶ್ಚಯವಾಗಿಯೂ ಪಡೆಯುವನು.

೫೪. ಕುಷ್ಠಾದಿ ರೋಗಪೀಡಿತವಾದ ಶರೀರವುಳ್ಳ ಮನುಜನು ಇಲ್ಲಿ ಸ್ನಾನ ಮಾಡಿದರೆ ಮುಕ್ತನಾಗುವನು. ಅರಸ! ಹೀಗೆ ನಿನಗೆ ಈ ಅಶ್ವಿನೀ ದೇವತೆಗಳ ಉತ್ಪತ್ತಿಗೆ ಕಾರಣವನ್ನು ತಿಳಿಸಿರುವೆನು.

೫೫–೫೬. ಆಗ ಬ್ರಹ್ಮಾದಿ ದೇವತೆಗಳು ಅಲ್ಲಿಗೆ ಬಂದು ಸಂಜ್ಞೆಗೆ ಅವಳ ಈಪ್ಸಿತಕ್ಕಿಂತ ಅಧಿಕವಾದ ವರವನ್ನಿತ್ತು ಸೂರ್ಯನನ್ನು ಬಕುಲವನಕ್ಕೆ ಅಧಿಪತಿಯನ್ನಾಗಿ ಸ್ಥಾಪಿಸಿ ಸಂಜ್ಞೆಯನ್ನಾರಾಧಿಸಿದರು. ಆಗ ಅವಳು ತನ್ನ ಹಿಂದಿನ ರೂಪವನ್ನು ಪಡೆದಳು.

CC-0. Jangamwadi Math Collection. Digitized by eGangotri

ಸ್ಥಾಪಿತಾ ತತ್ರ ರಾಜ್ಞೀ ಚ ಕುಮಾರೌ ಯುಗಲೌ ತದಾ ।
ಏತತ್ತೀರ್ಥಫಲಂ ವಕ್ಷ್ಯೇ ಶೃಣು ರಾಜನ್ಮಹಾಮತೇ ॥ ೫೭ ॥
ಆದಿಸ್ಥಾನಂ ಕುರುಶ್ರೇಷ್ಠ ದೇವೈರಪಿ ಸುದುರ್ಲಭಂ ।
ರವಿಕುಂಡೇ ನರಃ ಸ್ನಾತ್ವಾ ಶ್ರದ್ಧಾಯುಕ್ತೋ ಜಿತೇಂದ್ರಿಯಃ ॥ ೫೮ ॥
ತಾರಯೇತ್ಸ ಪಿತೄನ್ಸರ್ವಾನ್ಮಹಾನರಕಗಾನಪಿ ।
ಶ್ರದ್ಧಯಾ ಯಃ ಪಿಬೇತ್ತೋಯಂ ಸಂತರ್ಪ್ಯ ಪಿತೃದೇವತಾಃ ॥ ೫೯ ॥
ಸ್ವಲ್ಪಂ ವಾಽಪಿ ಬಹು ವಾಽಪಿ ಸರ್ವಂ ಕೋಟಿಗುಣಂ ಭವೇತ್ ।
ಸಪ್ತಮ್ಯಾಂ ರವಿವಾರೇಣ ಗ್ರಹಣಂ ಚಂದ್ರಸೂರ್ಯಯೋಃ ॥ ೬೦ ॥
ರವಿಕುಂಡೇ ಚ ಯೇ ಸ್ನಾತಾಃ ನ ತೇ ವೈ ಗರ್ಭಗಾಮಿನಃ ।
ಸಂಕ್ರಾಂತೌ ಚ ವ್ಯತೀಪಾತೇ ವೈಧೃತೇಷು ಚ ಪರ್ವಸು ॥ ೬೧ ॥
ಪೂರ್ಣಮಾಸ್ಯಾಮಮಾವಾಸ್ಯಾಂ ಚತುರ್ದಶ್ಯಾಂ ಸಿತಾಽಸಿತೇ ।
ರವಿಕುಂಡೇ ಚ ಯಃ ಸ್ನಾತಃ ಕ್ರತುಕೋಟಿಫಲಂ ಲಭೇತ್ ॥ ೬೨ ॥
ಪೂಜಯೇದ್ವಕುಲಾರ್ಕಂ ಚ ಏಕಚಿತ್ತೇನ ಮಾನವಃ ।
ಸ ಯಾತಿ ಪರಮಂ ಧಾಮ ಸ ಯಾವತ್ತಪತೇ ರವಿಃ ॥ ೬೩ ॥
ತಸ್ಯ ಲಕ್ಷ್ಮೀಃ ಸ್ಥಿರಾ ನೂನಂ ಲಭತೇ ಸಂತತಿಂ ಸುಖಂ ।
ಅರಿವರ್ಗಃ ಕ್ಷಯಂ ಯಾತಿ ಪ್ರಸಾದಾಚ್ಚ ದಿವಸ್ಪತೇಃ ॥ ೬೪ ॥

---

೫೭. ಬ್ರಹ್ಮಾದಿಗಳು ಸಂಜ್ಞೆಯನ್ನೂ, ಅವಳ ಇಬ್ಬರು ಕುಮಾರರನ್ನೂ ಅಲ್ಲಿ ಸ್ಥಾಪಿಸಿದರು. ಈ ತೀರ್ಥದ ಫಲವನ್ನು ಹೇಳುವೆನು, ಕೇಳು.

೫೮–೬೨. ಯುಧಿಷ್ಠಿರ! ನರನು ಜಿತೇಂದ್ರಿಯನಾಗಿ ಶ್ರದ್ಧೆಯಿಂದ ದೇವತೆಗಳಿಗೂ ಸುಲಭವಲ್ಲದ ಈ ರವಿಕುಂಡದಲ್ಲಿ ಮಿಂದರೆ ಅವನು ಮಹಾ ನರಕವಾಸಿಗಳಾಗಿರುವ ಪಿತೃಗಳನ್ನೂ ಉದ್ಧಾರಮಾಡುವನು. ಯಾವನು ಇಲ್ಲಿ ಪಿತೃತರ್ಪಣವನ್ನು ಮಾಡಿ ಸ್ವಲ್ಪವಾಗಲಿ, ಅಧಿಕವಾಗಲಿ ನೀರನ್ನು ಪಾನಮಾಡುವನೊ, ಅವನು ಕುಡಿದ ನೀರು ಕೋಟಿಯಷ್ಟು ಹೆಚ್ಚಾಗುವುದು. ಸಪ್ತಮೀ ಭಾನುವಾರಗಳಲ್ಲಿಯೂ, ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿಯೂ ರವಿಕುಂಡದಲ್ಲಿ ಸ್ನಾನಮಾಡಿದವರು ಮುಕ್ತರಾಗುತ್ತಾರೆ. ಅವರು ತಿರುಗಿ ಗರ್ಭವಾಸಿಗಳಾಗುವುದಿಲ್ಲ. ಸಂಕ್ರಮಣ, ವ್ಯತೀಪಾತ, ವೈಧೃತಿ, ಹುಣ್ಣಿಮೆ, ಅಮಾವಾಸ್ಯೆ, ಪರ್ವದಿನಗಳು, ಶುಕ್ಲಕೃಷ್ಣಪಕ್ಷಗಳ ಚತುರ್ದಶಿಗಳು ಇವುಗಳಲ್ಲಿ ರವಿಕುಂಡದಲ್ಲಿ ಮಿಂದವರು ಕೋಟಿಯಜ್ಞದ ಫಲವನ್ನು ಪಡೆಯುವರು.

೬೩. ಬಕುಲಾರ್ಕನನ್ನು ಒಮ್ಮನಸ್ಸಿನಿಂದ ಅರ್ಚಿಸಿದ ಮನುಜನು ಸೂರ್ಯನಿರುವ ಉತ್ತಮಸ್ಥಾನವನ್ನು ಪಡೆಯುವನು.

೬೪. ಸೂರ್ಯನ ಅನುಗ್ರಹದಿಂದ ಅವನ ಸಂಪತ್ತು ಸ್ಥಿರವಾಗುವುದು.

CC-0. Jangamwadi Math Collection. Digitized by eGangotri

ನಾಽಗ್ನೇರ್ಭಯಂ ಹಿ ತಸ್ಯಸ್ಯಾನ್ನವ್ಯಾಘ್ರಾನ್ನ ಚ ದಂತಿನಃ ।
ನ ಚ ಸರ್ಪಭಯಂ ಕ್ವಾಽಪಿ ಭೂತಪ್ರೇತಾದಿಭಿರ್ನಹಿ ॥ ೬೫ ॥
ಬಾಲಗ್ರಹಾಶ್ಚ ಸರ್ವೇಽಪಿ ರೇವತೀ ವೃದ್ಧರೇವತೀ ।
ತೇ ಸರ್ವೇ ನಾಶಮಾಯಾಂತಿ ಬಕುಲಾರ್ಕ ನಮೋಽಸ್ತುತೇ ॥ ೬೬ ॥
ಗಾವಸ್ತಸ್ಯ ವಿವರ್ಧಂತೇ ಧನಂ ಧಾನ್ಯಂ ತಥೈವ ಚ ।
ಅವಿಚ್ಛೇದೋ ಭವೇದ್ವಂಶೋ ಬಕುಲಾರ್ಕೇ ನಮಸ್ಕೃತೇ ॥ ೬೭ ॥
ಕಾಕವನ್ಧ್ಯಾ ಚ ಯಾ ನಾರೀ ಅನಪತ್ಯಾ ಮೃತಪ್ರಜಾ ।
ವನ್ಧ್ಯಾ ವಿರೂಪಿತಾ ಚೈವ ವಿಷಕನ್ಯಾಶ್ಚ ಯಾಃ ಸ್ತ್ರಿಯಃ ॥ ೬೮ ॥
ಏವಂ ದೋಷೈಃ ಪ್ರಮುಚ್ಯಂತೇ ಸ್ನಾತ್ವಾ ಕುಂಡೇ ಚ ಭೂಪತೇ ।
ಸೌಭಾಗ್ಯಸ್ತ್ರೀಸುತಾಂಶ್ಚೈವ ರೂಪಂ ಚಾಪ್ನೋತಿ ಸರ್ವಶಃ ॥ ೬೯ ॥
ವ್ಯಾಧಿಗ್ರಸ್ತೋಽಪಿ ಯೋ ಮರ್ತ್ಯಃ ಷಣ್ಮಾಸಾಚ್ಚೈವ ಮಾನವಃ ।
ರವಿಕುಂಡೇ ಚ ಸುಸ್ನಾತಃ ಸರ್ವರೋಗಾತ್ಪ್ರಮುಚ್ಯತೇ ॥ ೭೦ ॥
ನೀಲೋತ್ಸರ್ಗವಿಧಿಂ ಯಸ್ತು ರವಿಕ್ಷೇತ್ರೇ ಕರೋತಿ ವೈ ।
ಪಿತರಸ್ತೃಪ್ತಿಮಾಯಾಂತಿ ಯಾವದಾಭೂತಸಂಪ್ಲವಂ ॥ ೭೧ ॥

---

ಅವನು ಸಂತತಿಯನ್ನೂ ಸೌಖ್ಯವನ್ನೂ ಹೊಂದುವನು. ಅವನ ಶತ್ರುಗಳು ಕ್ಷಯಿಸುವರು.

೬೫. ಅವನಿಗೆ ಅಗ್ನಿ, ಹುಲಿ, ಆನೆ, ಸರ್ಪ, ಭೂತಪ್ರೇತಗಳು ಇವುಗಳ ಭಯವಿರುವುದಿಲ್ಲ.

೬೬. ಸಕಲ ಬಾಲಗ್ರಹಗಳ ಮತ್ತು ರೇವತೀ, ವೃದ್ಧರೇವತೀ ಎಂಬ ಮಾತೃದೇವತೆಗಳ ತೊಂದರೆಯೂ ತಪ್ಪುವುದು. ಓ ಬಕುಲಾರ್ಕ! ನಿನಗೆ ವಂದನೆಯು.

೬೭. ಬಕುಲಾರ್ಕನನ್ನು ನಮಸ್ಕರಿಸಿದವನ ಗೋವುಗಳೂ, ಧನಧಾನ್ಯಗಳೂ ವೃದ್ಧಿಗೊಳ್ಳುವುವು. ಸಂತತಿಯು ಅವಿಚ್ಛಿನ್ನವಾಗಿ ಸಾಗುವುದು.

೬೮–೬೯. ಹುಟ್ಟುಬಂಜೆಯೂ, ಮಕ್ಕಳಿಲ್ಲದವರೂ, ಸಾಯುವ ಮಕ್ಕಳುಳ್ಳವರೂ, ಕುರೂಪಿಣಿಯೂ, ವಿಷಕನ್ಯೆಯೂ ಆಗಿರುವ ಹೆಂಗಸು ಈ ರವಿಕುಂಡದಲ್ಲಿ ಸ್ನಾನಮಾಡಿದರೆ ದೋಷಮುಕ್ತಳಾಗಿ ಸೌಭಾಗ್ಯವನ್ನೂ, ಮಕ್ಕಳನ್ನೂ, ಸೌಂದರ್ಯವನ್ನೂ ಪಡೆಯುವಳು.

೭೦. ರೋಗಿಯಾದ ಮನುಷ್ಯನು ಇಲ್ಲಿ ಸ್ನಾನಮಾಡಿದರೆ ಆರು ತಿಂಗಳಲ್ಲಿ ರೋಗಮುಕ್ತನಾಗುವನು.

೭೧. ಈ ರವಿಕ್ಷೇತ್ರದಲ್ಲಿ ನೀಲವೃಷೋತ್ಸರ್ಗವನ್ನು ಮಾಡಿದರೆ ಅವನ ಪಿತೃಗಳು ಪಂಚಭೂತಗಳಿರವವರೆಗೆ ತೃಪ್ತರಾಗುವರು.

CC-0. Jangamwadi Math Collection. Digitized by eGangotri

ಕನ್ಯಾದಾನಂ ಚ ಯಃ ಕುರ್ಯಾದಸ್ಮಿನ್ಕ್ಷೇತ್ರೇ ಚ ಪುತ್ರಕ ।
ಉದ್ವಾಹಪರಿಪೂತಾತ್ಮಾ ಬ್ರಹ್ಮಲೋಕೇ ಮಹೀಯತೇ ॥ ೭೨ ॥
ಧೇನುದಾನಂ ಚ ಶಯ್ಯಾಂ ಚ ವಿದ್ರುಮಂ ಚ ಹಯಂ ತಥಾ ।
ದಾಸೀ ಮಹಿಷೀ ಘಂಟಾಶ್ಚ ತಿಲಂ ಕಾಂಚನಸಂಯುತಂ ॥ ೭೩ ॥
ಧೇನುಂ ತಿಲಮಯೀಂ ದದ್ಯಾದಸ್ಮಿನ್ಕ್ಷೇತ್ರೇ ಚ ಭಾರತ ।
ಉಪಾನಹೌ ಚ ಛತ್ರಂ ಚ ಶೀತತ್ರಾಣಾದಿಕಂ ತಥಾ ॥ ೭೪ ॥
ಲಕ್ಷಹೋಮಂ ತಥಾ ರುದ್ರಂ ರುದ್ರಾತಿರುದ್ರಮೇವ ಚ ।
ತಸ್ಮಿನ್ಸ್ಥಾನೇ ಚ ಯತ್ಕಿಂಚಿದ್ದದಾತಿ ಶ್ರದ್ಧಯಾನ್ವಿತಃ ॥ ೭೫ ॥
ಏಕೈಕಸ್ಯ ಫಲಂ ತಾತ ವಕ್ಷ್ಯಾಮಿ ಶೃಣು ತತ್ತ್ವತಃ ।
ದಾನೇನ ಲಭತೇ ಭೋಗಾನಿಹ ಲೋಕೇ ಪರತ್ರ ಚ ॥ ೭೬ ॥
ರಾಜ್ಯಂ ಚ ಲಭತೇ ಮರ್ತ್ಯಃ ಕೃತ್ವೋದ್ವಾಹಂ ತು ಮಾನುಷಾಃ ।
ಜಾಯಂತೇ ಧರ್ಮಕಾಮಾರ್ಥಾಃ ಪ್ರಾಪ್ಯಂತೇ ನಾಽತ್ರ ಸಂಶಯಃ ॥೭೭॥
ಪೂಜಯಾ ಲಭತೇ ಸೌಖ್ಯಂ ಭವೇಜ್ಜನ್ಮನಿ ಜನ್ಮನಿ ।
ಸಪ್ತಮ್ಯಾಂ ರವಿಯುಕ್ತಾಯಾಂ ಬಕುಲಾಽರ್ಕಂ ಸ್ಮರೇತ್ತು ಯಃ ॥ ೭೮ ॥
ಜ್ವರಾದೇಃ ಶತ್ರುತಶ್ಚೈವ ವ್ಯಾಧೇಸ್ತಸ್ಯ ಭಯಂ ನಹಿ ॥ ೭೯ ॥

ಯುಧಿಷ್ಠಿರ ಉವಾಚ :—

ಬಕುಲಾರ್ಕೇತಿ ವೈ ನಾಮ ಕಥಂ ಜಾತಂ ರವೇರ್ಮುನೇ ।
ಏತನ್ಮೇ ವದತಾಂಶ್ರೇಷ್ಠ ತತ್ವಮಾಖ್ಯಾತುಮರ್ಹಸಿ ॥ ೮೦ ॥

---

೭೨. ವತ್ಸ! ಇಲ್ಲಿ ಕನ್ಯಾದಾನ ಮಾಡಿದವನು ಮದುವೆ ಮಾಡುವುದರಿಂದ ಪವಿತ್ರವಾದ ಮನಸ್ಸುಳ್ಳವನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೭೩–೭೯. ಗೋವು, ಹಾಸಿಗೆ, ಹವಳ, ಕುದುರೆ, ದಾಸಿ, ಎಮ್ಮೆ, ಘಂಟೆ, ಚಿನ್ನದೊಡಗೂಡಿದ ಎಳ್ಳು, ಎಳ್ಳಿನ ಹಸು, ಪಾದರಕ್ಷೆಗಳು, ಕೊಡೆ, ಕಂಬಳಿ ಇವುಗಳನ್ನು ದಾನಮಾಡಬೇಕು. ಲಕ್ಷರುದ್ರ, ಅತಿರುದ್ರ ಹೋಮವನ್ನೂ ಮಾಡಬೇಕು. ಈ ಸ್ಥಳದಲ್ಲಿ ಮಾನವನು ಶ್ರದ್ಧೆಯಿಂದ ಮಾಡಿದ ಕರ್ಮದ ಫಲವನ್ನು ಹೇಳುವೆನು; ಕೇಳು, ಈ ದಾನದಿಂದ ಇಹಪರಗಳಲ್ಲಿ ಸುಖಭೋಗಗಳನ್ನು ಪಡೆಯುವನು. ರಾಜ್ಯವನ್ನೂ ಹೊಂದುವನು. ಮದುವೆ ಮಾಡಿಕೊಂಡು ಪತ್ನಿಯಿಂದ ಧರ್ಮಕಾಮಾರ್ಥಗಳೆಂಬ ಪುರುಷಾರ್ಥಗಳನ್ನು ಗಳಿಸುವನು. ಪೂಜೆಯಿಂದ ಜನ್ಮಜನ್ಮಗಳಲ್ಲಿಯೂ ಸೌಖ್ಯವನ್ನು ಪಡೆಯುವನು. ಸಪ್ತಮೀ ಭಾನುವಾರ ಬಕುಲಾರ್ಕನನ್ನು ನೆನೆದವನಿಗೆ ಜ್ವರದಿಂದಲೂ, ಶತ್ರುಗಳಿಂದಲೂ, ರೋಗಗಳಿಂದಲೂ ಭಯವಿರುವುದಿಲ್ಲ.

೮೦. ಯುಧಿಷ್ಠರನು ಕೇಳುತ್ತಾನೆ:— ಎಲೈ ವ್ಯಾಸಮುನಿಯೆ! ರವಿಗೆ ಬಕುಲಾರ್ಕನೆಂಬ ಹೆಸರು ಹೇಗೆ ಬಂದಿತು? ಮಹಾವಾಗ್ಮಿಯಾದ ನೀನು ಇದನ್ನು ನನಗೆ ಅಪ್ಪಣೆ ಕೊಡಿಸು.

CC-0. Jangamwadi Math Collection. Digitized by eGangotri

ವ್ಯಾಸ ಉವಾಚ:—

ಯದಾ ಸಂಜ್ಞಾ ಚ ರಾಜೇಂದ್ರ ಸೂರ್ಯಾರ್ಽರ್ಥಂ ಚೈಕಚೇತಸಾ ।
ತೇಪೇ ಬಕುಲವೃಕ್ಷಾಽಧಃ ಪತ್ಯುಸ್ತೇಜಃಪ್ರಶಾಂತಯೇ ॥ ೮೧ ॥
ಪ್ರಾದುರ್ಭಾವಂ ರವೇರ್ದೃಷ್ಟ್ವಾ ವಡವಾ ಸಮುಜಾಯತ ।
ಅತ್ಯಂತಂ ಗೋಪತಿಃ ಶಾಂತೋ ಬಕುಲಸ್ಯ ಸವಿಾಪತಃ ॥ ೮೨ ॥
ಸುಷುವೇ ಚ ತದಾ ರಾಜ್ಞೀ ಸುತೌ ದಿವ್ಯೌ ಮನೋಹರೌ ।
ತೇನಾಽಸ್ಯ ಪ್ರಥಿತಂ ನಾಮ ಬಕುಲಾರ್ಕೇತಿ ವೈ ರವೇಃ ॥ ೮೩ ॥
ಯಸ್ತತ್ರ ಕುರುತೇ ಸ್ನಾನಂ ವ್ಯಾಧಿಸ್ತಸ್ಯ ನ ಪೀಡಯೇತ್ ।
ಧರ್ಮಮರ್ಥಂ ಚ ಕಾಮಂ ಚ ಲಭತೇ ನಾಽತ್ರ ಸಂಶಯಃ ॥ ೮೪ ॥
ಷಣ್ಮಾಸಾತ್ಸಿದ್ಧಿಮಾಪ್ನೋತಿ ಮೋಕ್ಷಂ ಚ ಲಭತೇ ನರಃ ।
ಏತದುಕ್ತಂ ಮಹಾರಾಜ ಬಕುಲಾರ್ಕಸ್ಯ ವೈಭವಂ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ
"ಬಕುಲಾಽರ್ಕಮಾಹಾತ್ಮ್ಯಕಥನಂ" ನಾಮ ತ್ರಯೋದಶೋಽಧ್ಯಾಯಃ

---

೮೧. ವ್ಯಾಸನು ಹೇಳುತ್ತಾನೆ:—ರಾಜೇಂದ್ರ! ಸಂಜ್ಞೆಯು, ಪತಿಯಾದ ಸೂರ್ಯನ ತೇಜಸ್ಸಿನ ಶಾಂತಿಗಾಗಿ ಒಮ್ಮನಸ್ಸಿನಿಂದ ಬಕುಲವೃಕ್ಷದ ಕೆಳಗೆ ತಪಸ್ಸನ್ನಾಚರಿಸಿದಳು.

೮೨. ಆಗ ಸೂರ್ಯನು ಅಲ್ಲಿಗೆ ಬರಲು ಅವಳು ಹೆಣ್ಣು ಕುದುರೆಯಾದಳು. ಸೂರ್ಯನು ಆ ಬಕುಲವೃಕ್ಷದ ಹತ್ತಿರವೇ ಅತ್ಯಂತ ಸೌಮ್ಯನಾದನು.

೮೩. ಅವನ ರಾಣಿಯಾದ ಸಂಜ್ಞೆಯು ಅಲ್ಲಿ ಮನೋಹರವಾದ ಇಬ್ಬರು ಪುತ್ರರನ್ನು ಪಡೆದಳು. ಆದುದರಿಂದ ಸೂರ್ಯನಿಗೆ ಬಕುಲಾರ್ಕ ಎಂದು ಪ್ರಸಿದ್ಧಿ ಬಂದಿತು.

೮೪. ಅಲ್ಲಿ ಸ್ನಾನಮಾಡಿದವನಿಗೆ ರೋಗಬಾಧೆಯಿರುವುದಿಲ್ಲ. ಅವನು ಧರ್ಮಾರ್ಥಕಾಮಗಳನ್ನೂ ಪಡೆಯುವನು; ಇದರಲ್ಲಿ ಸಂದೇಹವಿಲ್ಲ.

೮೫. ಮಹಾರಾಜ! ಅವನು ಆರು ತಿಂಗಳೊಳಗೆ ಕಾರ್ಯಸಿದ್ಧಿಯನ್ನು ಹೊಂದಿ ಮೋಕ್ಷವನ್ನು ಪಡೆಯುವನು. ಇಂತಹ ಬಕುಲಾರ್ಕನ ವೈಭವವನ್ನು ನಿನಗೆ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಧರ್ಮಾರಣ್ಯಮಾಹಾತ್ಮ್ಯದಲ್ಲಿ "ಬಕುಲಾರ್ಕಮಾಹಾತ್ಮ್ಯಕಥನ" ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ಚತುರ್ದಶೋಽಧ್ಯಾಯಃ

## ವಿಷ್ಣು ಶಿರೋನಾಶವರ್ಣನಂ

ಯುಧಿಷ್ಠಿರ ಉವಾಚ :—

ಕೃಪಾಸಿಂಧೋ ಮಹಾಭಾಗ ಸರ್ವವ್ಯಾಪಿನ್ಸುರೇಶ್ವರ ।
ಕದಾ ಹ್ಯತ್ರ ತಪಸ್ತಪ್ತಂ ವಿಷ್ಣುನಾಽಮಿತತೇಜಸಾ ॥ ೧ ॥
ಸ್ಕಂದಾಯ ಕಥಿತಂ ಚೈವ ಶರ್ವೇಣ ಚ ಮಹಾತ್ಮನಾ ।
ಆನುಪೂರ್ವ್ಯೇಣ ತತ್ಸರ್ವಂ ಕಥಯಸ್ವ ತ್ವಮೇವ ಹಿ ॥ ೨ ॥

ವ್ಯಾಸ ಉವಾಚ :—

ಶೃಣು ವತ್ಸ ಪ್ರವಕ್ಷ್ಯಾಮಿ ಧರ್ಮಾರಣ್ಯೇ ನೃಪೋತ್ತಮ ।
ಏಕದಾಽತ್ರ ತಪಸ್ತಪ್ತಂ ವಿಷ್ಣುನಾಽಮಿತ ತೇಜಸಾ ॥ ೩ ॥

ಸ್ಕಂದ ಉವಾಚ :—

ಕಥಂ ದೇವಸರೋ ನಾಮ ಪಂಪಾ ಚಂಪಾ ಗಯಾ ತಥಾ ।
ವಾರಾಣಸ್ಯಧಿಕಾ ಚೈವ ಕಥಮಶ್ವಮುಖೋ ಹರಿಃ ॥ ೪ ॥

ಈಶ್ವರ ಉವಾಚ :—

ಅತ್ರ ನಾರಾಯಣೋ ದೇವಸ್ತಪಸ್ತೇಪೇ ಸುದುಷ್ಕರಂ ।
ದಿವ್ಯವರ್ಷಶತಂ ತ್ರೀಣಿ ಜಾತಃ ಸುಷ್ಠ್ವಾನನಶ್ಚ ಸಃ ॥ ೫ ॥

---

## ಕನ್ನಡದ ಅನುವಾದ

### ವಿಷ್ಣು ಶಿರೋನಾಶವರ್ಣನ

೧. ಯುಧಿಷ್ಠಿರನು ಕೇಳುತ್ತಾನೆ :—ದಯಾಸಮುದ್ರನೂ, ಸರ್ವವ್ಯಾಪಿಯೂ ಆಗಿರುವ ವ್ಯಾಸನೇ ! ಅಪರಿಮಿತವಾದ ತೇಜಸ್ಸುಳ್ಳ ವಿಷ್ಣುವು ಇಲ್ಲಿ ಯಾವಾಗ ತಪಸ್ಸನ್ನು ಮಾಡಿದನು ?

೨. ಮಹಾತ್ಮನಾದ ಶಂಕರನು ಸ್ಕಂದನಿಗೆ ಹೇಳಿರುವುದನ್ನೆಲ್ಲ ನೀನು ನನಗೆ ಹೇಳು.

೩–೪. ವ್ಯಾಸನು ಹೇಳುತ್ತಾನೆ:—ಮಗು ! ಹೇಳುವೆನು ಕೇಳು. ಒಂದಾನೊಂದು ಸಮಯದಲ್ಲಿ ಅತ್ಯಂತ ತೇಜಸ್ವಿಯಾದ ಶ್ರೀವಿಷ್ಣುವು ಇಲ್ಲಿ ತಪಸ್ಸನ್ನು ಮಾಡಿದನು. ಸ್ಕಂದನು ಕೇಳುತ್ತಾನೆ:—ದೇವಸರೋವರವು ಪಂಪೆ, ಚಂಪೆ, ಗಯೆ, ಕಾಶಿಗಳಿಗಿಂತಲೂ ಹೇಗೆ ಶ್ರೇಷ್ಠವಾಯಿತು ? ವಿಷ್ಣುವು ಹೇಗೆ ಅಶ್ವ ಮುಖನಾದನು.

೫. ಈಶ್ವರನು ಹೇಳುತ್ತಾನೆ :—ಇಲ್ಲಿ ಶ್ರೀಮನ್ನಾರಾಯಣನು ಮುನ್ನೂರು ವರ್ಷಗಳಕಾಲ ಘೋರತಪಸ್ಸನ್ನಾಚರಿಸಿದನು. ಅದರಿಂದ ಆತನು ಸುಂದರ ಮುಖವುಳ್ಳವನಾದನು.

CC-0. Jangamwadi Math Collection. Digitized by eGangotri

ತಪಸ್ತೇಪೇ ಮಹಾವಿಷ್ಣುಃ ಸುರೂಪಾರ್ಥಂ ಚ ಪುತ್ರಕ ।
ವಾಜಿಮುಖೋ ಹರಿಸ್ತತ್ರ ಸಿದ್ಧಸ್ಥಾನೇ ಮಹಾದ್ಯುತೇ ॥ ೬ ॥

ಸ್ಕಂದ ಉವಾಚ :—

ಕಾರಣಂ ಬ್ರೂಹಿ ಮೇಽದ್ಯತ್ವಮಶ್ವಾನನಃ ಕಥಂ ಹರಿಃ ।
ಮಹಾರಿಪೋಶ್ಚ ಹಂತಾ ಚ ದೇವದೇವೋ ಜಗತ್ಪತಿಃ ॥ ೭ ॥
ಯಸ್ಯ ನಾಮ್ನಾ ಮಹಾಭಾಗ ಪಾತಕಾನಿ ಬಹೂನ್ಯಪಿ ।
ವಿಲೀಯಂತೇ ತು ವೇಗೇನ ತಮಃ ಸೂರ್ಯೋದಯೇ ಯಥಾ ॥ ೮ ॥
ಶ್ರೂಯಂತೇ ಯಸ್ಯ ಕರ್ಮಾಣಿ ಅದ್ಭುತಾನ್ಯದ್ಭುತಾನಿ ವೈ ।
ಸರ್ವೇಷಾಮೇವ ಜೀವಾನಾಂ ಕಾರಣಂ ಪರಮೇಶ್ವರಃ ॥ ೯ ॥
ಪ್ರಾಣರೂಪೇಣ ಯೋ ದೇವೋ ಹಯರೂಪಃ ಕಥಂ ಭವೇತ್ ।
ಸರ್ವೇಷಾಮಪಿ ತಂತ್ರಾಣಾಮೇಕರೂಪಃ ಪ್ರಕೀರ್ತಿತಃ ॥ ೧೦ ॥
ಭಕ್ತಿಗಮ್ಯೋ ಧರ್ಮಭಾಜಾಂ ಸುಖರೂಪಃ ಸದಾ ಶುಚಿಃ ।
ಗುಣಾತೀತೋಽಪಿ ನಿತ್ಯೋಽಸೌ ಸರ್ವಗೋ ನಿರ್ಗುಣಸ್ತಥಾ ॥ ೧೧ ॥
ಸ್ರಷ್ಟಾಽಸೌ ಪಾಲಕೋ ಹಂತಾ ಅವ್ಯಕ್ತಃ ಸರ್ವದೇಹಿನಾಂ ।
ಅನುಕೂಲೋ ಮಹಾತೇಜಾಃ ಕಸ್ಮಾದಶ್ವಮುಖೋಽಭವತ್ ॥ ೧೨ ॥

---

೬. ಸಿದ್ಧಿಸ್ಥಾನವಾದ ಆ ಧರ್ಮಾರಣ್ಯದಲ್ಲಿ ಅಶ್ವಮುಖನಾದ ವಿಷ್ಣುವು ಸುಂದರರೂಪವನ್ನು ಪಡೆಯಲೋಸುಗ ತಪಸ್ಸನ್ನು ಮಾಡಿದನು.

೭. ಸ್ಕಂದನು ಕೇಳುತ್ತಾನೆ:—ತಂದೆಯೆ! ಮಹಾ ವೈರಿಗಳನ್ನು ಸಂಹರಿಸುವವನಾಗಿ ದೇವತೆಗಳಿಗೆಲ್ಲ ಒಡೆಯನಾದ ಆ ವಿಷ್ಣುವು ಅಶ್ವಮುಖನಾಗಲು ಕಾರಣವೇನು? ಹೇಳು.

೮. ಎಲೈ ಮಹಾಭಾಗ್ಯಶಾಲಿಯೆ! ವಿಷ್ಣುವಿನ ಹೆಸರನ್ನು ಹೇಳುವುದರಿಂದ ಪಾಪಸ್ತೋಮಗಳು ಸೂರ್ಯೋದಯವಾದಾಗ ಕತ್ತಲೆಯು ಎಂತೋ ಅಂತು ನಾಶವಾಗುವುವು.

೯–೧೨. ಸಕಲ ಜೀವಗಳಿಗೂ ಪ್ರಾಣರೂಪದಿಂದ ಕಾರಣನಾದ ಆ ವಿಷ್ಣುವಿನ ಕಾರ್ಯಗಳು ಅತ್ಯಾಶ್ಚರ್ಯಕರವಾದುವುಗಳೆಂದು ಕೇಳಿದ್ದೇನೆ. ಸಕಲ ಸಿದ್ಧಾಂತಗಳಲ್ಲಿಯೂ ಏಕರೂಪನಾಗಿ ಪ್ರತಿಪಾದ್ಯನಾಗಿರುವ ಅವನು ಹಯರೂಪನಾದುದೆಂತು? ಈ ವಿಷ್ಣುವು ಧರ್ಮಿಷ್ಠರಿಗೆ ಭಕ್ತಿಯಿಂದ ಮಾತ್ರವೇ ಹೊಂದಲು ಯೋಗ್ಯನೂ, ಸುಖಸ್ವರೂಪನೂ, ಯಾವಾಗಲೂ ಶುದ್ಧನೂ, ಸತ್ವರಜಸ್ತಮೋಗುಣಗಳಿಂದ ಬಾಹ್ಯನಾದಾಗ್ಯೂ ನಿತ್ಯನೂ, ಸರ್ವವ್ಯಾಪಿಯೂ, ನಿರ್ಗುಣನೂ ಆಗಿರುವನು. ಸೃಷ್ಟಿಸ್ಥಿತಿಸಂಹಾರಕರ್ತೃವೂ, ಅಪ್ರತ್ಯಕ್ಷನೂ, ಸಕಲ ಪ್ರಾಣಿಗಳಿಗೆ ಅನುಕೂಲನೂ, ಅತಿ ತೇಜಸ್ವಿಯೂ ಆಗಿರುವ ಇವನು ಅಶ್ವಮುಖನಾದುದೆಂತು?

CC-0. Jangamwadi Math Collection. Digitized by eGangotri

ಯಸ್ಯ ರೋಮೋದ್ಭವಾ ದೇವಾ ವೃಕ್ಷಾದ್ಯಾಃ ಪನ್ನಗಾ ನಗಾಃ ।
ಕಲ್ಪೇ ಕಲ್ಪೇ ಜಗತ್ಸರ್ವಂ ಜಾಯತೇ ಯಸ್ಯ ದೇಹತಃ ॥ ೧೩ ॥
ಸ ಏವ ವಿಶ್ವಪ್ರಭವಃ ಸ ಏವಾಽತ್ಯಂತಕಾರಣಂ ।
ಯೇನಾಽಽನೀತಾಃ ಪುನರ್ವಿದ್ಯಾ ಯಜ್ಞಾಶ್ಚ ಪ್ರಲಯಂಗತಾಃ ॥ ೧೪ ॥
ಘಾತಿತೋ ದುಷ್ಟದೈತ್ಯೋಽಸೌ ವೇದಾರ್ಥಂ ಕೃತ ಉದ್ಯಮಃ ।
ಏವಮಾಸೀನ್ಮಹಾವಿಷ್ಣುಃ ಕಥಮಶ್ವಮುಖೋಽಭವತ್ ॥ ೧೫ ॥
ರತ್ನಗರ್ಭಾ ಧೃತಾ ಯೇನ ಪೃಷ್ಠದೇಶೇ ಚ ಲೀಲಯಾ ।
ಕೃತ್ವಾ ವ್ಯವಸ್ಥಿತಂ ಸರ್ವಂ ಜಗತ್ಸ್ಥಾವರಜಂಗಮಂ ॥ ೧೬ ॥
ಸ ದೇವೋ ವಿಶ್ವರೂಪೋ ವೈ ಕಥಂ ವಾಜಿಮುಖೋಽಭವತ್ ।
ಹಿರಣ್ಯಾಕ್ಷಸ್ಯ ಹಂತಾ ಯೋ ರೂಪಂ ಕೃತ್ವಾ ವರಾಹಜಂ ॥ ೧೭ ॥
ಸುಪವಿತ್ರಂ ಮಹಾತೇಜಾಃ ಪ್ರವಿಶ್ಯ ಜಲಸಾಗರೇ ।
ಉದ್ಧೃತಾ ಚ ಮಹೀ ಸರ್ವಾ ಸಸಾಗರಮಹೀಧರಾ ॥ ೧೮ ॥
ಉದ್ಧೃತಾ ಚ ಮಹೀ ನೂನಂ ದಂಷ್ಟ್ರಾಗ್ರೇ ಯೇನ ಲೀಲಯಾ ।
ಕೃತ್ವಾ ರೂಪಂ ವರಾಹಂ ಚ ಕಪಿಲಂ ಶೋಕನಾಶನಂ ॥ ೧೯ ॥
ಸ ದೇವಃ ಕಥಮೀಶಾನೋ ಹಯಗ್ರೀವತ್ವಮಾಗತಃ ।
ಪ್ರಹ್ಲಾದಾರ್ಥೇ ಸ ಚೇಶಾನೋ ರೂಪಂ ಕೃತ್ವಾ ಭಯಾವಹಂ ॥ ೨೦ ॥

---

೧೩. ಇವನ ರೋಮಗಳಿಂದ ದೇವತೆಗಳೂ, ವೃಕ್ಷ ಮೊದಲಾದವುಗಳೂ, ಹಾವುಗಳೂ, ಪರ್ವತಗಳೂ ಉದ್ಭವಿಸಿದುವು. ಇವನ ಶರೀರದಿಂದ ಪ್ರತಿ ಕಲ್ಪದಲ್ಲಿಯೂ ಸಕಲ ಪ್ರಪಂಚಗಳೂ ಹುಟ್ಟುವುವು.

೧೪–೧೫. ಇವನೇ ಸಕಲಕ್ಕೂ ಉತ್ಪತ್ತಿಕಾರಣನು. ಇವನೇ ನಾಶಕಾರಣನು. ಇವನು ವಿದ್ಯೆಗಳನ್ನೂ, ಯಜ್ಞಗಳನ್ನೂ ಕೆಡಿಸಿದ ದುಷ್ಟದೈತ್ಯರನ್ನು ಕೊಂದು ವೇದೋದ್ಧಾರಕ್ಕಾಗಿ ಬಹಳ ಪ್ರಯತ್ನಿಸಿರುತ್ತಾನೆ. ಇಂತಹ ವಿಷ್ಣುವು ಹಯಗ್ರೀವನಾದುದು ಹೇಗೆ?

೧೬–೨೭. ಇವನು ಬೆನ್ನಿನಿಂದ ಭೂಮಿಯನ್ನು ಅನಾಯಾಸವಾಗಿ ಹೊತ್ತಿರುವನು. ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ತನ್ನ ಕಾರ್ಯದಿಂದ ವ್ಯವಸ್ಥೆಗೊಳಿಸಿರುವನು. ವಿಶ್ವರೂಪಿಯಾದ ಇಂತಹ ವಿಷ್ಣುವು ಹೇಗೆ ಅಶ್ವಮುಖನಾದನು? ಪವಿತ್ರವಾದ ವರಾಹರೂಪವನ್ನು ಧರಿಸಿ ಜಲಧಿಯನ್ನು ಹೊಕ್ಕು ಹಿರಣ್ಯಾಕ್ಷನನ್ನು ಸದೆಬಡಿದು ಸಮುದ್ರಗಳಿಂದಲೂ ಬೆಟ್ಟಗಳಿಂದಲೂ ಸಹಿತವಾದ ಭೂಮಿಯನ್ನು ಕೋರೆದಾಡೆಯಿಂದ ಅನಾಯಾಸವಾಗಿ ಎತ್ತಿರುವ ಈ ವಿಷ್ಣುವು ಹಯಗ್ರೀವನಾದುದು ಹೇಗೆ? ಇವನು ಪ್ರಹ್ಲಾದನಿಗಾಗಿ ಸಕಲ ದುಷ್ಟನಾಶಕವಾದ ಭಯಂಕರ ನಾರಸಿಂಹರೂಪವನ್ನು ತಾಳಿ ಸಂಧ್ಯಾಕಾಲದಲ್ಲಿ, ದುಷ್ಟನಾದ

CC-0. Jangamwadi Math Collection. Digitized by eGangotri

ನಾರಸಿಂಹಂ ಮಹಾದೇವಂ ಸರ್ವದುಷ್ಟನಿವಾರಣಂ ।
ಪರ್ವತಾಽಗ್ನಿಸಮುದ್ರಸ್ಥಂ ರರಕ್ಷ ಭಕ್ತಸತ್ತಮಂ ॥ ೨೧ ॥
ಹಿರಣ್ಯಕಶಿಪುಂ ದುಷ್ಟಂ ಜಘಾನ ರಜನೀಮುಖೇ ।
ಇಂದ್ರಾಸನೇ ಚ ಸಂಸ್ಥಾಪ್ಯ ಪ್ರಹ್ಲಾದಸ್ಯ ಸುಖಪ್ರದಂ ॥ ೨೨ ॥
ಪ್ರಹ್ಲಾದಾರ್ಥೇ ಚ ವೈ ನೂನಂ ನೃಸಿಂಹತ್ವಮುಪಾಗತಃ ।
ವಿರೋಚನಸುತಸ್ಯಾಽಗ್ರೇ ಯಾಚಕೋಽಸೌ ಭವೇತ್ತದಾ ॥ ೨೩ ॥
ಯಜ್ಞೇ ಚೈವಾಽಶ್ವಮೇಧೇ ವೈ ಬಲಿನಾ ಯಃ ಸಮರ್ಚಿತಃ ।
ಹೃತಾ ವಸುಮತೀ ತಸ್ಯ ತ್ರಿಪದೀ ಕೃತರೋದಸೀ ॥ ೨೪ ॥
ವಿಶ್ವರೂಪೇಣ ವೈ ಯೇನ ಪಾತಾಳೇ ಕ್ಷಪಿತೋ ಬಲಿಃ ।
ತ್ರಿಃಸಪ್ತವಾರಂ ಯೇನೈವ ಕ್ಷತ್ರಿಯಾಸವನೀತಲೇ ॥ ೨೫ ॥
ಹತ್ವಾಽದದಾಚ್ಚ ವಿಪ್ರೇಭ್ಯೋ ಮಹೀಮತಿಮಹೌಜಸಾ ।
ಘಾತಿತೋ ಹೈಹಯೋ ರಾಜಾ ಯೇನೈವ ಜನನೀ ಹತಾ ॥ ೨೬ ॥
ಯೇನ ವೈ ಶಿಶುನೋಽವ್ಯಾಗ್ಂ ಹಿ ಘಾತಿತಾ ದುಷ್ಟಚಾರಿಣೀ ।
ರಾಕ್ಷಸೀ ತಾಟಕಾ ನಾಮ್ನಾ ಕೌಶಿಕಸ್ಯ ಪ್ರಸಾದತಃ ॥ ೨೭ ॥
ವಿಶ್ವಾಮಿತ್ರಸ್ಯ ಯಜ್ಞೇ ತು ಯೇನ ಲೀಲಾನೃದೇಹಿನಾ ।
ಚತುರ್ದಶಸಹಸ್ರಾಣಿ ಘಾತಿತಾ ರಾಕ್ಷಸಾ ಬಲಾತ್ ॥ ೨೮ ॥
ಹತಾ ಶೂರ್ಪಣಖಾ ಯೇನ ತ್ರಿಶಿರಾಶ್ಚ ನಿಪಾತಿತಃ ।
ಸುಗ್ರೀವಂ ವಾಲಿನಂ ಹತ್ವಾ ಸುಗ್ರೀವೇಣ ಸಹಾಯವಾನ್ ॥ ೨೯ ॥

---

ಹಿರಣ್ಯಕಶಿಪುವನ್ನು ವಧಿಸಿ ಪರ್ವತ, ಅಗ್ನಿ, ಸಮುದ್ರಗಳಲ್ಲಿದ್ದ ಪ್ರಹ್ಲಾದನನ್ನು ಸಲಹಿ ಅವನನ್ನು ಇಂದ್ರಾಸನಕ್ಕೇರಿಸಿರುವನು. ಅಶ್ವಮೇಧಯಾಗದಲ್ಲಿ ವಿರೋಚನನ ಮಗನಾದ ಬಲಿಯಿಂದ ಪೂಜಿತನಾಗಿ ಅವನನ್ನು ಮೂರಡಿ ಭೂಮಿಯನ್ನು ಯಾಚಿಸಿ ತ್ರಿವಿಕ್ರಮರೂಪದಿಂದ ಸಕಲ ಭೂಮಿಯನ್ನು ಅಪಹರಿಸಿ ಪಾತಾಳಕ್ಕೆ ತಳ್ಳಿರುವನು. ಇಪ್ಪತ್ತೊಂದುಬಾರಿ ಭೂಮಿಯಲ್ಲಿರುವ ದುಷ್ಟಕ್ಷತ್ರಿಯರನ್ನು ಕೊಂದು ಬ್ರಾಹ್ಮಣರಿಗೆ ಆ ಕ್ಷತ್ರಿಯರ ಭೂಮಿಯನ್ನು ದಾನಮಾಡಿರುವನು. ಕಾರ್ತವೀರ್ಯನನ್ನೂ, ತಾಯಿಯಾದ ರೇಣುಕಾದೇವಿಯನ್ನೂ ಕೊಂದಿರುವನು. ಬಾಲಕನಾಗಿರುವಾಗಲೆ ವಿಶ್ವಾಮಿತ್ರರ ಅನುಗ್ರಹದಿಂದ ದುರ್ನಡತೆಯುಳ್ಳ ತಾಟಕೆಯೆಂಬ ರಾಕ್ಷಸಿಯನ್ನು ಸಂಹರಿಸಿರುವನು.

೨೮. ವಿಶ್ವಾಮಿತ್ರರ ಯಾಗದಲ್ಲಿ ರಾಘವನೆಂಬ ಲೀಲಾಮಾನುಷದೇಹದಿಂದ ಹದಿನಾಲ್ಕುಸಾವಿರ ರಕ್ಕಸರನ್ನು ಕೊಂದಿರುವನು.

೨೯–೩೧. ಶೂರ್ಪಣಖಿಯನ್ನು ವಿರೂಪಳನ್ನಾಗಿ ಮಾಡಿರುವನು. ತ್ರಿಶಿರನನ್ನು ಸಂಹರಿಸಿರುವನು. ಮನೋಹರವಾದ ಕುತ್ತಿಗೆಯುಳ್ಳ ವಾಲಿಯನು

CC-0. Jangamwadi Math Collection. Digitized by eGangotri

ಕೃತ್ವಾ ಸೇತುಂ ಸಮುದ್ರಸ್ಯ ರಣೇ ಹತ್ವಾ ದಶಾನನಂ ।
ಧರ್ಮಾಽರಣ್ಯಂ ಸಮಾಸಾದ್ಯ ಬ್ರಾಹ್ಮಣಾನಸ್ವಪೂಜಯತ್ ॥ ೩೦ ॥
ಶಾಸನಂ ದ್ವಿಜವರ್ಯೇಭ್ಯೋ ದತ್ವಾ ಗ್ರಾಮಾನ್ಬಹೂಂಸ್ತಥಾ ।
ಸ್ನಾತ್ವಾ ಚೈವ ಧರ್ಮವಾಪ್ಯಾಂ ಸುದಾನಾನ್ಯದದಾದ್ಗವಾಂ ॥ ೩೧ ॥
ಸಾಧೂನಾಂ ಪಾಲನಂ ಕೃತ್ವಾ ನಿಗ್ರಹಾಯ ದುರಾತ್ಮನಾಂ ।
ಏವಮನ್ಯಾನಿ ಕರ್ಮಾಣಿ ಶ್ರುತಾನಿ ಚ ಧರಾತಲೇ ॥ ೩೨ ॥
ಸ ದೇವೋ ಲೀಲಯಾ ಕೃತ್ವಾ ಕಥಂ ಚಾಽಶ್ವಮುಖೋಽಭವತ್ ।
ಯೋ ಜಾತೋ ಯಾದವೇ ವಂಶೇ ಪೂತನಾಶಕಟಾದಿಕಂ ॥ ೩೩ ॥
ಅರಿಷ್ಟದೈತ್ಯಃ ಕೇಶೀ ಚ ವೃಕಾಽಸುರಬಕಾಽಸುರೌ ।
ಶಕಟಾಸುರೋ ಮಹಾಽಸುರಸ್ತೃಣಾವರ್ತಶ್ಚ ಧೇನುಕಃ ॥ ೩೪ ॥
ಮಲ್ಲಶ್ಚೈವ ತಥಾ ಕಂಸೋ ಜರಾಸಂಧಸ್ತಥೈವ ಚ ।
ಕಾಲಯವನಸ್ಯ ಹಂತಾ ಚ ಕಥಂ ವೈ ಸ ಹಯಾನನಃ ।
ತಾರಕಾಽಸುರಂ ರಣೇ ಜಿತ್ವಾಯುತಷಟ್ಪುರಂ ತಥಾ ॥ ೩೫ ॥
ಕನ್ಯಾಶ್ಚೋದ್ವಾಹಿನಾ ಯೇನ ಸಹಸ್ರಾಣಿ ಚ ಷಟ್‌ದಶ ।
ಅಮಾನುಷಾಣಿ ಕೃತ್ವೇತ್ಥಂ ಕಥಂ ಸೋಽಶ್ವಮುಖೋಽಭವತ್ ॥ ೩೬ ॥
ತ್ರಾತಾ ಯಃ ಸರ್ವಭಕ್ತಾನಾಂ ಹಂತಾ ಸರ್ವದುರಾತ್ಮನಾಂ ।
ಧರ್ಮಸ್ಥಾಪನಕೃತ್ಸೋಽಪಿ ಕಲ್ಕಿರ್ವಿಷ್ಣುಪದೇ ಸ್ಥಿತಃ ॥ ೩೭ ॥

---

ಕೊಂದು ಅವನ ಅನುಜನಾದ ಸುಗ್ರೀವನ ಸಹಾಯದಿಂದ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ ಯುದ್ಧದಲ್ಲಿ ದಶಕಂಠನನ್ನು ವಧಿಸಿ ಧರ್ಮಾರಣ್ಯಕ್ಕೆ ಬಂದು ದ್ವಿಜರನ್ನು ಪೂಜಿಸಿರುವನು. ಧರ್ಮವಾಪಿಯಲ್ಲಿ ಮಿಂದು ಬ್ರಾಹ್ಮಣರಿಗೆ ಬಹು ಗ್ರಾಮಗಳನ್ನು ಕೊಟ್ಟು ಗೋದಾನಗಳನ್ನು ಮಾಡಿರುವನು.

೩೨. ದುಷ್ಟಶಿಕ್ಷೆ ಶಿಷ್ಟಪರಿಪಾಲನೆಗಾಗಿ ಹೀಗೆಯೇ ಅನೇಕ ಕಾರ್ಯಗಳನ್ನು ಭೂಮಿಯಲ್ಲಿ ಮಾಡಿರುವನೆಂದೂ ಕೇಳಿದ್ದೇನೆ.

೩೩–೩೬. ಅಂತಹ ಮಹಾಪ್ರಭುವು ಅಶ್ವಮುಖನಾದುದೆಂತು? ಯಾದವ ಕುಲದಲ್ಲಿ ಅವತರಿಸಿ ಪೂತನೆ, ಶಕಟಾಶುರ, ಮಲ್ಲ, ಕಂಸ, ಜರಾಸಂಧ, ಕಾಲಯವನ ಇವರನ್ನು ಕೊಂದಿರುವ ಈ ವಿಷ್ಣುವು ಹೇಗೆ ಹಯವದನನಾದನು? ತಾರಕಾಸುರನನ್ನೂ, ಅವನ ಅರುವತ್ತುಸಾವಿರ ಪಟ್ಟಣಗಳನ್ನೂ ಗೆದ್ದು ಹದಿನಾರು ಸಾವಿರ ಕನ್ಯೆಯರನ್ನು ವಿವಾಹಮಾಡಿಕೊಂಡಿರುವನು. ಹೀಗೆ ಅಮಾನುಷ ಕಾರ್ಯಗಳನ್ನು ಮಾಡಿದ ಈ ವಿಷ್ಣುವು ಹೇಗೆ ಅಶ್ವಮುಖನಾದನು?

೩೭. ವಿಷ್ಣುವು ಕಲ್ಕಿರೂಪಿಯಾಗಿ ಸಕಲಭಕ್ತರನ್ನು ರಕ್ಷಿಸುವವನೂ, ದುಷ್ಟನಾಶಕನೂ, ಧರ್ಮವನ್ನು ಸ್ಥಾಪಿಸುವವನೂ ಆಗಿರುವನು.

CC-0. Jangamwadi Math Collection. Digitized by eGangotri

ಏತದ್ದೈತ್ಯ ಮಹದಾಶ್ಚರ್ಯಂ ಭವತಾ ಯತ್ಪ್ರಕಾಶಿತಂ ।
ಏತದಾಚಕ್ಷ್ವ ಮೇ ಸರ್ವಂ ಕಾರಣಂ ತ್ರಿಪುರಾಂತಕ ॥ ೩೮ ॥
ಶ್ರೀರುದ್ರ ಉವಾಚ :—
ಸಾಧು ಪೃಷ್ಟಂ ಮಹಾಬಾಹೋ ಕಾರಣಂ ತಸ್ಯ ವಚ್ಮ್ಯಹಂ ।
ಹಯಗ್ರೀವಸ್ಯ ಕೃಷ್ಣಸ್ಯ ಶೃಣುಷ್ವೈಕಾಗ್ರಮಾನಸಃ ॥ ೩೯ ॥
ವ್ಯಾಸ ಉವಾಚ :—
ಪುರಾ ದೇವೈಃ ಸಮಾರಬ್ಧೋ ಯಜ್ಞೋ ನೂನಂ ಧರಾತಲೇ ।
ವೇದಮಂತ್ರೈರಾಹ್ವಯಿತುಂ ಸರ್ವೇ ರುದ್ರಪುರೋಗಮಾಃ ॥ ೪೦ ॥
ವೈಕುಂಠೇ ಚ ಗತಾಃ ಸರ್ವೇ ಕ್ಷೀರಾಬ್ಧೌ ಚ ನಿಜಾಲಯೇ ।
ಪಾತಾಲೇಽಪಿ ಪುನರ್ಗತ್ವಾ ನ ವಿದುಃ ಕೃಷ್ಣದರ್ಶನಂ ॥ ೪೧ ॥
ಮೋಹಾವಿಷ್ಟಾಸ್ತತಃ ಸರ್ವೇ ಇತಶ್ಚೇತಶ್ಚ ಧಾವಿತಾಃ ।
ನೈವ ದೃಷ್ಟಸ್ತದಾ ತೈಸ್ತು ಬ್ರಹ್ಮರೂಪೋ ಜನಾರ್ದನಃ ॥ ೪೨ ॥
ವಿಚಾರಯಂತಿ ತೇ ಸರ್ವೇ ದೇವಾ ಇಂದ್ರ ಪುರೋಗಮಾಃ ।
ಕ್ವ ಗತೋಽಸೌ ಮಹಾವಿಷ್ಣುಃ ಕೇನೋಪಾಯೇನ ದೃಶ್ಯತೇ ॥ ೪೩ ॥
ಪ್ರಣಮ್ಯ ಶಿರಸಾ ದೇವಂ ವಾಗೀಶಂ ಪ್ರೋಚುರಾದರಾತ್ ।
ದೇವದೇವ ಮಹಾವಿಷ್ಣುಂ ಕಥಯಸ್ವ ಪ್ರಸಾದತಃ ॥ ೪೪ ॥

---

೩೮. ನೀನು ಹೇಳಿದ ವಿಷಯವು ನನಗೆ ಬಹಳ ಆಶ್ಚರ್ಯವನ್ನುಂಟು ಮಾಡಿದೆ. ಓ ತ್ರಿಪುರಾಂತಕ! ಇದರ ಕಾರಣವನ್ನು ತಿಳಿಸು.

೩೯. ಶ್ರೀರುದ್ರನು ಹೇಳುತ್ತಾನೆ:—ಸ್ಕಂದ! ಚೆನ್ನಾಗಿ ಪ್ರಶ್ನಿಸಿದೆ. ಶ್ರೀ ಮಹಾವಿಷ್ಣುವು ಹಯಗ್ರೀವನಾಗಲು ಕಾರಣವನ್ನು ಹೇಳುವೆನು. ಚಿತ್ತೈಕಾಗ್ರ್ಯ ದಿಂದ ಶ್ರವಣಮಾಡು.

೪೦–೪೧. ವ್ಯಾಸನು ಹೇಳುತ್ತಾನೆ:— ಹಿಂದೆ ರುದ್ರಾದಿ ದೇವತೆಗಳು ಭೂಮಿಯಲ್ಲಿ ಯಜ್ಞವನ್ನಾರಂಭಿಸಿ ವೇದಮಂತ್ರಗಳಿಂದ ವಿಷ್ಣುವನ್ನು ಕರೆಯು ವುದಕ್ಕಾಗಿ ಎಲ್ಲರೂ ಸೇರಿ ವೈಕುಂಠ, ಕ್ಷೀರಸಮುದ್ರ, ಪಾತಾಳಗಳಿಗೆ ಹೋಗಿ ಎಲ್ಲಿಯೂ ಆ ವಿಷ್ಣುವನ್ನು ಕಾಣದೆಹೋದರು.

೪೨. ಮುಗ್ಧರಾಗಿ ಅವರು ಇಲ್ಲಿ ಅಲ್ಲಿ ಓಡುತ್ತ ಎಲ್ಲಿಯೂ ಶ್ರೀವಿಷ್ಣು ವನ್ನು ಕಾಣಲಿಲ್ಲ.

೪೩. ಇಂದ್ರಾದಿ ದೇವತೆಗಳೆಲ್ಲರೂ "ಮಹಾವಿಷ್ಣುವು ಎಲ್ಲಿಗೆ ಹೋದನು? ಇವನನ್ನು ನೋಡುವ ಬಗೆ ಹೇಗೆ" ಎಂದು ಆಲೋಚಿಸಿದರು.

೪೪. ಬೃಹಸ್ಪತಿಗೆ ವಂದಿಸಿ "ಸ್ವಾಮಿ! ಅನುಗ್ರಹಿಸಿ ಮಹಾವಿಷ್ಣುವು ಎಲ್ಲಿರುವನೆಂಬುದನ್ನು ಹೇಳಿರಿ" ಎಂದರು.

CC-0. Jangamwadi Math Collection. Digitized by eGangotri

ಬೃಹಸ್ಪತಿರುವಾಚ :—

ನ ಜಾನೇ ಕೇನ ಕಾರ್ಯೇಣ ಯೋಗಾರೂಢೋ ಮಹಾತ್ಮವಾನ್ ।
ಯೋಗರೂಪೋಽಭವದ್ವಿಷ್ಣುರ್ಯೋಗೀಶೋ ಹರಿರಚ್ಯುತಃ ॥ ೪೫ ॥
ಕ್ಷಣಂ ಧ್ಯಾತ್ವಾ ಸ್ವಮಾತ್ಮಾನಂ ಧಿಷಣೇನ ಖ್ಯಾಪಿತೋ ಹರಿಃ ।
ತತ್ರ ಸರ್ವೇ ಗತಾ ದೇವಾ ಯತ್ರ ದೇವೋ ಜಗತ್ಪತಿಃ ॥ ೪೬ ॥
ತದಾ ದೃಷ್ಟೋ ಮಹಾವಿಷ್ಣುರ್ಧ್ಯಾನಸ್ಥೋಽಸೌ ಜನಾರ್ದನಃ ।
ಧ್ಯಾತ್ವಾ ಕೃತ್ಯಸಮಾಕಾರಂ ಸಶರಂ ದೈತ್ಯಸೂದನಂ ॥ ೪೭ ॥
ಸಮಾಸ್ಥಾನಂ ತತೋ ದೃಷ್ಟ್ವಾ ಬೋಧೋಪಾಯಂ ಪ್ರಚಕ್ರಮೇ ।
ಆಹ ತಾಂಶ್ಚ ತದಾವಮ್ರ್ಯೋ ಧನುರ್ಗುಣಂ ಪ್ರಯತ್ನತಃ ।
ಛೇತ್ಸ್ಯಂತಿ ಚೇತ್ತಚ್ಛಬ್ದೇನ ಪ್ರಬುಧ್ಯೇತ ಹರಿಃ ಸ್ವಯಂ ॥ ೪೮ ॥

ದೇವಾ ಊಚುಃ :—

ಗುಣಭಕ್ಷ್ಯಂ ಕುರುಧ್ವಂ ವೈ ಯೇನಾಽಸೌ ಬುಧ್ಯತೇ ಹರಿಃ ।
ಕೃತ್ಯಾರ್ಥಿನೋ ವಯಂ ವಮ್ರ್ಯಃ ಪ್ರಭುಂ ವಿಜ್ಞಾಪಯಾಮಹೇ ॥ ೪೯ ॥

ವಮ್ರ್ಯ ಊಚುಃ :—

ನಿದ್ರಾಭಂಗಂ ತಥಾ ಚ್ಛೇದಂ ದಂಪತ್ಯೋರ್ಮೈತ್ರಭೇದನಂ ।
ಶಿಶುಮಾತೃವಿಭೇದಂ ವಾ ಕುರ್ವಾಣಂ ನರಕಂ ವ್ರಜೇತ್ ॥ ೫೦ ॥

---

೪೫. ಬೃಹಸ್ಪತಿಯು ಹೇಳುತ್ತಾನೆ :— ಎಲೈ ಸುರರೇ! ಯೋಗಿಗಳಿಗೆ ಒಡೆಯನಾದ ವಿಷ್ಣುವು ಯಾವ ಕಾರಣದಿಂದ ಯೋಗನಿರತನಾದನೊ ನಾನರಿಯೆ.

೪೬. ಬೃಹಸ್ಪತಿಯು ಇಂತು ನುಡಿದು ಸ್ವಲ್ಪಹೊತ್ತು ಮನಸ್ಸಿನಲ್ಲಿಯೆ ಆಲೋಚಿಸಿ ವಿಷ್ಣುವಿರುವ ಸ್ಥಳವನ್ನು ತಿಳಿಸಿದನು. ದೇವತೆಗಳೆಲ್ಲರೂ ಸೇರಿ ವಿಷ್ಣುವಿರುವ ಸ್ಥಳಕ್ಕೆ ತೆರಳಿದರು.

೪೭—೪೮. ಅಲ್ಲಿ ಧ್ಯಾನಾರೂಢನಾದ ಆತನನ್ನು ನೋಡಿದರು. ತಪಸ್ಸಿಗೆ ಸರಿಯಾದ ಆಕೃತಿಯುಳ್ಳವನೂ, ಬಾಣಸಹಿತನೂ ಆಗಿರುವ ದೈತ್ಯಾಂತಕನಾದ ಆ ವಿಷ್ಣುವನ್ನು ಧ್ಯಾನಿಸಿ ಸಮಾಧಿಸ್ಥನಾದ ಅವನನ್ನು ಎಚ್ಚರಿಸುವ ಯುಕ್ತಿಯನ್ನು ಆಲೋಚಿಸಿದರು. ಆಗ ಬೃಹಸ್ಪತಿಯು ಗೆದ್ದಲು ಹುಳುಗಳು ಆ ವಿಷ್ಣುವಿನ ಬಿಲ್ಲಿನ ಹಗ್ಗವನ್ನು ಕಡಿದರೆ ಅವನು ಎಚ್ಚರಗೊಂಡಾನೆಂದನು.

೪೯. ದೇವತೆಗಳು ಹೇಳುತ್ತಾರೆ :—ಎಲೈ ಗೆದ್ದಲುಹುಳುಗಳೆ! ವಿಷ್ಣುವಿನ ಬಿಲ್ಲಿನ ಹಗ್ಗವನ್ನು ಕತ್ತರಿಸಿರಿ. ಆದರಿಂದ ವಿಷ್ಣುವು ಎಚ್ಚರಗೊಳ್ಳುವನು. ಆಗ ಯಜ್ಞಾರ್ಥಿಗಳಾದ ನಾವು ಪ್ರಭುವಾದ ವಿಷ್ಣುವನ್ನು ಕುರಿತು ವಿಜ್ಞಾಪಿಸಿಕೊಳ್ಳುತ್ತೇವೆ.

೫೦. ಗೆದ್ದಲು ಹುಳುಗಳು ಹೇಳುತ್ತವೆ :—ನಿದ್ರಾಭಂಗವನ್ನೂ, ಕಥೆಯನ್ನು ಹೇಳುವಾಗ ಮಧ್ಯದಲ್ಲಿ ನಿಲ್ಲಿಸುವುದನ್ನೂ, ಗಂಡಹೆಂಡಿರ ಸ್ನೇಹಕ್ಕೆ

CC-0. Jangamwadi Math Collection. Digitized by eGangotri

ಯೋಗಾರೂಢೋ ಜಗನ್ನಾಥಃ ಸಮಾಧಿಸ್ಥೋ ಮಹಾಬಲಃ ।
ತಸ್ಯ ಶ್ರೀಜಗದೀಶಸ್ಯ ವಿಘ್ನಂ ನೈವ ತು ಕುರ್ಮಹೇ ॥ ೫೧ ॥

ಬ್ರಹ್ಮೋವಾಚ :—

ಭವತಾಂ ಸರ್ವಭಕ್ಷತ್ವಂ ದೇವಕಾರ್ಯಂ ಕ್ರಿಯೇತ ಚೇತ್ ।
ಕರ್ತವ್ಯಂ ಚ ತತೋ ವಮ್ರ್ಯೋ ಯಜ್ಞಸಿದ್ಧಿರ್ಯಥಾ ಭವೇತ್ ।
ವಮ್ರಾಶಾ ಸಾ ತದಾ ವತ್ಸ ಪುನರೇವಮುವಾಚ ಹ ॥ ೫೨ ॥

ವಮ್ರ್ಯುವಾಚ :—

ದುಃಖಸಾಧ್ಯೋ ಜಗನ್ನಾಥೋ ಮಲಯಾಽನಿಲಸನ್ನಿಭಃ ।
ಕಥಂ ವಾ ಬೋಧ್ಯತಾಂ ಬ್ರಹ್ಮನ್ನಸ್ಮಾಭಿಃ ಸುರಪೂಜಿತಃ ॥ ೫೩ ॥
ನೈವ ಯಜ್ಞೇನ ಮೇ ಕಾರ್ಯಂ ಸುರೈಶ್ಚೈವ ತಥೈವ ಚ ।
ಸರ್ವೇಷು ಯಜ್ಞಕಾರ್ಯೇಷು ಭಾಗಂ ದದತು ಮೇ ಸುರಾಃ ॥ ೫೪ ॥

ದೇವಾ ಊಚುಃ :—

ಪ್ರದಾಸ್ಯಾಮೋ ವಯಂ ವಮ್ರ್ಯೈ ಭಾಗಂ ಯಜ್ಞೇಷು ಸರ್ವದಾ ।
ಯಜ್ಞಾಯ ದತ್ತಮಸ್ಮಾಭಿಃ ಕುರುಷ್ವೈವಂ ವಚೋ ಹಿ ನಃ ॥ ೫೫ ॥
ತಥೇತಿ ವಿಧಿನಾಪ್ಯುಕ್ತಂ ವಮ್ರಾ ಚೋದ್ಯಮುಪಾಶ್ರಿತಾ ।
ಗುಣಭಕ್ಷಾದಿಕಂ ಕರ್ಮ ತಯಾ ಸರ್ವಂ ಕೃತಂ ನೃಪ ॥ ೫೬ ॥

---

ಭಂಗತರುವವದನ್ನೂ, ತಾಯಿ ಮತ್ತು ಶಿಶುಗಳ ಅಗಲಿಸುವಿಕೆಯನ್ನೂ, ಮಾಡುವವನು ನರಕಭಾಗಿಯಾದಾನು.

೫೧. ಜಗನ್ನಾಥನೂ, ಅತಿಬಲಿಷ್ಠನೂ ಆಗಿರುವ ಶ್ರೀ ಮಹಾವಿಷ್ಣುವು ಯೋಗಾರೂಢನಾಗಿದ್ದಾನೆ. ಇವನಿಗೆ ನಾವು ವಿಘ್ನವನ್ನು ಮಾಡಲಾರೆವು.

೫೨. ಬ್ರಹ್ಮನು ಹೇಳುತ್ತಾನೆ:—ನೀವು ಸರ್ವಭಕ್ಷಕರಾಗಿದ್ದೀರಿ. ನಿಮ್ಮ ಕರ್ತವ್ಯವನ್ನು ನೀವು ನೆರವೇರಿಸಿ ದೇವತೆಗಳ ಯಜ್ಞವನ್ನು ಸಾಂಗಗೊಳಿಸಿರಿ.'' ಮಗು ! ಆಗ ಅವುಗಳ ಒಡೆಯಳು ತಿರುಗಿ ಹೀಗೆಂದಳು.

೫೩. ಗೆದ್ದಲುಹುಳುಗಳ ಸ್ವಾಮಿನಿಯು ಹೇಳುತ್ತಾಳೆ:—ಎಲೈ ಬ್ರಹ್ಮನೆ! ಕಷ್ಟದಿಂದ ಹೊಂದಲುಮಾತ್ರ ಶಕ್ಯನೂ, ಜಗದೊಡೆಯನೂ, ಮಲಯಪರ್ವತದ ಗಾಳಿಯಂತಿರುವವನೂ, ದೇವಾಧಿಕನೂ ಆಗಿರುವ ವಿಷ್ಣುವನ್ನು ಹೇಗೆ ಎಚ್ಚರಿಸಲಿ?

೫೪. ಈಗ ನನಗೆ ಯಜ್ಞದಿಂದಾಗಲಿ, ದೇವತೆಗಳಿಂದಾಗಲಿ ಪ್ರಯೋಜನವಿರುವುದಿಲ್ಲ. ಆದುದರಿಂದ ಸಕಲ ಯಜ್ಞಗಳಲ್ಲಿಯೂ ನನಗೆ ಭಾಗ ಸಲ್ಲಲಿ.

೫೫–೫೬. ದೇವತೆಗಳು ಹೇಳುತ್ತಾರೆ:—ನಾವು ಯಜ್ಞಗಳಲ್ಲಿ ಗೆದ್ದಲಿಗೆ ಭಾಗವನ್ನು ಕೊಡುವೆವು. ನಾವು ಯಜ್ಞವನ್ನು ಮಾಡಲು ಮನಸ್ಸನ್ನಿಟ್ಟದ್ದೇವೆ. ನಮ್ಮ ಮಾತನ್ನು ನೆರವೇರಿಸು. ಬ್ರಹ್ಮನೂ ಅದಕ್ಕೆ ಸಮ್ಮತಿಸಿದನು. ಗೆದ್ದಲು ತನ್ನ ಕಾರ್ಯವನ್ನಾರಂಭಿಸಿತು. ಅದು ಹಗ್ಗವನ್ನು ಪೂರ್ತಿಯಾಗಿ ಭಕ್ಷಿಸಿತು.

CC-0. Jangamwadi Math Collection. Digitized by eGangotri

ಯುಧಿಷ್ಠಿರ ಉವಾಚ:—
ಅಸ್ಯ ವಾ ಬೋಧನೇ ದೇವಾ ಗುಣಭಂಗೇ ಸಮಾಧಿಷು ।
ಏತದಾಶ್ಚರ್ಯಂ ವಿಪ್ರರ್ಷೇ ಸತ್ಯಂ ಸತ್ಯವತೀಸುತ ॥ ೫೭ ॥
ವ್ಯಾಸ ಉವಾಚ:—
ವ್ಯಗ್ರಚಿತ್ತಾಃ ಸುರಾಃ ಸರ್ವೇ ಆಕೃಷ್ಟಂ ಹರಿಕಾರ್ಮುಕಂ ।
ನ ಜಾನೇ ಕೇನ ಕಾರ್ಯೇಣ ವಿಷ್ಣುಮಾಯಾ ವಿಮೋಹಿತಾ ॥ ೫೮ ॥
ಮುದಿತಾಸ್ತಾಃ ಪ್ರಮುಂಚಂತಿ ವಲ್ಮೀಕಂ ಚಾಗ್ರತೋ ಹರೇಃ ।
ಕೋಟಿಪಾರ್ಶ್ವೇ ತತೋ ನೀತಂ ವಲ್ಮೀಕಂ ಪರ್ವತೋಪಮಂ ॥ ೫೯ ॥
ಗುಣೇ ಚ ಭಕ್ಷಿತೇ ತಸ್ಮಿಂಸ್ತತ್ಕ್ಷಣಾದೇವ ದೂಷಿತೇ ।
ವ್ಯಾಘಾತಕೋಟಿಭಿಃ ಸಾರ್ಧಂ ಶೀರ್ಷಂ ಛಿತ್ವಾ ದಿವಂ ಗತಂ ॥ ೬೦ ॥
ಗತೇ ಶೀರ್ಷೇ ಚ ತೇ ದೇವಾ ಭೃಶಮುದ್ವಿಗ್ನಮಾನಸಾಃ ।
ಧಾವಂತಿ ಸರ್ವತಃ ಸರ್ವೇ ಶಿರ ಆಲೋಕನಾಯ ತೇ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ವಿಷ್ಣು ಶಿರೋನಾಶವರ್ಣನಂ"ನಾಮ ಚತುರ್ದಶೋಽಧ್ಯಾಯಃ

---

೫೭. ಯುಧಿಷ್ಠಿರನು ಕೇಳುತ್ತಾನೆ:—ಎಲೈ ವ್ಯಾಸಮುನಿಯೆ! ದೇವತೆಗಳು ಸಮಾಧಿಸ್ಥನಾದ ವಿಷ್ಣುವನ್ನು ಎಚ್ಚರಿಸಲು ಅವನ ಬಿಲ್ಲಿನ ಹಗ್ಗವನ್ನು ಕತ್ತರಿಸುವುದರಲ್ಲಿ ತೊಡಗಿದುದು ಆಶ್ಚರ್ಯವನ್ನುಂಟುಮಾಡಿದೆ.

೫೮. ವ್ಯಾಸನು ಹೇಳುತ್ತಾನೆ:—ಸಕಲ ಸುರರೂ ವಿಷ್ಣುಮಾಯೆಯಿಂದ ಮುಗ್ಧರಾಗಿ ಹರಿಯ ಚಾಪವನ್ನು ಸೆಳೆಯಲು ಆಸಕ್ತರಾದುದಕ್ಕೆ ಕಾರಣ ವೇನೆಂಬುದನ್ನು ನಾನರಿಯೆನು.

೫೯. ಅವರಂತೂ ಬ್ರಹ್ಮಸಮಾತಿನಂತೆ ಸಂತೋಷಗೊಂಡು ವಿಷ್ಣುವಿನ ಬಿಲ್ಲಿನ ತುದಿಯಲ್ಲಿ ಬೆಟ್ಟದಂತಿರುವ ಗೆದ್ದಲು ಗುಂಪನ್ನು ಬಿಟ್ಟರು.

೬೦. ಹಗ್ಗವನ್ನು ಹುಳುಗಳು ಕತ್ತರಿಸಲು ಕೂಡಲೆ ಬಿಲ್ಲು ತನ್ನ ಕೊನೆಯಿಂದ ವಿಷ್ಣುವಿನ ಶಿರಸ್ಸನ್ನು ಕತ್ತರಿಸಿ ಆ ತಲೆಯೊಡನೆ ದೇವಲೋಕಕ್ಕೆ ಹೊರಟುಹೋಯಿತು.

೬೧. ತಲೆಯು ಅದೃಶ್ಯವಾಗಲು ದೇವತೆಗಳು ಬಹಳವಾಗಿ ವ್ಯಥೆಗೊಂಡು ಅದನ್ನು ಹುಡುಕುವುದಕ್ಕಾಗಿ ಎಲ್ಲೆಡೆಗೂ ಓಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ಬ್ರಹ್ಮಖಂಡದ ಧರ್ಮಾರಣ್ಯಮಾಹಾತ್ಮ್ಯದಲ್ಲಿ "ವಿಷ್ಣುಶಿರೋನಾಶವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಹಯಗ್ರೀವಾಖ್ಯಾನವರ್ಣನಂ

ವ್ಯಾಸ ಉವಾಚ :—

ನ ಪಶ್ಯಂತಿ ತದಾ ಶೀರ್ಷಂ ಬ್ರಹ್ಮಾದ್ಯಾಸ್ತು ಸುರಾಸ್ತದಾ ।
ಕಿಂ ಕುರ್ಮ ಇತಿ ಹೇತ್ಯುಕ್ತ್ವಾ ಜ್ಞಾನಿನಸ್ತೇ ವ್ಯಚಿಂತಯನ್ ॥ ೧ ॥
ಉವಾಚ ವಿಶ್ವಕರ್ಮಾಣಂ ತದಾ ಬ್ರಹ್ಮಾ ಸುರಾನ್ವಿತಃ ॥ ೨ ॥

ಬ್ರಹ್ಮೋವಾಚ :—

ವಿಶ್ವಕರ್ಮಂಸ್ತ್ವಮೇವಾಽಸಿ ಕಾರ್ಯಕರ್ತಾ ಸದಾ ವಿಭೋ ।
ಶೀಘ್ರಮೇವ ಕುರುತ್ವಂ ವೈ ವಕ್ತ್ರಂ ಸಾಂದ್ರಂ ಚ ಧನ್ವಿನಃ ॥ ೩ ॥
ನಮಸ್ಕೃತ್ಯ ತದಾ ತಸ್ಮೈ ಸ್ತುತೋಽಸೌ ದೇವವರ್ಧಕಿಃ ।
ಉವಾಚ ಪರಯಾ ಭಕ್ತ್ಯಾ ಬ್ರಹ್ಮಾಣಂ ಕಮಲೋದ್ಭವಂ ॥ ೪ ॥
ಯಜ್ಞಕಾರ್ಯಂ ನಿವೃತ್ಯಾಶು ವದಂತಿ ವಿವಿಧಾಃ ಸುರಾಃ ।
ಯಜ್ಞಭಾಗವಿಹೀನಂ ಮಾಂ ಕಿಂ ಪುನರ್ವಚ್ಮಿ ತೇಽಗ್ರತಃ ।
ಯಜ್ಞಭಾಗಮಹಂ ದೇವ ಲಭೇಯೈವಂ ಸುರೈಃ ಸಹ ॥ ೫ ॥

---

### ಕನ್ನಡದ ಅನುವಾದ

#### ಹಯಗ್ರೀವಾಖ್ಯಾನವರ್ಣನ

೧–೨. ವ್ಯಾಸನು ಹೇಳುತ್ತಾನೆ:—ಜ್ಞಾನಿಗಳಾದ ಬ್ರಹ್ಮಾದಿ ದೇವತೆಗಳು ವಿಷ್ಣುವಿನ ಮಸ್ತಕವನ್ನು ಕಾಣದೆ, "ಅಯ್ಯೋ! ಈಗೇನು ಮಾಡಬೇಕು?" ಎಂದು ಆಲೋಚಿಸಿದರು. ಆಗ ಬ್ರಹ್ಮನು ಸುರರೊಡನೆ ವಿಶ್ವಕರ್ಮನಿಗೆ ಇಂತೆಂದನು.

೩. ಬ್ರಹ್ಮನು ಹೇಳುತ್ತಾನೆ:—ವಿಶ್ವಕರ್ಮ! ನೀನು ಯಾವಾಗಲೂ ನಮ್ಮ ಕೆಲಸವನ್ನು ಮಾಡುವವನು. ಆದ್ದರಿಂದ ಧನುರ್ಧಾರಿಯಾದ ವಿಷ್ಣುವಿಗೆ ದೃಢವಾದ ಮುಖವೊಂದನ್ನು ನಿರ್ಮಿಸು.

೪. ಹೀಗೆ ಸ್ತುತಿಸಲ್ಪಟ್ಟ ದೇವತೆಗಳ ಬಡಗಿಯಾದ ವಿಶ್ವಕರ್ಮನು ಆ ಕಮಲಸಂಭವನನ್ನು ಅತ್ಯಂತ ಭಕ್ತಿಯಿಂದ ವಂದಿಸಿ ಹೀಗೆಂದನು.

೫. ದೇವತೆಗಳು ಯಜ್ಞದ ಕೆಲಸವನ್ನು ನನ್ನಿಂದ ಪೂರೈಸಿಕೊಂಡು ಹೀಗೆನ್ನುತ್ತಾರೆ. ನಾನು ಯಜ್ಞಭಾಗವಿಲ್ಲದವನು. ನಿನ್ನ ಮುಂದೇನೆಂದು ಹೇಳಲಿ. ನಾನು ಸಹ ದೇವತೆಗಳೊಡನೆ ಯಜ್ಞಭಾಗಿಯಾಗಬೇಕು.

CC-0. Jangamwadi Math Collection. Digitized by eGangotri

ಬ್ರಹ್ಮೋವಾಚ :—

ದಾಸ್ಯಾಮಿ ಸರ್ವಯಜ್ಞೇಷು ವಿಭಾಗಂ ಸುರವರ್ಧಕೇ ।
ಸೋಮೇ ತ್ವಂ ಪ್ರಥಮಂ ವೀರ ಪೂಜ್ಯಸೇ ಶ್ರುತಿಕೋವಿದೈಃ ॥ ೭ ॥
ತದ್ವಿಷ್ಣೋಶ್ಚ ಶಿರಸ್ತಾವತ್ಸಂಧತ್ಸ್ವಾಽಮರವರ್ಧಕೇ ।
ವಿಶ್ವಕರ್ಮಾಽಬ್ರವೀದ್ದೇವಾನಾನಯಧ್ವಂ ಶಿರಸ್ತ್ವಿತಿ ॥ ೭ ॥
ತನ್ನಾಸ್ತೀತಿ ಸುರಾಃ ಸರ್ವೇ ವದಂತಿ ನೃಪಸತ್ತಮ ।
ಮಧ್ಯಾಹ್ನೇ ತು ಸಮುದ್ಭೂತೇ ರಥಸ್ಥೇ ದಿವಿ ಚಾಂಶುಮಾನ್ ॥ ೮ ॥
ದೃಷ್ಟಂ ತದಾ ಸುರೈಃ ಸರ್ವೈ ರಥಾದಶ್ವಮಥಾನಯನ್ ।
ಛಿತ್ವಾ ಶೀರ್ಷಂ ಮಹೀಪಾಲ ಕಬಂಧಾದ್ವಾಜಿನೋ ಹರೇಃ ॥ ೯ ॥
ಕಬಂಧೇ ಯೋಜಯಾಮಾಸ ವಿಶ್ವಕರ್ಮಾಽತಿಚಾತುರಃ ।
ದೃಷ್ಟ್ವಾ ತಂ ದೇವದೇವೇಶಂ ಸುರಾಃ ಸ್ತುತಿಮಕುರ್ವತ ॥ ೧೦ ॥

ದೇವಾ ಊಚುಃ :—

ನಮಸ್ತೇಽಸ್ತು ಜಗದ್ಬೀಜ ನಮಸ್ತೇ ಕಮಲಾಪತೇ ।
ನಮಸ್ತೇಽಸ್ತು ಸುರೇಶಾನ ನಮಸ್ತೇ ಕಮಲೇಕ್ಷಣ ॥ ೧೧ ॥
ತ್ವಂ ಸ್ಥಿತಿಃ ಸರ್ವಭೂತಾನಾಂ ತ್ವಮೇವ ಶರಣಂ ಸತಾಂ ।
ತ್ವಂ ಹಂತಾ ಸರ್ವದುಷ್ಟಾನಾಂ ಹಯಗ್ರೀವ ನಮೋಽಸ್ತುತೇ ॥ ೧೨ ॥

---

೭. ಬ್ರಹ್ಮನು ಹೇಳುತ್ತಾನೆ:— ದೇವತೆಗಳ ಬಡಗಿಯಾದ ಎಲೈ ವಿಶ್ವಕರ್ಮನೆ ! ಸಕಲ ಯಜ್ಞಗಳಲ್ಲಿಯೂ ನಿನಗೆ ಭಾಗವನ್ನು ಸಲ್ಲಿಸುವೆನು. ಸೋಮಪಾನದಲ್ಲಿ ನಿನ್ನನ್ನು ಮೊದಲು ಪೂಜಿಸುವರು.

೭–೧೦. ವಿಶ್ವಕರ್ಮ! ಈಗ ವಿಷ್ಣುವಿನ ತಲೆಯನ್ನು ಸೇರಿಸು'' ಎಂದನು. ವಿಶ್ವಕರ್ಮನು ದೇವತೆಗಳನ್ನು ಕುರಿತು, "ತಲೆಯನ್ನು ತೆಗೆದುಕೊಂಡು ಬನ್ನಿರಿ'' ಎಂದು ಹೇಳಿದನು. "ಆ ತಲೆಯಿಲ್ಲವೆಂ''ದು ಅವರು ನುಡಿದರು. ಬಳಿಕ ಮಧ್ಯಾಹ್ನವಾಗಲು ಸೂರ್ಯನು ಆಕಾಶದಲ್ಲಿ ರಥವನ್ನೇರಿಬಂದನು. ಸುರರು ನೋಡಿ ಅವನ ರಥದಿಂದ ಕುದುರೆಯನ್ನು ತಂದರು. ಆಗ ಅತಿಕುಶಲನಾದ ವಿಶ್ವಕರ್ಮನು ಸೂರ್ಯನ ಕುದುರೆಯ ತಲೆಯನ್ನು ಛೇದಿಸಿ ಅದನ್ನು ವಿಷ್ಣುವಿನ ಮುಂಡದಲ್ಲಿ ಸೇರಿಸಿದನು. ಆಗಲಾ ಸುರರು ವಿಷ್ಣುವನ್ನು ಕಂಡು ಈ ರೀತಿ ಸ್ತುತಿಸಿದರು.

೧೧. ದೇವತೆಗಳು ಸ್ತುತಿಸುತ್ತಾರೆ:—ಜಗತ್ಕಾರಣನೂ, ಲಕ್ಷ್ಮೀಪತಿಯೂ, ದಿವಿಜರೊಡೆಯನೂ, ಕಮಲಾಕ್ಷನೂ ಆಗಿರುವ ಶ್ರೀಹರಿಯೆ! ನಿನಗೆ ನಮಸ್ಕಾರವು.

೧೨. ಹಯವದನ! ನೀನು ಸಕಲಪ್ರಾಣಿಗಳನ್ನೂ ಕಾಪಾಡುವವನು. ಸಜ್ಜನರನ್ನು ರಕ್ಷಿಸುವವನು. ದುಷ್ಟಸಂಹಾರಕನು. ನಿನಗೆ ನಮಸ್ಕಾರವು.

CC-0. Jangamwadi Math Collection. Digitized by eGangotri

ತ್ವಮೋಂಕಾರೋ ವಷಟ್ಕಾರಃ ಸ್ವಾಹಾ ಸ್ವಧಾ ಚತುರ್ವಿಧಾ ।
ಆದ್ಯಸ್ತ್ವಂ ಚ ಸುರೇಶಾನ ತ್ವಮೇವ ಶರಣಂ ಸದಾ ॥ ೧೩ ॥
ಯಜ್ಞೋ ಯಜ್ಞಪತಿರ್ಯಜ್ವಾ ದ್ರವ್ಯಂ ಹೋತಾ ಹುತಸ್ತಥಾ ।
ತ್ವದರ್ಥಂ ಹೂಯತೇ ದೇವ ತ್ವಮೇವ ಶರಣಂ ಶಿಖಾ ॥ ೧೪ ॥
ಕಾಲಃ ಕರಾಲರೂಪಸ್ತ್ವಂ ತ್ವಂ ವಾರ್ಕಃ ಶೀತದೀಧಿತಿಃ ।
ತ್ವಮಗ್ನಿರ್ವರುಣಶ್ಚೈವ ತ್ವಂ ಚ ಕಾಲಕ್ಷಯಂಕರಃ ॥ ೧೫ ॥
ಗುಣತ್ರಯಂ ತ್ವಮೇವೇಹ ಗುಣಹೀನಸ್ತ್ವಮೇವ ಹಿ ।
ಗುಣಾನಾಮಾಲಯಸ್ತ್ವಂ ಚ ಗೋಪ್ತಾ ಸರ್ವೇಷು ಜಂತುಷು ॥ ೧೬ ॥
ಸ್ತ್ರೀಪುಂಸೋಶ್ಚ ದ್ವಿಧಾ ತ್ವಂ ಚ ಪಶುಪಕ್ಷ್ಯಾದಿಮಾನವೈಃ ।
ಚತುರ್ವಿಧಂ ಕುಲಂ ತ್ವಂ ಹಿ ಚತುರಾಶೀತಿಲಕ್ಷಣಃ ॥ ೧೭ ॥
ದಿನಾಂತಶ್ಚೈವ ಪಕ್ಷಾಂತೋ ಮಾಸಾಂತೋ ಹ್ಯಯನಂ ಯುಗಂ
ಕಲ್ಪಾಂತಶ್ಚ ಮಹಾಂತಶ್ಚ ಕಾಲಾಂತಸ್ತ್ವಂ ಚ ವೈ ಹರೇ ॥ ೧೮ ॥
ಏವಂ ವಿಧೈರ್ಮಹಾದಿವ್ಯೈಃ ಸ್ತೂಯಮಾನಃ ಸುರೈರ್ನೃಪ ।
ಸಂತುಷ್ಟಃ ಪ್ರಾಹ ಸರ್ವೇಷಾಂ ದೇವಾನಾಂ ಪುರತಃ ಪ್ರಭುಃ ॥ ೧೯ ॥

---

೧೩. ಓಂಕಾರ, ವಷಟ್ಕಾರ, ಸ್ವಾಹಾ, ಸ್ವಧಾರೂಪದಿಂದ ನೀನು ನಾಲ್ಕು ವಿಧವಾಗಿರುವೆ. ಸುರಪತಿ ! ನೀನು ಜಗದಾದಿಯಲ್ಲಿರುವವನು. ನೀನೇ ಯಾವಾಗಲೂ ರಕ್ಷಕನು.

೧೪. ಯಜ್ಞವೂ, ಯಜ್ಞದೊಡೆಯನೂ, ಯಾಗಮಾಡುವವನೂ, ಯಾಗದ ಸಾಮಗ್ರಿಯೂ, ಹೋಮಮಾಡುವವನೂ, ಹೋಮಮಾಡಲ್ಪಟ್ಟ ದ್ರವ್ಯವೂ ನೀನೆ! ನಿನಗಾಗಿಯೇ ಹೋತೃಗಳು ಹೋಮಮಾಡುವರು. ನೀನೇ ರಕ್ಷಕನು ಮತ್ತು ಸಮಸ್ತರಿಗೂ ಸ್ನೇಹಿತನು.

೧೫. ನೀನೇ ಭಯಂಕರರೂಪವಾದ ಕಾಲನು. ನೀನೇ ಸೂರ್ಯ ಮತ್ತು ಚಂದ್ರನು. ನೀನೇ ಅಗ್ನಿ ಮತ್ತು ವರುಣನು. ನೀನೇ ಕಾಲಾಂತಕನು.

೧೬–೧೭. ನೀನೇ ಸತ್ವಾದಿಗುಣತ್ರಯನೂ, ನಿರ್ಗುಣನೂ, ಗುಣಗಳಿಗೆ ಆಶ್ರಯನೂ, ಸಕಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿದ್ದು ಸಲಹುವವನೂ ಆಗಿರುವೆ. ಪಶುಪಕ್ಷಿಮಾನವಾದಿ ಜಾತಿಗಳ ಸ್ತ್ರೀಪುಂರೂಪನೂ, ನಾಲ್ಕುವರ್ಣಗಳೂ, ಎಂಬತ್ತುನಾಲ್ಕುಲಕ್ಷ ಜೀವರಾಶಿಗಳೂ ನೀನೇ ಆಗಿರುವೆ.

೧೮. ಶ್ರೀಹರಿ ! ಸಾಯಂಕಾಲ, ಹುಣ್ಣಿಮೆ, ಅಮಾವಾಸ್ಯೆ, ಸಂವತ್ಸರ, ಯುಗ, ಕಲ್ಪಾಂತ, ಮಹಾಪ್ರಲಯಾಂತ, ಕಾಲಾಂತ ಸರ್ವವೂ ನೀನೇ.''

೧೯. ಪ್ರಭುವೆ! ದೇವತೆಗಳು ಇಂತಹ ದಿವ್ಯಸ್ತೋತ್ರಗಳಿಂದ ವಿಷ್ಣುವನ್ನು ಹೊಗಳಲು ಅವನು ಆನಂದಗೊಂಡು ಸಕಲ ದೇವತೆಗಳನ್ನೂ ಕುರಿತು ಹೀಗೆಂದನು.

CC-0. Jangamwadi Math Collection. Digitized by eGangotri

ಶ್ರೀ ಭಗವಾನುವಾಚ :—

ಕಿಮರ್ಥಮಿಹ ಸಂಪ್ರಾಪ್ತಾಃ ಸರ್ವೇ ದೇವಗಣಾ ಭುವಿ ।
ಕಿಮೇತತ್ಕಾರಣಂ ದೇವಾಃ ಕಿಂ ನು ದೈತ್ಯಪ್ರಪೀಡಿತಾಃ ॥ ೨೦ ॥

ದೇವಾ ಊಚುಃ :—

ನ ದೈತ್ಯಸ್ಯ ಭಯಂ ಜಾತಂ ಯಜ್ಞಕರ್ಮೋತ್ಸುಕಾ ವಯಂ ।
ತ್ವದ್ದರ್ಶನಪರಾಃ ಸರ್ವೇ ಪಶ್ಯಾಮೋ ವೈ ದಿಶೋ ದಶ ॥ ೨೧ ॥
ತ್ವನ್ಮಾಯಾಮೋಹಿತಾಃ ಸರ್ವೇ ವ್ಯಗ್ರಚಿತ್ತಾ ಭಯಾತುರಾಃ ।
ಯೋಗಾರೂಢಸ್ವರೂಪಂ ಚ ದೃಷ್ಟಂ ತೇಽಸ್ಮಾಭಿರುತ್ತಮಂ ॥ ೨೨ ॥
ವಮ್ರಿ ಚ ನೋದಿತಾಽಸ್ಮಾಭಿರ್ಜಾಗರಾಯ ತವೇಶ್ವರ ।
ತತಶ್ಚಾಽಪೂರ್ವಮಭವಚ್ಛಿರಶ್ಛಿನ್ನಂ ಬಭೂವ ತೇ ॥ ೨೩ ॥
ಸೂರ್ಯಾಽಶ್ವಶೀರ್ಷಮಾನೀಯ ವಿಶ್ವಕರ್ಮಾಽತಿಚಾತುರಃ ।
ಸಮಧತ್ತ ಶಿರೋ ವಿಷ್ಣೋ ಹಯಗ್ರೀವೋಽಸ್ಯತಃ ಪ್ರಭೋ ॥ ೨೪ ॥

ವಿಷ್ಣುರುವಾಚ :—

ತುಷ್ಟೋಽಹಂ ನಾಕಿನಃ ಸರ್ವೇ ದದಾಮಿ ವರಮೀಪ್ಸಿತಂ ।
ಹಯಗ್ರೀವೋಽಸ್ಮ್ಯಹಂ ಜಾತೋ ದೇವದೇವೋ ಜಗತ್ಪತಿಃ ॥ ೨೫ ॥

---

೨೦. ಶ್ರೀಮಹಾವಿಷ್ಣುವು ಹೇಳುತ್ತಾನೆ :—ಎಲೈ ದೇವತೆಗಳೆ! ನೀವೆಲ್ಲರೂ ಭೂಲೋಕಕ್ಕೆ ಏತಕ್ಕೆ ಬಂದಿರಿ? ಇದಕ್ಕೆ ಕಾರಣವೇನು? ನಿಮಗೆ ದೈತ್ಯರಿಂದೇನಾದರೂ ತೊಂದರೆಯಾಗಿದೆಯೆ?

೨೧. ದೇವತೆಗಳು ಹೇಳುತ್ತಾರೆ:—ಪ್ರಭು! ನಮಗೆ ದೈತ್ಯರಿಂದ ಭಯವುಂಟಾಗಿಲ್ಲ. ನಾವು ಯಜ್ಞವನ್ನೆಸಗಲು ಉತ್ಸುಕರಾಗಿದ್ದೇವೆ. ನಿನ್ನನ್ನು ನೋಡಬಯಸಿ ಹತ್ತುದಿಕ್ಕುಗಳನ್ನೂ ಹುಡುಕುತ್ತಿದ್ದೆವು.

೨೨–೨೩. ನಿನ್ನ ಮಾಯೆಯಿಂದ ಮೋಹಗೊಂಡ ಮನಸ್ಸುಳ್ಳವರೂ, ಭಯಾರ್ತರೂ ಆದ ನಾವೆಲ್ಲರೂ ಉತ್ತಮವಾದ ನಿನ್ನ ಯೋಗಾಸಕ್ತರೂಪವನ್ನು ಕಂಡೆವು. ನಿನ್ನನ್ನು ಎಚ್ಚರಿಸುವುದಕ್ಕಾಗಿ ಗೆದ್ದಲನ್ನು ಪ್ರೇರಿಸಿದೆವು. ಅದರಿಂದ ಅದ್ಭುತವಾದ ನಿನ್ನ ತಲೆಯು ಕತ್ತರಿಸಲ್ಪಟ್ಟಿತು.

೨೪. ಸ್ವಾಮಿ! ಅತಿಕುಶಲನಾದ ವಿಶ್ವಕರ್ಮನು ಸೂರ್ಯನ ಅಶ್ವದ ಮಸ್ತಕವನ್ನು ತಂದು ನಿನ್ನ ಮುಂಡಕ್ಕೆ ಸೇರಿಸಿದನು. ಅದರಿಂದ ನೀನು ಹಯಗ್ರೀವನಾದೆ.

೨೫. ವಿಷ್ಣುವು ಹೇಳುತ್ತಾನೆ:—ದೇವತೆಗಳೇ! ನಾನು ಸಂತೋಷಗೊಂಡಿದ್ದೇನೆ. ನಿಮಗೆ ಇಷ್ಟವಾದ ವರವನ್ನು ಕೊಡುವೆನು. ಜಗತ್ಪತಿಯಾದ ಪ್ರಕೃತದಲ್ಲಿ ನಾನು ಹಯಗ್ರೀವನಾದೆನು.

CC-0. Jangamwadi Math Collection. Digitized by eGangotri

ನ ರೌದ್ರಂ ನ ವಿರೂಪಂ ಚ ಸುರೈರಪಿ ಚ ಸೇವಿತಂ ।
ಜಾತೋಽಹಂ ವರದೋ ದೇವಾ ಹಯಾನನೇತಿ ತೋಷಿತಃ ॥ ೨೬ ॥

ವ್ಯಾಸ ಉವಾಚ :—

ಕೃತೇ ಸತ್ರೇ ತತೋ ವೇಧಾ ಧೀಮಾನ್ಸಂತುಷ್ಟಚೇತಸಾ ।
ಯಜ್ಞಭಾಗಂ ತತೋ ದತ್ವಾ ವಮ್ರಿಭ್ಯೋ ವಿಶ್ವಕರ್ಮಣೇ ॥ ೨೭ ॥
ಯಜ್ಞಾಂತೇ ಚ ಸುರಶ್ರೇಷ್ಠಂ ನಮಸ್ಕೃತ್ಯ ದಿವಂ ಯಯೌ ।
ಏತಚ್ಚ ಕಾರಣಂ ವಿದ್ಧಿ ಹಯಾನನೋ ಯತೋ ಹರಿಃ ॥ ೨೮ ॥

ಯುಧಿಷ್ಠಿರ ಉವಾಚ :—

ಯೇನಾಕ್ರಾಂತಾ ಮಹೀ ಸರ್ವಾ ಕ್ರಮೇಣೈಕೇನ ತತ್ವತಃ ।
ವಿವರೇ ವಿವರೇ ರೋಮ್ಣಾಂ ವರ್ತಂತೇ ಚ ಪೃಥಕ್ಪೃಥಕ್ ॥ ೨೯ ॥
ಬ್ರಹ್ಮಾಂಡಾನಿ ಸಹಸ್ರಾಣಿ ದೃಶ್ಯಂತೇ ಚ ಮಹಾದ್ಯುತೇ ।
ನ ವೇತ್ತಿ ವೇದೋ ಯತ್ಪಾರಂ ಶೀರ್ಷಘಾತೋ ಹಿ ವೈ ಕಥಂ ॥ ೩೦ ॥

ವ್ಯಾಸ ಉವಾಚ :—

ಶೃಣು ತ್ವಂ ಪಾಂಡವಶ್ರೇಷ್ಠ ಕಥಾಂ ಪೌರಾಣಿಕೀಂ ಶುಭಾಂ ।
ಈಶ್ವರಸ್ಯ ಚರಿತ್ರಂ ಹಿ ನೈವ ವೇತ್ತಿ ಚರಾಚರೇ ॥ ೩೧ ॥

---

೨೬. ಎಲೈ ಸುರರೆ ! ಭಯಂಕರವಲ್ಲದೆಯೂ ಕುರೂಪವಿಲ್ಲದೆಯೂ ಇರುವ ನಿಮ್ಮಿಂದ ಸೇವಿಸಲ್ಪಟ್ಟ ಹಯಗ್ರೀವರೂಪನಾದೆನೆಂದು ಸಂತೋಷಗೊಂಡ ನಾನು ವರಪ್ರದಾನಮಾಡುವೆನು.

೨೭–೨೮. ವ್ಯಾಸನು ಹೇಳುತ್ತಾನೆ:—ತರುವಾಯ ಯಜ್ಞವು ನಡೆಯುತ್ತಿರಲು ಬ್ರಹ್ಮನು ಸಂತುಷ್ಟನಾಗಿ ಗೆದ್ದಲುಗಳಿಗೂ, ವಿಶ್ವಕರ್ಮನಿಗೂ ಯಜ್ಞಭಾಗಗಳನ್ನಿತ್ತು ಯಜ್ಞದ ಕೊನೆಯಲ್ಲಿ ವಿಷ್ಣುವಿಗೆ ವಂದಿಸಿ ದೇವಲೋಕಕ್ಕೆ ತೆರಳಿದನು. ವಿಷ್ಣುವು ಹಯಗ್ರೀವನಾಗಲು ಕಾರಣವನ್ನು ಇದೆಂದು ತಿಳಿದುಕೊ.

೨೯–೩೦. ಯುಧಿಷ್ಠಿರನು ಕೇಳುತ್ತಾನೆ:—ವಿಷ್ಣುವೊಬ್ಬನೆ ಸಮಸ್ತ ಭೂಮಿಯನ್ನೂ ಆಕ್ರಮಿಸಿರುವನು. ಇವನ ರೋಮಗಳ ಛಿದ್ರಗಳಲ್ಲಿ ನೆಲೆಸಿರುವ ಸಹಸ್ರ ಬ್ರಹ್ಮಾಂಡಗಳೂ ಪ್ರತ್ಯೇಕಪ್ರತ್ಯೇಕವಾಗಿ ಕಾಣುವುವು. ಇವನ ಸಂಪೂರ್ಣ ಚರಿತ್ರವಿಷಯಗಳು ವೇದಗಳಿಗೂ ತಿಳಿಯದು. ಇಂತಹ ವಿಷ್ಣುವಿನ ತಲೆಯು ಕಡಿದುಹೋಗಲು ಕಾರಣವೇನು ?

೩೧. ವ್ಯಾಸನು ಹೇಳುತ್ತಾನೆ:—ಪಾಂಡವಶ್ರೇಷ್ಠನಾದ ಯುಧಿಷ್ಠಿರನೆ ! ಮಂಗಳಕರವಾದ ಈ ಪೌರಾಣಿಕ ಕಥೆಯನ್ನು ಕೇಳು. ಚರಾಚರಾತ್ಮಕ ಪ್ರಪಂಚದಲ್ಲಿ ವಿಷ್ಣುವಿನ ಈ ಚರಿತ್ರೆಯನ್ನು ಯಾರೂ ಅರಿಯರು.

CC-0. Jangamwadi Math Collection. Digitized by eGangotri

ಏಕದಾ ಬ್ರಹ್ಮಸಭಾಯಾಂ ಗತಾ ದೇವಾಃ ಸವಾಸವಾಃ ।
ಭೂರ್ಲೋಕಾದ್ಯಾಶ್ಚ ಸರ್ವೇ ಹಿ ಸ್ಥಾವರಾಣಿ ಚರಾಣಿ ಚ ॥ ೩೨ ॥
ದೇವಾ ಬ್ರಹ್ಮರ್ಷಯಃ ಸರ್ವೇ ನಮಸ್ಕರ್ತುಂ ಪಿತಾಮಹಂ ।
ವಿಷ್ಣುರಪ್ಯಾಗತಸ್ತತ್ರ ಸಭಾಯಾಂ ಮಂತ್ರಕಾರಣಾತ್ ॥ ೩೩ ॥
ಬ್ರಹ್ಮಾಚಾಽಪಿ ಸು ಗರ್ವಿಷ್ಠ ಉವಾಚೇದಂ ವಚಸ್ತದಾ ।
ಭೋ ಭೋ ದೇವಾಃ ಶೃಣುಧ್ವಂ ಕಸ್ತ್ರಯಾಣಾಂ ಕಾರಣಂ ಮಹತ್ ॥
ಸತ್ಯಂ ಬ್ರುವಂತು ವೈ ದೇವಾ ಬ್ರಹ್ಮೇಶವಿಷ್ಣುಮಧ್ಯತಃ ।
ತಾಂ ವಾಚಂ ಚ ಸಮಾಕರ್ಣ್ಯ ದೇವಾ ವಿಸ್ಮಯಮಾಗತಾಃ ॥ ೩೪ ॥
ಊಚುಶ್ಚೈವ ತತೋ ದೇವಾ ನ ಜಾನೀಮೋ ವಯಂ ಸುರಾಃ ।
ಬ್ರಹ್ಮಪತ್ನೀ ತದೋವಾಚ ವಿಷ್ಣುಂ ಪ್ರತಿ ಸುರೇಶ್ವರಂ ।
ತ್ರಯಾಣಾಮಪಿ ದೇವಾನಾಂ ಮಹಾಂತಂ ಚ ವದಸ್ವ ಮೇ ॥ ೩೬ ॥

ವಿಷ್ಣುರುವಾಚ :—

ವಿಷ್ಣುಮಾಯಾಬಲೇನೈವ ಮೋಹಿತಂ ಭುವನತ್ರಯಂ ।
ತತೋ ಬ್ರಹ್ಮೋವಾಚ ಚೇದಂ ನ ತ್ವಂ ಜಾನಾಸಿ ಭೋ ವಿಭೋ ॥ ೩೭ ॥
ನೈವ ಮುಹ್ಯಂತಿ ತೇ ಮಾಯಾಬಲೇನ ನೈವಮೇವ ಚ ।
ಗರ್ವಹಿಂಸಾಪರೋ ದೇವೋ ಜಗದ್ಭರ್ತಾ ಜಗತ್ಪ್ರಭುಃ ॥ ೩೮ ॥

---

೩೨–೩೩. ಒಂದಾನೊಂದು ಸಮಯದಲ್ಲಿ ಬ್ರಹ್ಮನ ಸಭೆಗೆ ಇಂದ್ರಾದಿ ದೇವತೆಗಳೂ, ಭೂರಾದಿ ಸಕಲ ಲೋಕದವರೂ, ಸ್ಥಾವರ ಜಂಗಮಗಳೂ, ಬ್ರಹ್ಮರ್ಷಿಗಳೂ ಬ್ರಹ್ಮನನ್ನು ವಂದಿಸುವುದಕ್ಕಾಗಿ ಹೋದರು. ವಿಷ್ಣುವು ಆ ಸಭೆಗೆ ಮಂತ್ರಾಲೋಚನೆಗಾಗಿ ಬಂದನು.

೩೪–೩೫. ಆಗ ಬ್ರಹ್ಮನು ಗರ್ವಸಹಿತನಾಗಿ "ಅಯ್ಯಾ ದೇವತೆಗಳೆ! ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ಪ್ರಪಂಚಕ್ಕೆ ಪ್ರಧಾನ ಕಾಣರರಾರು? ನಿಜವಾಗಿ ಹೇಳಿರಿ" ಎಂದು ನುಡಿದನು. ಆ ಮಾತನ್ನು ಕೇಳಿ ದೇವತೆಗಳು ಅಚ್ಚರಿಗೊಂಡರು.

೩೬. ತರುವಾಯ ಅವರು, "ನಾವರಿಯೆವು" ಎಂದರು. ಆಗ ಬ್ರಹ್ಮನ ರಾಣಿಯಾದ ವಾಣಿಯು ವಿಷ್ಣುವನ್ನು ಕುರಿತು ಬ್ರಹ್ಮಾದಿಗಳಲ್ಲಿ ಉತ್ತಮನಾರೆಂಬುದನ್ನು ನನಗೆ ಹೇಳೆಂದಳು.

೩೭–೩೯. ವಿಷ್ಣುವು ಹೇಳುತ್ತಾನೆ:—"ವಿಷ್ಣುವಿನ ಮಾಯಾಶಕ್ತಿಯಿಂದಲೆ ತ್ರಿಭುವನವೂ ಮೋಹಗೊಂಡಿದೆ." ವಿಷ್ಣುವು ಇಂತೆನಲು, ಬ್ರಹ್ಮನು ಮುನಿಸಿನಿಂದ ನಡುಗುತ್ತಿರುವ ತುಟಿಯುಳ್ಳವನಾಗಿ ವಿಷ್ಣುವನ್ನು ಕುರಿತು, "ನಿನಗೆ ತಿಳಿಯದು. ನಿನ್ನ ಮಾಯಾಶಕ್ತಿಯಿಂದ ಯಾರೂ ಮೋಹಗೊಳ್ಳುವುದಿಲ್ಲ. ನೀನು ಹೇಳಿದಂತಲ್ಲವೇ ಅಲ್ಲವು. ಜಗತ್ಪತಿಯಾದರೂ ನೀನು ಅಹಂಕಾರಿಯು.

CC-0. Jangamwadi Math Collection. Digitized by eGangotri

ಜ್ಯೇಷ್ಠಂ ತ್ವಾಂ ನ ವಿದುಃ ಸರ್ವೇ ವಿಷ್ಣುಮಾಯಾವೃತಾಃ ಖಿಲಾಃ ।
ತತೋ ಬ್ರಹ್ಮಾ ಸರೋಷೇಣ ಕ್ರುದ್ಧಃ ಪ್ರಸ್ಫುರಿತಾನನಃ ॥ ೩೯ ॥
ಉವಾಚ ವಚನಂ ಕೋಪಾದ್ಧೇ ವಿಷ್ಣೋ ಶೃಣು ಮೇ ವಚಃ ।
ಯೇನ ವಕ್ತ್ರೇಣ ಸಭಾಯಾಂ ವಚನಂ ಸಮುದೀರಿತಂ ॥ ೪೦ ॥
ತಚ್ಛೀರ್ಷಂ ಪತತಾದಾಶು ಚಾಲ್ಪಕಾಲೇನ ವೈ ಪುನಃ ।
ತತೋ ಹಾಹಾಕೃತಂ ಸರ್ವಂ ಸೇಂದ್ರಾಃ ಸರ್ಷಿಪುರೋಗಮಾಃ ॥ ೪೧ ॥
ಬ್ರಹ್ಮಾಣಂ ಕ್ಷಮಯಾಮಾಸುರ್ವಿಷ್ಣುಂ ಪ್ರತಿ ಸುರೋತ್ತಮಾಃ ।
ವಿಷ್ಣುಶ್ಚ ತದ್ವಚಃ ಶ್ರುತ್ವಾ ಸತ್ಯಂ ಸತ್ಯಂ ಭವಿಷ್ಯತಿ ॥ ೪೨ ॥
ತತೋ ವಿಷ್ಣುರ್ಮಹಾತೇಜಾಸ್ತೀರ್ಥಸ್ಯೋತ್ಪಾದನೇನ ಚ ।
ತಪಸ್ತೇಪೇ ತು ವೈ ತತ್ರ ಧರ್ಮಾರಣ್ಯೇ ಸುರೇಶ್ವರಃ ।
ಅಶ್ವಶೀರ್ಷಮುಖಂ ದೃಷ್ಟ್ವಾ ಹಯಗ್ರೀವೋ ಜನಾರ್ದನಃ ॥ ೪೩ ॥
ತಪಸ್ತೇಪೇ ಮಹಾಭಾಗ ವಿಧಿನಾ ಸಹ ಭಾರತ ।
ನ ಶಕ್ಯಂ ಕೇನ ಚಿತ್ಕರ್ತುಮಾತ್ಮನಾತ್ಮೈವ ತುಷ್ಟವಾನ್ ॥ ೪೪ ॥
ಬ್ರಹ್ಮಾಽಪಿ ತಪಸಾ ಯುಕ್ತಸ್ತೇಪೇ ವರ್ಷಶತತ್ರಯಂ ।
ತಿಷ್ಠನ್ನೇವ ಪುರೋ ವಿಷ್ಣೋರ್ವಿಷ್ಣುಮಾಯಾವಿಮೋಹಿತಃ ॥ ೪೫ ॥

---

ಹಿಂಸಾಪರನು. ನಿನ್ನ ಮಾಯೆಯಿಂದ ಆವೃತರಾದ ಯಾರೂ ನಿನ್ನನ್ನು ಉತ್ತಮನನ್ನಾಗಿ ತಿಳಿದಿರುವುದಿಲ್ಲ.

೪೦–೪೧. ಎಲೈ ವಿಷ್ಣುವೆ! ನನ್ನ ವಚನವನ್ನು ಕೇಳು. ನೀನು ಯಾವ ಬಾಯಿಯಿಂದ ಈ ಸಭೆಯಲ್ಲಿ ಈ ಮಾತನ್ನು ಆಡಿದೆಯೊ; ಆ ಬಾಯಿಯಿರುವ ತಲೆಯು ಸ್ವಲ್ಪಕಾಲದಲ್ಲಿಯೇ ಬಿದ್ದುಹೋಗಲಿ" ಎಂದನು. ಬಳಿಕ ಇದನ್ನು ಕೇಳಿ ಋಷಿಗಳೂ, ದೇವತೆಗಳೂ ಹಾಹಾಕಾರಮಾಡಿದರು.

೪೨. ದೇವತೆಗಳು ವಿಷ್ಣುವಿನಲ್ಲಿ ಕುಪಿತನಾದ ಬ್ರಹ್ಮನನ್ನು ಸಮಾಧಾನಗೊಳಿಸಿದರು. ವಿಷ್ಣುವೂ ಆ ಬ್ರಹ್ಮನ ಮಾತನ್ನು ಕೇಳಿ "ಇದು ಸತ್ಯವಾಗುವುದೆಂ"ದನು.

೪೩–೪೪. ಬಳಿಕ ಮಹಾತೇಜಸ್ವಿಯಾದ ವಿಷ್ಣುವು ತನ್ನ ಅಶ್ವಮುಖವನ್ನು ಕಂಡು ಧರ್ಮಾರಣ್ಯದಲ್ಲಿ ತೀರ್ಥವನ್ನು ನಿರ್ಮಿಸಿ ಅಲ್ಲಿ ಬ್ರಹ್ಮನೊಡನೆ ಯಾರಿಂದಲೂ ಮಾಡಲಾಗದ ತಪಸ್ಸನ್ನು ಮಾಡಿ ತನ್ನಿಂದಲೇ ತಾನು ಸಂತೋಷಗೊಂಡನು.

೪೫. ಬ್ರಹ್ಮನೂ ವಿಷ್ಣುಮಾಯೆಯಿಂದ ಮೋಹಿತನಾಗಿ ಅವನ ಮುಂದೆ ನಿಂತುಕೊಂಡೇ ಮುನ್ನೂರುವರ್ಷಗಳಕಾಲ ತಪಸ್ಸನ್ನಾಚರಿಸಿದನು.

CC-0. Jangamwadi Math Collection. Digitized by eGangotri

ಯಥಾರ್ಥಮುವದತ್ತುಷ್ಟೋ ದೇವದೇವೋ ಜಗತ್ಪತಿಃ ।
ಬ್ರಹ್ಮಂಸ್ತೇ ಮುಕ್ತತಾದ್ಯಾಸ್ತಿ ಮಮ ಮಾಯಾಽಪ್ಯದುಃಸಹಾ ॥ ೪೬ ॥
ತತೋ ಲಬ್ಧವರೋ ಬ್ರಹ್ಮಾ ಹೃಷ್ಟಚಿತ್ತೋ ಜನಾರ್ದನಃ ।
ಉವಾಚ ಮಧುರಾಂ ವಾಚಂ ಸರ್ವೇಷಾಂ ಹಿತಕಾರಣಾತ್ ॥ ೪೭ ॥
ಅತ್ರಾಽಭವನ್ಮಹಾಕ್ಷೇತ್ರಂ ಪುಣ್ಯಂ ಪಾಪಪ್ರಣಾಶನಂ ।
ವಿಧಿವಿಷ್ಣುಮಯಂ ಚೈತದ್ಭವತ್ವೇತನ್ನ ಸಂಶಯಃ ॥ ೪೮ ॥
ತೀರ್ಥಸ್ಯ ಮಹಿಮಾ ರಾಜನ್ಹಯಶೀರ್ಷಸ್ತದಾ ಹರಿಃ ।
ಶುಭಾನನೋ ಹಿ ಸಂಜಾತಃ ಪೂರ್ವೇಣೈವಾನನೇನ ತು ॥ ೪೯ ॥
ಕಂದರ್ಪಕೋಟಿಲಾವಣ್ಯೋ ಜಾತಃ ಕೃಷ್ಣಸ್ತದಾ ನೃಪ ।
ಬ್ರಹ್ಮಾಽಪಿ ತಪಸಾ ಯುಕ್ತೋ ದಿವ್ಯಂ ವರ್ಷಶತತ್ರಯಂ ॥ ೫೦ ॥
ಸಾವಿತ್ರ್ಯಾ ಚ ಕೃತಂ ಯತ್ರ ವಿಷ್ಣುಮಾಯಯಾ ನ ಬಾಧತೇ ।
ಮಾಯಯಾ ತು ಕೃತಂ ಶೀರ್ಷಂ ಪಂಚಮಂ ಶಾರ್ದೂಲಸ್ಯ ವಾ ॥ ೫೧ ॥
ಧರ್ಮಾರಣ್ಯೇ ಕೃತಂ ರಮ್ಯಂ ಹರೇಣ ಛೇದಿತಂ ಪುರಾ ।
ತಸ್ಮೈ ದತ್ವಾ ವರಂ ವಿಷ್ಣುರ್ಜಗಾಮಾದರ್ಶನಂ ತತಃ ॥ ೫೨ ॥

---

೪೬. ಜಗದೊಡೆಯನಾದ ವಿಷ್ಣುವು ಯಜ್ಞಕ್ಕಾಗಿ ಸಂತುಷ್ಟನಾಗಿ "ಅಯ್ಯಾ ಬ್ರಹ್ಮನೆ! ನೀನು ಮುಕ್ತನಾದೆ. ನಿನಗೆ ನನ್ನ ಮಾಯೆಯು ಸಹಿಸಲು ಶಕ್ಯವಾಗುವುದು" ಎಂದು ವರವನ್ನಿತ್ತನು.

೪೭. ಬಳಿಕ ಬ್ರಹ್ಮನು ವಿಷ್ಣುವಿನಿಂದ ವರವನ್ನು ಪಡೆದು ಸಂತೋಷಗೊಂಡನು. ವಿಷ್ಣುವು ಸಕಲಜನರ ಹಿತಕ್ಕೋಸ್ಕರವಾಗಿ ಮಧುರವಾದ ಮಾತನ್ನಾಡಿದನು.

೪೮. ಇಲ್ಲಿ ಪುಣ್ಯಕರವಾಗಿಯೂ ಪಾಪನಾಶಕವಾಗಿಯೂ ಇರುವ ಮಹಾಕ್ಷೇತ್ರವಾಗಿದೆ. ಇದು ಬ್ರಹ್ಮವಿಷ್ಣು ರೂಪವಾದುದು. ಇದರಲ್ಲಿ ಸಂದೇಹವಿಲ್ಲ.

೪೯. ಈ ತೀರ್ಥದ ಮಹಿಮೆಯಿಂದ ಆಗಲೆ ಹಯವದನನಾದ ಆ ಹರಿಯು ಹಿಂದಿನ ಮುಖವನ್ನು ಪಡೆದು ಸುಂದರವಾದ ವದನವುಳ್ಳವನಾದನು.

೫೦–೫೨. ಆಗಲಾತನು ಕೋಟಿಮನ್ಮಥರಂತೆ ಸೌಂದರ್ಯವುಳ್ಳವನಾದನು. ಮುನ್ನೂರು ವರ್ಷಗಳಕಾಲ ತಪಸ್ಸನ್ನು ಮಾಡಿದ ಬ್ರಹ್ಮನೂ ವಿಷ್ಣುಮಾಯೆಯ ಬಾಧೆಯಿಲ್ಲದವನಾದನು. ವಿಷ್ಣುಮಾಯೆಯಿಂದ ಹುಲಿಯ ತಲೆಯಂತಾದ ಅವನ ಐದನೆಯ ಮಸ್ತಕವು ಶಿವನಿಂದ ಕತ್ತರಿಸಲ್ಪಟ್ಟುದಾಗಿ ಇಲ್ಲಿ ಸುಂದರವಾಯಿತು. ವಿಷ್ಣುವು ಹೀಗೆ ಆ ಬ್ರಹ್ಮನಿಗೆ ವರವನ್ನಿತ್ತು ತಾನೂ ಕಣ್ಮರೆಯಾದನು.

CC-0. Jangamwadi Math Collection. Digitized by eGangotri

ಸ್ಥಾಪಯಿತ್ವಾ ವಿಧಿಸ್ತತ್ರ ತೀರ್ಥಂ ಚೈವ ತ್ರಿಲೋಚನಂ ।
ಮುಕ್ತೇಶಂ ನಾಮ ದೇವಸ್ಯ ಮೋಕ್ಷತೀರ್ಥಮರಿಂದಮ ॥ ೫೩ ॥
ಗತಃ ಸೋಽಪಿ ಸುರಶ್ರೇಷ್ಠಃ ಸ್ವಸ್ಥಾನಂ ಸುರಸೇವಿತಂ ।
ತತ್ರ ಪ್ರೇತಾ ದಿವಂ ಯಾಂತಿ ತರ್ಪಣೇನ ಪ್ರತರ್ಷಿತಾಃ ॥ ೫೪ ॥
ಅಶ್ವಮೇಧಫಲಂ ಸ್ನಾನೇ ಪಾನೇ ಗೋದಾನಜಂ ಫಲಂ
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ॥ ೫೫ ॥
ಸ್ನಾನಾರ್ಥಮತ್ರಾಗಚ್ಛಂತಿ ದೇವತಾಃ ಪಿತರಸ್ತಥಾ ।
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಮುಕ್ತೇಶಂ ಪೂಜಯೇತ್ತು ಯಃ ॥೫೬॥
ಸ್ನಾತ್ವಾ ದೇವಸರೇ ರಮ್ಯೇ ನತ್ವಾ ದೇವಂ ಜನಾರ್ದನಂ ।
ಯಃ ಕರೋತಿ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೫೭ ॥
ಭುಕ್ತ್ವಾ ಭೋಗಾನ್ಯಥಾಕಾಮಂ ವಿಷ್ಣುಲೋಕಂ ಸ ಗಚ್ಛತಿ ।
ಅಪುತ್ರಾ ಕಾಕವಂಧ್ಯಾ ಚ ಮೃತವತ್ಸಾ ಮೃತಪ್ರಜಾ ॥ ೫೮ ॥
ಏಕಾಂಬರೇಣ ಸುಸ್ನಾತಾ ಪತಿಪತ್ನ್ಯೌ ಯಥಾವಿಧಿ ।
ತದ್ದೋಷಂ ನಾಶಯೇನ್ನೂನಂ ಪ್ರಜಾಪ್ತಿಪ್ರತಿಬಂಧಕಂ ॥ ೫೯ ॥

---

೫೩–೫೪. ಬ್ರಹ್ಮನು ಅಲ್ಲಿ ಮುಕ್ತೇಶನೆಂಬ ಹೆಸರಿನಿಂದ ಮಹೇಶ್ವರನನ್ನೂ, ಮೋಕ್ಷತೀರ್ಥವನ್ನೂ ಸ್ಥಾಪಿಸಿ ದೇವಸೇವಿತವಾದ ತನ್ನ ಸ್ಥಾನಕ್ಕೆ ಹೋದನು. ಆ ತೀರ್ಥದಲ್ಲಿ ತರ್ಪಣಮಾಡುವುದರಿಂದ ಪ್ರೇತಗಳು ತೃಪ್ತಿಗೊಂಡು ಸ್ವರ್ಗಕ್ಕೆ ಹೋಗುವುವು.

೫೫. ಇಲ್ಲಿ ಪುಷ್ಕರಾದಿ ತೀರ್ಥಗಳೂ, ಗಂಗಾದಿ ನದಿಗಳೂ ಸನ್ನಿಹಿತವಾಗಿರುವುವು. ಇಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಾಗಫಲವೂ, ಇದರ ನೀರನ್ನು ಕುಡಿಯುವುದರಿಂದ ಗೋದಾನಫಲವೂ ಸಂಭವಿಸುವುವು.

೫೬–೫೭. ದೇವತೆಗಳೂ, ಪಿತೃಗಳೂ ಇಲ್ಲಿಗೆ ಸ್ನಾನಕ್ಕಾಗಿ ಬರುವರು. ಕೃತ್ತಿಕಾನಕ್ಷತ್ರದ ಯೋಗವಿರುವ ಕಾರ್ತಿಕಮಾಸದ ಹುಣ್ಣಿಮೆಯಲ್ಲಿ ಈ ದೇವಸರೋವರದಲ್ಲಿ ಮಿಂದು ಭಕ್ತಿಯಿಂದ ಮುಕ್ತೇಶನನ್ನು ಪೂಜಿಸಿದರೂ ವಿಷ್ಣುವನ್ನು ನಮಸ್ಕರಿಸಿದರೂ ನರನು ಸಕಲ ಪಾಪಮುಕ್ತನಾಗುವನು.

೫೮–೫೯. ವಿಷಯಸುಖಗಳನ್ನು ಯಥೇಚ್ಛವಾಗಿ ಅನುಭವಿಸಿ ವೈಕುಂಠವನ್ನು ಸೇರುವನು. ಮಕ್ಕಳಿಲ್ಲದವಳೂ, ಹುಟ್ಟುಬಂಜೆಯೂ, ಸತ್ತಮಕ್ಕಳುಳ್ಳವಳೂ ಆಗಿದ್ದರೆ ಆ ಸ್ತ್ರೀಯು ತನ್ನ ಗಂಡನೊಡನೆ ಒಂದೇ ಬಟ್ಟೆಯಿಂದ ಇಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಮಾಡಿದರೆ ಅವಳ ಸಂತತಿಗೆ ಅಡ್ಡಿಯಾದ ದೋಷವು ನೀಗುವುದು.

CC-0. Jangamwadi Math Collection. Digitized by eGangotri

ಮೋಕ್ಷೇಶ್ವರಪ್ರಸಾದೇನ ಪುತ್ರಪೌತ್ರಾದಿ ವರ್ಧಯೇತ್ ।
ದದ್ಯಾದ್ವೈ ಕೇನಚಿತ್ರೇನ ಫಲಾನಿ ಸತ್ಯಸಂಯುತಾ ॥ ೬೦ ॥
ನಿಧಾಯ ವಂಶಪಾತ್ರೇಽಪಿ ನಾರೀ ದೋಷಾತ್ಪ್ರಮುಚ್ಯತೇ ।
ಪ್ರಾಪ್ನುವಂತಿ ಚ ದೇವಾಶ್ಚ ಅಗ್ನಿಷ್ಟೋಮಫಲಂ ನೃಪ ॥ ೬೧ ॥
ವೇಧಾ ಹರಿರ್ಹರಶ್ಚೈವ ತಪ್ಯಂತೇ ಪರಮಂ ತಪಃ ।
ಧರ್ಮಾರಣ್ಯೇ ತ್ರಿಸಂಧ್ಯಂ ಚ ಸ್ನಾತ್ವಾ ದೇವಸರಸ್ಯಥ ॥ ೬೨ ॥
ತತ್ರ ಮೋಕ್ಷೇಶ್ವರಃ ಶಂಭುಃ ಸ್ಥಾಪಿತೋ ವೈ ತತಃ ಸುರೈಃ ।
ತತ್ರ ಸಾಂಗಂ ಜಪಂ ಕೃತ್ವಾ ನ ಭೂಯಃ ಸ್ತನಪೋ ಭವೇತ್ ॥ ೬೩ ॥
ಏವಂ ಕ್ಷೇತ್ರಂ ಮಹಾರಾಜ ಪ್ರಸಿದ್ಧಂ ಭುವನತ್ರಯೇ ।
ಯಸ್ತತ್ರ ಕುರುತೇ ಶ್ರಾದ್ಧಂ ಪಿತೄಣಾಂ ಶ್ರದ್ಧಯಾನ್ವಿತಃ ॥ ೬೪ ॥
ಉದ್ಧರೇತ್ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಂ ।
ದೇವಸರೋ ಮಹಾರಮ್ಯಂ ನಾನಾಪುಷ್ಪೈಃ ಸಮನ್ವಿತಂ ।
ಶ್ಯಾಮಂ ಕಮಲಕಲ್ಹಾರೈರ್ವಿವಿಧೈರ್ಜಲಜಂತುಭಿಃ ॥ ೬೫ ॥
ಬ್ರಹ್ಮವಿಷ್ಣುಮಹೇಶಾದ್ಯೈಃ ಸೇವಿತಂ ಸುರಮಾನುಷೈಃ ।
ಸಿದ್ಧೈರ್ಯಕ್ಷೈಶ್ಚ ಮುನಿಭಿಃ ಸೇವಿತಂ ಸರ್ವತಃ ಶುಭಂ ॥ ೬೬ ॥

---

೬೦–೬೧. ಹೆಂಗಸು ಒಮ್ಮನಸ್ಸಿನಿಂದ ಸತ್ಯವನ್ನು ನುಡಿಯುತ್ತ ಬಿದಿರಿನ ಮೊರದಲ್ಲಿ ಹಣ್ಣುಗಳನ್ನಿರಿಸಿ ದಾನಮಾಡಿದರೆ ಅವಳು ದೋಷವಿಮುಕ್ತಳಾಗಿ ಮೋಕ್ಷೇಶ್ವರನ ಅನುಗ್ರಹದಿಂದ ಪುತ್ರಪೌತ್ರರನ್ನು ಪಡೆಯುವಳು. ದೇವತೆಗಳೂ ಅಗ್ನಿಷ್ಟೋಮಯಾಗದ ಫಲವನ್ನು ಹೊಂದುವರು.

೬೨. ಹರಿಹರಬ್ರಹ್ಮರು ಈ ಧರ್ಮಾರಣ್ಯದ ದೇವಸರೋವರದಲ್ಲಿ ಮೂರು ಸಂಧ್ಯಾಕಾಲಗಳಲ್ಲಿಯೂ ಮಿಂದು ಉತ್ತಮವಾದ ತಪಸ್ಸನ್ನಾಚರಿಸುವರು.

೬೩. ಅಲ್ಲಿ ದೇವತೆಗಳು ಮೋಕ್ಷೇಶ್ವರನಾದ ಶಂಕರನನ್ನು ಪ್ರತಿಷ್ಠೆ ಮಾಡಿರುವರು. ಅಲ್ಲಿ ಅಂಗನ್ಯಾಸ ಕರನ್ಯಾಸ ಸಹಿತವಾಗಿ ಜಪವನ್ನುಮಾಡುವ ಮಾನವನು ತಿರುಗಿ ಹುಟ್ಟುವುದಿಲ್ಲ.

೬೪–೬೬. ಈ ಕ್ಷೇತ್ರವು ಮೂರು ಲೋಕಗಳಲ್ಲಿ ವಿಖ್ಯಾತವಾಗಿರುವುದು. ಇಲ್ಲಿ ಶ್ರದ್ಧೆಯಿಂದ ಪಿತೃಶ್ರಾದ್ಧವನ್ನು ಮಾಡುವ ನರನು ಏಳು ಗೋತ್ರಗಳನ್ನೂ, ನೂರೊಂದು ಕುಲಗಳನ್ನೂ ಉದ್ಧಾರಮಾಡುವನು. ಈ ದೇವಸರೋವರವು ಅತ್ಯಂತ ರಮಣೀಯವೂ, ಅನೇಕ ಪುಷ್ಪಗಳಿಂದ ಕಂಗೊಳಿಸುವುದೂ, ಕಮಲ ಕಲ್ಹಾರ ಪುಷ್ಪ ಮತ್ತು ಜಲಚರಪ್ರಾಣಿಗಳಿಂದ ನೀಲವರ್ಣವೂ, ಬ್ರಹ್ಮವಿಷ್ಣು ಮಹೇಶ್ವರರಿಂದಲೂ, ದೇವತೆಗಳು, ಮನುಷ್ಯರು, ಸಿದ್ಧರು, ಯಕ್ಷರು, ಮುನಿಗಳು ಇವರೇ ಮೊದಲಾದವರಿಂದ ಸೇವಿಸಲ್ಪಟ್ಟುದೂ ಆಗಿರುವುದು.

CC-0. Jangamwadi Math Collection. Digitized by eGangotri

ಯುಧಿಷ್ಠಿರ ಉವಾಚ:—
ಕೀದೃಶಂ ತತ್ಸರಃ ಖ್ಯಾತಂ ತಸ್ಮಿನ್ಸ್ಥಾನೇ ದ್ವಿಜೋತ್ತಮ ।
ತಸ್ಯ ರೂಪಂ ಪ್ರಕಾರಂ ಚ ಕಥಯಸ್ವ ಯಥಾತಥಂ ॥ ೬೭ ॥
ವ್ಯಾಸ ಉವಾಚ:—
ಸಾಧು ಸಾಧು ಮಹಾಪ್ರಾಜ್ಞ ಧರ್ಮಪುತ್ರ ಯುಧಿಷ್ಠಿರ ।
ಯಸ್ಯ ಸಂಕೀರ್ತನಾನ್ನೂನಂ ಸರ್ವಪಾಪೈಃ ಪ್ರಮುಚ್ಯತೇ ॥ ೬೮ ॥
ಅತಿಸ್ವಚ್ಛತರಂ ಶೀತಂ ಗಂಗೋದಕಸಮಪ್ರಭಂ ।
ಪವಿತ್ರಂ ಮಧುರಂ ಸ್ವಾದು ಜಲಂ ತಸ್ಯ ನೃಪೋತ್ತಮ ॥ ೬೯ ॥
ಮಹಾವಿಶಾಲಂ ಗಂಭೀರಂ ದೇವಖಾತಂ ಮನೋರಮಂ ।
ಲಹರ್ಯಾದಿಭಿರ್ಗಂಭೀರೈಃ ಫೇನಾವರ್ತಸಮಾಕುಲಂ ॥ ೭೦ ॥
ಝುಷಮಂಡೂಕಕಮತ್ಸೈರ್ಮಕರೈಶ್ಚ ಸಮಾಕುಲಂ ।
ಶಂಖಶುಕ್ತ್ಯಾದಿಭಿರ್ಯುಕ್ತಂ ರಾಜಹಂಸೈಃ ಸುಶೋಭಿತಂ ॥ ೭೧ ॥
ವಟಪ್ಲಕ್ಷೈಃ ಸಮಾಯುಕ್ತಮಶ್ವತ್ಥಾನ್ಯೈಶ್ಚ ವೇಷ್ಟಿತಂ ।
ಚಕ್ರವಾಕಸಮೋಪೇತಂ ಬಕಸಾರಸಟಿಟ್ಟಿಭೈಃ ॥ ೭೨ ॥
ಕಮನೀಯಪ್ರಗಂಧಾಚ್ಛಛತ್ರಪತ್ರೈಃ ಸುಶೋಭಿತಂ ।
ಸೇವ್ಯಮಾನಂ ದ್ವಿಜೈಃ ಸರ್ವೈಃ ಸಾರಸಾದ್ಯೈಃ ಸುಶೋಭಿತಂ ॥ ೭೩ ॥
ಸದೇವೈರ್ಮುನಿಭಿಶ್ಚೈವ ವಿಪ್ರೈರ್ಮರ್ತ್ಯೈಶ್ಚ ಭೂಮಿಪ ।
ಸೇವಿತಂ ದುಃಖಹಂ ಚೈವ ಸರ್ವಪಾಪಪ್ರಣಾಶನಂ ॥ ೭೪ ॥

---

೬೭. ಯುಧಿಷ್ಠಿರನು ಹೇಳುತ್ತಾನೆ:—ಎಲೈ ವ್ಯಾಸನೆ! ಆ ಧರ್ಮಾರಣ್ಯದಲ್ಲಿ ಪ್ರಸಿದ್ಧವಾದ ಆ ಸರೋವರವು ಎಂತಾದುದು? ಅದರ ಸ್ವರೂಪವನ್ನೂ ಯಥಾರ್ಥವಾಗಿ ತಿಳಿಸು.

೬೮. ವ್ಯಾಸನು ಹೇಳುತ್ತಾನೆ:—ಧರ್ಮತನಯನಾದ ಯುಧಿಷ್ಠಿರನೆ! ಒಳ್ಳೆಯದು. ಆ ತೀರ್ಥವನ್ನು ವರ್ಣಿಸುವುದರಿಂದ ಮನುಷ್ಯನು ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೬೯. ಅರಸ! ಆ ತೀರ್ಥದ ನೀರು ಅತಿಶುದ್ಧವೂ, ತಣ್ಣಗೂ, ಗಂಗೋದಕಕ್ಕೆ ಸಮಾನವಾದ ಕಾಂತಿಯುಳ್ಳದೂ, ಸಿಹಿಯೂ, ರುಚಿಯೂ ಆಗಿರುವುದು.

೭೦–೭೬. ಆ ಸರೋವರವು ಅತ್ಯಂತ ವಿಶಾಲವೂ, ಆಳವೂ, ದೇವನಿರ್ಮಿತವೂ, ಮನೋಹರವೂ, ಗಂಭೀರವಾದ ಅಲೆಗಳು ಮತ್ತು ನೊರೆಗಳ ಸುಳಿಗಳಿಂದ ಕೂಡಿದುದೂ, ಮೀನು, ಕಪ್ಪೆ, ಆಮೆ, ಮೊಸಳೆಗಳಿಂದ ಸಹಿತವೂ, ಮುತ್ತಿನಚಿಪ್ಪು, ರಾಜಹಂಸ ಪಕ್ಷಿಗಳಿಂದ ವಿರಾಜಿಸುವುದೂ, ಕೊಕ್ಕರೆ ಮೊದ

CC-0. Jangamwadi Math Collection. Digitized by eGangotri

ಅನಾದಿನಿಧನೋದಂತಂ ಸೇವಿತಂ ಸಿದ್ಧಮಂಡಲೈಃ ।
ಸ್ನಾನಾದಿಭಿಃ ಸರ್ವದೈವ ತತ್ಸರೋ ನೃಪಸತ್ತಮ ॥ ೭೫ ॥
ವಿಧಿನಾ ಕುರುತೇ ಯಸ್ತು ನೀಲೋತ್ಸರ್ಗಂ ಚ ತತ್ತಟೇ ।
ಪ್ರೇತಾ ನೈವ ಕುಲೇ ತಸ್ಯ ಯಾವದಿಂದ್ರಾಶ್ಚತುರ್ದಶ ॥ ೭೬ ॥
ಕನ್ಯಾದಾನಂ ಚ ಯೇ ಕುರ್ಯುರ್ವಿಧಿನಾ ತತ್ರ ಭೂಪತೇ ।
ತೇ ತಿಷ್ಠಂತಿ ಬ್ರಹ್ಮಲೋಕೇ ಯಾವದಾಭೂತಸಂಪ್ಲವಂ ॥ ೭೭ ॥
ಮಹಿಷೀಂ ಗೃಹದಾಸೀಂ ಚ ಸುರಭಿಂ ಸುತಸಂಯುತಾಂ ।
ಹೇಮವಿದ್ಯಾಂ ತಥಾ ಭೂಮಿಂ ರಥಾಂಶ್ಚ ಗಜವಾಸಸೀ ॥ ೭೮ ॥
ದದಾತಿ ಶ್ರದ್ಧಯಾ ತತ್ರ ಸೋಽಕ್ಷಯಂ ಸ್ವರ್ಗಮಶ್ನುತೇ ।
ದೇವಖಾತಸ್ಯ ಮಾಹಾತ್ಮ್ಯಂ ಯಃ ಪಠೇಚ್ಛಿವಸನ್ನಿಧೌ ।
ದೀರ್ಘಮಾಯುಸ್ತಥಾ ಸೌಖ್ಯಂ ಲಭತೇ ನಾಽತ್ರ ಸಂಶಯಃ ॥ ೭೯ ॥
ಯಃ ಶೃಣೋತಿ ನರೋ ಭಕ್ತ್ಯಾ ನಾರೀ ವಾ ತ್ವಿದಮದ್ಭುತಂ ।
ಕುಲೇ ತಸ್ಯ ಭವೇಚ್ಛ್ರೇಯಃ ಕಲ್ಪಾಂತೇಽಪಿ ಯುಧಿಷ್ಠಿರ ॥ ೮೦ ॥

---

ಲಾದ ಸಕಲ ಪಕ್ಷಿಗಳಿಂದ ಸೇವಿಸಲ್ಪಟ್ಟುದೂ, ದೇವತೆಗಳು, ಮುನಿಗಳು, ಬ್ರಾಹ್ಮಣರಿಂದಲೂ ಸಿದ್ಧರಿಂದಲೂ ಸೇವಿಸಲ್ಪಟ್ಟುದೂ, ದುಃಖನಾಶಕವೂ, ಸಕಲ ಪಾಪಗಳನ್ನು ಪರಿಹರಿಸುವುದೂ, ಆದಿ ಮತ್ತು ಅಂತ್ಯವಿಲ್ಲದ ಪರಮಾತ್ಮನ ವೃತ್ತಾಂತವುಳ್ಳುದೂ ಆದುದು. ಆ ಸರೋವರದಲ್ಲಿ ಮಿಂದು ವಿಹಿತಕ್ರಮದಿಂದ ಅದರ ದಡದಲ್ಲಿ ವೃಷೋತ್ಸರ್ಗವನ್ನು ಮಾಡಿದರೆ ಅವನ ವಂಶದಲ್ಲಿ ಪ್ರೇತಗಳು ಹದಿನಾಲ್ಕು ಮಂದಿ ಇಂದ್ರರಿರುವವರೆಗೆ ಮಾಯವಾಗುವುವು.

೭೭. ಅಲ್ಲಿ ಶಾಸ್ತ್ರರೀತಿಯಿಂದ ಕನ್ಯಾದಾನಮಾಡಿದವರು ಪ್ರಳಯಕಾಲದವರೆಗೆ ಬ್ರಹ್ಮಲೋಕದಲ್ಲಿ ವಾಸಿಸುವರು.

೭೮–೭೯. ಅಲ್ಲಿ ಎಮ್ಮೆ, ದಾಸಿ, ಗಂಡು ಕರುವಿನಿಂದ ಸಹಿತವಾದ ಗೋವು, ಚಿನ್ನ, ವಿದ್ಯೆ, ಭೂಮಿ, ರಥ, ಆನೆ, ವಸ್ತ್ರಗಳನ್ನು ದಾನಮಾಡಿದವನು ಶಾಶ್ವತವಾದ ಸ್ವರ್ಗವನ್ನು ಹೊಂದುವನು. ಆ ದೇವಸರೋವರದ ಮಾಹಾತ್ಮೆಯನ್ನು ಶಿವನ ಹತ್ತಿರ ಪಠಿಸಿದವನು ದೀರ್ಘಾಯುಷ್ಯವನ್ನೂ, ಸೌಖ್ಯವನ್ನೂ ಹೊಂದುವನು, ಇದರಲ್ಲಿ ಸಂದೇಹವಿಲ್ಲ.

೮೦. ಯುಧಿಷ್ಠಿರ! ಅದ್ಭುತವಾದ ಈ ಹಯಗ್ರೀವೋಪಾಖ್ಯಾನವನ್ನು ಗಂಡಸಾಗಲಿ, ಹೆಂಗಸಾಗಲಿ ಕೇಳಿದರೆ ಅವರ ವಂಶಕ್ಕೆ ಕಲ್ಪಾಂತ್ಯದವರೆಗೂ ಶ್ರೇಯಸ್ಸಾಗುತ್ತಿರುವುದು.

CC-0. Jangamwadi Math Collection. Digitized by eGangotri

ಏತತ್ಸರ್ವಂ ಮಯಾಖ್ಯಾತಂ ಹಯಗ್ರೀವಸ್ಯ ಕಾರಣಂ ।
ಪ್ರಭಾವಸ್ತಸ್ಯ ತೀರ್ಥಸ್ಯ ಸರ್ವಪಾಪಾಪನುತ್ತಯೇ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ಹಯಗ್ರೀವಾಖ್ಯಾನವರ್ಣನಂ" ನಾಮ ಪಂಚದಶೋಽಧ್ಯಾಯಃ

---

೮೧. ಸಕಲ ದುರಿತನಿವಾರಣೆಗಾಗಿ ವಿಷ್ಣುವು ಹಯಗ್ರೀವನಾಗಲು ಕಾರಣವನ್ನೂ ಆ ದೇವಸರೋವರದ ಮಾಹಾತ್ಮ್ಯವನ್ನೂ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ಹಯಗ್ರೀವಾಖ್ಯಾನವರ್ಣನ"ವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ಆನಂದಾಸ್ಥಾಪನವರ್ಣನಂ

ಯುಧಿಷ್ಠಿರ ಉವಾಚ :—

ರಕ್ಷಸಾಂ ಚೈವ ದೈತ್ಯಾನಾಂ ಯಕ್ಷಾಣಾಮಥ ಪಕ್ಷಿಣಾಂ ।
ಭಯನಾಶಾಯ ಕಾಜೇಶೈರ್ಧರ್ಮಾರಣ್ಯನಿವಾಸಿನಾಂ ॥ ೧ ॥
ಶಕ್ತ್ರೀಃ ಸಂಸ್ಥಾಪಿತಾ ನೂನಂ ನಾನಾರೂಪಾ ಹ್ಯನೇಕಶಃ ।
ತಾಸಾಂ ಸ್ಥಾನಾನಿ ನಾಮಾನಿ ಯಥಾರೂಪಾಣಿ ಮೇ ವದ ॥ ೨ ॥

ವ್ಯಾಸ ಉವಾಚ :—

ಶೃಣು ಪಾರ್ಥ ಮಹಾಬಾಹೋ ಧರ್ಮಮೂರ್ತೇ ನೃಪೋತ್ತಮ ।
ಸ್ಥಾನೇ ವೈ ಸ್ಥಾಪಿತಾ ಶಕ್ತಿಃ ಕಾಜೇಶೈಶ್ಚೈವ ಗೋತ್ರಪಾ ॥ ೩ ॥
ಶ್ರೀಮಾತಾ ಮದಾರಿಕಾಯಾಂ ಶಾಂತಾ ನಂದಾಪುರೇ ವರೇ ।
ರಕ್ಷಾರ್ಥಂ ದ್ವಿಜಮುಖ್ಯಾನಾಂ ಚತುರ್ದಿಕ್ಷು ಸ್ಥಿತಾಶ್ಚ ತಾಃ ॥ ೪ ॥
ಯುಕ್ತಾಶ್ಚೈವ ಸುರೈಃ ಸರ್ವೈಃ ಸ್ವ ಸ್ವಸ್ಥಾನೇ ನೃಪೋತ್ತಮ ।
ವನಮಧ್ಯೇ ಸ್ಥಿತಾಃ ಸರ್ವಾ ದ್ವಿಜಾನಾಂ ರಕ್ಷಣಾಯ ವೈ ॥ ೫ ॥
ಸಾ ಬಭೂವ ಮಹಾರಾಜ ಸಾವಿತ್ರೀತಿ ಪ್ರಥಾ ಶಿವಾ ।
ಅಸುರಾಣಾಂ ವಧಾರ್ಥಾಯ ಜ್ಞಾನಜಾ ಸ್ಥಾಪಿತಾ ಸುರೈಃ ॥ ೬ ॥

---

### ಕನ್ನಡದ ಅನುವಾದ

#### ಆನಂದಾಸ್ಥಾಪನ ವರ್ಣನ

೧–೨. ಯುಧಿಷ್ಠಿರನು ಕೇಳುತ್ತಾನೆ :— ಧರ್ಮಾರಣ್ಯನಿವಾಸಿಗಳಿಗೆ ರಾಕ್ಷಸರು, ದೈತ್ಯರು, ಯಕ್ಷರು, ಪಕ್ಷಿಗಳು ಇವರ ಭಯವನ್ನು ನಿವಾರಿಸ ಲೋಸುಗ ಬ್ರಹ್ಮವಿಷ್ಣು ಮಹೇಶ್ವರರು ಅನೇಕ ರೂಪರಾದ ಶಕ್ತಿದೇವತೆಗಳನ್ನು ಸ್ಥಾಪಿಸಿರುತ್ತಾರೆ. ಅವರ ಸ್ಥಳ, ಹೆಸರು, ರೂಪಗಳನ್ನು ನನಗೆ ತಿಳುಹಿಸು.

೩–೪. ವ್ಯಾಸನು ಹೇಳುತ್ತಾನೆ :—ಧರ್ಮಮೂರ್ತಿಯಾದ ಪಾಂಡುನಂದನ! ಕೇಳು. ಬ್ರಹ್ಮವಿಷ್ಣು ಮಹೇಶ್ವರರು ಆ ಸ್ಥಳದಲ್ಲಿ ಶಕ್ತಿ ಮತ್ತು ಗೋತ್ರಪಾಲಿನಿಯರನ್ನೂ, ಮದಾರಿಕೆಯಲ್ಲಿ ಶ್ರೀಮಾತೆಯನ್ನೂ, ನಂದಾಪುರದಲ್ಲಿ ಶಾಂತೆಯನ್ನೂ ಸ್ಥಾಪಿಸಿರುವರು. ಇವರು ಬ್ರಾಹ್ಮಣರ ರಕ್ಷಣೆಗಾಗಿ ನಾಲ್ಕು ದಿಕ್ಕುಗಳಲ್ಲಿಯೂ ನೆಲಸಿರುವರು.

೫. ಇವರು ಬ್ರಾಹ್ಮಣರನ್ನು ಕಾಪಾಡುವುದಕ್ಕಾಗಿ ಕಾಡಿನ ಮಧ್ಯದಲ್ಲಿ ತಮ್ಮ ತಮ್ಮ ಸ್ಥಾನದಲ್ಲಿ ಎಲ್ಲ ದೇವತೆಗಳೊಡನೆ ವಿರಾಜಿಸುತ್ತಿರುವರು.

೬. ಮಹಾರಾಜ! ಸಾವಿತ್ರಿಯೆಂದು ಪ್ರಸಿದ್ಧಳಾದ ಪಾರ್ವತಿಯನ್ನು ದೇವತೆಗಳು ಅಸುರರ ವಧೆಗಾಗಿ ಸ್ಥಾಪಿಸಿದ್ದಾರೆ.

CC-0. Jangamwadi Math Collection. Digitized by eGangotri

ಗಾಯತ್ರೀ ಪಕ್ಷಿಣೀ ದೇವೀ ಛತ್ರಜಾ ದ್ವಾರವಾಸಿನೀ ।
ಶ್ರೀಹೋರೀ ಚೂಟಸಂಜ್ಞಾ ಯಾ ಪಿಪ್ಪಲಾಶಾಪುರೀ ತಥಾ ।
ಅನ್ಯಾಶ್ಚ ಬಹವಶ್ಚೈವ ಸ್ಥಾಪಿತಾ ಭಯರಕ್ಷಣೇ ॥ ೭ ॥
ಪ್ರತೀಚ್ಯೋದೀಚ್ಯಾಂ ಯಾಮ್ಯಾಂ ವೈ ವಿಬುಧೈಃ ಸ್ಥಾಪಿತಾ ಹಿ ಸಾ ।
ನಾನಾಯುಧಧರಾ ಸಾ ಚ ನಾನಾಭರಣಭೂಷಿತಾ ॥ ೮ ॥
ನಾನಾವಾಹನಮಾರೂಢಾ ನಾನಾರೂಪಧರಾ ಚ ಸಾ ।
ನಾನಾಕೋಪಸಮಾಯುಕ್ತಾ ನಾನಾಭಯವಿನಾಶಿನೀ ॥ ೯ ॥
ಸ್ಥಾಪ್ಯ ಮಾತರ್ಯಥಾಸ್ಥಾನೇ ಯಥಾಯೋಗ್ಯಾ ದಿಶೋದಶ ।
ಗರುಡೇನ ಸಮಾರೂಢಾ ತ್ರಿಶೂಲವರಧಾರಿಣೀ ॥ ೧೦ ॥
ಸಿಂಹಾರೂಢಾ ಶುದ್ಧರೂಪಾ ವಾರುಣೀ ಪಾನದರ್ಪಿತಾ ।
ಖಡ್ಗಖೇಟಕಬಾಣಾಢ್ಯೈಃ ಕರೈರ್ಭಾತಿ ಶುಭಾನನಾ ॥ ೧೧ ॥
ರಕ್ತವಸ್ತ್ರಾವೃತಾ ಚೈವ ಪೀನೋನ್ನತಪಯೋಧರಾ ।
ಉದ್ಯದಾದಿತ್ಯಬಿಂಬಾಭಾ ಮದಾಘೂರ್ಣಿತಲೋಚನಾ ॥ ೧೨ ॥
ಏವಮೇಷಾ ಮಹಾದಿವ್ಯಾ ಕಾಜೇಶೈಃ ಸ್ಥಾಪಿತಾ ತದಾ ।
ರಕ್ಷಾರ್ಥಂ ಸರ್ವಜಂತೂನಾಂ ಸತ್ಯಮಂದಿರವಾಸಿನಾಂ ॥ ೧೩ ॥

---

೭. ಭಯನಿವಾರಣೆಗಾಗಿ ಗಾಯತ್ರೀ, ಪಕ್ಷಿಣೀ, ಛತ್ರಜಾ, ದ್ವಾರವಾಸಿನೀ, ಶ್ರೀಹೋರೀ, ಚೂಟಾ, ಪಿಪ್ಪಲಾ, ಆಶಾಪುರೀ ಎಂಬವರನ್ನೂ ಇನ್ನೂ ಇತರ ಬಹುಮಂದಿ ದೇವಿಯರನ್ನೂ ಸ್ಥಾಪಿಸಿದ್ದಾರೆ.

೮–೧೩. ಸತ್ಯಮಂದಿರದಲ್ಲಿ ವಾಸಿಸುವ ಸಕಲ ಪ್ರಾಣಿಗಳ ರಕ್ಷಣೆಗಾಗಿ ದೇವತೆಗಳು ಪಶ್ಚಿಮ, ಉತ್ತರ, ದಕ್ಷಿಣದಿಕ್ಕಿನಲ್ಲಿ ಸ್ಥಾಪಿಸಿರುವ ಆ ದೇವಿಯು ನಾನಾಯುಧಗಳನ್ನು ಧರಿಸಿದವಳೂ, ಅನೇಕ ವಿಧಗಳಾದ ಒಡವೆಗಳಿಂದ ಭೂಷಿತಳೂ, ನಾನಾವಿಧವಾಹನಾರೂಢಳೂ, ನಾನಾರೂಪಗಳನ್ನುಧರಿಸಿದವಳೂ, ಅನೇಕ ಬಗೆಯಾದ ಕೋಪಭಾವಗಳಿಂದ ಸಹಿತಳೂ, ವಿವಿಧ ಭಯವನ್ನು ನಿವಾರಿಸುವವಳೂ ಆಗಿರುವಳು. ಇವಳು ಔಚಿತ್ಯವನ್ನನುಸರಿಸಿ ಹತ್ತು ದಿಕ್ಕುಗಳಲ್ಲಿಯೂ ಆಯಾ ಸ್ಥಾನದಲ್ಲಿ ಸ್ಥಾಪಿಸಲು ಯೋಗ್ಯಳು. ಸತ್ಯಮಂದಿರವಾಸಿಗಳಾದ ಸಕಲ ಪ್ರಾಣಿಗಳ ರಕ್ಷಣೆಗಾಗಿ ಬ್ರಹ್ಮ ವಿಷ್ಣು ಮಹೇಶ್ವರರು ಗರುಡ ಮತ್ತು ಸಿಂಹವಾಹನಳೂ, ತ್ರಿಶೂಲವನ್ನು ಧರಿಸಿದವಳೂ, ಸುರಾಪಾನದಿಂದ ಮತ್ತಳೂ, ಕತ್ತಿ, ಗುರಾಣಿ, ಬಾಣಗಳುಳ್ಳ ಕೈಗಳಿಂದ ಶೋಭಿತಳೂ, ಕೆಂಪುಬಟ್ಟೆಯನ್ನುಟ್ಟವಳೂ, ಪುಷ್ಟವಾದ ಉನ್ನತ ಕುಚಗಳುಳ್ಳವಳೂ, ಉದಯಿಸುತ್ತಿರುವ ಸೂರ್ಯನ ಬಿಂಬಕ್ಕೆ ಸಮಾನವಾದ ಕಾಂತಿಯುಳ್ಳವಳೂ, ಮದದಿಂದ ಅಲುತ್ತಿರುವ ಕಣ್ಣುಳ್ಳವಳೂ ಆಗಿರುವ ಶುದ್ಧರೂಪಳಾದ ದೇವಿಯನ್ನೂ ಸ್ಥಾಪಿಸಿರುವರು.

CC-0. Jangamwadi Math Collection. Digitized by eGangotri

ಸಾ ದೇವೀ ನೃಪಶಾರ್ದೂಲ ಸ್ತುತಾ ಸಂಪೂಜಿತಾ ಸಹ ।
ದದಾತಿ ಸಕಲಾನ್ಕಾಮಾನ್ವಾಂಛಿತಾನ್ನೃಪಸತ್ತಮ ॥ ೧೪ ॥
ಧರ್ಮಾರಣ್ಯಾತ್ಪಶ್ಚಿಮತಃ ಸ್ಥಾಪಿತಾ ಛತ್ರಜಾ ಶುಭಾ ।
ತತ್ರಸ್ಥಾ ರಕ್ಷತೇ ವಿಪ್ರಾನ್ನಿತ್ಯಶ್ಚಶಕ್ತಿಸಮನ್ವಿತಾ ॥ ೧೫ ॥
ಭೈರವಂ ರೂಪಮಾಸ್ಥಾಯ ರಾಕ್ಷಸಾನಾಂ ವಧಾಯ ಚ ।
ಧಾರಯಂತ್ಯಾಯುಧಾನೀತ್ಥಂ ವಿಪ್ರಾಣಾಮಭಯಾಯ ಚ ॥ ೧೬ ॥
ಸರಶ್ಚಕಾರ ತಸ್ಯಾಗ್ರೇ ಉತ್ತಮಂ ಜಲಪೂರಿತಂ ।
ಸರಸ್ಯಸ್ಮಿನ್ಮಹಾಭಾಗ ಕೃತ್ವಾ ಸ್ನಾನಾದಿ ತರ್ಪಣಂ ॥ ೧೭ ॥
ಪಿಂಡದಾನಾದಿಕಂ ಸರ್ವಮಕ್ಷಯಂ ಚೈವ ಜಾಯತೇ ।
ಭೂಮೌ ಕ್ಷಿಪ್ತ್ವಾಂಜಲೀನ್ದದ್ಯಾದ್ಧೂಪದೀಪಾದಿಕಂ ಸದಾ ॥ ೧೮ ॥
ತಸ್ಯ ನೋ ಬಾಧತೇ ವ್ಯಾಧಿಃ ಶತ್ರೂಣಾಂ ನಾಶ ಏವ ಚ ।
ಬಲಿದಾನಾದಿಕಂ ತತ್ರ ಕುರ್ಯಾದ್ಭೂಯಃ ಸ್ವಶಕ್ತಿತಃ ॥ ೧೯ ॥
ಶತ್ರವೋ ನಾಶಮಾಯಾಂತಿ ಧನಂ ಧಾನ್ಯಂ ವಿವರ್ಧತೇ ।
ಆನಂದಾ ಸ್ಥಾಪಿತಾ ರಾಜಂಚ್ಛಕ್ತ್ಯಂಶಾ ಚ ಮನೋರಮಾ ॥ ೨೦ ॥
ರಕ್ಷಣಾರ್ಥಂ ದ್ವಿಜಾತೀನಾಂ ಮಾಹಾತ್ಮ್ಯಂ ಶೃಣು ಭೂಪತೇ ।
ಶುಕ್ಲಾಂಬರಧರಾ ದಿವ್ಯಾ ಹೇಮಭೂಷಣಭೂಷಿತಾ ॥ ೨೧ ॥

---

೧೪. ಮಹಾರಾಜ! ಆ ದೇವಿಯನ್ನು ಪೂಜಿಸಿ ಸ್ತುತಿಸಿದರೆ ಸಮಸ್ತ ಇಷ್ಟಾರ್ಥಗಳನ್ನೂ ದಯೆಗೈಯುವಳು.

೧೫-೧೬. ಧರ್ಮಾರಣ್ಯದ ಪಶ್ಚಿಮದಲ್ಲಿ ಮಂಗಳಕರಳಾದ ಛತ್ರಜೆಯನ್ನು ಪ್ರತಿಷ್ಠಿಸಿರುವರು. ಅಲ್ಲಿರುವ ಅಪರಿಮಿತ ಶಕ್ತಿಯುಕ್ತಳಾದ ಆ ದೇವಿಯು ರಾಕ್ಷಸರ ವಧೆಗಾಗಿ ಭಯಂಕರರೂಪವನ್ನೂ ಬ್ರಾಹ್ಮಣರ ಭಯನಿವಾರಣೆಗಾಗಿ ಆಯುಧಗಳನ್ನೂ ಧರಿಸಿ ಅವರನ್ನು ರಕ್ಷಿಸುವಳು.

೧೭-೨೪. ಅವಳ ಮುಂದೆ ಉತ್ತಮವಾದ ನೀರಿನಿಂದ ತುಂಬಿದ ಸರೋವರವನ್ನು ನಿರ್ಮಿಸಿರುವರು. ಈ ಸರೋವರದಲ್ಲಿ ಸ್ನಾನತರ್ಪಣಗಳನ್ನೂ, ಪಿಂಡದಾನಾದಿಗಳನ್ನೂ ಮಾಡಿದರೆ ಅಕ್ಷಯವಾಗುವುವು. ಮಾನವನು ಭೂಮಿಯಲ್ಲಿ ಬಲಿಹರಣಮಾಡಿ ಧೂಪದೀಪಾದಿಗಳಿಂದ ಆ ದೇವಿಯನ್ನು ಅರ್ಚಿಸಿದರೆ ವ್ಯಾಧಿಯು ಅವನನ್ನು ಬಾಧಿಸುವುದಿಲ್ಲ. ಶತ್ರುಗಳೂ ನಾಶವಾಗುವರು. ಅಲ್ಲಿ ಬಹಳವಾಗಿ ತನ್ನ ಶಕ್ತ್ಯನುಸಾರ ಬಲಿದಾನಮಾಡಿದವರ ಶತ್ರುಗಳು ನಾಶವಾಗುವರು. ಧನಧಾನ್ಯಗಳು ವೃದ್ಧಿಗೊಳ್ಳುವುವು. ಬ್ರಾಹ್ಮಣರ ರಕ್ಷಣೆಗಾಗಿ ಶಕ್ತಿಯ ಅಂಶರೂಪಳಾದ ಆನಂದೆಯನ್ನು ಪ್ರತಿಷ್ಠಿಸಿರುವರು. ಅರಸ! ಅವಳ ಮಾಹಾತ್ಮ್ಯವನ್ನು ಕೇಳು. ಅವಳು ಬಿಳಿ ಬಟ್ಟೆಯನ್ನುಟ್ಟವಳೂ, ಸುವರ್ಣಭೂಷಣಗಳಿಂದ

CC-0. Jangamwadi Math Collection. Digitized by eGangotri

ಸಿಂಹಾರೂಢಾ ಚತುರ್ಹಸ್ತಾ ಶಶಾಂಕಕೃತಶೇಖರಾ ।
ಮುಕ್ತಾಹಾರಲತೋಪೇತಾ ಪೀನೋನ್ನತಪಯೋಧರಾ ॥ ೨೨ ॥
ಅಕ್ಷಮಾಲಾಸಿಹಸ್ತಾ ಚ ಗುಣತೋಮರಧಾರಿಣೀ ।
ದಿವ್ಯಗಂಧವರಾಧಾರಾ ದಿವ್ಯಮಾಲಾವಿಭೂಷಿತಾ ॥ ೨೩ ॥
ಸಾತ್ವಿಕೀ ಶಕ್ತಿರಾನಂದಾ ಸ್ಥಿತಾ ತಸ್ಮಿನ್ಪುರೇ ಪುರಾ ।
ಪೂಜಯೇತ್ತಾಂ ಚ ವೈ ರಾಜನ್ ಕರ್ಪೂರಾರಕ್ತಚಂದನೈಃ ॥ ೨೪ ॥
ಭೋಜಯೇತ್ಪಾಯಸೈಃ ಶುಭ್ರೈರ್ಮಧ್ವಾಜ್ಯಸಿತಯಾ ಸಹ ।
ಭವಾನ್ಯಾಃ ಪ್ರೀತಯೇ ರಾಜನ್ಕುಮಾರ್ಯಾಃ ಪೂಜನಂ ತಥಾ ॥ ೨೫ ॥
ತತ್ರ ಜಪ್ತಂ ಹುತಂ ದತ್ತಂ ಧ್ಯಾತಂ ಚ ನೃಪಸತ್ತಮ ।
ತತ್ಸರ್ವಂ ಚಾಽಕ್ಷಯಂ ತತ್ರ ಜಾಯತೇ ನಾತ್ರ ಸಂಶಯಃ ॥ ೨೬ ॥
ತ್ರಿಗುಣೇ ತ್ರಿಗುಣಾ ವೃದ್ಧಿಸ್ತಸ್ಮಿನ್ಸ್ಥಾನೇ ನೃಪೋತ್ತಮ ।
ಸಾಧಕಸ್ಯ ಭವೇನ್ನೂನಂ ಧನದಾರಾದಿಸಂಪದಃ ॥ ೨೭ ॥
ನ ಹಾನಿರ್ನ ಚ ರೋಗಶ್ಚ ನ ಶತ್ರುರ್ನ ಚ ದುಷ್ಕೃತಂ ।
ಗಾವಸ್ತಸ್ಯ ವಿವರ್ಧಂತೇ ಧನಧಾನ್ಯಾದಿಸಂಕುಲಂ ॥ ೨೮ ॥

---

ಭೂಷಿತಳೂ, ಸಿಂಹವನ್ನೇರಿದವಳೂ, ನಾಲ್ಕು ತೋಳುಳ್ಳವಳೂ, ಚಂದ್ರನಿಂದ ಅಲಂಕರಿಸಲ್ಪಟ್ಟ ಶಿರಸ್ಸುಳ್ಳವಳೂ, ಮುತ್ತಿನ ಸರವನ್ನು ಧರಿಸಿದವಳೂ, ಪುಷ್ಟವಾದ ಉನ್ನತಕುಚಗಳುಳ್ಳವಳೂ, ಜಪಸರ ಮತ್ತು ಕತ್ತಿಗಳನ್ನು ಕೈಯಲ್ಲಿ ಹಿಡಿದವಳೂ, ಹಗ್ಗ ಮತ್ತು ತೋಮರಗಳನ್ನು ಹಿಡಿದುಕೊಂಡಿರುವವಳೂ, ಮನೋಹರವಾದ ಗಂಧವನ್ನು ಹಚ್ಚಿಕೊಂಡಿರುವವಳೂ, ದಿವ್ಯವಾದ ಹೂವಿನ ಮಾಲೆಯುಳ್ಳವಳೂ ಆಗಿ ಆ ಪಟ್ಟಣದಲ್ಲಿ ನೆಲೆಸಿರುವ ಆನಂದೆಯೆಂಬ ಸಾತ್ವಿಕ ಶಕ್ತಿದೇವತೆಯನ್ನು ಕರ್ಪೂರ, ಸ್ವಲ್ಪ ಕೆಂಪಾದ ಗಂಧ ಇವುಗಳಿಂದ ಆರಾಧಿಸಬೇಕು.

೨೫. ಜೇನುತುಪ್ಪ, ಆಜ್ಯ, ಕಲ್ಲುಸಕ್ಕರೆಗಳೊಡನೆ ಶುದ್ಧವಾದ ಪಾಯಸವನ್ನು ನೈವೇದ್ಯಮಾಡಿ ಆ ಪಾರ್ವತಿಯ ಪ್ರೀತಿಗಾಗಿ ಕನ್ಯೆಯನ್ನು ಪೂಜಿಸಬೇಕು.

೨೬. ಅಲ್ಲಿ ಮಾಡಿದ ಜಪ, ಹೋಮ, ದಾನ, ಧ್ಯಾನಗಳೆಲ್ಲವೂ ಅಕ್ಷಯವಾಗುವುವು. ಇದರಲ್ಲಿ ಸಂದೇಹವಿಲ್ಲ.

೨೭. ಅಲ್ಲಿ ಜಪಾದಿಗಳನ್ನು ಮಾಡಿದ ಮಾನವನ ಹಣ, ಪತ್ನಿ ಮೊದಲಾದ ಸಕಲ ಸಂಪತ್ತುಗಳೂ ಮುಮ್ಮಡಿಯಾಗಿ ವೃದ್ಧಿಗೊಳ್ಳುವುವು.

೨೮. ಕೇಡುಗಳೂ, ರೋಗಗಳೂ, ಶತ್ರುಗಳೂ, ಪಾಪಗಳೂ ತೊಲಗುವುವು. ಗೋವುಗಳೂ, ಧನಧಾನ್ಯಾದಿಗಳೂ ಹೆಚ್ಚುವುವು.


CC-0. Jangamwadi Math Collection. Digitized by eGangotri

ನ ಶಾಕಿನ್ಯಾ ಭಯಂ ತಸ್ಯ ನ ಚ ರಾಜ್ಞಶ್ಚ ವೈರಿಣಃ ।
ನ ಚ ವ್ಯಾಧಿಭಯಂ ಚೈವ ಸರ್ವತ್ರ ವಿಜಯೀ ಭವೇತ್ ॥ ೨೯ ॥
ವಿದ್ಯಾಶ್ಚತುರ್ದಶಾಸ್ಯೈವ ಭಾಸಂತೇ ಪಠಿತಾ ಇವ ।
ಸೂರ್ಯವದ್ಯೋತತೇ ಭೂಮಾವಾನಂದಮಾಶ್ರಿತೋ ನರಃ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಆನಂದಾ ಸ್ಥಾಪನವರ್ಣನಂ" ನಾಮ ಷೋಡಶೋಽಧ್ಯಾಯಃ

---

೨೯. ಶಾಕಿನೀ ಭಯ, ರಾಜ, ಶತ್ರು, ರೋಗಗಳ ಭಯಗಳೇನೂ ಇಲ್ಲದೆ ಎಲ್ಲೆಡೆಯಲ್ಲಿಯೂ ಜಯಶಾಲಿಯಾಗುವನು.

೩೦. ಹದಿನಾಲ್ಕುವಿದ್ಯೆಗಳೂ ಓದದೆ ಇದ್ದಾಗ್ಯೂ ಓದಿದವುಗಳಂತೆ ವಿರಾಜಿಸುವುವು. ಆನಂದಗೊಂಡು ಸೂರ್ಯನಂತೆ ಭೂಮಿಯಲ್ಲಿ ಪ್ರಕಾಶಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಆನಂದಾಸ್ಥಾಪನವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

## ಶ್ರೀಮಾತಾಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ದಕ್ಷಿಣೇ ಸ್ಥಾಪಿತಾ ರಾಜಂಛಾಂತಾ ದೇವೀ ಮಹಾಬಲಾ ।
ಸಾ ವಿಚಿತ್ರಾಂಬರಧರಾ ವನಮಾಲಾವಿಭೂಷಿತಾ ॥ ೧ ॥
ತಾಮಸೀ ಸಾ ಮಹಾರಾಜ ಮಧುಕೈಟಭನಾಶಿನೀ ।
ವಿಷ್ಣುನಾ ತತ್ರ ವೈ ನ್ಯಸ್ತಾ ಶಿವಪತ್ನೀ ನೃಪೋತ್ತಮ ॥ ೨ ॥
ಸಾ ಚೈವಾಽಷ್ಟಭುಜಾ ರಮ್ಯಾ ಮೇಘಶ್ಯಾಮಾ ಮನೋರಮಾ ।
ಕೃಷ್ಣಾಂಬರಧರಾ ದೇವೀ ವ್ಯಾಘ್ರವಾಹನಸಂಸ್ಥಿತಾ ॥ ೩ ॥
ದ್ವೀಪಿಚರ್ಮಪರೀಧಾನಾ ದಿವ್ಯಾಭರಣಭೂಷಿತಾ ।
ಘಂಟಾತ್ರಿಶೂಲಾಽಕ್ಷಮಾಲಾ ಕಮಂಡಲುಧರಾ ಶುಭಾ ॥ ೪ ॥
ಅಲಂಕೃತಭುಜಾ ದೇವೀ ಸರ್ವದೇವನಮಸ್ಕೃತಾ ।
ಧನಂ ಧಾನ್ಯಂ ಸುತಾನ್ಭೋಗಾನ್ಸ್ವಭಕ್ತೇಭ್ಯಃ ಪ್ರಯಚ್ಛತಿ ॥ ೫ ॥
ಪೂಜಯೇತ್ಕಮಲೈರ್ದಿವ್ಯೈಃ ಕರ್ಪೂರಾಗರುಚಂದನೈಃ ।
ತದುದ್ದೇಶೇನ ತತ್ರೈವ ಪೂಜಯೇದ್ದ್ವಿಜಸತ್ತಮಾನ್ ॥ ೬ ॥

---

## ಕನ್ನಡದ ಅನುವಾದ

### ಶ್ರೀಮಾತಾಮಾಹಾತ್ಮ್ಯವರ್ಣನ

೧–೫. ವ್ಯಾಸನು ಹೇಳುತ್ತಾನೆ:—ಮಹಾರಾಜ! ಅತ್ಯಂತ ಬಲಿಷ್ಠಳೂ, ಆಶ್ಚರ್ಯಕರವಾದ ಬಟ್ಟೆಯನ್ನುಟ್ಟವಳೂ, ವನಮಾಲೆಯಿಂದಲಂಕೃತಳೂ, ತಮೋಗುಣವುಳ್ಳವಳೂ, ಮಧುಕೈಟಭಧ್ವಂಸಕಳೂ, ಎಂಟು ತೋಳುಳ್ಳವಳೂ, ಸುಂದರಳೂ, ಮೇಘದಂತೆ ಕಪ್ಪುಬಣ್ಣವುಳ್ಳವಳೂ, ಕರಿಬಣ್ಣದ ವಸ್ತ್ರವನ್ನು ಧರಿಸಿದವಳೂ, ಹುಲಿಯನ್ನೇರಿದವಳೂ, ಹುಲಿಯ ಚರ್ಮವನ್ನು ಸುತ್ತಿಕೊಂಡಿರುವವಳೂ, ದಿವ್ಯಾಭರಣಗಳಿಂದ ವಿರಾಜಿಸುವವಳೂ, ಘಂಟೆ, ತ್ರಿಶೂಲ, ಜಪಸರ, ಕಮಂಡಲುಗಳನ್ನು ಹಿಡಿದವಳೂ, ಸಕಲ ದೇವತೆಗಳಿಂದ ನಮಸ್ಕಾರ ಮಾಡಲ್ಪಟ್ಟವಳೂ ಆಗಿ ಶಾಂತಳಾದ ಭವಾನಿಯನ್ನು ವಿಷ್ಣುವು ಅಲ್ಲಿ ದಕ್ಷಿಣದಿಕ್ಕಿನಲ್ಲಿ ಸ್ಥಾಪಿಸಿರುವನು. ಇವಳು ತನ್ನ ಭಕ್ತರಿಗೆ ಧನ, ಧಾನ್ಯ, ಮಕ್ಕಳನ್ನು ಕೊಡುತ್ತಾಳೆ.

೬–೧೦. ಇವಳನ್ನು ದಿವ್ಯ ಕಮಲಗಳಿಂದಲೂ, ಕರ್ಪೂರ, ಅಗರು, ಗಂಧಗಳಿಂದಲೂ, ಧೂಪದೀಪಗಳಿಂದಲೂ, ಮನೋಹರವಾದ ಫಲಗಳಿಂದಲೂ,

CC-0. Jangamwadi Math Collection. Digitized by eGangotri

ಕುಮಾರೀರ್ಭೋಜಯೇದನ್ನೈರ್ವಿವಿಧೈರ್ಭಕ್ತಿಭಾವತಃ ।
ಧೂಪೈರ್ದೀಪೈಃ ಫಲೈರನ್ಯೈಃ ಪೂಜಯೇಚ್ಚ ಸುರಾದಿಭಿಃ ॥ ೭ ॥
ಮಾಂಸೈಸ್ತು ವಿವಿಧೈರ್ದಿವ್ಯೈರಥವಾ ಧಾನ್ಯಪಿಷ್ಟಜೈಃ ।
ಅನ್ಯೈಶ್ಚ ವಿವಿಧೈರ್ಧಾನ್ಯೈಃ ಪಾಯಸೈರ್ವಟಕೈಸ್ತಥಾ ॥ ೮ ॥
ಓದನೈಃ ಕೃಸರಾಽಪೂಪೈಃ ಪೂಜಯೇತ್ಸುಸಮಾಹಿತಃ ।
ಸ್ತುತಿಪಾಠೇನ ತತ್ರೈವ ಶಕ್ತಿಸ್ತೋತ್ರೈರ್ಮನೋಹರೈಃ ॥ ೯ ॥
ರಿಪವಸ್ತಸ್ಯ ನಶ್ಯಂತಿ ಸರ್ವತ್ರ ವಿಜಯೀ ಭವೇತ್ ।
ರಣೇ ರಾಜಕುಲೇ ದ್ಯೂತೇ ಲಭತೇ ಜಯಮಂಗಲಂ ॥ ೧೦ ॥
ಸೌಮ್ಯಾ ಶಾಂತಾ ಮಹಾರಾಜ ಸ್ಥಾಪಿತಾ ಕುಲಮಾತೃಕಾ ।
ಶ್ರೀಮಾತಾ ಸಾ ಪ್ರಸಿದ್ಧಾ ಚ ಮಾಹಾತ್ಮ್ಯಂ ಶೃಣು ಭೂಪತೇ ॥ ೧೧ ॥
ಕುಲಮಾತಾ ಮಹಾಶಕ್ತಿಸ್ತತ್ರಾಸ್ತೇ ನೃಪಸತ್ತಮ ।
ಕುಮಾರೀ ಬ್ರಹ್ಮಪುತ್ರೀ ಸಾ ರಕ್ಷಾರ್ಥಂ ವಿಧಿನಾ ಕೃತಾ ॥ ೧೨ ॥
ಸ್ಥಾನಮಾತಾ ಚ ಸಾ ದೇವೀ ಶ್ರೀಮಾತಾ ಸಾಽಭಿಧಾನತಃ ।
ತ್ರಿರೂಪಾ ಸಾ ದ್ವಿಜಾತೀನಾಂ ನಿರ್ಮಿತಾ ರಕ್ಷಣಾಯ ಚ ॥ ೧೩ ॥
ಕಮಂಡಲುಧರಾ ದೇವೀ ಘಂಟಾಭರಣಭೂಷಿತಾ ।
ಅಕ್ಷಮಾಲಾಯುತಾ ರಾಜಂಛುಭಾ ಸಾ ಶುಭರೂಪಿಣೀ ॥ ೧೪ ॥

---

ಮಧುವಿನಿಂದಲೂ, ನಾನಾ ವಿಧ ಮಾಂಸಗಳಿಂದಲೂ, ಅಥವಾ ಧಾನ್ಯಗಳ ಹಿಟ್ಟಿನಿಂದಾದ ವಸ್ತುಗಳಿಂದಲೂ, ಇತರ ನಾನಾ ವಿಧವಾದ ಧಾನ್ಯಗಳಿಂದಲೂ, ಪಾಯಸಗಳಿಂದಲೂ, ವಡೆಗಳಿಂದಲೂ, ಅನ್ನಗಳಿಂದಲೂ, ಹುಗ್ಗಿ ಮತ್ತು ಅಪೂಪಗಳಿಂದಲೂ ಪೂಜಿಸಬೇಕು. ಅಲ್ಲಿಯೇ ನಾನಾವಿಧವಾದ ಅನ್ನಗಳಿಂದ ಆ ದೇವಿಯನ್ನುದ್ದೇಶಿಸಿ ದ್ವಿಜಶ್ರೇಷ್ಠರನ್ನು ಪೂಜಿಸಬೇಕು. ಕನ್ಯೆಯರನ್ನು ಊಟಮಾಡಿಸಬೇಕು. ಆ ದೇವಿಯನ್ನು ಮನೋಹರವಾದ ಶಕ್ತಿದೇವತಾ ಸ್ತೋತ್ರಗಳಿಂದ ಸ್ತುತಿಸಬೇಕು. ಹೀಗೆ ಪೂಜೆಮಾಡಿದವನ ಶತ್ರುಗಳು ನಾಶವಾಗುವರು. ಎಲ್ಲೆಡೆಯಲ್ಲಿಯೂ ಅವನು ಜಯಶಾಲಿಯಾಗುವನು. ಯುದ್ಧದಲ್ಲಿಯೂ, ರಾಜಗೃಹದಲ್ಲಿಯೂ, ಜೂಜಿನಲ್ಲಿಯೂ ಜಯವನ್ನು ಪಡೆಯುವನು.

೧೧. ಆ ಧರ್ಮಾರಣ್ಯದಲ್ಲಿ ನೆಲೆಸಿರುವ ಸೌಮ್ಯಳೂ, ಶಾಂತಳೂ, ಕುಲಮಾತೆಯೂ ಆಗಿರುವ ಆ ಶ್ರೀಮಾತೆಯ ಮಾಹಾತ್ಮ್ಯೆಯನ್ನು ಕೇಳು.

೧೨–೧೩. ಕುಲಮಾತೆ, ಸ್ಥಾನಮಾತೆ, ಶ್ರೀಮಾತೆ ಎಂಬ ಮೂರು ರೂಪಗಳಿಂದೊಪ್ಪುವ ಬ್ರಹ್ಮತನಯಳಾದ ಆ ಮಹಾಶಕ್ತಿಯನ್ನು ಪಿತಾಮಹನು ಬ್ರಾಹ್ಮಣರ ರಕ್ಷಣೆಗಾಗಿ ಅಲ್ಲಿ ಸ್ಥಾಪಿಸಿರುವನು.

೧೪–೧೯. ಕಮಂಡಲುವನ್ನು ಧರಿಸಿ ಘಂಟಾಭರಣಗಳಿಂದ ಅಲಂಕೃತಳೂ

CC-0. Jangamwadi Math Collection. Digitized by eGangotri

ಕುಮಾರೀ ಚಾದಿಮಾತಾ ಚ ಸ್ಥಾನತ್ರಾಣಕರಾಽಪಿ ಚ ।
ದೈತ್ಯಘ್ನೀ ಕಾಮದಾ ಚೈವ ಮಹಾಮೋಹವಿನಾಶಿನೀ ॥ ೧೫ ॥
ಭಕ್ತಿಗಮ್ಯಾ ಚ ಸಾ ದೇವೀ ಕುಮಾರೀ ಬ್ರಹ್ಮಣಃ ಸುತಾ ।
ರಕ್ತಾಽಂಬರಧರಾ ಸಾಧುರಕ್ತಚಂದನಚರ್ಚಿತಾ ॥ ೧೬ ॥
ರಕ್ತಮಾಲ್ಯಾ ದಶಭುಜಾ ಪಂಚವಕ್ತ್ರಾ ಸುರೇಶ್ವರೀ ।
ಚಂದ್ರಾಽವತಂಸಿಕಾ ಮಾತಾ ಸುರಾಽಸುರನಮಸ್ಕೃತಾ ॥ ೧೭ ॥
ಸಾಕ್ಷಾತ್ಸರಸ್ವತೀರೂಪಾ ರಕ್ಷಾರ್ಥಂ ವಿಧಿನಾ ಕೃತಾ ।
ಓಂಕಾರಾ ಸಾ ಮಹಾಪುಣ್ಯಾ ಕಾಜೇಶೇನ ವಿನಿರ್ಮಿತಾ ॥ ೧೮ ॥
ಋಷಿಭಿಃ ಸಿದ್ಧಯಕ್ಷಾದಿಸುರಪನ್ನಗಮಾನವೈಃ ।
ಪ್ರಣಮ್ಯಾಂಘ್ರಿಯುಗಾ ತೇಭ್ಯೋ ದದಾತಿ ಮನಸೇಪ್ಸಿತಂ ॥ ೧೯ ॥
ಪಾಲಯಂತೀ ಚ ಸಂಸ್ಥಾನಂ ದ್ವಿಜಾತೀನಾಂ ಹಿತಾಯ ವೈ ।
ಯಥೌರಸಾನ್ಸುತಾನ್ಮಾತಾ ಪಾಲಯಂತೀಹ ಸದ್ಗುಣೈಃ ॥ ೨೦ ॥
ಅಥ ಪಾಲಯತೀ ದೇವೀ ಶ್ರೀಮಾತಾ ಕುಲದೇವತಾ ।
ಉಪದ್ರವಾಣಿ ಸರ್ವಾಣಿ ನಾಶಯೇತ್ಸತತಂ ಸ್ತುತಾ ॥ ೨೧ ॥
ಸರ್ವವಿಘ್ನೋಪಶಮನೀ ಶ್ರೀಮಾತಾ ಸ್ಮರಣೇನ ಹಿ ।
ವಿವಾಹೇ ಚೋಪವೀತೇ ಚ ಸೀಮಂತೇ ಶುಭಕರ್ಮಣಿ ॥ ೨೨ ॥

---

ಜಪಸರವನ್ನು ಹಿಡಿದವಳೂ, ಮಂಗಳರೂಪಳೂ, ಆದಿಮಾತೆಯೂ, ಕ್ಷೇತ್ರ ರಕ್ಷಕಳೂ, ದೈತ್ಯರನ್ನು ಕೊಂದವಳೂ, ಇಷ್ಟಾರ್ಥಗಳನ್ನೀಯುವವಳೂ, ಗಾಢ ವಾದ ಅಜ್ಞಾನವನ್ನು ಪರಿಹರಿಸುವವಳೂ, ಭಕ್ತಿಯಿಂದ ಹೊಂದಲು ಯೋಗ್ಯಳೂ, ಬ್ರಹ್ಮಸುತೆಯೂ, ಕೆಂಪುಬಟ್ಟೆಯನ್ನುಟ್ಟವಳೂ, ಚೆನ್ನಾಗಿ ಗಂಧವನ್ನು ಬಳಿದು ಕೊಂಡವಳೂ, ಕೆಂಪುಹೂವಿನ ಮಾಲೆಯುಳ್ಳವಳೂ, ಹತ್ತುತೋಳುಗಳುಳ್ಳವಳೂ, ಐದು ಮುಖವುಳ್ಳವಳೂ, ಚಂದ್ರಶೇಖರಳೂ, ದೇವಾಸುರರಿಂದ ವಂದಿತಳೂ, ಸರಸ್ವತೀ ಸ್ವರೂಪಳೂ, ಬ್ರಹ್ಮನಿರ್ಮಿತಳೂ, ಓಂಕಾರರೂಪಳೂ, ಅತಿಪವಿತ್ರಳೂ ಆಗಿರುವ ಆ ಶ್ರೀಮಾತೆಯನ್ನು ಋಷಿಗಳೂ, ಸಿದ್ಧರೂ, ಯಕ್ಷರೂ, ಸುರರೂ, ನಾಗಗಳೂ, ಮನುಷ್ಯರೂ ನಮಸ್ಕರಿಸಿ ಇಷ್ಟಾರ್ಥಗಳನ್ನು ಪಡೆಯುವರು.

೨೦–೨೧. ಇಲ್ಲಿ ಆ ಶ್ರೀಮಾತೆಯು ಸದ್ಗುಣಗಳಿಂದ ಕೂಡಿ ತಾಯಿಯು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಸಲಹುವಂತೆ ಬ್ರಾಹ್ಮಣರ ಹಿತಕ್ಕಾಗಿ ಕ್ಷೇತ್ರವನ್ನು ಕಾಪಾಡುತ್ತಿರುವಳು. ಕುಲದೇವತೆಯಾದ ಶ್ರೀಮಾತೆಯನ್ನು ಸ್ತುತಿಸಿದರೆ ಎಲ್ಲ ತೊಂದರೆಗಳೂ ಮಾಯವಾಗುವುವು.

೨೨–೨೩. ಸ್ಮರಣಮಾತ್ರದಿಂದ ಸಕಲ ವಿಘ್ನಗಳನ್ನು ನಿವಾರಿಸುವ ಆ ಶ್ರೀಮಾತೆಯನ್ನು ಭಕ್ತರು ವಿವಾಹ, ಉಪನಯನ, ಸೀಮಂತ ಮೊದಲಾದ

CC-0. Jangamwadi Math Collection. Digitized by eGangotri

ಸರ್ವೇಷು ಭಕ್ತಕಾರ್ಯೇಷು ಶ್ರೀಮಾತಾ ಪೂಜ್ಯತೇ ಸದಾ ।
ಯಥಾ ಲಂಬೋದರಂ ದೇವಂ ಪೂಜಯಿತ್ವಾ ಸಮಾರಭೇತ್ ॥ ೨೩ ॥
ಕಾರ್ಯಂ ಶುಭಂ ಸರ್ವಮಪಿ ಶ್ರೀಮಾತರಂ ತಥಾ ನೃಪ ।
ಯತ್ಕಿಂಚಿದ್ಭೋಜನಂ ತ್ವತ್ರ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ॥ ೨೪ ॥
ಅಥವಾ ವಿನಿವೇದ್ಯಂ ಚ ಕ್ರಿಯತೇ ಯತ್ಪರಸ್ಪರಂ ।
ಅನಿವೇದ್ಯ ಚ ತಾಂ ರಾಜನ್ಸರ್ವಾಣೋ ವಿಘ್ನಮೇಷ್ಯತಿ ॥ ೨೫ ॥
ತಸ್ಮಾತ್ತಸ್ಯೈ ನಿವೇದ್ಯಾಽಥ ತತಃ ಕರ್ಮ ಸಮಾರಭೇತ್ ।
ತದ್ವರೇಣಾಽಖಿಲಂ ಕರ್ಮ ಅವಿಘ್ನೇನ ಹಿ ಸಿದ್ಧ್ಯತಿ ।
ಹೇಮಂತೇ ಶಿಶಿರೇ ಪ್ರಾಪ್ತೇ ಪೂಜಯೇದ್ಧರ್ಮಪುತ್ರಿಕಾಂ ॥ ೨೬ ॥
ಹೇಮಪತ್ರೇ ಸಮಾಲಿಖ್ಯ ರಾಜತೇ ವಾಽಥ ಕಾರಯೇತ್ ।
ಪಾದುಕಾಂ ಚೋತ್ತಮಾಂ ರಾಜಂಛ್ರೀಮಾತಾಯೈ ನಿವೇದಯೇತ್ ॥
ಸ್ನಾತ್ವಾ ಚೈವ ಶುಚಿರ್ಭೂತ್ವಾ ತಿಲಾಮಲಕಮಿಶ್ರಿತೈಃ ।
ವಾಸೋಭಿಃ ಸುಮನೋಭಿಶ್ಚ ದುಕೂಲೈಃ ಸುಮನೋಹರೈಃ ॥ ೨೮ ॥
ಲೇಪಯೇಚ್ಚಂದನೈಃ ಶುಭ್ರೈಃ ಕುಂಕುಮೈಃ ಸಿಂದುರಾಸಕೈಃ ।
ಕರ್ಪೂರಾಽಗರುಕಸ್ತೂರೀಮಿಶ್ರಿತೈಃ ಕರ್ದಮೈಸ್ತಥಾ ॥ ೨೯ ॥
ಕರ್ಣಿಕಾರೈಶ್ಚ ಕಲ್ಹಾರೈಃ ಕರವೀರೈಃ ಸಿತಾಽರುಣೈಃ ।
ಚಂಪಕೈಃ ಕೇತಕೀಭಿಶ್ಚ ಜಪಾಕುಸುಮಕೈಸ್ತಥಾ ॥ ೩೦ ॥

---

ಶುಭಕಾರ್ಯಗಳಲ್ಲಿ ಪೂಜಿಸುವರು. ಕಾರ್ಯಾರಂಭದಲ್ಲಿ ವಿಘ್ನರಾಜನನ್ನು ಪೂಜಿಸುವಂತೆ ಸಕಲ ಶುಭಕಾರ್ಯಗಳಲ್ಲಿಯೂ ಶ್ರೀಮಾತೆಯನ್ನು ಪೂಜಿಸಿ ಆರಂಭಿಸಬೇಕು. ಬ್ರಾಹ್ಮಣರಿಗೆ ಭೋಜನಮಾಡಿಸುವಾಗ ಅಥವಾ ಆಯಾಯ ದೇವತೆಗಳಿಗೆ ನೈವೇದ್ಯವನ್ನು ಸಮರ್ಪಿಸುವಾಗ ಆ ಶ್ರೀಮಾತೆಗೆ ಅರ್ಪಿಸದಿದ್ದರೆ ವಿಘ್ನವು ಒದಗುವುದು.

೨೬–೩೩. ಆದುದರಿಂದ ಅವಳಿಗೆ ನಿವೇದಿಸಿ ಕಾರ್ಯವನ್ನಾರಂಭಿಸಬೇಕು. ಅವಳ ವರದಿಂದ ಸಕಲ ಕರ್ಮಗಳು ವಿಘ್ನವಿಲ್ಲದೆ ನೆರವೇರುವುವು. ಹೇಮಂತ ಶಿಶಿರ ಋತುಗಳಲ್ಲಿ ದ್ವಿಜನು ಮಿಂದು ಶುದ್ಧನಾಗಿ ಆ ಧರ್ಮಪುತ್ರಿಕೆಯಾದ ಶ್ರೀಮಾತೆಯನ್ನು ಸುವರ್ಣ ಅಥವಾ ಬೆಳ್ಳಿಯ ಎಲೆಗಳಲ್ಲಿ ಬರೆದು ಉತ್ತಮ ಪಾದುಕೆಯನ್ನೊಪ್ಪಿಸಿ ಎಳ್ಳು, ನೆಲ್ಲಿಕಾಯಿ, ಬಟ್ಟೆ, ಪುಷ್ಪ, ಮನೋಹರವಾದ ಪಟ್ಟೆ, ಬಿಳಿಗಂಧ, ಕುಂಕುಮ, ಸಿಂದೂರಗಳಿಂದಲೂ, ಕರ್ಪೂರ ಅಗುರು ಕಸ್ತೂರಿಯಿಂದಲೂ ಸೇರಿದ ಗಂಧದಿಂದಲೂ, ಬೆಟ್ಟದ ತಾವರೆ, ಕಮಲ, ಕಣಗಿಲು, ಬಿಳಿ ಮತ್ತು ಕೆಂಪು ಸಂಪಗೆ, ಕೇತಕಿ, ದಾಸವಾಳ ಮುಂತಾದ

CC-0. Jangamwadi Math Collection. Digitized by eGangotri

ಯುಕ್ತೈಃ ಕರ್ದಮುಕೈಶ್ಚೈವ ಬಿಲ್ವಪತ್ರೈರಖಂಡಿತೈಃ ।
ಪಾಲಾಶಜಾತಿಪುಷ್ಪೈಶ್ಚ ವಟಕೈರ್ಮಾಷಸಂಭವೈಃ ।
ಪೂಪಭಕ್ತಾದಿದಾಲೀಭಿಸ್ತ್ತೋಷಯೇಚ್ಛಾಕಸಂಚಯ್ಯೈಃ ॥ ೩೧ ॥
ಧೂಪದೀಪಾದಿಪೂರ್ವಂ ತು ಪೂಜಯೇಜ್ಜಗದಂಬಿಕಾಂ ।
ತದ್ಭಿಯೈವ ಕುಮಾರೀರ್ವೈ ವಿಪ್ರಾನಪಿ ಚ ಭೋಜಯೇತ್ ।
ಪಾಯಸೈರ್ಘೃತಯುಕ್ತೈಶ್ಚ ಶರ್ಕರಾಮಿಶ್ರಿತೈರ್ನೃಪ ॥ ೩೨ ॥
ಪಕ್ವಾನ್ನೈರ್ಮೋದಕಾದ್ಯೈಶ್ಚ ತರ್ಪಯೇದ್ಭಕ್ತಿಭಾವತಃ ।
ತರ್ಪ್ಯಮಾಣೇ ದ್ವಿಜೈಕಸ್ಮಿನ್ಸಹಸ್ರಫಲಮುಶ್ನುತೇ ॥ ೩೩ ॥
ದೈತ್ಯಾನಾಂ ಘಾತಕಂ ಸ್ತೋತ್ರಂ ವಾಚಯೇಚ್ಚ ಪುನಃ ಪುನಃ ।
ಏಕಾಗ್ರಮಾನಸೋ ಭೂತ್ವಾ ಶ್ರೀಮಾತರಂ ಸ್ತುವೀತ ಯಃ ॥ ೩೪ ॥
ತಸ್ಯ ತುಷ್ಟಾ ವರಂ ದದ್ಯಾತ್ಸ್ನಾಪಿತಾ ಪೂಜಿತಾ ಸ್ತುತಾ ।
ಅನಿಷ್ಟಾನಿ ಚ ಸರ್ವಾಣಿ ನಾಶಯೇದ್ಧರ್ಮಪುತ್ರಿಕಾ ॥ ೩೫ ॥
ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಧನವಾನ್ಭವೇತ್ ।
ರಾಜ್ಯಾರ್ಥೀ ಲಭತೇ ರಾಜ್ಯಂ ವಿದ್ಯಾರ್ಥೀ ಲಭತೇ ಚ ತಾಂ ॥ ೩೬ ॥
ಶ್ರಿಯೋಽರ್ಥೀ ಲಭತೇ ಲಕ್ಷ್ಮೀಂ ಭಾರ್ಯಾರ್ಥೀ ಲಭತೇ ಚ ತಾಂ ।
ಪ್ರಸಾದಾಚ್ಚ ಸರಸ್ವತ್ಯಾ ಲಭತೇ ನಾಽತ್ರ ಸಂಶಯಃ ॥ ೩೭ ॥

---

ಹೂವುಗಳಿಂದಲೂ, ಸೀಳಿಹೋಗದಿರುವ ಬಿಲ್ವಪತ್ರೆಗಳಿಂದಲೂ, ಮುತ್ತುಗ, ಜಾಜಿ ಹೂವುಗಳಿಂದಲೂ, ಉದ್ದಿನವಡೆ, ದೋಸೆ, ಅನ್ನ, ಬೇಳೆ, ತರಕಾರಿಗಳಿಂದಲೂ, ಧೂಪದೀಪಗಳಿಂದಲೂ ಜಗನ್ಮಾತೆಯಾದ ಆ ಶ್ರೀಮಾತೆಯನ್ನು ಆರಾಧಿಸಬೇಕು. ಶ್ರೀಮಾತೆಯೆಂಬ ಭಾವನೆಯಿಂದಲೇ ಕನ್ಯೆಯರನ್ನೂ, ಬ್ರಾಹ್ಮಣರನ್ನೂ ಭಕ್ತಿಯಿಂದ ತುಪ್ಪ, ಸಕ್ಕರೆಗಳಿಂದ ಮಿಶ್ರಿತವಾದ ಪಕ್ವಾನ್ನ, ಪಾಯಸ, ಕಡುಬು ಮೊದಲಾದುವುಗಳನ್ನು ಬಡಿಸಿ ಭೋಜನಮಾಡಿಸಿ ತೃಪ್ತಿಗೊಳಿಸಬೇಕು. ಒಬ್ಬ ಬ್ರಾಹ್ಮಣನನ್ನು ಸಂತೋಷಗೊಳಿಸಿದರೆ ಸಾವಿರ ಬ್ರಾಹ್ಮಣರನ್ನು ಭೋಜನಮಾಡಿಸಿದ ಫಲವನ್ನು ಪಡೆಯುವನು.

೩೪–೩೫. ದೈತ್ಯರನ್ನು ಕೊಲ್ಲುವ ದುರ್ಗಾಸಪ್ತಶತೀಸ್ತೋತ್ರವನ್ನು ಅನೇಕ ಬಾರಿ ಪಾರಾಯಣ ಮಾಡಿಸಿ ಒಮ್ಮನಸ್ಸಿನಿಂದ ಶ್ರೀಮಾತೆಯನ್ನು ಸ್ತೋತ್ರ ಮಾಡಿದರೆ, ಸ್ನಾನ, ಪೂಜೆ ಮತ್ತು ಸ್ತುತಿಗಳನ್ನು ಕೈಕೊಂಡ ದೇವಿಯು ಅವನ ಅನಿಷ್ಟಗಳನ್ನು ಕಳೆಯುವಳು.

೩೬–೩೭. ಆ ಸರಸ್ವತಿಯ ಅನುಗ್ರಹದಿಂದ ಮಕ್ಕಳಿಲ್ಲದವನು ಮಕ್ಕಳನ್ನೂ, ದರಿದ್ರನು ಹಣವನ್ನೂ, ರಾಜ್ಯವನ್ನು ಬಯಸುವವನು ರಾಜ್ಯವನ್ನೂ, ವಿದ್ಯಾರ್ಥಿಯು ವಿದ್ಯೆಯನ್ನೂ, ಸಂಪತ್ತನ್ನು ಅಪೇಕ್ಷಿಸುವವನು ಸಂಪತ್ತನ್ನೂ,

CC-0. Jangamwadi Math Collection. Digitized by eGangotri

ಅಂತೇ ಚ ಪರಮಂ ಸ್ಥಾನಂ ಯತ್ಸುರೈರಪಿ ದುರ್ಲಭಂ ।
ಪ್ರಾಪ್ನೋತಿ ಪುರುಷೋ ನಿತ್ಯಂ ಸರಸ್ವತ್ಯಾಃ ಪ್ರಸಾದತಃ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಶ್ರೀಮಾತಾ ಮಾಹಾತ್ಮ್ಯವರ್ಣನಂ"ನಾಮ ಸಪ್ತದಶೋಽಧ್ಯಾಯಃ

---

ಹೆಂಡತಿಯ ಅಪೇಕ್ಷೆಯುಳ್ಳವನು ಹೆಂಡತಿಯನ್ನೂ ಪಡೆಯುವನು. ಈ ವಿಷಯ ದಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೩೮. ಕೊನೆಯಲ್ಲಿ ಸರಸ್ವತಿಯ ಅನುಗ್ರಹದಿಂದ ದೇವತೆಗಳಿಗೂ ದುರ್ಲಭ ವಾದ ಶಾಶ್ವತವೂ, ಉತ್ತಮವೂ ಆಗಿರುವ ಸ್ಥಾನವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಶ್ರೀಮಾತಾಮಾಹಾತ್ಮ್ಯವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥಾಽಷ್ಟಾದಶೋಽಧ್ಯಾಯಃ

### ಮಾತಂಗೀಕರ್ಣಾಟಕೋಪಾಖ್ಯಾನವರ್ಣನಂ

ಶ್ರೀರುದ್ರ ಉವಾಚ :—

ಶೃಣು ಸ್ಕಂದ ಮಹಾಪ್ರಾಜ್ಞ ಹ್ಯದ್ಭುತಂ ಯತ್ಕೃತಂ ಮಯಾ ।
ಧರ್ಮಾರಣ್ಯೇ ಮಹಾದುಷ್ಟೋ ದೈತ್ಯಃ ಕರ್ಣಾಟಕಾಭಿಧಃ ॥ ೧ ॥
ನಿಭೃತಂ ಹಿ ಸಮಾಗತ್ಯ ದಂಪತ್ಯೋರ್ವಿಘ್ನಮಾಚರತ್ ।
ತಂ ದೃಷ್ಟ್ವಾ ತದ್ಭಯಾಲ್ಲೋಕಃ ಪ್ರದುದ್ರಾವ ನಿರಂತರಂ ॥ ೨ ॥
ತ್ಯಕ್ತ್ವಾ ಸ್ಥಾನಂ ಗತಾಃ ಸರ್ವೇ ವಣಿಜೋ ವಾಡವಾದಯಃ ।
ಮಾತಂಗೀರೂಪಮಾಸ್ಥಾಯ ಶ್ರೀಮಾತ್ರಾ ತ್ವನಯಾ ಸುತ ॥ ೩ ॥
ಹತಃ ಕರ್ಣಾಟಕೋನಾಮ ರಾಕ್ಷಸೋ ದ್ವಿಜಘಾತಕಃ ।
ತದಾ ಸರ್ವೇಽಪಿ ವೈ ವಿಪ್ರಾಃ ಹೃಷ್ಟಾಸ್ತೇ ತೇನ ಕರ್ಮಣಾ ॥ ೪ ॥
ಸ್ತುವಂತಿ ಪೂಜಯಂತಿ ಸ್ಮ ವಣಿಜೋ ಭಕ್ತಿತತ್ಪರಾಃ ।
ವರ್ಷೇ ವರ್ಷೇ ಪ್ರಕುರ್ವಂತಿ ಶ್ರೀಮಾತಾಪೂಜನಂ ಶುಭಂ ॥ ೫ ॥
ಶುಭಕಾರ್ಯೇಷು ಸರ್ವೇಷು ಪ್ರಥಮಂ ಪೂಜಯೇತ್ತು ತಾಂ ।
ನ ಸ ವಿಘ್ನಂ ಪ್ರಪಶ್ಯೇತ ತದಾಪ್ರಭೃತಿ ಪುತ್ರಕ ॥ ೬ ॥

---

### ಕನ್ನಡದ ಅನುವಾದ

#### ಮಾತಂಗೀಕರ್ಣಾಟಕೋಪಾಖ್ಯಾನವರ್ಣನ

೧-೪. ಶ್ರೀರುದ್ರನು ಹೇಳುತ್ತಾನೆ :— ಪ್ರಾಜ್ಞನಾದ ಎಲೈ ಸ್ಕಂದನೆ! ನಾನು ಮಾಡಿದ ಅದ್ಭುತ ಕಾರ್ಯವನ್ನು ಕೇಳು. ಧರ್ಮಾರಣ್ಯದಲ್ಲಿ ಮಹಾ ದುಷ್ಟನಾದ ಕರ್ಣಾಟಕನೆಂಬ ದೈತ್ಯನು ಗುಟ್ಟಾಗಿ ಬಂದು ದಂಪತಿಗಳಿಗೆ ವಿಘ್ನವನ್ನೆಸಗಿದನು. ಅವನನ್ನು ಕಂಡು ಭಯದಿಂದ ಜನರು ಓಡಿಹೋದರು. ವರ್ತಕರೂ, ಬ್ರಾಹ್ಮಣರೂ ಆ ಸ್ಥಳವನ್ನು ತ್ಯಜಿಸಿ ಹೊರಟುಹೋದರು. ಆಗ ಶ್ರೀಮಾತೆಯು ಮಾತಂಗೀ ರೂಪವನ್ನು ಧರಿಸಿ ಬ್ರಾಹ್ಮಣ ಹಿಂಸಕನಾದ ಆ ಕರ್ಣಾಟಕ ರಾಕ್ಷಸನನ್ನು ಕೊಂದಳು. ಆಗ ಎಲ್ಲ ವಿಪ್ರರೂ ಅವಳ ಆ ದೈತ್ಯ ನಿಗ್ರಹ ಕಾರ್ಯದಿಂದ ಸಂತೋಷಗೊಂಡರು.

೫-೬. ವರ್ತಕರೂ ಭಕ್ತಿಯುಕ್ತರಾಗಿ ಸ್ತುತಿಸಿ ಪೂಜಿಸಿದರು. ಹೀಗೆಯೇ ಅವರು ಪ್ರತಿವರ್ಷವೂ ಶ್ರೀಮಾತೆಯ ಶುಭಪೂಜೆಯನ್ನು ಮಾಡುತ್ತಾರೆ. ಸಮಸ್ತ ಶುಭಕಾರ್ಯಗಳಲ್ಲಿಯೂ ಮೊದಲು ಶ್ರೀಮಾತೆಯನ್ನಾರಾಧಿಸಿದವನು ಅದು ಮೊದಲ್ಗೊಂಡು ವಿಘ್ನವನ್ನು ಕಾಣಲಾರನು.



CC-0. Jangamwadi Math Collection. Digitized by eGangotri

ಯುಧಿಷ್ಠಿರ ಉವಾಚ :—
ಕೋಽಸೌ ದುಷ್ಟೋ ಮಹಾದೈತ್ಯಃ ಕಸ್ಮಿನ್ವಂಶೇ ಸಮುದ್ಭವಃ ।
ಕಿಂ ಕಿಂ ತೇನ ಕೃತಂ ತಾತ ಸರ್ವಂ ಕಥಯ ಸುವ್ರತ ॥ ೭ ॥
ವ್ಯಾಸ ಉವಾಚ :—
ಶೃಣು ರಾಜನ್ಪ್ರವಕ್ಷ್ಯಾಮಿ ಕರ್ಣಾಟಕವಿಚೇಷ್ಟಿತಂ ।
ದೇವಾನಾಂ ದಾನವಾನಾಂ ಯೋ ದುಃಸಹೋ ವೀರ್ಯದರ್ಪಿತಃ ॥ ೮ ॥
ದುಷ್ಟಕರ್ಮಾ ದುರಾಚಾರೋ ಮಹಾರಾಷ್ಟ್ರೋ ಮಹಾಭುಜಃ ।
ಜಿತ್ವಾ ಚ ಸಕಲಾಂಲ್ಲೋಕಾನ್ ತ್ರೈಲೋಕ್ಯೇ ಚ ಗತಾಗತಃ ॥ ೯ ॥
ಯತ್ರ ದೇವಾಶ್ಚ ಋಷಯಸ್ತತ್ರ ಗತ್ವಾ ಮಹಾಽಸುರಃ ।
ಛದ್ಮನಾ ವಾ ಬಲೇನೈವ ವಿಘ್ನಂ ಪ್ರಕುರುತೇ ನೃಪ ॥ ೧೦ ॥
ನ ವೇದಾಽಧ್ಯಯನಂ ಲೋಕೇ ಭವೇತ್ತಸ್ಯ ಭಯೇನ ಚ ।
ಕುರ್ವತೇ ವಾಡವಾ ದೇವಾ ನ ಚ ಸಂಧ್ಯಾದ್ಯುಪಾಸನಂ ॥ ೧೧ ॥
ನ ಕ್ರತುರ್ವರ್ತತೇ ತತ್ರ ನ ಚೈವ ಸುರಪೂಜನಂ ।
ದೇಶೇ ದೇಶೇ ಚ ಸರ್ವತ್ರ ಗ್ರಾಮೇ ಗ್ರಾಮೇ ಪುರೇ ಪುರೇ ॥ ೧೨ ॥
ತೀರ್ಥೇ ತೀರ್ಥೇ ಚ ಸರ್ವತ್ರ ವಿಘ್ನಂ ಪ್ರಕುರುತೇಽಸುರಃ ।
ಪರಂತು ಶಕ್ಯತೇ ನೈವ ಧರ್ಮಾಽರಣ್ಯೇ ಪ್ರವೇಶಿತುಂ ॥ ೧೩ ॥

---

೭. ಯುಧಿಷ್ಠಿರನು ಕೇಳುತ್ತಾನೆ:—ತಾತ! ಈ ದುಷ್ಟದೈತ್ಯನಾರು? ಇವನು ಯಾವ ವಂಶದಲ್ಲಿ ಜನಿಸಿದವನು? ಇವನು ಏನೇನುಮಾಡಿದನು? ಎಲ್ಲವನ್ನೂ ಹೇಳು.

೮-೯. ವ್ಯಾಸನು ಹೇಳುತ್ತಾನೆ:—ಅರಸ! ಕೇಳು. ಕರ್ಣಾಟಕಾಸುರನ ಕಾರ್ಯವನ್ನು ಹೇಳುವೆನು. ಪರಾಕ್ರಮದಿಂದ ಮತ್ತನಾಗಿ ದೇವದಾನವರಿಗೆ ಸಹಿಸಲಾಗದವನೂ, ದುಷ್ಕಾರ್ಯಕರ್ತನೂ, ಕೆಟ್ಟನಡತೆಯುಳ್ಳವನೂ, ಮಹಾರಾಜ್ಯವುಳ್ಳವನೂ, ದೀರ್ಘಬಾಹುವೂ ಆಗಿರುವ ಆ ಮಹಾದೈತ್ಯನು ಸಕಲ ಲೋಕಗಳನ್ನೂ ಗೆದ್ದು ಮೂರು ಲೋಕಗಳಲ್ಲಿಯೂ ಸಂಚರಿಸತೊಡಗಿದನು.

೧೦. ಮಹಾರಾಜ! ಆ ಮಹಾಸುರನು ದೇವತೆಗಳೂ ಋಷಿಗಳೂ ಇರುವ ಸ್ಥಳಕ್ಕೆ ಹೋಗಿ ಕಪಟದಿಂದಾಗಲಿ, ಶಕ್ತಿಯಿಂದಾಗಲಿ ವಿಘ್ನಗಳನ್ನು ಮಾಡಿದನು.

೧೧. ಪ್ರಪಂಚದಲ್ಲಿ ಅವನ ಭಯದಿಂದ ಬ್ರಾಹ್ಮಣರೂ, ದೇವತೆಗಳೂ ವೇದಾಧ್ಯಯನವನ್ನೂ, ಸಂಧ್ಯಾವಂದನೆಯನ್ನೂ ಮಾಡಲಾಗಲಿಲ್ಲ.

೧೨-೧೩. ಯಜ್ಞವೂ, ದೇವಪೂಜೆಯೂ ನಡೆಯಲಿಲ್ಲ. ಈ ಅಸುರನು ಪ್ರತಿದೇಶದಲ್ಲಿಯೂ, ಪ್ರತಿಹಳ್ಳಿಯಲ್ಲಿಯೂ, ಪ್ರತಿಪಟ್ಟಣದಲ್ಲಿಯೂ, ಪ್ರತಿತೀರ್ಥದಲ್ಲಿಯೂ, ಎಲ್ಲೆಡೆಯಲ್ಲಿಯೂ ತೊಂದರೆ ಮಾಡುತ್ತಿದ್ದನು. ಆದರೆ ಧರ್ಮಾರಣ್ಯವನ್ನು ಮಾತ್ರ ಪ್ರವೇಶಿಸಲು ಅವನು ಶಕ್ತನಾಗಲಿಲ್ಲ.

CC-0. Jangamwadi Math Collection. Digitized by eGangotri

ಭಯಾಚ್ಚಕ್ರ್ಯಾಶ್ಚ ಶ್ರೀಮಾತುರ್ಧರ್ಮಾನವೋ ವಿಕ್ಲವಸ್ತದಾ ।
ಕೇನೋಪಾಯೇನ ತತ್ರೈವ ಗಮ್ಯತೇತ್ಯಿತಿ ಚಿಂತಯನ್ ॥ ೧೪ ॥
ವಿಘ್ನಂ ಕರಿಷ್ಯೇ ಹಿ ಕಥಂ ಬ್ರಾಹ್ಮಣಾನಾಂ ಮಹಾತ್ಮನಾಂ ।
ವೇದಾಽಧ್ಯಯನಕರ್ತೄಣಾಂ ಯಜ್ಞೇ ಕರ್ಮಾಽಧಿತಿಷ್ಠತಾಂ ॥ ೧೫ ॥
ವೇದಾಽಧ್ಯಯನಜಂ ಶಬ್ದಂ ಶ್ರುತ್ವಾ ದೂರಾತ್ಸದಾನವಃ ।
ವಿವ್ಯಥೇ ಸ ಯಥಾ ರಾಜನ್ವಜ್ರಾಹತ ಇವ ದ್ವಿಪಃ ॥ ೧೬ ॥
ನಿಃಶ್ವಾಸಾನ್ಮುಮುಚೇ ರೋಷಾದ್ದಂತೈರ್ದಂತಾಂಶ್ಚ ಘರ್ಷಯನ್ ।
ದಶಮಾನೋ ನಿಜಾವೋಷ್ಠೌ ಪೇಷಯಂಶ್ಚ ಕರಾವುಭೌ ॥ ೧೭ ॥
ಉನ್ಮತ್ತವದ್ವಿಚರತ ಇತಶ್ಚೇತಶ್ಚ ಮಾರಿಷ ।
ಸನ್ನಿಪಾತಸ್ಯ ದೋಷೇಣ ಯಥಾ ಭವತಿ ಮಾನವಃ ॥ ೧೮ ॥
ತಥೈವ ದಾನವೋ ಘೋರೋ ಧರ್ಮಾಽರಣ್ಯಸಮೀಪಗಃ ।
ಭ್ರಮತೇ ದಹತೇ ಚೈವ ದೂರಾದೇವ ಭಯಾನ್ವಿತಃ ॥ ೧೯ ॥
ವಿವಾಹಕಾಲೇ ವಿಪ್ರಾಣಾಂ ರೂಪಂ ಕೃತ್ವಾ ದ್ವಿಜನ್ಮನಃ ।
ತತ್ರಾಗತ್ಯ ದುರಾಧರ್ಷೋ ನೀತ್ವಾ ದಾಂಪತ್ಯಮುತ್ತಮಂ ॥ ೨೦ ॥
ಉತ್ಪಪಾತ ಮಹೀಪೃಷ್ಠಾದ್ಗಗನೇ ಸೋಽಸುರಾಽಧಮಃ ।
ಸ್ವಯಂ ಚ ರಮತೇ ಪಾಪೋ ದ್ವೇಷಾಜ್ಜಾತಿಸ್ವಭಾವತಃ ॥ ೨೧ ॥

---

೧೪-೧೫. ಶ್ರೀಮಾತೆಯ ಭಯದಿಂದ ಆ ದಾನವನು ವ್ಯಥೆಗೊಂಡು, "ಧರ್ಮಾರಣ್ಯವನ್ನು ಹೇಗೆ ಪ್ರವೇಶಿಸಿಯೇನು? ವೇದಾಧ್ಯಯನವನ್ನೂ, ಯಜ್ಞವನ್ನೂ ಮಾಡುತ್ತಿರುವ ಮಹಾತ್ಮರಾದ ಈ ಬ್ರಾಹ್ಮಣರಿಗೆ ಹೇಗೆ ತೊಂದರೆಯನ್ನುಂಟುಮಾಡಿಯೇನು?" ಎಂದೇ ಆಲೋಚಿಸುತ್ತಿದ್ದನು.

೧೬. ಆವನು ದೂರದಿಂದ ಅವರ ವೇದಾಧ್ಯಯನ ಶಬ್ದವನ್ನು ಕೇಳಿ ವಜ್ರದಿಂದ ಹೊಡೆಯಲ್ಪಟ್ಟ ಐರಾವತದಂತೆ ವ್ಯಥೆಪಡುತ್ತಿದ್ದನು.

೧೭. ರೋಷದಿಂದ ಹಲ್ಲುಗಳನ್ನು ಕಡಿಯುತ್ತಾ, ತುಟಿಗಳನ್ನು ಕಚ್ಚಿಕೊಳುತ್ತ ಎರಡು ಕೈಗಳನ್ನೂ ಹಿಸಿಕಿಕೊಳ್ಳುತ್ತ ನಿಟ್ಟುಸುರುಬಿಟ್ಟನು.

೧೮-೧೯. ಸನ್ನಿಪಾತಜ್ವರದಿಂದ ಮಾನವನು ಹುಚ್ಚನಾಗಿ ಅಲೆಯುವಂತೆ ಇಲ್ಲಿ ಅಲ್ಲಿ ಹುಚ್ಚನಂತೆ ಸಂಚರಿಸಿದನು. ಅಂತೆಯೇ ಧರ್ಮಾರಣ್ಯದ ಹತ್ತಿರದಲ್ಲಿರುವ ಈ ದಾನವನು ದೂರದಲ್ಲಿಯೇ ಭಯದಿಂದ ಅಲೆದಲೆದು ವ್ಯಥೆಗೊಂಡನು.

೨೦-೨೧. ಬಲಶಾಲಿಯಾದ ಈ ದಾನವನು ಬ್ರಾಹ್ಮಣರ ಮದುವೆಯ ಸಮಯದಲ್ಲಿ ಆವರ ವೇಷವೇ ಉಳ್ಳವನಾಗಿ ಬಂದು ಉತ್ತಮ ದಂಪತಿಗಳನ್ನು ಅಪಹರಿಸಿ ಆಕಾಶಕ್ಕೆ ಹಾರಿ ಅಲ್ಲಿ ಜಾತಿಸ್ವಭಾವದಂತೆ ದ್ವೇಷದಿಂದ ಆ ದಂಪತಿಗಳನ್ನು ಕೆಡಿಸುತ್ತಿದ್ದನು.

CC-0. Jangamwadi Math Collection. Digitized by eGangotri

ಏವಂ ಚ ಬಹುಶಃ ಸೋಽಥ ಧರ್ಮಾರಣ್ಯಾಚ್ಚ ದಂಪತೀ ।
ಗೃಹೀತ್ವಾ ಕುರುತೇ ಪಾಪಂ ದೇವಾನಾಮಪಿ ದುಃಸಹಂ ॥ ೨೨ ॥
ವಿಘ್ನಂ ಕರೋತಿ ದುಷ್ಟೋಽಸೌ ದಂಪತ್ಯೋಃ ಸತತಂ ಭುವಿ ।
ಮಹಾಘೋರತರಂ ಕರ್ಮ ಕುರ್ವಂಸ್ತಸ್ಮಿನ್ಪುರೇ ಪುರೇ ॥ ೨೩ ॥
ತತ್ರೋದ್ವಿಗ್ನಾ ದ್ವಿಜಾಃ ಸರ್ವೇ ಪಲಾಯಂತೇ ದಿಶೋ ದಶ ।
ಗತಾಃ ಸರ್ವೇ ಭೂಮಿದೇವಾಸ್ತ್ಯಕ್ತ್ವಾ ಸ್ಥಾನಂ ಮನೋರಮಂ ॥ ೨೪ ॥
ಯತ್ರ ಯತ್ರ ಮಹತ್ತೀರ್ಥಂ ತತ್ರ ತತ್ರ ಗತಾ ದ್ವಿಜಾಃ ।
ಉದ್ವಸಂ ತತ್ಪುರಂ ಜಾತಂ ತಸ್ಮಿನ್ಕಾಲೇ ನೃಪೋತ್ತಮ ॥ ೨೫ ॥
ನ ವೇದಾಽಧ್ಯಯನಂ ತತ್ರ ನ ಚ ಯಜ್ಞಃ ಪ್ರವರ್ತತೇ ।
ಮನುಜಾಸ್ತತ್ರ ತಿಷ್ಠಂತಿ ನ ಕರ್ಣಾಟಭಯಾರ್ದಿತಾಃ ॥ ೨೬ ॥
ದ್ವಿಜಾಃ ಸರ್ವೇ ತತೋ ರಾಜನ್ವಣಿಜಶ್ಚ ಮಹಾಯಶಾಃ ।
ಏಕತ್ರ ಮಿಲಿತಾಃ ಸರ್ವೇ ವಕ್ತುಂ ಮಂತ್ರಂ ಯಥೋಚಿತಂ ॥ ೨೭ ॥
ಕರ್ಣಾಟಸ್ಯ ವಧೋಪಾಯಂ ಮಂತ್ರಯಂತಿ ದ್ವಿಜರ್ಷಭಾಃ ।
ವಿಚಾರ್ಯಮಾಣೇ ತೈರ್ದೈವಾದ್ವಾಗ್ಜಾತಾ ಚಾಽಶರೀರಿಣೀ ॥ ೨೮ ॥
ಆರಾಧಯತ ಶ್ರೀಮಾತಾಂ ಸರ್ವದುಃಖಾಽಪಹಾರಿಣೀಂ ।
ಸರ್ವದೈತ್ಯಕ್ಷಯಕರೀಂ ಸರ್ವೋಪದ್ರವನಾಶಿನೀಂ ॥ ೨೯ ॥

---

೨೨–೨೩. ಹೀಗೆ ಅವನು ಅನೇಕಬಾರಿ ಧರ್ಮಾರಣ್ಯದಿಂದ ದಂಪತಿಗಳನ್ನು ಅಪಹರಿಸಿಕೊಂಡು ಹೋಗಿ ದೇವತೆಗಳಿಗೂ ಸಹಿಸಲಾಗದ ಪಾಪವನ್ನು ಆಚರಿಸುತ್ತಿದ್ದನು. ಈ ದುಷ್ಟನು ಆ ಪಟ್ಟದಲ್ಲಿ ಘೋರಕಾರ್ಯವನ್ನು ಆಚರಿಸುತ್ತ ದಂಪತಿಗಳಿಗೆ ಯಾವಾಗಲೂ ಉಪದ್ರವವನ್ನುಂಟುಮಾಡುತ್ತಿದ್ದನು.

೨೪. ಅಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರೆಲ್ಲರೂ ಭಯದಿಂದ ಮನೋಹರವಾದ ಆ ಸ್ಥಳವನ್ನು ತ್ಯಜಿಸಿ ಹತ್ತು ದಿಕ್ಕುಗಳಿಗೂ ಓಡಿಹೋದರು.

೨೫. ಮಹಾತೀರ್ಥಗಳಿರುವ ಪ್ರದೇಶಕ್ಕೆ ಬ್ರಾಹ್ಮಣರೆಲ್ಲರೂ ತೆರಳಿದ್ದರಿಂದ ಆ ಧರ್ಮಾರಣ್ಯವೆಲ್ಲವೂ ಶೂನ್ಯವಾಯಿತು.

೨೬. ಅಲ್ಲಿ ವೇದಾಧ್ಯಯನವೂ ಯಜ್ಞವೂ ನಡೆಯುತ್ತಿರಲಿಲ್ಲ. ಮನುಷ್ಯರು ಕರ್ಣಾಟಾಸುರನ ಭಯದಿಂದ ಪೀಡಿತರಾಗಿ ಅಲ್ಲಿ ವಾಸಿಸುತ್ತಿರಲಿಲ್ಲ.

೨೭. ಬಳಿಕ ಆ ಬ್ರಾಹ್ಮಣರೂ, ವೈಶ್ಯರೂ ಉಚಿತರೀತಿಯಿಂದ ಆಲೋಚಿಸುವುದಕ್ಕಾಗಿ ಒಂದೆಡೆಯಲ್ಲಿ ಸೇರಿದರು.

೨೮–೨೯. ಅವರು ಕರ್ಣಾಟಕನ ವಧೆಗೆ ಉಪಾಯವನ್ನು ಆಲೋಚಿಸುತ್ತಿರಲು "ಸಕಲ ದುಃಖಗಳನ್ನು ನಿವಾರಿಸುವವಳೂ, ಸಮಸ್ತ ದೈತ್ಯರನ್ನೂ ನಾಶಗೊಳಿಸುವವಳೂ, ಎಲ್ಲ ತೊಂದರೆಗಳನ್ನು ಪರಿಹರಿಸುವವಳೂ ಆಗಿರುವ

CC-0. Jangamwadi Math Collection. Digitized by eGangotri

ತಚ್ಛ್ರುತ್ವಾ ವಾಡವಾಃ ಸರ್ವೇ ಹರ್ಷವ್ಯಾಕುಲಲೋಚನಾಃ ।
ಶ್ರೀಮಾತಾಂ ತು ಸಮಾಗತ್ಯ ಗೃಹೀತ್ವಾ ಬಲಿಮುತ್ತಮಂ ॥ ೩೦ ॥
ಮಧು ಕ್ಷೀರಂ ದಧಿ ಘೃತಂ ಶರ್ಕರಾ ಪಂಚಧಾರಯಾ ।
ಧೂಪಂ ದೀಪಂ ತಥಾ ಚೈವ ಚಂದನಂ ಕುಸುಮಾನಿ ಚ ॥ ೩೧ ॥
ಫಲಾನಿ ವಿವಿಧಾನ್ಯೇವ ಗೃಹೀತ್ವಾ ವಾಡವಾ ನೃಪ ।
ಧಾನ್ಯಂ ತು ವಿವಿಧಂ ರಾಜನ್ಭಕ್ತ್ಯಾಽಪೂಪಾ ಘೃತಾಚಿತಾಃ ॥ ೩೨ ॥
ಕುಲ್ಮಾಷಾ ವಟಿಕಾಶ್ಚೈವ ಪಾಯಸಂ ಘೃತಮಿಶ್ರಿತಂ ।
ಸೋಹಾಲಿಕಾ ದೀಪಿಕಾಶ್ಚ ಸಾದ್ರಾರ್ಶ್ಚ ವಟಿಕಾಸ್ತಥಾ ॥ ೩೩ ॥
ರಾಜಿಕಾಭಿಶ್ಚ ಸಂಲಿಪ್ತಾ ನವಚ್ಛಿದ್ರಸಮನ್ವಿತಾಃ ।
ಚಂದ್ರಬಿಂಬಪ್ರತೀಕಾಶಾ ಮಂಡಕಾಸ್ತತ್ರ ಕಲ್ಪಿತಾಃ ॥ ೩೪ ॥
ಪಂಚಾಮೃತೇನ ಸ್ನಪನಂ ಕೃತ್ವಾ ಗಂಧೋದಕೇನ ಚ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತೋಷಯಾಮಾಸುರೀಶ್ವರೀಂ ॥ ೩೫ ॥
ನೀರಾಜನೈಃ ಸಕರ್ಪೂರೈಃ ಪುಷ್ಪೈರ್ದೀಪೈಃ ಸುಚಂದನೈಃ ।
ಶ್ರೀಮಾತಾ ತೋಷಿತಾ ರಾಜನ್ಸರ್ವೋಪದ್ರವನಾಶಿನೀ ॥ ೩೬ ॥
ಶ್ರೀಮಾತಾ ಚ ಜಗನ್ಮಾತಾ ಬ್ರಾಹ್ಮೀ ಸೌಮ್ಯಾ ವರಪ್ರದಾ ।
ರೂಪತ್ರಯಂ ಸಮಾಸ್ಥಾಯ ಪಾಲಯೇತ್ಸಾ ಜಗತ್ತ್ರಯಂ ॥ ೩೭ ॥

---

ಆ ಶ್ರೀಮಾತೆಯನ್ನು ಪೂಜಿಸಿರಿ" ಎಂದು ಅದೃಷ್ಟವಶದಿಂದ ಅಶರೀರವಾಣಿ ಯಾಯಿತು.

೩೦–೩೬. ಅದನ್ನು ಕೇಳಿ ಬ್ರಾಹ್ಮಣರೆಲ್ಲರೂ ಹರ್ಷೋತ್ಫುಲ್ಲಲೋಚನರಾಗಿ ಶ್ರೀಮಾತೆಯ ಸನ್ನಿಧಿಗೆ ಬಂದರು; ಕಾಣಿಕೆಯನ್ನೂ, ಜೇನುತುಪ್ಪ, ಹಾಲು, ಮೊಸರು, ತುಪ್ಪ, ಸಕ್ಕರೆಗಳನ್ನೂ, ಧೂಪ, ದೀಪ, ಗಂಧ, ಹೂವು, ನಾನಾ ವಿಧ ವಾದ ಹಣ್ಣುಗಳನ್ನೂ, ಬಗೆ ಬಗೆಯ ಧಾನ್ಯಗಳನ್ನೂ, ಅನ್ನವನ್ನೂ, ತುಪ್ಪದಿಂದ ಕರೆದ ಭಕ್ಷ್ಯಗಳನ್ನೂ, ಅಲಸಂದೆಕಾಳು, ವಡೆ, ಪಾಯಸ, ತುಪ್ಪದ ಸಣ್ಣದೀಪ ಮೊದಲಾದುವುಗಳನ್ನೂ, ಸಾಸಿವೆಗಳಿಂದ ಲಿಪ್ತವಾಗಿಯೂ, ಒಂಬತ್ತು ರಂಧ್ರ ಗಳಿಂದ ಸಹಿತವಾಗಿಯೂ, ಚಂದ್ರಬಿಂಬಕ್ಕೆ ಸಮವಾಗಿಯೂ ಇರುವ ಪೂರಿ ಗಳನ್ನೂ ಸಿದ್ಧಪಡಿಸಿಕೊಂಡು ಪಂಚಾಮೃತದಿಂದಲೂ, ಗಂಧೋಧಕದಿಂದಲೂ ಅಭಿಷೇಕಮಾಡಿ, ಧೂಪ ದೀಪ ನೈವೇದ್ಯಗಳಿಂದಲೂ, ಕರ್ಪೂರಾರತಿಗಳಿಂದಲೂ ಎಲ್ಲ ತೊಂದರೆಗಳನ್ನೂ ನೀಗಿಸುವ ಸುರೇಶ್ವರಿಯಾದ ಆ ಶ್ರೀಮಾತೆಯನ್ನು ಪೂಜಿಸಿ ತೃಪ್ತಿಗೊಳಿಸಿದರು.

೩೭–೩೯. ಜಗನ್ಮಾತೆಯೂ, ಬ್ರಹ್ಮನ ಮಗಳೂ, ಶಾಂತಳೂ, ವರವನ್ನು ಕೊಡುವವಳೂ ಆಗಿರುವ ಆ ಶ್ರೀಮಾತೆಯು ಮೂರು ರೂಪಗಳನ್ನು ತಳೆದು

CC-0. Jangamwadi Math Collection. Digitized by eGangotri

ತ್ರಯೀರೂಪೇಣ ಧರ್ಮಾತ್ಮನ್ರಕ್ಷತೇ ಸತ್ಯಮಂದಿರಂ ।
ಜಿತೇಂದ್ರಿಯಾ ಜಿತಾತ್ಮಾನೋ ಮಿಲಿತಾಸ್ತೇ ದ್ವಿಜೋತ್ತಮಾಃ ॥ ೩೮ ॥
ತೈಃ ಸರ್ವೈರರ್ಚಿತಾ ಮಾತಾ ಚಂದನಾದ್ಯೇನ ತೋಷಿತಾ ।
ಸ್ತುತಿಮಾರೇಭಿರೇ ತತ್ರ ವಾಙ್ಮನಃಕಾಯಕರ್ಮಭಿಃ ।
ಏಕಚಿತ್ತೇನ ಭಾವೇನ ಬ್ರಹ್ಮಪುತ್ರ್ಯಾಃ ಪುರಃ ಸ್ಥಿತಾಃ ॥ ೩೯ ॥

ವಿಪ್ರಾ ಊಚುಃ:—

ನಮಸ್ತೇ ಬ್ರಹ್ಮಪುತ್ರ್ಯೈಸ್ತು ನಮಸ್ತೇ ಬ್ರಹ್ಮಚಾರಿಣಿ ।
ನಮಸ್ತೇ ಜಗತಾಂ ಮಾತರ್ನಮಸ್ತೇ ಸರ್ವಗೇ ಸದಾ ॥ ೪೦ ॥
ಕ್ಷುನ್ನಿದ್ರಾ ತ್ವಂ ತೃಷಾ ತ್ವಂ ಚ ಕ್ರೋಧತಂದ್ರಾದಯಸ್ತಥಾ ।
ತ್ವಂ ಶಾಂತಿಸ್ತ್ವಂ ರತಿಶ್ಚೈವ ತ್ವಂ ಜಯಾ ವಿಜಯಾ ತಥಾ ॥ ೪೧ ॥
ಬ್ರಹ್ಮವಿಷ್ಣುಮಹೇಶಾದ್ಯೈಸ್ತ್ವಂ ಪ್ರಪನ್ನಾ ಸುರೇಶ್ವರಿ ।
ಸಾವಿತ್ರೀ ಶ್ರೀರುಮಾಚೈವ ತ್ವಂ ಚ ಮಾತಾ ವ್ಯವಸ್ಥಿತಾ ॥ ೪೨ ॥
ಬ್ರಹ್ಮವಿಷ್ಣುಸುರೇಶಾನಾಸ್ತ್ವದಾಧಾರೇ ವ್ಯವಸ್ಥಿತಾಃ ।
ನಮಸ್ತುಭ್ಯಂ ಜಗನ್ಮಾತರ್ಧೃತಿಪುಷ್ಟಿಸ್ವರೂಪಿಣಿ ॥ ೪೩ ॥
ರತಿಃ ಕ್ರೋಧಾ ಮಹಾಮಾಯಾ ಛಾಯಾ ಜ್ಯೋತಿಃ ಸ್ವರೂಪಿಣೀ ।
ಸೃಷ್ಟಿಸ್ಥಿತ್ಯಂತಕೃದ್ದೇವಿ ಕಾರ್ಯಕಾರಣದಾ ಸದಾ ॥ ೪೪ ॥

---

ತ್ರೈಲೋಕ್ಯವನ್ನು ಕಾಪಾಡುವಳು. ಮೂರು ವೇದಗಳ ರೂಪದಿಂದ ಸತ್ಯಮಂದಿರವನ್ನು ರಕ್ಷಿಸುವಳು. ಜಿತೇಂದ್ರಿಯರೂ, ಜಿತವಾದ ಮನಸ್ಸುಳ್ಳವರೂ ಆಗಿರುವ ಬ್ರಾಹ್ಮಣರೆಲ್ಲರೂ ಒಟ್ಟಿಗೆ ಸೇರಿ ಗಂಧ ಮೊದಲಾದುವುಗಳಿಂದ ಆ ಶ್ರೀಮಾತೆಯನ್ನಾರಾಧಿಸಿ ಸಂತೋಷಗೊಳಿಸಿ ಮಾತು, ಮನಸ್ಸು, ದೇಹ, ಕಾರ್ಯ, ಭಾವನೆಗಳಿಂದ ಒಂದಾಗಿ ಸ್ತುತಿಸಲಾರಂಭಿಸಿದರು.

೪೦. ಬ್ರಾಹ್ಮಣರು ಸ್ತುತಿಸುತ್ತಾರೆ:—“ಬ್ರಹ್ಮಪುತ್ರಿಯೂ, ಬ್ರಹ್ಮಚಾರಿಣಿಯೂ, ಜಗದಂಬೆಯೂ, ಸರ್ವವ್ಯಾಪಿನಿಯೂ ಆಗಿರುವ ನಿನಗೆ ನಮಸ್ಕಾರವು.

೪೧. ಹಸಿವು, ನಿದ್ರೆ, ಬಾಯಾರಿಕೆ, ಕೋಪ, ಆಲಸ್ಯ, ಶಾಂತಿ, ಪ್ರೀತಿ, ಜಯ, ವಿಜಯ ಎಲ್ಲವೂ ನೀನೇ.

೪೨. ಸುರರಿಗೆ ಒಡೆಯಳಾದ ಓ ದೇವಿಯೆ! ನಿನ್ನನ್ನು ಬ್ರಹ್ಮ ವಿಷ್ಣು ಮಹೇಶ್ವರರೂ ಸೇವಿಸುತ್ತಾರೆ. ಮಾತೆ! ನೀನು ಸಾವಿತ್ರೀ, ಲಕ್ಷ್ಮೀ, ಪಾರ್ವತಿಯರ ಸ್ವರೂಪಳಾಗಿರುವೆ.

೪೩. ಬ್ರಹ್ಮವಿಷ್ಣುಮಹೇಶ್ವರರು ನಿನ್ನನ್ನು ಆಶ್ರಯಿಸಿಕೊಂಡಿರುವರು. ಸಂತೋಷ ಮತ್ತು ಪುಷ್ಟಿರೂಪಳಾದ ಓ ಜಗನ್ಮಾತೆ! ನಿನಗೆ ನಮಸ್ಕಾರವು.

೪೪. ಪ್ರೀತಿ, ಕೋಪ, ಮಹಾಮಾಯೆ, ಛಾಯೆ, ತೇಜಸ್ಸು ಇವುಗಳ

CC-0. Jangamwadi Math Collection. Digitized by eGangotri

ಧರಾ ತೇಜಸ್ತಥಾ ವಾಯುಃ ಸಲಿಲಾಕಾಶನೇವ ಚ ।
ನಮಸ್ತೇಽಸ್ತು ಮಹಾವಿದ್ಯೇ ಮಹಾಜ್ಞಾನಮಯೇಽನಘೇ ॥ ೪೫ ॥
ಹ್ರೀಂಕಾರೀ ದೇವರೂಪಾ ತ್ವಂ ಕ್ಲೀಂಕಾರೀ ತ್ವಂ ಮಹಾದ್ಯುತೇ ।
ಆದಿಮಧ್ಯಾಽವಸಾನಾ ತ್ವಂ ತ್ರಾಹಿ ಚಾಽಸ್ಮಾನ್ಮಹಾಭಯಾತ್ ॥ ೪೬ ॥
ಮಹಾಪಾಪೋಹಿ ದುಷ್ಟಾತ್ಮಾ ದೈತ್ಯೋಽಯಂ ಬಾಧತೇಽಧುನಾ ।
ತ್ರಾಣರೂಪಾ ತ್ವಮೇಕಾ ಚ ಅಸ್ಮಾಕಂ ಕುಲದೇವತಾ ॥ ೪೭ ॥
ತ್ರಾಹಿ ತ್ರಾಹಿ ಮಹಾದೇವಿ ರಕ್ಷ ರಕ್ಷ ಮಹೇಶ್ವರಿ ।
ಹನ್ಯೈನಂ ದಾನವಂ ದುಷ್ಟಂ ದ್ವಿಜಾನಾಂ ವಿಘ್ನಕಾರಕಂ ॥ ೪೮ ॥
ಏವಂ ಸ್ತುತಾ ತದಾ ದೇವೀ ಮಹಾಮಾಯಾ ದ್ವಿಜನ್ಮಭಿಃ ।
ಕರ್ಣಾಟಸ್ಯ ವಧಾರ್ಥಾಯ ದ್ವಿಜಾತೀನಾಂ ಹಿತಾಯ ಚ ।
ಪ್ರತ್ಯಕ್ಷಾ ಸಾಽಭವತ್ತತ್ರ ವರಂ ಬ್ರೂತೇತ್ಯುವಾಚ ಹ ॥ ೪೯ ॥

ಶ್ರೀಮಾತೋವಾಚ :—

ಕೇನ ವೈ ತ್ರಾಸಿತಾ ವಿಪ್ರಾಃ ಕೇನ ವೋದ್ವೇಜಿತಾಃ ಪುನಃ ।
ತಸ್ಯಾಽಹಂ ಕುಪಿತಾ ವಿಪ್ರಾ ನಯಿಷ್ಯೇ ಯಮ ಸಾದನಂ ॥ ೫೦ ॥

---

ಸ್ವರೂಪಳೂ, ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವವಳೂ, ಕಾರ್ಯಕಾರಣಗಳನ್ನುಂಟುಮಾಡುವವಳೂ ಆದ ಎಲೌ ತಾಯೆ! ನಿನಗೆ ನಮಸ್ಕಾರವು.

೪೫. ಭೂಮಿ, ತೇಜಸ್ಸು, ಗಾಳಿ, ನೀರು, ಆಕಾಶಗಳ ಸ್ವರೂಪಳಾಗಿ ಮಹಾವಿದ್ಯಾರೂಪಳೂ, ಜ್ಞಾನಸ್ವರೂಪಳೂ ಆಗಿರುವ ಓ ದೇವಿ! ನಿನಗೆ ನಮಸ್ಕಾರವು.

೪೬. ಹ್ರೀಂಕಾರ, ಕ್ಲೀಂಕಾರಗಳ ಸ್ವರೂಪಳೂ, ಮಹಾತೇಜಸ್ವಿನಿಯೂ, ಆದಿ, ಮಧ್ಯ, ಅಂತ್ಯರೂಪಳೂ ಆಗಿರುವ ನೀನು ನಮ್ಮನ್ನು ಅತ್ಯಂತವಾದ ಈ ದೈತ್ಯಭಯದಿಂದ ಕಾಪಾಡು.

೪೭. ಅತಿಪಾಪಿಯಾದ ಕರ್ಣಾಟನೆಂಬ ದುಷ್ಟದೈತ್ಯನು ಈಗ ನಮ್ಮನ್ನು ಪೀಡಿಸುತ್ತಿದ್ದಾನೆ. ನಮ್ಮ ಕುಲದೇವತೆಯಾದ ನೀನೊಬ್ಬಳೆ ನಮ್ಮನ್ನು ಕಾಪಾಡತಕ್ಕವಳು.

೪೮. ಮಹಾದೇವಿ! ಕಾಪಾಡು ಕಾಪಾಡು! ಮಹೇಶ್ವರಿ! ರಕ್ಷಿಸು ರಕ್ಷಿಸು! ಬ್ರಾಹ್ಮಣರಿಗೆ ತೊಂದರೆಯನ್ನೆಸಗುವ ಈ ದುರುಳದೈತ್ಯನನ್ನು ಕೊಲ್ಲು ಕೊಲ್ಲು!''

೪೯. ಬ್ರಾಹ್ಮಣರಿಂದ ಹೀಗೆ ಸ್ತುತಿಸಲ್ಪಟ್ಟ ಆ ಶ್ರೀಮಾತೆಯು ಕರ್ಣಾಟನ ವಧೆಗಾಗಿಯೂ, ಬ್ರಾಹ್ಮಣರ ಹಿತಕ್ಕಾಗಿಯೂ ಅಲ್ಲಿ ಪ್ರತ್ಯಕ್ಷಳಾಗಿ, 'ವರವನ್ನು ಕೇಳಿರಿ' ಎಂದು ಹೇಳಿದಳು.

೫೦. ಶ್ರೀಮಾತೆಯು ಹೇಳುತ್ತಾಳೆ:— "ಎಲೈ ದ್ವಿಜರೆ! ನಿಮ್ಮನ್ನು ಯಾವನು ಹೆದರಿಸಿ ವ್ಯಥೆಗೊಳಿಸುತ್ತಿದ್ದಾನೆ? ಹೇಳಿರಿ. ಸಿಟ್ಟುಗೊಂಡಿರುವ ನಾನು ಅವನನ್ನು ಯಮಪುರಿಗೆ ಕಳುಹಿಸುವೆನು.

CC-0. Jangamwadi Math Collection. Digitized by eGangotri

ಕ್ಷೀಣಾಯುಷಂ ನರಂ ವಿತ್ತ ಯೇನ ಯೂಯಂ ನಿಪೀಡಿತಾಃ ।
ದದಾಮಿ ವೋ ದ್ವಿಜಾತಿಭ್ಯೋ ಯಥೇಷ್ಟಂ ವಕ್ತುಮರ್ಹಥ ॥ ೫೧ ॥
ಭಕ್ತ್ಯಾಹಿ ಭವತಾಂ ವಿಪ್ರಾಃ ಕರಿಷ್ಯೇ ನಾಽತ್ರ ಸಂಶಯಃ ॥ ೫೨ ॥

ದ್ವಿಜಾ ಊಚುಃ :—

ಕರ್ಣಾಟಾಖ್ಯೋ ಮಹಾರೌದ್ರೋ ದಾನವೋ ಮದಗರ್ವಿತಃ ।
ವಿಘ್ನಂ ಪ್ರಕುರುತೇ ನಿತ್ಯಂ ಸತ್ಯಮಂದಿರವಾಸಿನಾಂ ॥ ೫೩ ॥
ಬ್ರಾಹ್ಮಣಾನ್ಸತ್ಯಶೀಲಾಂಶ್ಚ ವೇದಾಽಧ್ಯಯನತತ್ಪರಾನ್ ।
ದ್ವೇಷಾದ್ದ್ವೇಷ್ಟಿ ದ್ವೇಷಣಸ್ತಾನ್ನಿತ್ಯಮೇವ ಮಹಾಮತೇ ।
ವೇದವಿದ್ವೇಷಣೋ ದುಷ್ಟೋ ಘಾತಯೈನಂ ಮಹಾದ್ಯುತೇ ॥ ೫೪ ॥

ವ್ಯಾಸ ಉವಾಚ :—

ತಥೇತ್ಯುಕ್ತ್ವಾ ತು ಸಾ ದೇವೀ ಪ್ರಹಸ್ಯ ಕುಲದೇವತಾ ।
ವಧೋಪಾಯಂ ವಿಚಿಂತ್ಯಾಽಸ್ಯ ಭಕ್ತಾನಾಂ ರಕ್ಷಣಾಯ ವೈ ॥ ೫೫ ॥
ತತಃ ಕೋಪಪರಾ ಜಾತಾ ಶ್ರೀಮಾತಾ ನೃಪಸತ್ತಮ ।
ಕೋಪೇನ ಭ್ರುಕುಟೀಂ ಕೃತ್ವಾ ರಕ್ತನೇತ್ರಾಂತಲೋಚನಾಂ ॥ ೫೬ ॥
ಕೋಪೇನ ಮಹತಾವಿಷ್ಟಾ ವಸಂತೀ ಪಾವಕಂ ಯಥಾ ।
ಮಹಾಜ್ವಾಲಾ ಮುಖಾನ್ನೇತ್ರಾನ್ನಾಸಾಕರ್ಣಾಚ್ಚ ಭಾರತ ॥ ೫೭ ॥

---

೫೧—೫೨. ಅಯ್ಯಾ ವಿಪ್ರರೇ! ನಿಮ್ಮನ್ನು ಪೀಡಿಸುತ್ತಿರುವ ಆ ರಾಕ್ಷಸನು ಕೇವಲ ಕ್ಷೀಣಾಯುವೆಂದು ತಿಳಿಯಿರಿ. ಅವನಾರೆಂಬುದನ್ನು ಯಥಾವತ್ತಾಗಿ ಹೇಳಿರಿ. ನಿಮ್ಮ ಮಾತಿಗೆ ವ್ಯವಧಾನವನ್ನು ಕೊಡುತ್ತೇನೆ. ನಿಮ್ಮ ಭಕ್ತಿಯಿಂದ ಸುಪ್ರಸನ್ನಳಾಗಿರುವ ನಾನು ನಿಮ್ಮ ಕಾರ್ಯವನ್ನು ಮಾಡಿಕೊಡುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ.''

೫೩. ಬ್ರಾಹ್ಮಣರು ಹೇಳುತ್ತಾರೆ :—'' ಅತ್ಯಂತ ಭಯಂಕರನಾದ ಕರ್ಣಾಟನೆಂಬ ದಾನವನು ಮತ್ತನಾಗಿ ಸತ್ಯಮಂದಿರದಲ್ಲಿ ವಾಸಿಸುವ ನಮ್ಮೆಲ್ಲರನ್ನೂ ಬಾಧಿಸುತ್ತಿದ್ದಾನೆ.

೫೪. ಎಲೌ ಪ್ರಾಜ್ಞಳೆ! ವೇದವಿದ್ವೇಷಿಯಾದ ಆ ದುಷ್ಟದಾನವನು ವೇದಾಧ್ಯಯನನಿರತರೂ, ಸತ್ಯಪ್ರಭಾವದವರೂ ಆಗಿರುವ ಬ್ರಾಹ್ಮಣರನ್ನು ದ್ವೇಷದಿಂದ ನಿತ್ಯವೂ ದ್ವೇಷಮಾಡುತ್ತಿದ್ದಾನೆ. ಅವನನ್ನು ವಧಿಸು.''

೫೫—೫೭. ವ್ಯಾಸನು ಹೇಳುತ್ತಾನೆ :—ಕುಲದೇವತೆಯಾದ ಆ ದೇವಿಯು ನಕ್ಕು ಹಾಗೆಯೇ ಆಗಲೆಂದು ಆ ಭಕ್ತರನ್ನು ಸಂರಕ್ಷಿಸುವುದಕ್ಕಾಗಿ ಅವನನ್ನು ಕೊಲ್ಲುವ ಉಪಾಯವನ್ನು ಆಲೋಚಿಸಿ ಅತ್ಯಂತ ಕೋಪದಿಂದ ಹುಬ್ಬುಗಂಟಿಕ್ಕಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಬಾಯಿ, ಕಣ್ಣು, ಮೂಗು, ಕಿವಿಗಳಿಂದ ಅಗ್ನಿಷ್ಟಿಕೆಯು ಬೆಂಕಿಯನ್ನು ಸುರಿಸುವಂತೆ ಅಗ್ನಿಜ್ವಾಲೆಯನ್ನು ಸುರಿಸಿದಳು.

CC-0. Jangamwadi Math Collection. Digitized by eGangotri

ತತ್ತೇಜಸಾ ಸಮುದ್ಭೂತಾ ಮಾತಂಗೀ ಕಾಮರೂಪಿಣೀ ।
ಕಾಲೀ ಕರಾಲವದನಾ ದುರ್ದರ್ಶವದನೋಜ್ವಲಾ ॥ ೫೮ ॥
ರಕ್ತಮಾಲ್ಯಾಂಬರಧರಾ ಮದಾಘೂರ್ಣಿತಲೋಚನಾ ।
ನ್ಯಗ್ರೋಧಸ್ಯ ಸಮೀಪೇ ಸಾ ಶ್ರೀಮಾತಾ ಸಂಶ್ರಿತಾ ತದಾ ॥ ೫೯ ॥
ಅಷ್ಟಾದಶಭುಜಾ ಸಾತು ಶುಭಾ ಮಾತಾ ಸುಶೋಭನಾ ।
ಧನುರ್ಬಾಣಧರಾ ದೇವೀ ಖಡ್ಗಖೇಟಕಧಾರಿಣೀ ॥ ೬೦ ॥
ಕುಠಾರಂ ಕ್ಷುರಿಕಾಂ ಬಿಭ್ರತ್ತ್ರಿಶೂಲಂ ಪಾನಪಾತ್ರಕಂ ।
ಗದಾಂ ಸರ್ಪಂ ಚ ಪರಿಘಂ ಪಿನಾಕಂ ಚೈವ ಪಾಶಕಂ ॥ ೬೧ ॥
ಅಕ್ಷಮಾಲಾಧರಾ ರಾಜನ್ಮದ್ಯಕುಂಭಾಽಸುಧಾರಿಣೀ ।
ಶಕ್ತಿಂ ಚ ಮುಸಲಂ ಚೋಗ್ರಂ ಕರ್ತರೀಂ ಖರ್ಪರಂ ತಥಾ ॥ ೬೨ ॥
ಕಂಟಕಾಢ್ಯಾಂ ಚ ಬದರೀಂ ಬಿಭ್ರತೀ ತು ಮಹಾನನಾ ।
ತತ್ರಾಽಭವನ್ಮಹಾಯುದ್ಧಂ ತುಮುಲಂ ಲೋಮಹರ್ಷಣಂ ॥ ೬೩ ॥
ಮಾತಂಗ್ಯಾಃ ಸಹ ಕರ್ಣಾಟದಾನವೇನ ನೃಪೋತ್ತಮ ॥ ೬೪ ॥

ಯುಧಿಷ್ಠಿರ ಉವಾಚ :—

ಕಥಂ ಯುದ್ಧಂ ಸಮಭವತ್ಕಥಂ ಚೈವಾಽಪವರ್ತತ ।
ಜಿತಂ ಕೇನೈವ ಧರ್ಮಜ್ಞ ತನ್ಮಮಾಚಕ್ಷ್ವ ಮಾರಿಷ ॥ ೬೫ ॥

---

೫೮–೫೯. ಆ ತೇಜಸ್ಸಿನಿಂದ ಸ್ವೇಚ್ಛಾರೂಪವುಳ್ಳವಳೂ, ಕೃಷ್ಣವರ್ಣಳೂ, ಭಯಂಕರವಾದ ಬಾಯುಳ್ಳವಳೂ, ನೋಡಲಾಗದ ಕ್ರೂರಮುಖದಿಂದ ಪ್ರಕಾಶಮಾನಳೂ, ಕೆಂಪುಹೂವಿನ ಮಾಲೆಯನ್ನು ಧರಿಸಿದವಳೂ, ಮದದಿಂದ ಆಲುತ್ತಿರುವ ಕಣ್ಣುಗಳುಳ್ಳವಳೂ ಆಗಿರುವ ಮಾತಂಗಿಯು ಉದ್ಭವಿಸಿದಳು. ಆಗ ಶ್ರೀಮಾತೆಯು ಆಲದಮರದ ಸಮೀಪವನ್ನು ಆಶ್ರಯಿಸಿದಳು.

೬೦–೬೪. ಆ ಮಾತಂಗಿಯು ಹದಿನೆಂಟು ತೋಳುಗಳುಳ್ಳವಳೂ, ಮಂಗಳಕರಳೂ, ಬಿಲ್ಲು, ಬಾಣ, ಕತ್ತಿ, ಗುರಾಣಿ, ಕೊಡಲಿ, ಚೂರಿ, ತ್ರಿಶೂಲ, ಕುಡಿಯುವ ಪಾತ್ರೆ, ಗದೆ, ಸರ್ಪ, ಪರಿಘ, ಪಿನಾಕವೆಂಬ ಬಿಲ್ಲು, ಹಗ್ಗ, ಜಪಮಾಲೆ, ಮದ್ಯಕುಂಭ, ಶಕ್ತ್ಯಾಯುಧ, ಒನಕೆ, ಕತ್ತರಿ, ಕಪಾಲ, ಮುಳ್ಳುಗಳುಳ್ಳ ಬದರಿ ಇವುಗಳನ್ನು ಧರಿಸಿದವಳೂ ಆಗಿ ಆ ಕರ್ಣಾಟದಾನವನೊಡನೆ ಘೋರಯುದ್ಧವನ್ನು ಮಾಡಿದಳು.

೬೫. ಯುಧಿಷ್ಠಿರನು ಕೇಳುತ್ತಾನೆ:—ಧರ್ಮವನ್ನರಿತ ಎಲೈ ಪೂಜ್ಯನೆ! ದೇವಿಗೂ ಆ ದೈತ್ಯನಿಗೂ ಯುದ್ಧವು ಹೇಗೆ ನಡೆಯಿತು? ಅದು ಹೇಗೆ ಶಾಂತವಾಯಿತು? ಯಾರು ಗೆದ್ದರು? ಅದನ್ನು ನನಗೆ ಹೇಳುವವನಾಗು.

CC-0. Jangamwadi Math Collection. Digitized by eGangotri

ವ್ಯಾಸ ಉವಾಚ :—

ಏಕದಾ ಶೃಣು ರಾಜೇಂದ್ರ ಯಜ್ಜಾತಂ ದೈತ್ಯಸಂಗರೇ ।
ತತ್ಸರ್ವಂ ಕಥಯಾಮ್ಯಾಶು ಯಥಾವೃತ್ತಂ ಹಿ ತತ್ಪುರಾ ॥ ೬೬ ॥
ಪ್ರಣಷ್ಟಯೋಷಾ ಯೇ ವಿಪ್ರಾ ವಣಿಜಶ್ಚೈವ ಭಾರತ ।
ಚೈತ್ರಮಾಸೇ ತು ಸಂಪ್ರಾಪ್ತೇ ಧರ್ಮಾಽರಣ್ಯೇ ನೃಪೋತ್ತಮ ॥ ೬೭ ॥
ಗೌರೀಮುದ್ವಾಹಯಾಮಾಸುರ್ವಿಪ್ರಾಸ್ತೇ ಸಂಶಿತವ್ರತಾಃ ।
ಸ್ವಸ್ಥಾನಂ ಸುಶುಭಂ ಜ್ಞಾತ್ವಾ ತೀರ್ಥರಾಜಂ ತಥೋತ್ತಮಂ ॥ ೬೮ ॥
ವಿವಾಹಂ ತತ್ರ ಕುರ್ವಂತೋ ಮಿಲಿತಾಸ್ತೇ ದ್ವಿಜೋತ್ತಮಾಃ ।
ಕೋಟಿಕನ್ಯಾಕುಲಂ ತತ್ರ ಏಕತ್ರಾಸೀನ್ಮಹೋತ್ಸವೇ ।
ಧರ್ಮಾಽರಣ್ಯೇ ಮಹಾಪ್ರಾಜ್ಞ ಸತ್ಯಂ ಸತ್ಯಂ ವದಾಮ್ಯಹಂ ॥ ೬೯ ॥
ಚತುರ್ಥ್ಯಾಮಪರರಾತ್ರೇಽಭ್ಯಂತರತೋಽಗ್ನಿಮಾದಧುಃ ।
ಆಸನಂ ಬ್ರಹ್ಮಣೇ ದತ್ವಾ ಅಗ್ನಿಂ ಕೃತ್ವಾ ಪ್ರದಕ್ಷಿಣಂ ॥ ೭೦ ॥
ಸ್ಥಾಲೀಪಾಕಂ ಚ ಕೃತ್ವಾಽಥ ಕೃತ್ವಾ ವೇದೀಃ ಶುಭಾಸ್ತದಾ ।
ಚತುರ್ಹಸ್ತಾಃ ಸಕಲಶಾ ನಾಗಪಾಶಸಮನ್ವಿತಾಃ ॥ ೭೧ ॥
ವೇದಮಂತ್ರೇಣ ಶುಭ್ರೇಣ ಮಂತ್ರಯಂತೇ ತತೋ ದ್ವಿಜಾಃ ।
ಚರತಾಂ ದಂಪತೀನಾಂ ಹಿ ಪರಿವೇಷ್ಯ ಯಥೋಚಿತಂ ॥ ೭೨ ॥
ಬ್ರಹ್ಮಣಾ ಸಹಿತಾಸ್ತತ್ರ ವಾಡವಾಸ್ತೇ ಸುಹರ್ಷಿತಾಃ ।
ಕುರ್ವತೇ ವೇದನಿರ್ಘೋಷಂ ತಾರಸ್ವರನಿನಾದಿತಂ ॥ ೭೩ ॥

---

೬೬. ವ್ಯಾಸನು ಹೇಳುತ್ತಾನೆ:—ಅರಸ ! ಒಂದಾನೊಂದು ಸಲ ನಡೆದ ದೈತ್ಯಮಹಾಯುದ್ಧದಲ್ಲಿ ಏನೇನಾಯಿತೋ ಅದನ್ನೆಲ್ಲ ನಡೆದುದು ನಡೆದಂತೆಯೆ ನಿನಗೆ ಹೇಳುವೆನು ; ಕೇಳು.

೬೭–೬೯. ಮಹಾರಾಜ ! ಚೈತ್ರಮಾಸವು ಬರಲು ಮೃತರಾದ ಪತ್ನಿಯರುಳ್ಳ ಬ್ರಾಹ್ಮಣರೂ, ವೈಶ್ಯರೂ ಹತ್ತುವರ್ಷದ ಹುಡುಗಿಯರನ್ನು ಮದುವೆಯಾದರು. ಆ ತಮ್ಮ ಸ್ಥಾನವಾದ ಧರ್ಮಾರಣ್ಯವನ್ನು ಒಳ್ಳೆಯ ಕ್ಷೇತ್ರವನ್ನಾಗಿಯೂ, ಉತ್ತಮ ತೀರ್ಥವನ್ನಾಗಿಯೂ ತಿಳಿದು ವಿವಾಹಕ್ಕಾಗಿ ಎಲ್ಲರೂ ಅಲ್ಲಿ ಒಟ್ಟಿಗೆ ಸೇರಿದರು. ಅಲ್ಲಿ ಒಂದು ಮಹೋತ್ಸವದಲ್ಲಿ ಕೋಟಿ ಕನ್ಯೆಯರು ಸೇರಿದ್ದರು.

೭೦. ನಾಲ್ಕನೆಯ ದಿನ ಅಪರರಾತ್ರಿಯಲ್ಲಿ ಬ್ರಹ್ಮನಿಗೆ ಆಸನವನ್ನು ದಾನ ಮಾಡಿ, ಅಗ್ನಿಗೆ ಪ್ರದಕ್ಷಿಣೆ ಬಂದು ಅಗ್ನಿಸಹಿತವಾಗಿ ಗೃಹಪ್ರವೇಶಮಾಡಿದರು.

೭೧–೭೩. ಬಳಿಕ ಮಂಗಳಕರವೂ, ನಾಲ್ಕು ಗೇಣು ಪರಿಮಾಣವುಳ್ಳುದೂ, ಕಲಶ ನಾಗಪಾಶಗಳಿಂದ ಸಹಿತವಾದುದೂ ಆಗಿರುವ ವೇದಿಯನ್ನು ನಿರ್ಮಿಸಿ ಅಲ್ಲಿ ಸ್ಥಾಲೀಪಾಕಹೋಮವನ್ನು ಮಾಡಿ ಬ್ರಾಹ್ಮಣರು ವೇದಮಂತ್ರವನ್ನು

CC-0. Jangamwadi Math Collection. Digitized by eGangotri

ತೇನ ಶಬ್ದೇನ ಮಹತಾ ಕೃತ್ಸ್ನಮಾಪೂರಿತಂ ನಭಃ ।
ತಂ ಶ್ರುತ್ವಾ ದಾನವೋ ಘೋರೋ ವೇದಧ್ವಾನಂ ದ್ವಿಜೇರಿತಂ ॥ ೭೪ ॥
ಉತ್ಪಪಾತಾಸನಾತ್ತೂರ್ಣಂ ಸಸೈನ್ಯೋ ಗತಚೇತನಃ ।
ಧಾವತಃ ಸರ್ವಭೃತ್ಯಾಸ್ತಂ ಯೇಚಾಽನ್ಯೇ ತಾನುವಾಚ ಸಃ ॥ ೭೫ ॥
ಶ್ರೂಯತಾಂ ಕುತ್ರ ಶಬ್ದೋಽಯಂ ವಾಡವಾನಾಂ ಸಮುತ್ಥಿತಃ ।
ತಸ್ಯ ತದ್ವಚನಂ ಶ್ರುತ್ವಾ ದೈತೇಯಾಃ ಸತ್ವರಂ ಯಯುಃ ॥ ೭೬ ॥
ವಿಭ್ರಾಂತಚೇತಸಃ ಸರ್ವೇ ಇತಶ್ಚೇತಶ್ಚ ಧಾವಿತಾಃ ।
ಧರ್ಮಾಽರಣ್ಯೇ ಗತಾಃ ಕೇಚಿತ್ತತ್ರ ದೃಷ್ಟ್ವಾ ದ್ವಿಜಾತಯಃ ॥ ೭೭ ॥
ಉದ್ಗಿರಂತೋ ಹಿ ನಿಗಮಾನ್ವಿವಾಹಸಮಯೇ ನೃಪ ।
ಸರ್ವಂ ನಿವೇದಯಾಮಾಸುಃ ಕರ್ಣಾಟಾಯ ದುರಾತ್ಮನೇ ॥ ೭೮ ॥
ತಚ್ಛ್ರುತ್ವಾ ರಕ್ತತಾಮ್ರಾಕ್ಷೋ ದ್ವಿಜದ್ವಿಟ್ ಕೋಪಪೂರಿತಃ ।
ಅಭ್ಯಧಾವನ್ಮಹಾಭಾಗ ಯತ್ರ ತೇ ದಂಪತೀ ನೃಪ ॥ ೭೯ ॥
ಖಮಾಶ್ರಿತ್ಯ ತದಾ ದೈತ್ಯಮಾಯಾಂ ಕುರ್ವನ್ಸರಾಕ್ಷಸಃ ।
ಅಹರದ್ದಂಪತೀ ರಾಜನ್ಸರ್ವಾಽಲಂಕಾರಸಂಯುತಾನ್ ॥ ೮೦ ॥

---

ಚ್ಚರಿಸುತ್ತ ದಂಪತಿಗಳನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ಬ್ರಹ್ಮಸಹಿತರಾಗಿ ಸಂತೋಷದಿಂದ ವೇದಘೋಷವನ್ನು ಘಟ್ಟಿಯಾಗಿ ಮಾಡಿದರು.

೭೪–೭೬. ಆ ಮಹಾಧ್ವನಿಯು ಸಂಪೂರ್ಣವಾಗಿ ಆಕಾಶವನ್ನು ತುಂಬಿತು. ಬ್ರಾಹ್ಮಣರ ವೇದಧ್ವನಿಯನ್ನು ಆ ಘೋರದಾನವನು ಕೇಳಿ ಜ್ಞಾನವಿಲ್ಲದವನಾಗಿ ಸೈನ್ಯಸಮೇತವಾಗಿ ಆಸನದಿಂದ ಜಾಗ್ರತೆಯಾಗಿ ಮೇಲಕ್ಕೆ ನೆಗೆದನು. ಸಕಲ ಸೇವಕರೂ ಅವನನ್ನು ಹಿಂಬಾಲಿಸಿದರು. ಆ ದೈತ್ಯನು ಆ ಸೇವಕರನ್ನು ಕುರಿತು "ಬ್ರಾಹ್ಮಣರ ಈ ಶಬ್ದವು ಎಲ್ಲಿಯದು? ಕೇಳಿಬನ್ನಿರಿ" ಎಂದನು. ಅವನ ಆ ಮಾತನ್ನು ಕೇಳಿ ದೈತ್ಯರು ಶೀಘ್ರವಾಗಿ ಹೋದರು.

೭೭. ಅವರಲ್ಲಿ ಕೆಲವರು ಭ್ರಾಂತಚಿತ್ತರಾಗಿ ಇಲ್ಲಿ ಅಲ್ಲಿ ಓಡಾಡುತ್ತ ಧರ್ಮಾರಣ್ಯವನ್ನು ಹೊಕ್ಕು ಅಲ್ಲಿ ಆ ಬ್ರಾಹ್ಮಣರನ್ನು ಕಂಡರು.

೭೮. ವಿವಾಹಸಮಯದಲ್ಲಿ ವೇದಮಂತ್ರಗಳನ್ನು ಬ್ರಾಹ್ಮಣರು ಪಠಿಸುತ್ತಿದ್ದಾರೆಂದು ಎಲ್ಲವನ್ನೂ ದುಷ್ಟನಾದ ಕರ್ಣಾಟನಿಗೆ ತಿಳಿಸಿದರು.

೭೯. ಅವನು ಅದನ್ನು ಕೇಳಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಆ ದಂಪತಿಗಳಿರುವ ಸ್ಥಳಕ್ಕೆ ಓಡಿಬಂದನು.

೮೦. ಆ ದೈತ್ಯನು ಮಾಯೆಯಿಂದ ಆಕಾಶವನ್ನಾಶ್ರಯಿಸಿ ಸಮಸ್ತ ಒಡವೆಗಳಿಂದ ಭೂಷಿತರಾದ ಅಲ್ಲಿಯ ದಂಪತಿಗಳನ್ನು ಅಪಹರಿಸಿದನು.

CC-0. Jangamwadi Math Collection. Digitized by eGangotri

ತತಸ್ತೇ ವಾಡವಾಃ ಸರ್ವೇ ಸಂಗತಾ ಭುವನೇಶ್ವರೀಂ ।
ಅಂಬಾರವಂ ಪ್ರಕುರ್ವಾಣಾಸ್ತ್ರಾಹಿತ್ರಾಹೀತಿ ಚೋಚಿರೇ ॥ ೮೧ ॥
ತಚ್ಛ್ರುತ್ವಾ ವಿಶ್ವಜನನೀ ಮಾತಂಗೀ ಭುವನೇಶ್ವರೀ ।
ಸಿಂಹನಾದಂ ಪ್ರಕುರ್ವಾಣಾ ತ್ರಿಶೂಲವರಧಾರಿಣೀ ॥ ೮೨ ॥
ತತಃ ಪ್ರವವೃತೇ ಯುದ್ಧಂ ದೇವೀಕರ್ಣಾಟಯೋಸ್ತಥಾ ।
ಋಷೀಣಾಂ ಪಶ್ಯತಾಂ ತತ್ರ ವಣಿಜಾಂ ಚ ದ್ವಿಜನ್ಮನಾಂ ॥ ೮೩ ॥
ಪಶ್ಯತಾಮಭವದ್ಯುದ್ಧಂ ತುಮುಲಂ ಲೋಮಹರ್ಷಣಂ ।
ಅಸ್ತ್ರೈಶ್ಚಿಚ್ಛೇದ ಮಾತಂಗೀ ಮದವಿಹ್ವಲಿತಂ ರಿಪುಂ ॥ ೮೪ ॥
ಸೋಽಪಿ ದೈತ್ಯಸ್ತತಸ್ತಸ್ಯಾ ಬಾಣೇನೈಕೇನ ವಕ್ಷಸಿ ।
ಅಸಾವಪಿ ತ್ರಿಶೂಲೇನ ಘಾತಿತಃ ಕಶ್ಮಲಂ ಗತಃ ॥ ೮೫ ॥
ಮುಷ್ಟಿಭಿಶ್ಚೈವ ತಾಂ ದೇವೀಂ ಸೋಽಪಿ ತಾಡಯತೇಽಸುರಃ ।
ಸೋಽಪಿ ದೇವ್ಯಾ ತತಃ ಶೀಘ್ರಂ ನಾಗಪಾಶೇನ ಯಂತ್ರಿತಃ ॥ ೮೬ ॥
ತತಸ್ತೇನೈವ ದೈತ್ಯೇನ ಗಾರುಡಾಸ್ತ್ರಂ ಸಮಾದಧೇ ।
ತಯಾ ನಾರಾಯಣಾಸ್ತ್ರಂ ತು ಸಂದಧೇ ಶರಪಾತನಂ ॥ ೮೭ ॥
ಏವಮನ್ಯೋನ್ಯಮಾಕೃಷ್ಯ ಯುಧ್ಯಮಾನೌ ಜಯೇಚ್ಛಯಾ ।
ತತಃ ಪರಿಘಮಾದಾಯ ಆಯಸಂ ದೈತ್ಯಪುಂಗವಃ ॥ ೮೮ ॥

---

೮೧–೮೨ ಬಳಿಕ ಬ್ರಾಹ್ಮಣರೆಲ್ಲರೂ ಸೇರಿ ಹಾಹಾಕಾರಮಾಡುತ್ತ ಭುವನೇಶ್ವರಿಯಾದ ಮಾತಂಗಿಯನ್ನು ಕುರಿತು, "ತಾಯೆ! ರಕ್ಷಿಸು ರಕ್ಷಿಸು" ಎಂದು ಕೂಗಿಕೊಂಡರು. ಅದನ್ನು ಕೇಳಿ ಸಕಲ ಲೋಕಕ್ಕೂ ಜನನಿಯಾದ ಮಾತಂಗಿಯು ತ್ರಿಶೂಲವನ್ನು ಹಿಡಿದುಕೊಂಡು ಸಿಂಹನಾದ ಮಾಡುತ್ತ ಬಂದಳು.

೮೩–೮೪. ಬಳಿಕ ಋಷಿಗಳೂ, ವರ್ತಕರೂ, ಬ್ರಾಹ್ಮಣರೂ ನೋಡುತ್ತಿರುವಂತೆಯೆ ಆ ಮಾತಂಗೀ ಕರ್ಣಾಟರಿಗೆ ರೋಮಾಂಚವನ್ನುಂಟು ಮಾಡುವ ಭಯಂಕರ ಯುದ್ಧವು ನಡೆಯಿತು. ಮಾತಂಗಿಯು ಆಯುಧಗಳಿಂದ ಮದಿಸಿದ ಆ ಶತ್ರುವನ್ನು ಕತ್ತರಿಸಿದಳು.

೮೫. ಆ ದಾನವನು ಒಂದು ಬಾಣದಿಂದ ಆ ಮಾತಂಗಿಯ ಎದೆಗೆ ಹೊಡೆದನು. ಮಾತಂಗಿಯೂ ತ್ರಿಶೂಲದಿಂದ ಅವನನ್ನು ಬಡಿದಳು. ಅದರಿಂದವನು ದುಃಖಗೊಂಡನು.

೮೬–೮೭. ಆ ಅಸುರನು ಮುಷ್ಟಿಯಿಂದ ದೇವಿಯನ್ನು ಗುದ್ದಿದನು. ಕೂಡಲೆ ಅವಳು ಅವನನ್ನು ನಾಗಪಾಶದಿಂದ ಬಿಗಿದಳು. ಬಳಿಕ ದೈತ್ಯನು ಗಾರುಡಾಸ್ತ್ರವನ್ನು ಪ್ರಯೋಗಿಸಿದನು. ದೇವಿಯು ನಾರಾಯಣಾಸ್ತ್ರವನ್ನು ಹೂಡಿ ಬಿಟ್ಟಳು.

೮೮–೮೯. ಹೀಗೆ ಪರಸ್ಪರಜಯಾಭಿಲಾಷೆಯಿಂದ ಅಸ್ತ್ರಗಳನ್ನೆಳೆದೆಳೆದು

CC-0. Jangamwadi Math Collection. Digitized by eGangotri

ಮಾತಂಗೀಂ ಪ್ರತಿಸಂಕ್ರುದ್ಧೋ ಜಘಾನ ಪರವೀರಹಾ ।
ದೇವೀ ಕ್ರುದ್ಧಾ ಮುಷ್ಟಿಘಾತೈಶ್ಚೂರ್ಣಯಾಮಾಸ ದಾನವಂ ॥ ೮೯ ॥
ತೇನ ಮುಷ್ಟಿಪ್ರಹಾರೇಣ ಮೂರ್ಛಿತೋ ನಿಪಪಾತ ಹ ।
ತತಸ್ತು ಸಹಸೋತ್ಥಾಯ ಶಕ್ತಿಂ ಧೃತ್ವಾ ಕರೇ ಮುದಾ ॥ ೯೦ ॥
ಶತಘ್ನೀಂ ಪಾತಯಾಮಾಸ ತಸ್ಯಾ ಉಪರಿ ದಾನವಃ ।
ಶಕ್ತಿಂ ಚಿಚ್ಛೇದ ಸಾ ದೇವೀ ಮಾತಂಗೀ ಚ ಶುಭಾನನಾ ॥ ೯೧ ॥
ಜಹಾಸೋಚ್ಚೈಸ್ತು ಸಾ ಸುಭ್ರೂಃ ಶತಘ್ನೀಂ ವಜ್ರಸನ್ನಿಭಾಂ ।
ಏವಮನ್ಯೋನ್ಯಶಸ್ತ್ರೌಘೈರರ್ದಯಾಂತೌ ಪರಸ್ಪರಂ ॥ ೯೨ ॥
ತತಸ್ತ್ರಿಶೂಲೇನ ಹತೋ ಹೃದಯೇ ನಿಪಪಾತ ಹ ।
ಮೂರ್ಛಾಂ ವಿಹಾಯ ದೈತ್ಯೋಽಸೌ ಮಾಯಾಂ ಕೃತ್ವಾ ಚ ರಾಕ್ಷಸೀಂ ॥
ಪಶ್ಯತಾಂ ತತ್ರ ತೇಷಾಂ ತು ಅದೃಶ್ಯೋಽಭೂನ್ಮಹಾಸುರಃ ।
ಪಪೌ ಪಾನಂ ತತೋ ದೇವೀ ಜಹಾಸಾಽರುಣಲೋಚನಾ ॥ ೯೪ ॥
ಸರ್ವತ್ರಗಂ ತಂ ಸಾ ದೇವೀ ತ್ರೈಲೋಕ್ಯೇ ಸಚರಾಚರೇ ॥ ೯೫ ॥
ಕ್ವಯಾಸ್ಯಸೀತಿ ಬ್ರೂತೇ ಸಾ ಬ್ರೂಹಿ ತ್ವಂ ಸಾಂಪ್ರತಂ ಹಿ ಮೇ ।
ಕರ್ಣಾಟಕ ಮಹಾದುಷ್ಟ ಏಹಿ ಶೀಘ್ರಂ ಹಿ ಯುದ್ಧ್ಯತಾಂ ॥ ೯೬ ॥

---

ಅವರಿಬ್ಬರೂ ಯುದ್ಧಮಾಡುತ್ತಿದ್ದರು. ಬಳಿಕ ಆ ದೈತ್ಯೇಂದ್ರನು ಕಬ್ಬಿಣದ ಪರಿಘಾಯುಧವನ್ನು ತೆಗೆದುಕೊಂಡು ಕೋಪದಿಂದ ಮಾತಂಗಿಗೆ ಹೊಡೆದನು. ದೇವಿಯೂ ಸಿಟ್ಟುಗೊಂಡು ಮುಷ್ಟಿಯಿಂದ ಗುದ್ದಿ ಆ ದಾನವನನ್ನು ಪುಡಿಪುಡಿ ಮಾಡಿದಳು.

೯೦–೯೧. ಆ ಮುಷ್ಟಿಘಾತದಿಂದ ದೈತ್ಯನು ಮೂರ್ಛೆಗೊಂಡು ಕೆಳಗೆ ಬಿದ್ದನು. ಕೂಡಲೆ ಎದ್ದು ಸಂತೋಷದಿಂದ ಕೈಯಲ್ಲಿ ಶಕ್ತ್ಯಾಯುಧವನ್ನು ಹಿಡಿದು ಆ ದೇವಿಯಮೇಲೆ ಪ್ರಯೋಗಿಸಿದನು. ದೇವಿಯು ಆ ಆಯುಧವನ್ನು ಕತ್ತರಿಸಿ ಗಟ್ಟಿಯಾಗಿ ನಕ್ಕಳು.

೯೨. ಹೀಗೆ ಪರಸ್ಪರವಾಗಿ ಆಯುಧಗಳಿಂದ ಅವರಿಬ್ಬರೂ ಹೊಡೆದು ಕೊಳ್ಳುತ್ತ ಕಾಳಗ ನಡೆಸಿದರು.

೯೩–೯೬. ತರುವಾಯ ಮಾತಂಗಿಯು ಆ ದಾನವನ ಎದೆಗೆ ತ್ರಿಶೂಲದಿಂದ ಬಡಿಯಲು ಅವನು ಕೆಳಕ್ಕೆ ಬಿದ್ದನು. ಅನಂತರ ಮೂರ್ಛೆಯಿಂದ ಎಚ್ಚರಗೊಂಡು ಅವನು ರಾಕ್ಷಸಮಾಯೆಯಿಂದ ಎಲ್ಲರೂ ನೋಡುತ್ತಿರುವಂತೆಯೆ ಮಾಯವಾದನು. ದೇವಿಯು ಆಗ ಮದ್ಯಪಾನ ಮಾಡಿ ಕೆಂಪೇರಿದ ಕಣ್ಣುಳ್ಳವಳಾಗಿ ನಕ್ಕಳು. ಚರಾಚರಜಗತ್ತಿನ ಎಲ್ಲೆಡೆಯಲ್ಲಿಯೂ ಆ ದೈತ್ಯನಿರುವುದನ್ನು ತಿಳಿದು "ಎಲ್ಲಿಗೆ ಹೋಗುವೆ ? ಈಗ ಬಾ. ಶೀಘ್ರವಾಗಿ ಯುದ್ಧಮಾಡು" ಎಂದಳು.

CC-0. Jangamwadi Math Collection. Digitized by eGangotri

ತತೋಽಭವನ್ಮಹಾಯುದ್ಧಂ ದಾರುಣಂ ಚ ಭಯಾನಕಂ ।
ಪಪೌ ದೇವೀ ತು ಮೈರೇಯಂ ವಧಾರ್ಥಂ ಸುಮಹಾಬಲಾ ॥ ೯೭ ॥
ಮಾತಂಗೀ ಚ ತತಃ ಕ್ರುದ್ಧಾ ವಕ್ತ್ರೇ ಚಿಕ್ಷೇಪ ದಾನವಂ ।
ತತೋಽಪಿ ದಾನವೋ ರೌದ್ರೋ ನಾಸಾರಂಧ್ರೇಣ ನಿರ್ಗತಃ ॥ ೯೮ ॥
ಯುಧ್ಯತೇ ಸ ಪುನರ್ದೈತ್ಯಃ ಕರ್ಣಾಟೋ ಮದಪೂರಿತಃ ।
ತತೋ ದೇವೀ ಪ್ರಕುಪಿತಾ ಮಾತಂಗೀ ಮದಪೂರಿತಾ ॥ ೯೯ ॥
ದಶನೈರ್ಮಥಯಿತ್ವಾ ಚ ಚರ್ವಯಿತ್ವಾ ಪುನಃ ಪುನಃ ।
ಶವಾಽಸ್ಥಿಮೇದಸಾ ಯುಕ್ತಂ ಮಜ್ಜಾಮಾಂಸಾದಿಪೂರಿತಂ ॥ ೧೦೦ ॥
ನಖರೋಮಾಭಿಸಂಯುಕ್ತಂ ಪ್ರಕ್ಷಿಪ್ಯ ಚೋದರೇಽಸುರಂ ।
ಕರಕೇಣ ಮುಖಂ ರುದ್ಧಂ ಕರೇಣೈಕೇನ ನಾಸಿಕಾಂ ॥ ೧೦೧ ॥
ತತೋ ಮಹಾಬಲೋ ದೈತ್ಯಃ ಕರ್ಣರಂಧ್ರೇಣ ನಿರ್ಗತಃ ।
ತತಸ್ತಯಾ ಮಹಾದೇವ್ಯಾ ನಾಮ ಚಕ್ರೇ ತದಾ ಭುವಿ ॥ ೧೦೨ ॥
ಕರ್ಣರಂಧ್ರ ಪ್ರಸೂತೋಽಯಂ ಕರ್ಣಾಟೇತಿ ವಿದುರ್ಬುಧಾಃ ।
ಪುನರ್ಯುದ್ಧಾರ್ಥಮಾಯಾತೋ ದೈತ್ಯೋ ಹಿ ಬಲದರ್ಪಿತಃ ॥ ೧೦೩ ॥
ಗರ್ಜಮಾನೋಽಸುರಸ್ತತ್ರ ಸಾಯುಧೋ ಯುಧಿ ಸಂಸ್ಥಿತಃ ।
ತಂ ದೃಷ್ಟ್ವಾ ದುಃಸಹಂ ದೈತ್ಯಂ ವಿಮೃಶ್ಯ ಚ ಪುನಃ ಪುನಃ ॥ ೧೦೪ ॥

---

೯೭. ಬಳಿಕ ಅವರೀರ್ವರಿಗೂ ಮತ್ತೆ ಘೋರಯುದ್ಧವು ನಡೆಯಿತು. ದೇವಿಯು ಅವನ ವಧೆಗಾಗಿ ಮದ್ಯವನ್ನು ಪಾನಮಾಡಿದಳು.

೯೮–೧೦೧. ತರುವಾಯ ಆಕೆಯು ಕೋಪದಿಂದ ಅವನನ್ನು ಬಾಯಿಯಲ್ಲಿ ತುರುಕಿಕೊಂಡಳು. ಆ ದಾನವನಾದರೋ ಮೂಗಿನ ಹೊಳ್ಳೆಯಿಂದ ಹೊರಗೆ ಹೊರಟನು. ತಿರುಗಿ ಮತ್ತನಾಗಿ ಯುದ್ಧಹೂಡಿದನು. ಮತ್ತಳಾದ ದೇವಿಯು ಅತಿ ಕೋಪದಿಂದ ಅವನನ್ನು ಹಲ್ಲುಗಳಿಂದ ಕಡಿದು ಚೆನ್ನಾಗಿ ಅಗೆದು ಹೆಣವಾಗಿಸಿ ಮೂಳೆ, ಕೊಬ್ಬು, ಮಜ್ಜಾ, ಮಾಂಸ, ಉಗುರು, ರೋಮಗಳಿಂದ ಕೂಡಿದ ಅವನನ್ನು ನುಂಗಿ ಒಂದು ಕೈಯಿಂದ ಬಾಯಿಯನ್ನೂ, ಮತ್ತೊಂದು ಕೈಯಿಂದ ಮೂಗನ್ನೂ ಮುಚ್ಚಿಕೊಂಡಳು.

೧೦೨–೧೦೩. ತರುವಾಯ ದೈತ್ಯನು ಕಿವಿಯ ರಂಧ್ರದಿಂದ ಈಚೆಗೆ ಬಂದನು. ಆಗ ದೇವಿಯು ಕಿವಿಯ ರಂಧ್ರದಿಂದ ಹೊರಗೆ ಬಂದುದರಿಂದ ಅವನಿಗೆ ಕರ್ಣಾಟನೆಂದು ಹೆಸರನ್ನಿಟ್ಟಳು. ಪ್ರಾಜ್ಞರೂ ಹಾಗೆಯೇ ತಿಳಿದಿರುವರು. ತಿರುಗಿಯೂ ಆ ದೈತ್ಯನು ಬಲದಿಂದ ಮತ್ತನಾಗಿ ಯುದ್ಧಕ್ಕೆ ನಿಂತನು.

೧೦೪–೧೦೭. ಯುಧಿಷ್ಠಿರ! ಹೀಗೆ ಗರ್ಜಿಸುತ್ತ ಸಾಯುಧನಾಗಿ ಯುದ್ಧಕ್ಕೆ ನಿಂತಿರುವ ಆ ವೀರದೈತ್ಯನನ್ನು ಕಂಡು ಅವನನ್ನು ವಧಿಸಲು ಉಪಾಯವನ್ನು

CC-0. Jangamwadi Math Collection. Digitized by eGangotri

ವಧೋಪಾಯಂ ಹಿ ಮಾತಂಗೀ ಚಿಂತಯಾಮಾಸ ಭಾರತ ।
ಯದಾ ಚಿಂತಯತೇ ದೇವೀ ಮಾತಂಗೀ ಮದಪೂರಿತಾ ॥ ೧೦೫ ॥
ಮಾಯಾರೂಪಂ ಸಮಾಸ್ಥಾಯ ಕರ್ಣಾಟಃ ಕುಸುಮಾಯುಧಃ ।
ಗೌರಶ್ಚಾಂಬುಜಪತ್ರಾಕ್ಷಂ ತಥಾ ಷೋಡಶವಾರ್ಷಿಕಂ ॥ ೧೦೬ ॥
ಅಭ್ಯೇತ್ಯ ದೇವೀಂ ಬ್ರೂತೇಸ್ಮ ಮಾ ತ್ವಂ ವರಯ ಶೋಭನೇ ॥ ೧೦೭ ॥
ಶ್ರೀಮಾತೋವಾಚ :—
ಸಾಧು ಚೇದಂ ತ್ವಯಾ ಪ್ರೋಕ್ತಂ ದೈತ್ಯರಾಜ ಸುನಿಶ್ಚಿತಂ ।
ರೂಪೇಣ ಸದೃಶೋ ನಾಽನ್ಯೋ ವಿದ್ಯತೇ ಭುವನತ್ರಯೇ ॥ ೧೦೮ ॥
ಪ್ರತಿಜ್ಞಾ ಮೇ ಕೃತಾ ಪೂರ್ವಂ ಶ್ರುತಾ ಕಿಮಸುರೋತ್ತಮ ।
ಮಮಾಽನುಜಾ ಶುಭಾ ಶ್ಯಾಮಾ ವಿವಾಹೇ ವಿಪ್ರಕಾಂಕ್ಷಿಣೀ ॥ ೧೦೯ ॥
ಪಿತ್ರಾ ಮೇ ಸ್ಥಾಪಿತಾ ದೈತ್ಯರಕ್ಷಾರ್ಥಂ ಹಿ ದ್ವಿಜನ್ಮನಾಂ ।
ಕೇವಲಂ ಶ್ಯಾಮಲಾಂಗೀ ಸಾ ಸರ್ವಲೋಕಹಿತಾವಹಾ ॥ ೧೧೦ ॥
ನ ಕಶ್ಚಿದ್ವರಯೇತ್ಕನ್ಯಾಮಿತ್ಯುಕ್ತ್ವಾ ಸ್ಥಾಪಿತಾ ತು ಸಾ ।
ಕಥಯಾಶು ತವ ಶುಭಂ ಶೃತ್ವೋಪಾಯಂ ಕಥಂ ಶುಭಂ ॥ ೧೧೧ ॥
ಭಗಿನೀ ಮೇಽಸ್ತಿ ದೈತ್ಯೇಂದ್ರ ಶ್ಯಾಮಲಾ ಹ್ಯಪರಿಗ್ರಹಾ ।
ತವಾರ್ಥಂ ರಕ್ಷಿತಾ ಶೂರ ತಾಂ ಚ ಪೂರ್ವೇಣ ಚೋದ್ವಹ ॥ ೧೧೨ ॥

---

ಚಿಂತಿಸಿದಳು. ಮದಿಸಿದ ಆ ಮಾತಂಗಿಯು ಹೀಗೆ ಚಿಂತಿಸುತ್ತಿರುವಾಗಲೆ ಕರ್ಣಾಟನು ಮಾಯೆಯ ಬಲದಿಂದ ಮನ್ಮಥನಾಗಿ ಆ ದೇವಿಯ ಬಳಿಗೆ ಬಂದು, "ದೇವಿ! ಕಮಲಾಕ್ಷನೂ, ಹದಿನಾರು ವಯಸ್ಸಿನವನೂ ಆಗಿರುವ ನನ್ನನ್ನು ವರಿಸೆಂ"ದನು.

೧೦೮. ಶ್ರೀಮಾತೆಯು ಹೇಳುತ್ತಾಳೆ:—"ದೈತ್ಯರಾಜ! ನೀನು ನಿರ್ಣಯಿಸಿ ಚೆನ್ನಾಗಿ ಹೇಳಿದೆ. ತ್ರಿಭುವನದಲ್ಲಿ ನಿನಗೆ ಸೌಂದರ್ಯದಲ್ಲಿ ಎಣೆಯಾರೂ ಇರುವುದಿಲ್ಲ.

೧೦೯–೧೧೦. ಆದರೆ ನಾನು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಕೇಳಿರುವಿಯೊ? ನನಗೆ ವಿಪ್ರನನ್ನು ಮದುವೆಯಾಗಲಿಚ್ಛೆಯುಳ್ಳ ಶಾಮಾ ಎಂಬ ತಂಗಿಯೊಬ್ಬಳಿರುವಳು. ನನ್ನ ತಂದೆಯು ಅವಳನ್ನು ಬ್ರಾಹ್ಮಣರ ರಕ್ಷಣೆಗಾಗಿ ಇಲ್ಲಿ ಸ್ಥಾಪಿಸಿರುವನು. ಅವಳು ಕರಿಬಣ್ಣದವಳಾದರೂ ಸಮಸ್ತ ಜನರಿಗೂ ಹಿತವನ್ನುಂಟುಮಾಡುವಳು.

೧೧೧–೧೧೨. ಯಾರೂ ಅವಳನ್ನು ವರಿಸಕೂಡದೆಂದು ಹೇಳಿ ತಂದೆಯು ಇಲ್ಲಿ ಸ್ಥಾಪಿಸಿರುವನು. ನನ್ನ ತಂಗಿಯಾದ ಅವಳಿಗೆ ಇನ್ನೂ ವಿವಾಹವಾಗಲಿಲ್ಲ. ನಿನಗಾಗಿ ರಕ್ಷಿಸಿಕೊಂಡಿರುವೆನು. ಅವಳನ್ನು ವರಿಸು. ಈ ಶುಭೋಪಾಯವು ನಿನಗೆ ಒಳ್ಳೆಯದೆಂದು ತೋರುವುದಾದರೆ ವಿವಾಹವಾಗು.

CC-0. Jangamwadi Math Collection. Digitized by eGangotri

ಸ ಪಿತಾ ತಾಂ ಮಹಾವೀರ ದಾಸ್ಯತೇ ವೈ ಶುಭಾಮಿಮಾಂ ।
ಗಚ್ಛ ತ್ವಂ ವ್ರಿಯತಾಂ ಹ್ಯೇವ ಶ್ಯಾಮಲಾ ಕೋಪಸಂಯುತಾ ॥ ೧೧೩ ॥
ತತಃ ಕರ್ಣಾಟಕಃ ಕ್ರುದ್ಧೋ ಗೃಹೀತ್ವಾ ಶಕ್ತಿಮೂರ್ಜಿತಾಂ ।
ಅಭ್ಯಧಾವತ ದುಷ್ಟಾತ್ಮಾ ಶ್ಯಾಮಲಾನಿಧನೇಚ್ಛಯಾ ॥ ೧೧೪ ॥
ಆಗತಂ ಚಾಸುರಂ ದೃಷ್ಟ್ವಾ ಶ್ಯಾಮಲಾ ಸುಮಹಾಮನಾಃ ।
ವಿವಾಹಾರ್ಥಂ ಪರಂ ಜ್ಞಾತ್ವಾಽಭಿಪ್ರಾಯಂ ದುಷ್ಟಚೇತಸಃ ॥ ೧೧೫ ॥
ಮಹಾಯುದ್ಧಮಭೂತ್ತತ್ರ ಶ್ಯಾಮಲಾಽಸುರವರ್ಯಯೋಃ ।
ಮಾಸತ್ರಯಂ ತತೋ ರಾಜಂಶ್ಚಾಽಭವತ್ತುಮುಲಂ ಕ್ಷಿತೌ ॥ ೧೧೬ ॥
ಮಾಘೇ ಕೃಷ್ಣತೃತೀಯಾಯಾಂ ಧರ್ಮಾರಣ್ಯೇ ಮಹಾರಣೇ ।
ಮಧ್ಯಾಹ್ನಸಮಯೇ ಭೂಪ ಕರ್ಣಾಟಾಖ್ಯೋ ನಿಪಾತಿತಃ ॥ ೧೧೭ ॥
ಕಾರ್ಣಾಟಃ ಪತಿತಸ್ತತ್ರ ಯತ್ರ ದೇವ್ಯಾ ನಿಪಾತಿತಃ ।
ತಚ್ಛೈಲಶೃಂಗಪ್ರತಿಮಂ ಪಪಾತ ಶಿರ ಉತ್ತಮಂ ॥ ೧೧೮ ॥
ಚಚಾಲ ಸಕಲಾ ಪೃಥ್ವೀ ಸಾಽಬ್ಧಿದ್ವೀಪಾ ಸಪರ್ವತಾ ।
ತತೋ ವಿಪ್ರಾಃ ಪ್ರಹೃಷ್ಟಾಸ್ತೇ ಜಯಮಾತರುದೈರಯನ್ ॥ ೧೧೯ ॥
ಜಗುರ್ಗಂಧರ್ವಪತಯೋ ನನೃತುಶ್ಚಾಽಪ್ಸರೋಗಣಾಃ ।
ತತೋತ್ಸವಂ ಪ್ರಕುರ್ವಂತೋ ಗೀತಂ ನೃತ್ಯಂ ಶುಭಪ್ರದಂ ॥ ೧೨೦ ॥

---

೧೧೩. ತಂದೆಯು ಮಂಗಳಕರಳಾದ ಇವಳನ್ನು ನಿನಗೆ ಕೊಡುವನು. ಹೋಗು. ಕುಪಿತಳಾದ ಆ ಶ್ಯಾಮಲೆಯನ್ನು ವರಿಸು.''

೧೧೪. ದೇವಿಯು ಹೀಗೆನ್ನಲು, ಕೋಪಗೊಂಡ ಆ ಕರ್ಣಾಟನು ಉತ್ತಮವಾದ ಶಕ್ತ್ಯಾಯುಧವನ್ನು ಹಿಡಿದು ಶ್ಯಾಮಲೆಯನ್ನು ಕೊಲ್ಲಲಿಚ್ಛೆಯಿಂದ ಓಡಿದನು.

೧೧೫–೧೧೬. ಬುದ್ಧಿವಂತಳಾದ ಶ್ಯಾಮಲೆಯಾದರೊ ಈ ರೀತಿ ತನ್ನ ಬಳಿಗೆ ಬಂದ ಆ ದೈತ್ಯನನ್ನು ಕಂಡು ದುಷ್ಟಚಿತ್ತನಾದ ಅವನ ವಿವಾಹ ವಿಷಯಕವಾದ ಅಭಿಪ್ರಾಯವನ್ನು ತಿಳಿದಳು. ಅನಂತರ ಶ್ಯಾಮಲಾ ಮತ್ತು ಕರ್ಣಾಟದೈತ್ಯರಿಗೆ ಮೂರು ತಿಂಗಳಕಾಲ ಭೂಮಿಯಲ್ಲಿ ಭಯಂಕರವಾದ ಕಾಳಗವು ನಡೆಯಿತು.

೧೧೭. ಮಾಘಮಾಸದ ಕೃಷ್ಣಪಕ್ಷ ತದಿಗೆಯ ದಿನ ಮಧ್ಯಾಹ್ನ ಸಮಯದಲ್ಲಿ ಮಾತಂಗಿಯು ಕರ್ಣಾಟಾಸುರನನ್ನು ಧರ್ಮಾರಣ್ಯದಲ್ಲಿ ಕೆಡವಿದಳು.

೧೧೮–೧೧೯. ದೇವಿಯು ಅವನನ್ನು ಕೆಡವಿದ ಸ್ಥಳದಲ್ಲಿ ಅವನ ತಲೆಯು ಬೆಟ್ಟದ ಶಿಖರದಂತೆ ಉರುಳಿಬಿದ್ದಿತು. ಅದರಿಂದ ಸಮುದ್ರ, ದ್ವೀಪ, ಪರ್ವತಗಳಿಂದ ಸಹಿತವಾದ ಸಂಪೂರ್ಣ ಭೂಮಿಯೇ ನಡುಗಿಹೋಯಿತು. ತರುವಾಯ ಬ್ರಾಹ್ಮಣರು ಸಂತೋಷಗೊಂಡು, ''ತಾಯೆ! ಜಯಿಸು ಜಯಿಸು!'' ಎಂದು ಘಟ್ಟಿಯಾಗಿ ಕೂಗಿದರು.

೧೨೦–೧೨೧. ಗಂಧರ್ವರಾಜರು ಹಾಡಿದರು. ಅಪ್ಸರರು ಕುಣಿದರು.

CC-0. Jangamwadi Math Collection. Digitized by eGangotri

ಪಾಯಸೈರ್ವಟಕೈಶ್ಚೈವ ನೈವೇದ್ಯೈರ್ಮೋದಕೈಸ್ತಥಾ ।
ತುಷ್ಟುವುಃ ಶುಭವಾಣ್ಯಾ ತೇ ಸ್ಥಾನೇ ಮೋಟೇರಕೇ ವರೇ ॥ ೧೨೧ ॥
ಶ್ರೀಮತೀ ಪೂಜಿತಾ ಸಾ ಚ ಸುತಸೌಖ್ಯಧನಪ್ರದಾ ।
ಮಹೋತ್ಸವೇ ಚ ಸಂಪ್ರಾಪ್ತೇ ಮಾತಂಗೀಪೂಜನಂ ಹಿತಂ ॥ ೧೨೨ ॥
ಯೇಽರ್ಚಯಂತಿ ಸ್ಥಾಪಯಿತ್ವಾ ಧನಪುತ್ರಾರ್ಥಸಿದ್ಧಯೇ ।
ಸುಖಂ ಕೀರ್ತಿಂ ತಥಾಯುಷ್ಯಂ ಯಶಃ ಪುಣ್ಯಂ ಸಮಾಪ್ನುಯುಃ ॥೧೨೩॥
ವ್ಯಾಧಯೋ ನಾಶಮಾಯಾಂತಿ ಚಾದಿತ್ಯಾದ್ಯಾ ಗ್ರಹಾಃ ಶುಭಾಃ ।
ಭೂತವೇತಾಲಶಾಕಿನ್ಯೋ ಜಂಭಾದ್ಯಾಃ ಪೀಡಯಂತಿ ನ ॥ ೧೨೪ ॥
ನ ಜಾಯತೇ ತಥಾ ಕ್ವಾಽಪಿ ಪ್ರೇತಾದೀನಾಂ ಪ್ರಪೀಡನಂ ।
ತತೋ ವಿಪ್ರಾಃ ಪ್ರಹೃಷ್ಟಾಶ್ಚ ಸ್ತುತಿಂ ಕರ್ತುಂ ಸಮುದ್ಯತಾಃ ॥ ೧೨೫ ॥
ಶ್ರೀಮಾತಾಂ ಚೈವ ಶಕ್ತೀಶ್ಚ ಮಾತಂಗೀಮಸ್ತುವಂಸ್ತದಾ ।
ಶ್ಯಾಮಲಾಂ ಚ ಮಹಾದೇವೀಂ ಹರ್ಷೇಣ ಮಹತಾಯುತಾ ॥ ೧೨೬ ॥

ವಿಪ್ರಾ ಊಚುಃ :—

ಮಾತಸ್ತ್ವಮೇವಮಸ್ಮಾಕಂ ರಕ್ಷಕಾ ಸ್ಥಾನಕೇ ಭವ ।
ದಂಪತೀನಾಂ ಹಿತಾರ್ಥಾಯ ಯಥಾ ನೋದ್ವಿಜತೇ ದ್ವಿಜಾಃ ॥ ೧೨೭ ॥

---

ಮೋಟೇರಕ ಸ್ಥಳದಲ್ಲಿರುವವರು ಗೀತ, ನೃತ್ಯಗಳಿಂದ ಉತ್ಸವವನ್ನು ನೆರವೇರಿಸುತ್ತ ಪಾಯಸ, ವಡೆ ಮೋದಕಗಳನ್ನು ನೈವೇದ್ಯಮಾಡಿ ಶುಭವಚನದಿಂದ ದೇವಿಯನ್ನು ಹೊಗಳಿದರು.

೧೨೨. ಮಕ್ಕಳು, ಸೌಖ್ಯ, ಧನಗಳನ್ನೀಯುವ ಆ ದೇವಿಯನ್ನು ಪೂಜಿಸಿ, ಮಹೋತ್ಸವದಲ್ಲಿ ಇಷ್ಟಾರ್ಥಗಳು ಲಭಿಸುವುವು.

೧೨೩. ಧನ ಪುತ್ರಾದಿಗಳ ಲಾಭಕ್ಕೋಸ್ಕರ ದೇವಿಯನ್ನು ಪೂಜಿಸಿದವರು ಸುಖ, ಕೀರ್ತಿ, ಆಯುಷ್ಯ, ಪುಣ್ಯಗಳನ್ನು ಪಡೆಯುವರು.

೧೨೪. ರೋಗಗಳು ನಾಶವಾಗುವುವು. ಆದಿತ್ಯಾದಿ ಗ್ರಹಗಳು ಶುಭಫಲವನ್ನೀಯುವುವು. ಭೂತ, ಭೇತಾಳ, ಶಾಕಿನೀ ಜಂಭಾದಿಗಳು ಪೀಡಿಸುವುದಿಲ್ಲ.

೧೨೫. ಪ್ರೇತಬಾಧೆಯೂ ಇರುವುದಿಲ್ಲ. ಬಳಿಕ ಬ್ರಾಹ್ಮಣರು ಸಂತೋಷದಿಂದ ಆ ದೇವಿಯನ್ನು ಕುರಿತು ಸ್ತೋತ್ರಮಾಡಲುದ್ಯುಕ್ತರಾದರು.

೧೨೬. ಅವರು ಅತಿಸಂತೋಷದಿಂದ ಶ್ರೀಮಾತೆ, ಮಾತಂಗೀ, ಶ್ಯಾಮಲಾ ಎಂಬ ಮೂವರು ದೇವಿಯರನ್ನೂ ಸ್ತುತಿಸಿದರು.

೧೨೭. ಬ್ರಾಹ್ಮಣರು ಹೇಳುತ್ತಾರೆ:—ತಾಯೆ! ದಂಪತಿಗಳ ಹಿತಕ್ಕಾಗಿ ಬ್ರಾಹ್ಮಣರು ಭಯಪಡದಂತೆ ನೀನೇ ಈ ಸ್ಥಳದಲ್ಲಿ ನಮ್ಮ ರಕ್ಷಕಳಾಗಿರು.

CC-0. Jangamwadi Math Collection. Digitized by eGangotri

ಮಾತಂಗ್ಯುವಾಚ :—

ತುಷ್ಟಾಽಹಂ ವೋ ಮಹಾಭಾಗಾಃ ಸ್ತವೇನಾಽನೇನ ವೋ ದ್ವಿಜಾಃ ।
ವರಯಧ್ವಂ ವರಂ ಯದ್ವೋ ಮನಸಾ ಸಮಭೀಪ್ಸಿತಂ ॥ ೧೨೪ ॥

ಬ್ರಾಹ್ಮಣಾ ಊಚುಃ :—

ಬಾಸ್ಯಾಮಹೇ ಬಲಿಂ ದೇವಿ ಯಸ್ತೇ ಮನಸಿ ವರ್ತತೇ ।
ಅಸ್ಮಾಕಂ ಚೈವ ದಂಪತ್ಯೋ ರಕ್ಷಾರ್ಥಂ ತ್ವಂ ಸ್ಥಿರಾ ಭವ ॥ ೧೨೯ ॥

ದೇವ್ಯುವಾಚ :—

ಸ್ವಸ್ಥಾಃ ಸಂತು ದ್ವಿಜಾಃ ಸರ್ವೇ ನ ಚ ಪೀಡಾ ಭವಿಷ್ಯತಿ ।
ಮಯಿ ಸ್ಥಿತಾಯಾಂ ದುರ್ಧರ್ಷಾ ದೈತ್ಯಾ ಯೇಽನ್ಯೇ ಚ ರಾಕ್ಷಸಾಃ ॥
ಶಾಕಿನೀ ಭೂತಪ್ರೇತಾಶ್ಚ ಜಂಭಾದ್ಯಾಶ್ಚ ಗ್ರಹಾಸ್ತಥಾ ।
ಶಾಕಿನ್ಯಾದಿ ಗ್ರಹಾಶ್ಚೈವ ಸರ್ಪಾ ವ್ಯಾಘ್ರಾದಯಸ್ತಥಾ ॥ ೧೩೧ ॥
ಪೀಡಯಿಷ್ಯಂತಿ ನ ಕ್ವಾಽಪಿ ಸ್ಥಿತಾಯಾಂ ಮಯಿ ಶಾಸನೇ ।
ಮಹೋತ್ಸವಂ ಯಃ ಪ್ರಕುರುತೇ ವಿವಾಹೇ ಸಮುಪಸ್ಥಿತೇ ॥ ೧೩೨ ॥
ದಂಪತ್ಯೋಶ್ಚ ಹಿತಾರ್ಥಂ ಹಿ ಪೂಜಯೇನ್ಮಾಂ ಸದಾ ನರಃ ।
ತಸ್ಯಾಽಹಂ ಸಕಲಾಂ ಬಾಧಾಂ ನಾಶಯಿಷ್ಯಾಮ್ಯಸಂಶಯಂ ॥ ೧೩೩ ॥
ನಾಧಯೋ ವ್ಯಾಧಯಶ್ಚೈವ ನ ಕ್ಲೇಶೋ ನ ಚ ಸಂಭ್ರಮಃ ।
ಪ್ರಾಪ್ಯತೇ ಪರಮಂ ಸೌಖ್ಯಂ ಯಶಃ ಪುಣ್ಯಂ ಧನಂ ಸದಾ ।
ನಾಽಕಾಲೇ ಮರಣಂ ತಸ್ಯ ವಾತಪಿತ್ತಾದಿಕಂ ನ ಹಿ ॥ ೧೩೪ ॥

---

೧೨೮. ಮಾತಂಗಿಯು ಹೇಳುತ್ತಾಳೆ :—ಎಲೈ ಬ್ರಾಹ್ಮಣರೆ ! ನಿಮ್ಮ ಈ ಸ್ತೋತ್ರದಿಂದ ನಾನು ಸಂತೋಷಗೊಂಡಿದ್ದೇನೆ. ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ.

೧೨೯. ಬ್ರಾಹ್ಮಣರು ಹೇಳುತ್ತಾರೆ :—ದೇವಿ ! ನಿನಗಿಷ್ಟವಾದ ಬಲಿಯನ್ನೀಯುವೆವು. ನೀನು ನಮ್ಮ ದಂಪತಿಗಳ ರಕ್ಷಣೆಗಾಗಿ ಇಲ್ಲಿಯೆ ಸ್ಥಿರವಾಗಿ ನೆಲೆಸು.

೧೩೦–೧೩೪. ದೇವಿಯು ಹೇಳುತ್ತಾಳೆ :—ಎಲೈ ದ್ವಿಜರೆ ! ನೀವೆಲ್ಲರೂ ಸ್ವಸ್ಥರಾಗಿರಿ. ರಕ್ಷಕಳಾದ ನಾನಿರುವಾಗ ದೈತ್ಯರೂ, ರಾಕ್ಷಸರೂ, ಶಾಕಿನಿ, ಭೂತ, ಪ್ರೇತ, ಜಂಭಾದಿ ಗ್ರಹಗಳೂ, ಸರ್ಪ, ಹುಲಿ ಮೊದಲಾದ ಘಾತುಕ ಪ್ರಾಣಿಗಳೂ ನಿಮ್ಮನ್ನು ಪೀಡಿಸುವುದಿಲ್ಲ. ವಿವಾಹಕಾಲದಲ್ಲಿ ನರನು ದಂಪತಿಗಳ ಹಿತಕ್ಕಾಗಿ ನನ್ನನ್ನು ಪೂಜಿಸಿದರೆ ಅವನ ಸಕಲ ತೊಂದರೆಗಳನ್ನೂ ಯಾವಾಗಲೂ ನ್ಯಾಯವಾಗಿ ನೀಗಿಸುವೆನು. ಅವನಿಗೆ ಮನೋವ್ಯಾಧಿ, ರೋಗ, ದುಃಖಗಳು ಉಂಟಾಗುವುದಿಲ್ಲ. ಪರಮ ಸೌಖ್ಯವನ್ನೂ, ಹಣ, ಕೀರ್ತಿ, ಪುಣ್ಯಗಳನ್ನೂ ಪಡೆಯುವನು. ಅಕಾಲಮರಣವೂ, ವಾತಪಿತ್ತಾದಿಗಳ ಬಾಧೆಯೂ ಇರುವುದಿಲ್ಲ.

CC-0. Jangamwadi Math Collection. Digitized by eGangotri

ವಿಪ್ರಾ ಊಚುಃ:—
ಕೇನ ವಾ ವಿಧಿನಾ ಪೂಜಾ ನೈವೇದ್ಯಂ ಕೀದೃಶಂ ಭವೇತ್ ।
ಧೂಪಂ ಚ ಕೀದೃಶಂ ಮಾತಃ ಕಥಂ ಪೂಜಾಂ ಪ್ರಕಲ್ಪಯೇತ್ ॥ ೧೩೪ ॥
ಶ್ರೀದೇವ್ಯುವಾಚ:—
ಶ್ರೂಯತಾಂ ಮೇ ವಚೋ ವಿಪ್ರಾ ಪತ್ರೇ ಚೈವ ಹಿರಣ್ಮಯೇ ।
ಲಿಖಿತ್ವಾ ಪೂಜಯೇದ್ಯಸ್ತು ಚಿರಾಯುರ್ದಂಪತೀ ಭವೇತ್ ॥ ೧೩೬ ॥
ಅಥವಾ ರಾಜತೇ ಪತ್ರೇ ಕಾಂಸ್ಯಪತ್ರೇಽಥವಾ ಪುನಃ ।
ಅಷ್ಟಾದಶಭುಜಾ ದೇವೀ ಚಂದನೇನ ವಿಚರ್ಚಿತಾ ॥ ೧೩೭ ॥
ಶೂರ್ಪಂ ಶರೈಃ ಕರೇ ಶ್ವಾನಂ ಪದ್ಮಂ ತು ಪರಮಂ ಪುನಃ ।
ಕರ್ತರೀಂ ಕಾರಯೇದೇಕಾಂ ತೂಣೀರಂ ಚ ಧನೂಂಷಿ ಚ ॥ ೧೩೮ ॥
ಚರ್ಮಪಾಶಂ ಮುದ್ಗರಂ ಚ ಕಾಂಸಾಲಂ ತೋಮರಂ ತಥಾ ।
ಶಂಖಂ ಚಕ್ರಂ ಗದಾಂ ಶುಭ್ರಾಂ ಮುಸಲಂ ಪರಿಘಂ ಶುಭಂ ॥ ೧೩೯ ॥
ಖಟ್ವಾಂಗಂ ಬದರೀಂ ಚೈವ ಅಂಕುಶಂ ಚ ಮನೋರಮಂ ।
ಅಷ್ಟಾದಶಾಯುಧೈರೇಭಿಃ ಸಂಯುತಾ ಭುವನೇಶ್ವರೀ ॥ ೧೪೦ ॥
ಲಿಖೇತ್ಸಕುಂಡಲಾಂ ದೇವೀಂ ಬಾಹೂನೂಪುರಭೂಷಿತಾಂ ।
ಕೇಯೂರಮುಕ್ತಾಪದ್ಮೈಶ್ಚ ಮುಂಡಮಾಲಾಭಿರನ್ವಿತಾಂ ॥ ೧೪೧ ॥
ಮಾತೃಕಾಽಕ್ಷರಪರಿವೃತಾಮಂಗುಲೀಯಕಸಂಯುತಾಂ ।
ನಾನಾಭರಣಶೋಭಾಢ್ಯಾಂ ಲಿಖಿತ್ವಾ ಭುವನೇಶ್ವರೀಂ ॥ ೧೪೨ ॥

---

೧೩೫. ಬ್ರಾಹ್ಮಣರು ಹೇಳುತ್ತಾರೆ:— ನಿನ್ನನ್ನು ಯಾವ ಕ್ರಮದಿಂದ ಪೂಜಿಸಬೇಕು ? ನೈವೇದ್ಯವು ಎಂತಹುದಾಗಿರಬೇಕು ? ಧೂಪವು ಎಂಥಾದ್ದು ? ಹೇಗೆ ಪೂಜೆ ಮಾಡಬೇಕು.

೧೩೬. ಶ್ರೀದೇವಿಯು ಹೇಳುತ್ತಾಳೆ:— ಅಯ್ಯಾ ಬ್ರಾಹ್ಮಣರೆ ! ನನ್ನ ಮಾತನ್ನು ಕೇಳಿರಿ. ಚಿನ್ನದ ತಗಡಿನಲ್ಲಿ ನನ್ನನ್ನು ಬರೆದು ಪೂಜಿಸಿದ ದಂಪತಿಗಳು ದೀರ್ಘಾಯುಷ್ಯವುಳ್ಳವರಾಗುವರು.

೧೩೭–೧೪೩. ಬೆಳ್ಳಿ ಅಥವಾ ಕಂಚಿನ ತಗಡಿನಲ್ಲಿ ಹದಿನೆಂಟು ತೋಳುಗಳುಳ್ಳವಳೂ ಆ ತೋಳುಗಳಲ್ಲಿ ಮೊರ, ಬಾಣ, ನಾಯಿ, ಪದ್ಮ, ಕತ್ತರಿ, ಬತ್ತಳಿಕೆ, ಬಿಲ್ಲು, ಗುರಾಣಿ, ಪಾಶ, ಮುದ್ಗರ, ಕಾಂಸಾಲ, ತೋಮರ, ಶಂಖ, ಚಕ್ರ, ಗದೆ, ಒನಕೆ, ಪರಿಘ, ಖಟ್ವಾಂಗ, ಬದರೀ, ಅಂಕುಶಗಳೆಂಬ ಆಯುಧಗಳುಳ್ಳವಳೂ, ಚಂದನಲಿಪ್ತಳೂ, ಕುಂಡಲಸಹಿತಳೂ, ನಾಗಮುರಿಗೆ, ಕಾಲ್ಗೆಜ್ಜೆಗಳಿಂದ ಅಲಂಕೃತಳೂ, ಮುತ್ತು, ಪದ್ಮ, ಹೂಗಳ ಮಾಲೆಗಳುಳ್ಳವಳೂ, ಮಾತೃಕಾಕ್ಷರ,

CC-0. Jangamwadi Math Collection. Digitized by eGangotri

ಮಾತಂಗೀಮಿತಿವಿಖ್ಯಾತಾಂ ಪ್ರತಿಷ್ಠಾರ್ಥಂ ದ್ವಿಜೋತ್ತಮಾಃ ।
ಚಂದನೇನ ಚ ಹೃದ್ಯೇನ ಪುಷ್ಪೈಶ್ಚೈವ ಪ್ರಪೂಜಯೇತ್ ॥ ೧೪೩ ॥
ಯಕ್ಷಕರ್ದಮಮಾನೀಯ ಮಾತಂಗೀಂ ಪೂಜಯೇತ್ಸುಧೀಃ ।
ಘೃತೇನ ಬೋಧಯೇದ್ದೀಪಂ ಸಪ್ತವರ್ತಿಯುತಂ ಶುಭಂ ॥ ೧೪೪ ॥
ಧೂಪಯೇದ್ಗುಗ್ಗುಲೇನಾಽಥ ಸಾಜ್ಯೇನಾಽತಿಸುಗಂಧಿನಾ ।
ನಾಲಿಕೇರೇಣ ಶುಭ್ರೇಣ ದದ್ಯಾದರ್ಘ್ಯಂ ಚ ದಂಪತೀ ॥ ೧೪೫ ॥
ಪ್ರದಕ್ಷಿಣಾಃ ಪ್ರಕುರ್ವೀತ ಚತುರಃ ಸುಮನೋರಮಂ ।
ವಸ್ತ್ರಾಂಶುಕಂ ಗುಂಠಯಿತ್ವಾ ಅಗ್ರೇ ಕೃತ್ವಾ ಚ ದಂಪತೀ ॥ ೧೪೬ ॥
ಪ್ರೋಕ್ಷಣೀಕೃತ್ಯ ಮಾತಂಗ್ಯಾಃ ಪ್ರಾಶ್ಯ ಮಾಧ್ವೀಕಮುತ್ತಮಂ ।
ಗೀತವಾದಿತ್ರ ನಿರ್ಘೋಷೈರ್ಮಾತಂಗೀಂ ಪೂಜಯೇತ್ಸುಧೀಃ ॥ ೧೪೭ ॥
ಸುವಾಸಿನೀಸ್ತು ತದ್ರೂಪಾ ಮಾತಂಗೀ ಸಂಭವಾ ಇತಿ ।
ನೃತ್ಯಂತೀ ದಂಪತೀ ಚಾಗ್ರೇ ಸರ್ವೋಪದ್ರವಶಾಂತಯೇ ॥ ೧೪೮ ॥
ನೈವೇದ್ಯಂ ವಿವಿಧಾಽನ್ನೇನ ಅಷ್ಟಾದಶವಿಧಂ ಶುಭಂ ।
ವಟಿಕಾಽಪೂಪಿಕಾಃ ಶುಭ್ರಾಃ ಕ್ಷೀರಂ ಶರ್ಕರಯಾ ಯುತಂ ॥ ೧೪೯ ॥
ಬಲ್ಲಾಕರಂ ವರಂ ಯೂಪಾ ಕ್ಲಿಪ್ತಕುಲ್ಮಾಷಕಂ ತಥಾ ।
ಸೋಹಾಲಿಕಾ ಭಿನ್ನವಟಾ ಲಾಪ್ಸಿಕಾ ಪದ್ಮಚೂರ್ಣಕಂ ॥ ೧೫೦ ॥

---

ಉಂಗುರಗಳುಳ್ಳವಳೂ, ಆಗಿರುವ ಮಾತಂಗಿಯೆಂದು ವಿಖ್ಯಾತಳಾದ ಭುವನೇಶ್ವರಿಯನ್ನು ಬರೆದು ಗಂಧ, ಹೂವುಗಳಿಂದ ಆರಾಧಿಸಬೇಕು.

೧೪೪. ಏಳುಬತ್ತಿಯುಳ್ಳ ತುಪ್ಪದ ದೀಪವನ್ನು ಹಚ್ಚಿ ಗಂಧಾದಿಗಳಿಂದ ಮಾತಂಗಿಯನ್ನು ಪೂಜಿಸಬೇಕು.

೧೪೫. ಗುಗ್ಗುಳ, ತುಪ್ಪ ಸಹಿತವಾಗಿ ಸುವಾಸನೆಯಾದ ಧೂಪವನ್ನಿತ್ತು ದಂಪತಿಗಳು ತೆಂಗಿನಕಾಯಿಯಿಂದ ಅರ್ಘ್ಯವನ್ನು ಕೊಡಬೇಕು.

೧೪೬. ಚೆನ್ನಾಗಿರುವ ಬಟ್ಟೆಯನ್ನು ಹೊದ್ದಿಸಿದ ದಂಪತಿಗಳನ್ನು ಮುಂದಿರಿಸಿಕೊಂಡು ನಾಲ್ಕು ಪ್ರದಕ್ಷಿಣೆ ಮಾಡಬೇಕು.

೧೪೭. ಉತ್ತಮವಾದ ಜೇನುತುಪ್ಪವನ್ನು ಮಾತಂಗಿಗೆ ಪ್ರೋಕ್ಷಿಸಿ ಅದನ್ನು ಕುಡಿದು ಗೀತವಾದ್ಯಾದಿ ಧ್ವನಿಗಳಿಂದ ಅವಳನ್ನು ಆರಾಧಿಸಬೇಕು.

೧೪೮. ದಂಪತಿಗಳು ಎಲ್ಲ ತೊಂದರೆಗಳ ಶಾಂತಿಗಾಗಿಯೂ ಮಾತಂಗಿಯ ಮುಂದೆ ನರ್ತನಮಾಡುತ್ತ ಸುಮಂಗಲಿಯರನ್ನು ಮಾತಂಗಿಯ ಮಕ್ಕಳೆಂಬ ಭಾವನೆಯಿಂದ ಪೂಜಿಸಬೇಕು.

೧೪೯–೧೫೩. ವಡೆ, ದೋಸೆ, ಮೇಲಾದ ಹಾಲು, ಮೊಸರು, ಬಲ್ಲಾಕರ, ಯೂಪ, ಕ್ಲಿಪ್ತಕುಲ್ಮಾಷಕ, ಸೋಹಾಲಿಕ, ಭಿನ್ನವಡ, ಲಾಪ್ಸಿಕ, ಪದ್ಮಚೂರ್ಣಕ,

CC-0. Jangamwadi Math Collection. Digitized by eGangotri

ಶೈವೇಯಾ ವಿಮಲಾಸ್ತತ್ರ ಪರ್ಪಟಾಃ ಶಾಲಕಾದಯಃ ।
ಪೂರಣಂ ತಸ್ಯ ಮಾಸಸ್ಯ ಕುರ್ಯಾಚ್ಛುಭ್ರಂ ಮನೋರಮಂ ॥ ೧೫೧ ॥
ರಾಜಮಾಷಾಃ ಸೂಪಚಿತಾಃ ಕಲ್ಪಯೇತ್ತತ್ರ ದಂಪತೀ ।
ಫೇಣಿಕಾ ರೋಪಿಕಾಸ್ತತ್ರ ಕುರ್ಯಾಚ್ಚೈವ ಮನೋರಮಾಃ ॥ ೧೫೨ ॥
ಏತಾನ್ಯಷ್ಟಾದಶಾನ್ಯಾನಿ ಪಕ್ವಾನ್ನಾನಿ ಪ್ರಕಲ್ಪಯೇತ್ ।
ಆಜ್ಯಶರ್ಕರಯುಕ್ತಾನಿ ಯುಕ್ತಾನಿ ಶಾಕಸಂಚಯೈಃ ॥ ೧೫೩ ॥
ರಾತ್ರೌ ಜಾಗರಣಂ ಕಾರ್ಯಂ ಸುವಾಸಿನೀಂ ಚ ಪೂಜಯೇತ್ ।
ಮುಖಾಽವಲೋಕನಂ ಚಾಜ್ಯೇ ಕುರ್ವೀಯಾತಾಂ ಚ ದಂಪತೀ॥ ೧೫೪ ॥
ಪರಸ್ಪರಂ ಹಿ ಕುರ್ವೀತ ಉತ್ಪಾತಪರಿಶಾಂತಯೇ ।
ಏವಂ ವಿಧಂ ಮಯಾ ಖ್ಯಾತಂ ಮಾತಂಗೀಪೂಜನಂ ಶುಭಂ ॥ ೧೫೫ ॥
ನ ಪೂಜಯತಿ ಯೋ ಮೂಢಸ್ತಸ್ಯ ವಿಘ್ನಂ ಕರೋತಿ ಸಾ ।
ದಂಪತ್ಯೋರ್ಮರಣಂ ಚಾಽಥ ಧನನಾಶಂ ಮಹಾಭಯಂ ॥ ೧೫೬ ॥
ಕ್ಲೇಶಂ ರೋಗಂ ತಥಾ ವಹ್ನೇಃ ಪ್ರಾದುರ್ಭಾವಂ ಪ್ರಪಶ್ಯತಿ ।
ಏತಸ್ಮಾತ್ಕಾರಣಾದ್ವಿಪ್ರಾ ಮಾತಂಗೀಂ ಪೂಜಯೇತ್ಸುಧೀಃ ॥ ೧೫೭ ॥
ದಂಪತೀನಾಂ ಚ ಸರ್ವೇಷಾಂ ದ್ವಿಜಾತೀನಾಂ ಚ ಶಾಸನೇ ।
ವಣಿಜಾಂ ಚ ಮಹಾದೇವೀ ನಿರ್ವಿಘ್ನಂ ಕುರುತೇ ಸದಾ ॥ ೧೫೮ ॥

---

ಶೈವೇಯ, ಹಪ್ಪಳ, ಶಾಲಕ, ಪೂರಿ, ಅಲಸಂದೀತೊವ್ವೆ, ಫೇಣಿ, ರೋಪಿಕಾ ಎಂಬ ಹದಿನೆಂಟು ವಿಧ ಪದಾರ್ಥಗಳನ್ನೂ ಇನ್ನೂ ಇತರ ತುಪ್ಪ, ಸಕ್ಕರೆ, ತರಕಾರಿ ಸಹಿತವಾದ ಪಕ್ವಾನ್ನಗಳನ್ನೂ ಮಾಡಿಸಿ ದೇವಿಗೆ ನೈವೇದ್ಯಮಾಡಬೇಕು.

೧೫೪-೧೫೫. ದಂಪತಿಗಳು ಉತ್ಪಾತಶಾಂತಿಗಾಗಿ ರಾತ್ರಿಯಲ್ಲಿ ಜಾಗರಣ ಮಾಡಿ ಸುವಾಸಿನಿಯರನ್ನು ಆರಾಧಿಸಬೇಕು. ತುಪ್ಪದಲ್ಲಿ ಮುಖವನ್ನು ನೋಡಿಕೊಳ್ಳಬೇಕು. ಆಮೇಲೆ ವಧೂವರರು ಪರಸ್ಪರವಾಗಿ ಮುಖವನ್ನು ನೋಡಿಕೊಳ್ಳಬೇಕು. ಹೀಗೆ ನಾನು ಮಾತಂಗೀಪೂಜೆಯ ವಿಧಾನವನ್ನು ಹೇಳಿರುವೆನು.

೧೫೬-೧೫೭. ಹೀಗೆ ಪೂಜಿಸದ ಮೂಢನಿಗೆ ಅವಳು ವಿಘ್ನವನ್ನೆಸಗುವಳು. ದಂಪತಿಗಳ ಮರಣವೂ, ಧನನಾಶವೂ, ಅತ್ಯಂತ ಭಯವೂ, ದುಃಖವೂ, ರೋಗವೂ, ಬೆಂಕಿಯೂ ಉಂಟಾಗುವುದು. ಈ ಕಾರಣದಿಂದ ಪ್ರಾಜ್ಞನು ಮಾತಂಗಿಯನ್ನು ಅರ್ಚಿಸಬೇಕು.

೧೫೮. ಮಾತಂಗಿಯು ಯಾವಾಗಲೂ ಸಕಲ ದಂಪತಿಗಳು, ಬ್ರಾಹ್ಮಣರು, ವರ್ತಕರು ಇವರ ರಕ್ಷಣೆಯಲ್ಲಿ ನಿರತಳಾಗಿ ವಿಘ್ನಗಳ ಭಯವಿಲ್ಲದಂತೆ ಮಾಡುವಳು.

CC-0. Jangamwadi Math Collection. Digitized by eGangotri

ತಥೇತಿ ಚೈವ ತೈರುಕ್ತೇ ಪುನರ್ವಚನಮಬ್ರವೀತ್ ।
ಶ್ರೂಯತಾಂ ಬ್ರಾಹ್ಮಣಾಃ ಸರ್ವೇ ವಿವಾಹಾದಿಮಹೋತ್ಸವಂ ॥ ೧೫೯ ॥
ಮದೀಯವಚನಂ ಶ್ರುತ್ವಾ ತಥಾ ಕುರುತ ವೈ ವಿಧಿಂ ।
ವಿವಾಹಕಾಲೇ ಸಂಪ್ರಾಪ್ತೇ ದಂಪತ್ಯೋಃ ಸೌಖ್ಯಹೇತವೇ ॥ ೧೬೦ ॥
ನಿರ್ವಿಘ್ನಾರ್ಥಂ ತು ಕರ್ತವ್ಯಂ ನಿಜೈಶ್ಚ ಸಹಸೇವಕೈಃ ।
ಅಂಜನಂ ನಯನೇ ಕುರ್ಯಾತ್ಸಂಬಂಧೀನಾಂ ಚ ಸರ್ವಶಃ ॥ ೧೬೧ ॥
ಭ್ರೂಮಧ್ಯಾತ್ತು ಪ್ರಕರ್ತವ್ಯಮರ್ಧಚಂದ್ರಸಮಾಕೃತಿ ।
ಬಿಂದುಂ ತು ಕಾರಯೇದ್ವಿಪ್ರಾಸ್ತಸ್ಯೋಪರಿ ಮನೋಹರಂ ॥ ೧೬೨ ॥
ಏವಂ ಕೃತೇ ತದಾ ವಿಪ್ರಾಃ ಶಾಂತಿರ್ಭವತಿ ನಾಽನ್ಯಥಾ ।
ಪುತ್ರವೃದ್ಧಿಕರಂ ಚೈತತ್ತಿಲಕಂ ಚಾಽರ್ಧ ಬಿಂಬಕಂ ।
ಸರ್ವವಿಘ್ನಹರಂ ಸರ್ವದೌಸ್ಥ್ಯವ್ಯಾಧಿನಾಶನಂ ॥ ೧೬೩ ॥

ವ್ಯಾಸ ಉವಾಚ:—

ತತಃ ಶಾಂತಾಃ ಪ್ರಜಾಃ ಸರ್ವಾ ಧರ್ಮಾಽರಣ್ಯೇ ನರಾಽಧಿಪ ।
ಪ್ರಸಾದಾಚ್ಚೈವ ಮಾತಂಗ್ಯಾ ದೇವ್ಯಾ ವೈ ಸತ್ಯಮಂದಿರೇ ॥ ೧೬೪ ॥
ತತೋ ಹೃಷ್ಟಹೃದಾ ವಿಪ್ರಾಃ ಪುಪೂಜುಸ್ತೇ ವಿಧೇಃ ಸುತಾಂ ।
ಮಾತಂಗ್ಯಾಶ್ಚ ಪ್ರಕರ್ತವ್ಯಂ ವರ್ಷೇ ವರ್ಷೇ ಚ ಪೂಜನಂ ॥ ೧೬೫ ॥

---

೧೫೯–೧೬೨. ಹಾಗೆಯೇ ಆಗಲೆಂದ ಆ ಬ್ರಾಹ್ಮಣರು ಒಪ್ಪಲು ದೇವಿಯು ಮತ್ತೆ ಹೇಳಿದಳು. "ಬ್ರಾಹ್ಮಣರೆ! ವಿವಾಹಾದಿ ಮಹೋತ್ಸವದಲ್ಲಿ ನಾನು ಹೇಳಿದ ಕ್ರಮವನ್ನನುಸರಿಸಿರಿ. ದಂಪತಿಗಳ ಸೌಖ್ಯಕ್ಕಾಗಿಯೂ, ತೊಂದರೆ ಯಿಲ್ಲದಿರುವುದಕ್ಕಾಗಿಯೂ ತಮ್ಮ ಸೇವಕರೊಡನೆ ಸಂಬಂಧಿಕರೆಲ್ಲ ಕಣ್ಣುಗಳಿಗೆ ಕಾಡಿಗೆಯನ್ನು (ಕಪ್ಪನ್ನು) ಹಚ್ಚಿಕೊಳ್ಳಬೇಕು. ಹುಬ್ಬುಗಳ ನಡುವೆ ಅರ್ಧ ಚಂದ್ರನಂತೆ ರೇಖೆಯನ್ನು ಬರೆದು ಅದರ ಮೇಲ್ಗಡೆ ಮನೋಹರವಾದ ಬೊಟ್ಟ ನ್ನಿಡಬೇಕು.

೧೬೩. ಬ್ರಾಹ್ಮಣರೆ! ಹೀಗೆ ಮಾಡಿದರೆ ವಿಘ್ನಶಾಂತಿಯಾಗುವುದು. ಇತರ ಕ್ರಮದಿಂದಾಗುವುದಿಲ್ಲ. ಈ ಅರ್ಧಚಂದ್ರಾಕಾರವಾದ ತಿಲಕವು ಪುತ್ರವೃದ್ಧಿ ಯನ್ನೂ, ಸಕಲ ವಿಘ್ನನಾಶವನ್ನೂ, ಸಮಸ್ತ ಆಪತ್ತು ಮತ್ತು ರೋಗಗಳ ಪರಿಹಾರವನ್ನೂ ಮಾಡುವುದು.

೧೬೪. ವ್ಯಾಸನು ಹೇಳುತ್ತಾನೆ:—ಮಹಾರಾಜ ! ಬಳಿಕ ಮಾತಂಗಿಯ ಅನುಗ್ರಹದಿಂದ ಧರ್ಮಾರಣ್ಯದ ಸತ್ಯಮಂದಿರದಲ್ಲಿರುವ ಪ್ರಜೆಗಳೆಲ್ಲರೂ ಸುಖ ಗೊಂಡರು.

೧೬೫–೧೬೬. ಬಳಿಕ ಆ ವಿಪ್ರರು ಸಂತೋಷಗೊಂಡು ಬ್ರಹ್ಮನ ಮಗಳಾದ

CC-0. Jangamwadi Math Collection. Digitized by eGangotri

ಮಾಘಾಸಿತೇ ತೃತೀಯಾಯಾಂ ಭಕ್ಷ್ಯಭೋಜ್ಯಾದಿಭಿಸ್ತಥಾ ।
ಕರ್ಣಾಟಸ್ಯ ತಥೋತ್ಪತ್ತಿಃ ಪುನರ್ಜಾತಾತು ಭೂತಲೇ ॥ ೧೬೬ ॥
ಭಯಾಚ್ಚೈವ ಹಿ ತತ್ಸ್ಥಾನಂ ತ್ಯಕ್ತ್ವಾ ಯಾಮ್ಯಮಗಾತ್ತತಃ ।
ಗಚ್ಛಮಾನಸ್ತದಾ ದೈತ್ಯೋ ಯಕ್ಷ್ಮರೂಪೋಽಭ್ಯಭಾಷತ ॥ ೧೬೭ ॥
ಶ್ರೂಯತಾಂ ಭೋ ದ್ವಿಜಾಃ ಸರ್ವೇ ಧರ್ಮಾರಣ್ಯನಿವಾಸಿನಃ ।
ವಣಿಜಶ್ಚ ಮಹಚ್ಚೇದಂ ಮದ್ವಾಕ್ಯಂ ಪರಿಪಾಲ್ಯತಾಂ ॥ ೧೬೮ ॥
ಮಾಘಮಾಸೇ ಹಿ ಮತ್ಪ್ರೀತ್ಯಾ ನಿರ್ವಿಘ್ನಾರ್ಥಂ ಸದಾ ಭುವಿ ।
ತ್ರಿದಲೇನ ಚ ಧಾನ್ಯೇನ ಮೂಲಕೇನ ವಿಶೇಷತಃ ॥ ೧೬೯ ॥
ತಿಲತೈಲೇನ ವಾ ಕುರ್ಯಾತ್ಪುರುಷೋ ನಿಯತವ್ರತಃ ।
ಏಕಾಽಶನಂ ಹಿ ಕುರುತೇ ಯಕ್ಷ್ಮಪ್ರೀತ್ಯೈ ನಿರಂತರಂ ॥ ೧೭೦ ॥
ಆಬಾಲಯೌವನೇನೈವ ವೃದ್ಧೇನಾಽಪೀಹ ಸರ್ವದಾ ।
ವರ್ಷೇ ವರ್ಷೇ ಪ್ರಕರ್ತವ್ಯಂ ಯಕ್ಷ್ಮಣೋ ವ್ರತಮುತ್ತಮಂ ॥ ೧೭೧ ॥
ಯಸ್ಮಿನ್ಗೃಹೇ ಹಿ ಯಾವಚ್ಚ ಪುರುಷಾಕಾರರತೇಪಿಣಃ ।
ತಸ್ಯಾಪ್ಯಯಂ ಪ್ರಕುರ್ಯುರ್ವಾಸ್ತ ಏಕಭಕ್ತರತಾಃ ಸದಾ ॥ ೧೭೨ ॥
ಬಾಲಸ್ಯಾರ್ಥೇ ತು ಜನನೀ ಕುರುತೇ ವ್ರತಮುತ್ತಮಂ ।
ಪಿತಾ ವಾಽಪ್ಯಥವಾ ಭ್ರಾತಾ ಯನ್ನಿಮಿತ್ತಂ ವ್ರತಂ ಚರೇತ್ ॥ ೧೭೩ ॥

---

ಮಾತಂಗಿಯನ್ನು ಪೂಜಿಸಿದರು. ಹೀಗೆ ಪ್ರತಿ ವರ್ಷದಲ್ಲಿಯೂ ಮಾಘಮಾಸದ ಕೃಷ್ಣಪಕ್ಷ ತದಿಗೆಯ ದಿವಸ ಭಕ್ಷ್ಯಭೋಜ್ಯಾದಿಗಳಿಂದ ಮಾತಂಗಿಯನ್ನು ಪೂಜಿಸಬೇಕು. ಒಮ್ಮೆ ಕರ್ಣಾಟದೈತ್ಯನು ಮತ್ತೆಯೂ ಭೂಮಿಯಲ್ಲಿ ಜನಿಸಿದನು.

೧೬೭. ಆ ದೈತ್ಯನು ಹೆದರಿಕೆಯಿಂದ ಆ ಸ್ಥಳವನ್ನು ಬಿಟ್ಟು ದಕ್ಷಿಣ ದಿಕ್ಕಿಗೆ ಹೋಗುತ್ತ ಯಕ್ಷ್ಮರೂಪನಾಗಿ ಇಂತೆಂದನು.

೧೬೮. "ಧರ್ಮಾರಣ್ಯವಾಸಿಗಳಾದ ಎಲೈ ಬ್ರಾಹ್ಮಣರೆ ಮತ್ತು ವೈಶ್ಯರೆ! ಕೇಳಿರಿ. ಈ ನನ್ನ ಒಳ್ಳೆಯ ಮಾತನ್ನು ಪಾಲಿಸಿರಿ.

೧೬೯–೧೭೦. ಮಾಘಮಾಸದಲ್ಲಿ ಪ್ರಪಂಚದಲ್ಲಿ ತೊಂದರೆಗಳಿಲ್ಲದಿರುವುದಕ್ಕಾಗಿ ನನ್ನ ಪ್ರೀತಿಗೋಸ್ಕರ ಪುರುಷನು ತ್ರಿದಳಧಾನ್ಯದಿಂದಾಗಲಿ, ಗೆಣಸಿನಿಂದಾಗಲಿ, ಎಳ್ಳೆಣ್ಣೆಯಿಂದಾಗಲಿ ಸಹಿತವಾದ ಒಂದೇ ಭೋಜನವನ್ನು ಮಾಡಬೇಕು.

೧೭೧. ಹುಡುಗರೂ, ಯುವಕರೂ, ಮುದಕರೂ ಪ್ರತಿ ವರ್ಷವೂ ಉತ್ತಮವಾದ ಈ ಯಕ್ಷ್ಮವ್ರತನ್ನಾಚರಿಸಬೇಕು.

೧೭೨–೧೭೪. ಬಾಲಕನಿಗೆ ಬದಲಾಗಿ ತಾಯಿಯಾಗಲಿ, ತಂದೆಯಾಗಲಿ, ಸಹೋದರನಾಗಲಿ ಈ ವ್ರತವನ್ನು ಮಾಡಬೇಕು. ಪತಿಯ ಬದಲಾಗಿ ಹೆಂಡತಿಯೂ, ಅವಳಿಗೆ ಶಕ್ತಿಯಿಲ್ಲದಿದ್ದರೆ ಇತರರೂ ವ್ರತವನ್ನು ಮಾಡಬೇಕು. ಯಾರ

CC-0. Jangamwadi Math Collection. Digitized by eGangotri

ನ ಚ ತಸ್ಯ ಭಯಂ ಕ್ವಾಽಪಿ ನ ವ್ಯಾಧಿರ್ನ ಚ ಬಂಧನಂ ।
ಭರ್ತುರ್ನಿಮಿತ್ತೇ ಸ್ತ್ರೀ ಕುರ್ಯಾತ್ಸ್ವಶಕ್ತ್ಯಾ ತ್ವಿತರೇಣ ಚ ॥ ೧೭೪ ॥
ಏವಂ ಸಮಾದಿಶನ್ದೈತ್ಯಃ ಸತ್ಯಮಂದಿರಮುತ್ಸೃಜನ್ ।
ಗತೋಽಸೌ ಯಾಮ್ಯದಿಗ್ಭಾಗ ಉದಧೇಸ್ತೀರ ಉತ್ತಮೇ ॥ ೧೭೫ ॥
ವಿಪುಲಂ ದೇಹಮಾಸಾದ್ಯ ಕರ್ಣಾಟಃ ಸ ನರಾಧಿಪ ।
ಸ್ವನಾಮ್ನಾ ಚೈವ ತಂ ದೇಶಂ ಸ್ಥಾಪಯಾಮಾಸ ಚೋತ್ತಮಂ ॥ ೧೭೬ ॥
ಯಸ್ಮಿಂಶ್ಚ ಸರ್ವವಸ್ತೂನಿ ಧನಧಾನ್ಯಾನಿ ಭೂರಿಶಃ ।
ಕರ್ಣಾಟದೇಶಂ ತಂ ರಾಜನ್ಪರಿವಾರ್ಯ ಚಿರಂ ಸ್ಥಿತಃ ॥ ೧೭೭ ॥
ಧರ್ಮಾಽರಣ್ಯಕಥಾಂ ಪುಣ್ಯಾಂ ಕಥಿತಾಂ ನರಸತ್ತಮ ।
ಶ್ರೀಮಾತುಶ್ಚೈವ ಮಾಹಾತ್ಮ್ಯಂ ಶೃಣ್ವಂತಿ ಶ್ರಾವಯಂತಿ ಯೇ ॥ ೧೭೮ ॥
ತೇಷಾಂ ಕುಲೇ ಕದಾಚಿತ್ತು ಅರಿಷ್ಟಂ ನೈವ ಜಾಯತೇ ।
ಅಪುತ್ರೋ ಲಭತೇ ಪುತ್ರಾನ್ಧನಹೀನಸ್ತು ಸಂಪದಃ ।
ಆಯುರಾರೋಗ್ಯಮೈಶ್ವರ್ಯಂ ಶ್ರೀಮಾತುಶ್ಚ ಪ್ರಸಾದತಃ ॥ ೧೭೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಮಾತಂಗೀ ಕರ್ಣಾಟಕೋಪಾಖ್ಯಾನವರ್ಣನಂ"ನಾಮಾಽಷ್ಟಾದಶೋಽಧ್ಯಾಯಃ

---

ಮನೆಯಲ್ಲಿ ಜನರು ಒಂದೇ ಭೋಜನವುಳ್ಳವರಾಗಿ ಪುರುಷಾಕಾರನಾದ ಆ ಯಕ್ಷ್ಮನ ನಾಮವನ್ನು ಹೇಳುವರೊ, ಅವರಿಗೆ ಭಯವೂ, ವ್ಯಾಧಿಯೂ, ಬಂಧನವೂ ಉಂಟಾಗುವುದಿಲ್ಲ.

೧೭೫–೧೭೬. ಮಹಾರಾಜ ! ಆ ಕರ್ಣಾಟನು ಹೀಗೆ ಅಪ್ಪಣೆಮಾಡಿ ಸತ್ಯಮಂದಿರವನ್ನು ಬಿಟ್ಟು ದಕ್ಷಿಣದಿಕ್ಕಿಗೆ ಹೋಗಿ ಸಮುದ್ರದ ದಡದಲ್ಲಿ ದೊಡ್ಡ ದೇಹವನ್ನು ಹೊಂದಿ ತನ್ನ ಹೆಸರಿನಿಂದ ಆ ದೇಶವನ್ನು ಸ್ಥಾಪಿಸಿದನು.

೧೭೭. ಆ ದೇಶದಲ್ಲಿ ಸಕಲ ವಸ್ತುಗಳೂ, ಧನಧಾನ್ಯಗಳೂ, ಸಮೃದ್ಧಿಯಾಗಿರುವುದರಿಂದ ಆ ದೈತ್ಯನು ಅಲ್ಲಿಯೆ ಬಹುಕಾಲ ನೆಲಸಿದನು.

೧೭೮–೧೭೯. ನಾನು ಹೇಳಿದ ಈ ಧರ್ಮಾರಣ್ಯದ ಕಥೆಯನ್ನೂ ಶ್ರೀಮಾತೆಯ ಮಹಾತ್ಮ್ಯವನ್ನೂ ಯಾರು ಕೇಳುವರೊ, ಮತ್ತು ಮತ್ತೊಬ್ಬರಿಗೆ ಹೇಳುವರೊ, ಅವರ ವಂಶದಲ್ಲಿ ಒಂದು ಸಾರಿಯೂ ಅನಿಷ್ಟವುಂಟಾಗುವುದಿಲ್ಲ. ಶ್ರೀಮಾತೆಯ ಅನುಗ್ರಹದಿಂದ ಮಕ್ಕಳಿಲ್ಲದವನು ಮಕ್ಕಳನ್ನೂ, ಧನವಿಲ್ಲದವನು ಸಂಪತ್ತನ್ನೂ, ಆಯುಸ್ಸು, ಆರೋಗ್ಯ, ಐಶ್ವರ್ಯಗಳನ್ನೂ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಮಾತಂಗೀ ಕರ್ಣಾಟಕೋಪಾಖ್ಯಾನವರ್ಣನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ಇಂದ್ರೇಶ್ವರ ಜಯಂತೇಶ್ವರಮಹಿಮಾನುವರ್ಣನಂ

ವ್ಯಾಸ ಉವಾಚ :—

ಇಂದ್ರಸರೇ ನರಃ ಸ್ನಾತ್ವಾ ದೃಷ್ಟ್ವಾ ಚೇಂದ್ರೇಶ್ವರಂ ಶಿವಂ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೧ ॥

ಯುಧಿಷ್ಠಿರ ಉವಾಚ :—

ಕೇನ ಚಾದೌ ನಿರ್ಮಿತಂ ತತ್ತೀರ್ಥಂ ಸರ್ವೋತ್ತಮೋತ್ತಮಂ ।
ಯಥಾವದ್ವರ್ಣಯ ತ್ವಂ ಮೇ ಭಗವನ್ದ್ವಿಜಸತ್ತಮ ॥ ೨ ॥

ವ್ಯಾಸ ಉವಾಚ :—

ಇಂದ್ರೇಣೈವ ಮಹಾರಾಜ ತಪಸ್ತಪ್ತಂ ಸುದುಷ್ಕರಂ ।
ಗ್ರಾಮಾದುತ್ತರದಿಗ್ಭಾಗೇ ಶತವರ್ಷಾಣಿ ತತ್ರ ವೈ ॥ ೩ ॥
ಶಿವೋದ್ದೇಶಂ ಮಹಾಘೋರಂ ಏಕಾಂಗುಷ್ಠೇನ ಭಾರತ ।
ಊರ್ಧ್ವಬಾಹುರ್ಮಹಾತೇಜಾಃ ಸೂರ್ಯಸ್ಯಾಭಿಮುಖೋಽಭವತ್ ॥
ವೃತ್ರಸ್ಯ ವಧತೋ ಜ್ಞಾತಂ ಯತ್ಪಾಪಂ ತಸ್ಯ ನುತ್ತಯೇ ।
ಏಕಾಗ್ರಃ ಪ್ರಯತೋ ಭೂತ್ವಾ ಶಿವಸ್ಯಾರಾಧನೇ ರತಃ ॥ ೫ ॥

---

### ಕನ್ನಡದ ಅನುವಾದ

#### ಇಂದ್ರೇಶ್ವರ ಜಯಂತೇಶ್ವರ ಮಹಿಮಾನುವರ್ಣನ

೧. ವ್ಯಾಸನು ಹೇಳುತ್ತಾನೆ:—ಮಹಾರಾಜ! ಮಾನವನು ಇಂದ್ರಸರೋವರದಲ್ಲಿ ಸ್ನಾನಮಾಡಿ ಇಂದ್ರೇಶ್ವರನಾದ ಶಿವನನ್ನು ದರ್ಶನಮಾಡಿದರೆ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುವನು.

೨. ಯುಧಿಷ್ಠಿರನು ಕೇಳುತ್ತಾನೆ:—ದ್ವಿಜವರ್ಯನಾದ ಎಲೈ ವ್ಯಾಸನೆ.! ಮೊದಲು ಸರ್ವೋತ್ತಮವಾದ ಆ ತೀರ್ಥವನ್ನು ಯಾರು ನಿರ್ಮಿಸಿದರು? ಎಲೈ ಪೂಜ್ಯನೆ! ಅದನ್ನು ನನಗೆ ಹೇಳುವವನಾಗು.

೩. ವ್ಯಾಸನು ಹೇಳುತ್ತಾನೆ:—ಮಹಾರಾಜ! ಗ್ರಾಮದ ಉತ್ತರದಿಕ್ಕಿನಲ್ಲಿ ಇಂದ್ರನು ನೂರು ವರ್ಷಕಾಲ ದುಷ್ಕರವಾದ ತಪಸ್ಸನ್ನು ಮಾಡಿದನು.

೪. ಯುಧಿಷ್ಠಿರ! ಮಹಾತೇಜಸ್ವಿಯಾದ ಆ ಇಂದ್ರನು ತೋಳುಗಳನ್ನು ಮೇಲಕ್ಕೆತ್ತಿಕೊಂಡು ಒಂದೇ ಬೆರಳಿನಿಂದ ನಿಂತು ಸೂರ್ಯಾಭಿಮುಖನಾಗಿ ಪರಶಿವನನ್ನುದ್ದೇಶಿಸಿ ಘೋರ ತಪಸ್ಸನ್ನಾಚರಿಸಿದನು.

೫. ವೃತ್ರನ ಸಂಹಾರದಿಂದುಂಟಾದ ಪಾಪದ ನಿವಾರಣೆಗಾಗಿ ಶುದ್ಧವಾದ ಒಮ್ಮನಸ್ಸಿನಿಂದ ಶಿವನ ಆರಾಧನೆಯಲ್ಲಿ ಆಸಕ್ತನಾದನು.



CC-0. Jangamwadi Math Collection. Digitized by eGangotri

ತಪಸಾ ಚ ತದಾ ಶಂಭುಸ್ತೋಷಿತಃ ಶಶಿಶೇಖರಃ ।
ತತ್ರಾಜಗಾಮ ಜಟಿಲೋ ಭಸ್ಮಾಂಗೋ ವೃಷಭಧ್ವಜಃ ॥ ೬ ॥
ಖಟ್ವಾಂಗೀ ಪಂಚವಕ್ತ್ರಶ್ಚ ದಶಬಾಹುಸ್ತ್ರಿಲೋಚನಃ ।
ಗಂಗಾಧರೋ ವೃಷಾರೂಢೋ ಭೂತಪ್ರೇತಾದಿವೇಷ್ಟಿತಃ ॥ ೭ ॥
ಸುಪ್ರಸನ್ನಃ ಸುರಶ್ರೇಷ್ಠಃ ಕೃಪಾಲುರ್ವರದಾಯಕಃ ।
ತದಾ ಹೃಷ್ಟಮನಾ ದೇವೋ ದೇವೇಂದ್ರಮಿದಮೂಚಿವಾನ್ ॥ ೮ ॥

ಹರ ಉವಾಚ :—

ಯತ್ತ್ವಂ ಯಾಚಯಸೇ ದೇವ ತದಹಂ ಪ್ರದದಾಮಿ ತೇ ॥ ೯ ॥

ಇಂದ್ರ ಉವಾಚ :—

ಯದಿ ತುಷ್ಟೋಽಸಿ ದೇವೇಶ ಕೃಪಾಸಿಂಧೋ ಮಹೇಶ್ವರ ।
ಬ್ರಹ್ಮಹತ್ಯಾ ಹಿ ಮಾಂ ದೇವ ಉದ್ವೇಜಯತಿ ನಿತ್ಯಶಃ ॥ ೧೦ ॥
ವೃತ್ರಾಽಸುರಸ್ಯ ಹನನೇ ಜಾತಂ ಪಾಪಂ ಸುರೋತ್ತಮ ।
ತತ್ಪಾಪಂ ನಾಶಯ ವಿಭೋ ಮಮ ದುಃಖಪ್ರದಂ ಸದಾ ॥ ೧೧ ॥

ಹರ ಉವಾಚ :—

ಧರ್ಮಾರಣ್ಯೇ ಸುರಪತೇ ಬ್ರಹ್ಮಹತ್ಯಾ ನ ಪೀಡಯೇತ್ ।
ಹತ್ಯಾ ಗವಾಂ ದ್ವಿಜಾತೀನಾಂ ಬಾಲಾನಾಂ ಯೋಷಿತಾಮಪಿ ॥ ೧೨ ॥

---

೬. ಆಗ ಅವನ ತಪಸ್ಸಿಗೆ ಮೆಚ್ಚಿದ ಚಂದ್ರಮೌಳೀಶ್ವರನು ಜಟಾಧಾರಿಯಾಗಿ ವೃಷಭವನ್ನೇರಿ ಭಸ್ಮವನ್ನು ಹಚ್ಚಿಕೊಂಡು ಅಲ್ಲಿಗೆ ಬಂದನು.

೭–೯. ಖಟ್ವಾಂಗಧಾರಿಯೂ, ಐದುಮುಖವುಳ್ಳವನೂ, ಹತ್ತು ತೋಳುಗಳುಳ್ಳವನೂ, ಮುಕ್ಕಣ್ಣನೂ, ಭಾಗೀರಥಿಯನ್ನು ಧರಿಸಿದವನೂ, ವೃಷಭವನ್ನೇರಿದವನೂ, ಭೂತಪ್ರೇತಾದಿಗಳಿಂದ ಸುತ್ತುವರಿಯಲ್ಪಟ್ಟವನೂ, ಪ್ರಸನ್ನನೂ, ದೇವೋತ್ತಮನೂ, ದಯಾಲುವೂ, ವರವನ್ನು ಕೊಡುವವನೂ ಆಗಿರುವ ಮಹೇಶ್ವರನು ಸಂತೋಷಗೊಂಡು ಆ ದೇವರಾಜನನ್ನು ಕುರಿತು ಈ ಮಾತನ್ನಾಡಿದನು :—ದೇವೇಂದ್ರ! ನೀನು ಯಾವುದನ್ನು ಬೇಡುವೆಯೊ, ಅದನ್ನು ಕೊಡುವೆನು.

೧೦–೧೧. ಇಂದ್ರನು ಹೇಳುತ್ತಾನೆ :–ಕರುಣಾಸಾಗರನಾದ ಓ ಮಹೇಶ್ವರ! ಬ್ರಹ್ಮಹತ್ಯಾದೋಷವು ನನ್ನನ್ನು ಪ್ರತಿದಿನವೂ ವ್ಯಥೆಪಡಿಸುತ್ತಿದೆ. ನೀನು ಮೆಚ್ಚಿದ್ದರೆ ವೃತ್ರಾಸುರನ ವಧೆಯಿಂದುಂಟಾಗಿ ಯಾವಾಗಲೂ ನನಗೆ ದುಃಖವನ್ನು ಕೊಡುತ್ತಿರುವ ಆ ಪಾಪವನ್ನು ನೀಗಿಸು.

೧೨. ಹರನು ಹೇಳುತ್ತಾನೆ :—ಸುರೇಂದ್ರ! ಈ ಧರ್ಮಾರಣ್ಯದಲ್ಲಿ ಗೋವುಗಳು, ಬ್ರಾಹ್ಮಣರು, ಬಾಲಕರು, ಹೆಂಗಸರು ಇವರನ್ನು ಕೊಲ್ಲುವುದರಿಂದ ಉಂಟಾದ ಪಾಪವೂ ಪೀಡಿಸುವುದಿಲ್ಲ.

CC-0. Jangamwadi Math Collection. Digitized by eGangotri

ವಚನಾನ್ಮಮ ದೇವೇಂದ್ರ ಬ್ರಹ್ಮಣಃ ಕೇಶವಸ್ಯ ಚ ।
ಯಮಸ್ಯ ವಚನಾಜ್ಜಿಷ್ಣೋ ಹತ್ಯಾ ನೈವಾಽತ್ರ ತಿಷ್ಠತಿ ।
ಪ್ರವಿಶ್ಯ ತ್ವಂ ಮಹಾರಾಜ ಅತೋಽತ್ರ ಸ್ನಾನಮಾಚರ ॥ ೧೩ ॥

ಇಂದ್ರ ಉವಾಚ :–

ಯದಿ ತ್ವಂ ಮಮ ತುಷ್ಟೋಽಸಿ ಕೃಪಾಸಿಂಧೋ ಮಹೇಶ್ವರ ।
ಮನ್ನಾಮ್ನಾ ಚ ಮಹಾದೇವ ಸ್ಥಾಪಿತೋ ಭವ ಶಂಕರ ॥ ೧೪ ॥
ತಥೇತ್ಯುಕ್ತ್ವಾ ಮಹಾದೇವಃ ಸುಪ್ರಸನ್ನೋ ಹರಸ್ತದಾ ।
ದರ್ಶಯಾಮಾಸ ತತ್ರೈವ ಲಿಂಗಂ ಪಾಪಪ್ರಣಾಶನಂ ॥ ೧೫ ॥
ಕೂರ್ಮಪೃಷ್ಠಾತ್ಸಮುತ್ಪಾದ್ಯ ಆತ್ಮಯೋಗೇನ ಶಂಭುನಾ ।
ಸ್ಥಿತಸ್ತತ್ರೈವ ಶ್ರೀಕಂಠಃ ಕಾಲತ್ರಯವಿದೋ ವಿದುಃ ॥ ೧೬ ॥
ವೃತ್ರಹತ್ಯಾಸಮುತ್ರಸ್ತದೇವರಾಜಸ್ಯ ಸನ್ನಿಧೌ ।
ಇಂದ್ರೇಶ್ವರಸ್ತದಾ ತತ್ರ ಧರ್ಮಾಽರಣ್ಯೇ ಸ್ಥಿತೋ ನೃಪ ॥ ೧೭ ॥
ಸರ್ವಪಾಪವಿಶುದ್ಧ್ಯರ್ಥಂ ಲೋಕಾನಾಂ ಹಿತಕಾಮ್ಯಯಾ ।
ಇಂದ್ರೇಶ್ವರಂ ತು ರಾಜೇಂದ್ರ ಪುಷ್ಪಧೂಪಾದಿಕೈಃ ಸದಾ ॥ ೧೮ ॥
ಪೂಜಯೇಚ್ಚ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಮಾಘಮಾಸೇ ವಿಶೇಷತಃ ॥ ೧೯ ॥

---

೧೩. ದೇವೇಂದ್ರ! ನನ್ನ ಮತ್ತು ಬ್ರಹ್ಮ, ವಿಷ್ಣು, ಯಮರ ಮಾತಿನಂತೆ ಇಲ್ಲಿ ಬ್ರಹ್ಮಹತ್ಯೆಯು ಇರುವುದಿಲ್ಲ. ಆದುದರಿಂದ ನೀನು ಇಲ್ಲಿ ಸ್ನಾನಮಾಡು.

೧೪. ಇಂದ್ರನು ಹೇಳುತ್ತಾನೆ:–ಕೃಪಾಳುವಾದ ಎಲೈ ಮಹೇಶ್ವರನೆ! ನೀನು ಸಂತುಷ್ಟನಾಗಿದ್ದರೆ ನನ್ನ ಹೆಸರಿನಿಂದ ಇಲ್ಲಿ ನೆಲೆಸು.

೧೫. ಮಹಾದೇವನು ಸಂತುಷ್ಟನಾಗಿ ಹಾಗೆಯೇ ಆಗಲೆಂದು ಅಲ್ಲಿಯೇ ಪಾಪನಾಶಕವಾದ ತನ್ನ ಲಿಂಗಮೂರ್ತಿಯನ್ನು ತೋರಿದನು.

೧೬. ಮಹೇಶ್ವರನು ಆತ್ಮಯೋಗದಿಂದ ಆದಿಕೂರ್ಮನ ಬೆನ್ನಿನಿಂದೆದ್ದು ಅಲ್ಲಿ ನೆಲೆಸಿರುವನೆಂದು ತ್ರಿಕಾಲಜ್ಞಾನಿಗಳು ತಿಳಿದಿರುವರು.

೧೭. ಆಗ ಇಂದ್ರೇಶ್ವರನು ಆ ಧರ್ಮಾರಣ್ಯದಲ್ಲಿ ಬ್ರಹ್ಮಹತ್ಯೆಯಿಂದ ಭಯಗೊಂಡ ಇಂದ್ರನ ಹತ್ತಿರ ನಿಂತನು.

೧೮–೨೦. ನರನು ಜನರಿಗೆ ಹಿತವನ್ನುಂಟುಮಾಡಲಿಚ್ಛೆಯಿಂದ ಸಕಲ ಪಾಪಗಳ ಶುದ್ಧಿಗಾಗಿ ಇಂದ್ರೇಶ್ವರನನ್ನು ಪುಷ್ಪಧೂಪಾದಿಗಳಿಂದ ಯಾವಾಗಲೂ ಭಕ್ತಿಯಿಂದ ಪೂಜಿಸಿದರೆ ಸಕಲ ದುರಿತಗಳಿಂದಲೂ ಮುಕ್ತನಾಗುವನು. ಮಾಘ ಮಾಸದ ಅಷ್ಟಮೀ ಮತ್ತು ಚತುರ್ದಶಿಗಳಲ್ಲಿ ಸಕಲ ಪಾಪಗಳ ಶುದ್ಧಿಗಾಗಿ ಆರಾಧಿಸಿದರೆ ಶಿವಲೋಕದಲ್ಲಿ ಪೂಜ್ಯನಾಗುವನು. ಆ ಇಂದ್ರೇಶ್ವರನ ಮುಂದೆ

CC-0. Jangamwadi Math Collection. Digitized by eGangotri

ಸರ್ವಪಾಪವಿಶುದ್ಧ್ಯರ್ಥಂ ಶಿವಲೋಕೇ ಮಹೀಯತೇ ।
ನೀಲೋತ್ಸರ್ಗಂ ತು ಯೋ ಮರ್ತ್ಯಃ ಕರೋತಿ ಚ ತದಗ್ರತಃ ॥ ೨೦ ॥
ಉದ್ಧರೇತ್ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಂ ।
ಸಾಂಗರುದ್ರಜಪಂ ಯಸ್ತು ಚತುರ್ದಶ್ಯಾಂ ಕರೋತಿ ವೈ ॥ ೨೧ ॥
ಸರ್ವಪಾಪವಿಶುದ್ಧಾತ್ಮಾ ಲಭತೇ ಪರಮಂ ಪದಂ ॥ ೨೨ ॥
ಸೌವರ್ಣನಯನಂ ಕೃತ್ವಾ ಮಧ್ಯೇ ರತ್ನಸಮನ್ವಿತಂ ।
ಯೋ ದದಾತಿ ದ್ವಿಜಾತಿಭ್ಯ ಇಂದ್ರತೀರ್ಥೇ ತಥೋತ್ತಮೇ ॥ ೨೩ ॥
ಅಂಧತಾ ನ ಭವೇತ್ತಸ್ಯ ಜನ್ಮಾನಿ ಷಷ್ಟಿಸಂಖ್ಯಯಾ ।
ನಿರ್ಮಲತ್ವಂ ಸದಾ ತೇಷಾಂ ನಯನೇಷು ಪ್ರಜಾಯತೇ ।
ಮಹಾರೋಗಾಸ್ತಥಾ ಚಾಽನ್ಯೇ ಸ್ನಾತ್ವಾ ಯಾಂತಿ ತದಗ್ರತಃ ॥ ೨೪ ॥
ಪೂಜಿತೇ ಚೈಕಚಿತ್ತೇನ ಸರ್ವರೋಗಾತ್ಪ್ರಮುಚ್ಯತೇ ।
ಸ್ನಾತ್ವಾ ಕುಂಡೇ ನರೋ ಯಸ್ತು ಸಂತರ್ಪಯತಿ ಯಃ ಪಿತ್ರೂನ್ ॥ ೨೫ ॥
ತಸ್ಯ ತೃಪ್ತಾಃ ಸದಾ ಭೂಪ ಪಿತರಶ್ಚ ಪಿತಾಮಹಾಃ ।
ಯೇ ವೈ ಗ್ರಸ್ತಾ ಮಹಾರೋಗೈಃ ಕುಷ್ಠಾದ್ಯೈಶ್ಚೈವ ದೇಹಿನಃ ॥ ೨೬ ॥
ಸ್ನಾನಮಾತ್ರೇಣ ಸಂಶುದ್ಧಾ ದಿವ್ಯದೇಹಾ ಭವಂತಿ ತೇ ।
ಜ್ವರಾದಿ ಕಷ್ಟಮಾಪನ್ನಾ ನರಾಃ ಸ್ವಾತ್ಮಹಿತಾಯ ವೈ ॥ ೨೭ ॥
ಸ್ನಾನಮಾತ್ರೇಣ ಸಂಶುದ್ಧಾ ದಿವ್ಯದೇಹಾ ಭವಂತಿ ತೇ ।
ಸ್ನಾತ್ವಾ ಚ ಪೂಜಯೇದ್ದೇವಂ ಮುಚ್ಯತೇ ಜ್ವರಬಂಧನಾತ್ ॥ ೨೮ ॥

---

ನರನು ನೀಲವೃಷೋತ್ಸರ್ಗವನ್ನು ಮಾಡಿದರೆ ಏಳು ಗೋತ್ರಗಳನ್ನೂ, ನೂರೊಂದು ಕುಲಗಳನ್ನೂ ಉದ್ಧಾರಮಾಡುವನು. ಚತುರ್ದಶೀ ದಿನ ರುದ್ರ ಜಪವನ್ನು ಸಾಂಗವಾಗಿ ಜಪಿಸಿದವನು ಸಮಸ್ತ ದುರಿತ ಮುಕ್ತನಾಗಿ ಉತ್ತಮ ಸ್ಥಾನವನ್ನು ಪಡೆಯುವನು. ನಡುವೆ ರತ್ನವನ್ನಿಟ್ಟು ಚಿನ್ನದ ಕಣ್ಣನ್ನು ಮಾಡಿ ಈ ಉತ್ತಮವಾದ ಇಂದ್ರತೀರ್ಥದಲ್ಲಿ ಬ್ರಾಹ್ಮಣರಿಗೆ ದಾನಮಾಡಿದರೆ ಅವರಿಗೆ ಅರುವತ್ತು ಜನ್ಮಗಳಲ್ಲಿ ಕುರುಡುತನವಿಲ್ಲದೆ ಕಣ್ಣು ಶುದ್ಧವಾಗಿರುವುದು. ಆ ಇಂದ್ರೇಶ್ವರನ ಮುಂದೆ ಮಿಂದು ಏಕಮನಸ್ಸಿನಿಂದ ಅವನನ್ನು ಪೂಜಿಸಿದರೆ ಸಮಸ್ತ ರೋಗಗಳಿಂದಲೂ ಮುಕ್ತನಾಗುವನು. ಈ ಕುಂಡದಲ್ಲಿ ಮಿಂದು ಪಿತೃ ತರ್ಪಣಗೈದರೆ ಅವನ ಪಿತೃಪಿತಾಮಹಾದಿಗಳು ತೃಪ್ತಿಗೊಳ್ಳುವರು. ಕುಷ್ಠಾದಿ ಮಹಾರೋಗಪೀಡಿತರೂ ಸ್ನಾನಮಾತ್ರದಿಂದ ಶುದ್ಧರಾಗಿ ದಿವ್ಯ ದೇಹವನ್ನು ಪಡೆಯುವರು. ಜ್ವರಾದಿಗಳಿಂದ ಕಷ್ಟಪಡುತ್ತಿರುವ ಮನುಷ್ಯರು ತಮ್ಮ ಹಿತಕ್ಕಾಗಿ ಇಲ್ಲಿ ಮಿಂದರೆ ಶುದ್ಧರಾಗಿ ದಿವ್ಯದೇಹವುಳ್ಳವರಾಗುವರು. ಇಲ್ಲಿ ಮಿಂದು ಇಂದ್ರೇಶ್ವರನನ್ನು ಅರ್ಚಿಸಿದರೆ ದಿನಕ್ಕೆ, ಎರಡು ದಿನಗಳಿಗೆ, ಮೂರು

CC-0. Jangamwadi Math Collection. Digitized by eGangotri

ಏಕಾಽಹಿಕಂ ದ್ವ್ಯಾಹಿಕಂ ಚ ಚಾತುರ್ಥಂ ವಾ ತೃತೀಯಕಂ ।
ವಿಷಮಜ್ವರಪೀಡಾ ಚ ಮಾಸಪಕ್ಷಾದಿಕಂ ಜ್ವರಂ ॥ ೨೯ ॥
ಇಂದ್ರೇಶ್ವರಪ್ರಸಾದಾಚ್ಚ ನಶ್ಯತೇ ನಾಽತ್ರ ಸಂಶಯಃ ।
ವಿಜ್ವರೋ ಜಾಯತೇ ನೂನಂ ಸತ್ಯಂ ಸತ್ಯಂ ಚ ಭೂಪತೇ ॥ ೩೦ ॥
ವಂಧ್ಯಾ ಚ ದುರ್ಭಗಾ ನಾರೀ ಕಾಕವಂಧ್ಯಾ ಮೃತಪ್ರಜಾ ।
ಮೃತವತ್ಸಾ ಮಹಾದುಷ್ಟಾ ಸ್ನಾತ್ವಾ ಕುಂಡೇ ಶಿವಾಽಗ್ರತಃ ।
ಪೂಜಯೇದೇಕಚಿತ್ತೇನ ಸ್ನಾನಮಾತ್ರೇಣ ಶುದ್ಧ್ಯತಿ ॥ ೩೧ ॥
ಏವಂವಿಧಾಂಶ್ಚ ಬಹುಶೋ ವರಾನ್ದತ್ವಾ ಪಿನಾಕಧೃಕ್ ।
ಗತೋಽಸೌ ಸ್ವಪುರಂ ಪಾರ್ಥ ಸೇವ್ಯಮಾನಃ ಸುರಾಽಸುರೈಃ ॥ ೩೨ ॥
ತತಃ ಶಕ್ರೋ ಮಹಾತೇಜಾ ಗತೋ ವೈ ಸ್ವಪುರಂ ಪ್ರತಿ ।
ಜಯಂತೇನಾಽಪಿ ತತ್ರೈವ ಸ್ಥಾಪಿತಂ ಲಿಂಗಮುತ್ತಮಂ ॥ ೩೩ ॥
ಜಯಂತಸ್ಯ ಹರಸ್ತುಷ್ಟಸ್ತಸ್ಮಿಲ್ಲಿಂಗೇ ಸ್ತುತಃ ಸದಾ ।
ತ್ರಿಕಾಲಂ ಪುತ್ರಸಂಯುಕ್ತಃ ಪೂಜನಾರ್ಥಂ ಸುರೇಶ್ವರಃ ॥ ೩೪ ॥
ಆಯಾತಿ ಚ ಮಹಾಬಾಹೋ ತ್ಯಕ್ತ್ವಾ ಸ್ಥಾನಂ ಸ್ವಕಂ ಹಿ ವೈ ।
ಏತತ್ಸರ್ವಂ ಸಮಾಖ್ಯಾತಂ ಸರ್ವಸೌಖ್ಯಪ್ರದಾಯಕಂ ॥ ೩೫ ॥

---

ದಿನಗಳಿಗೆ, ನಾಲ್ಕು ದಿನಗಳಿಗೆ, ಪಕ್ಷಕ್ಕೆ, ತಿಂಗಳಿಗೆ ಒಂದಾವೃತ್ತಿ ಬರುತ್ತಿರುವ ವಿಷಮ ಜ್ವರದ ಪೀಡೆಯು ಇಂದ್ರೇಶ್ವರನ ಅನುಗ್ರಹದಿಂದ ನಿಶ್ಚಯವಾಗಿಯೂ ಮಾಯವಾಗುವುದು.

೩೧. ಬಂಜೆಯೂ, ಮಕ್ಕಳು ಸಾಯುವವಳೂ, ಅತಿದುಷ್ಟಳೂ ಆಗಿರುವ ನಾರಿಯು ಇಲ್ಲಿ ಇಂದ್ರೇಶ್ವರನ ಮುಂದೆ ಸ್ನಾನಮಾಡಿ ಅವನನ್ನು ಒಮ್ಮನಸ್ಸಿನಿಂದ ಅರ್ಚಿಸಿದರೆ ಅವಳು ದೋಷರಹಿತಳಾಗುವಳು.

೩೨. ಯುಧಿಷ್ಠಿರ! ಪಿನಾಕಪಾಣಿಯಾದ ಶಿವನು ಇಂತಹ ಅನೇಕ ವರಗಳನ್ನಿತ್ತು ದೇವದಾನವರಿಂದ ಸೇವಿಸಲ್ಪಡುತ್ತ ತನ್ನ ನಗರಕ್ಕೆ ಹೋದನು.

೩೩. ಬಳಿಕ ಶಕ್ರನು ತನ್ನ ಪಟ್ಟಣಕ್ಕೆ ಹೋದನು. ಅವನ ತನಯನಾದ ಜಯಂತನೂ ಅಲ್ಲಿಯೇ ಶಿವಲಿಂಗವನ್ನು ಸ್ಥಾಪಿಸಿರುವನು.

೩೪–೩೫. ಜಯಂತನು ಆ ಲಿಂಗದಲ್ಲಿ ಸನ್ನಿಹಿತನಾದ ಹರನನ್ನು ಸ್ತುತಿಸಲು ಅವನು ಸಂತುಷ್ಟನಾದನು. ದೇವರಾಜನು ತ್ರಿಕಾಲದಲ್ಲಿಯೂ ಮಗನೊಡನೆ ತನ್ನ ಸ್ಥಾನವನ್ನು ತ್ಯಜಿಸಿ ಈ ಹರನ ಪೂಜೆಗಾಗಿ ಇಲ್ಲಿಗೆ ಬರುತ್ತಾನೆ. ಸಕಲ ಸೌಖ್ಯಪ್ರದವಾದ ಈ ಆಖ್ಯಾನವನ್ನು ಸಂಪೂರ್ಣವಾಗಿ ನಾನು ನಿನಗೆ ಹೇಳಿದ್ದೇನೆ.

CC-0. Jangamwadi Math Collection. Digitized by eGangotri

ಇಂದ್ರೇಶ್ವರೇ ತು ಯತ್ಪುಣ್ಯಂ ಜಯಂತೇಶಸ್ಯ ಪೂಜನಾತ್ ।
ತದೇವಾಪ್ನೋತಿ ರಾಜೇಂದ್ರ ಸತ್ಯಂ ಸತ್ಯಂ ನ ಸಂಶಯಃ ॥ ೩೬ ॥
ಸ್ನಾತ್ವಾ ಕುಂಡೇ ಮಹಾರಾಜ ಸಂಪೂಜ್ಯೈಕಾಗ್ರಮಾನಸಃ ।
ಸರ್ವಪಾಪವಿಶುದ್ಧಾತ್ಮಾ ಇಂದ್ರಲೋಕೇ ಮಹೀಯತೇ ॥ ೩೭ ॥
ಯಃ ಶೃಣೋತಿ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ।
ಸರ್ವಾನ್ಕಾಮಾನವಾಪ್ನೋತಿ ಜಯಂತೇಶಪ್ರಸಾದತಃ ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ ''ಇಂದ್ರೇಶ್ವರ ಜಯಂತೇಶ್ವರಮಹಿಮಾನುವರ್ಣನಂ'' ನಾಮೈಕೋನವಿಂಶೋಽಧ್ಯಾಯಃ

---

೩೬. ಮಹಾರಾಜ! ಇಂದ್ರೇಶ್ವರನ ಪೂಜೆಯಿಂದಾಗುವ ಪುಣ್ಯವೇ ಜಯಂತೇಶ್ವರನ ಪೂಜೆಯಿಂದ ನಿಶ್ಚಯವಾಗಿಯೂ ಲಭಿಸುವುದು.

೩೭. ಅರಸ! ಈ ಕುಂಡದಲ್ಲಿ ಸ್ನಾನಮಾಡಿ ಏಕಾಗ್ರ್ಯದಿಂದ ಇಂದ್ರೇಶ್ವರನನ್ನು ಪೂಜಿಸಿದರೆ ನರನು ಸಕಲಪಾಪನಿರ್ಮುಕ್ತನಾಗಿ ಇಂದ್ರಲೋಕದಲ್ಲಿ ಪೂಜ್ಯನಾಗುವನು.

೩೮. ಇದನ್ನು ಭಕ್ತಿಯಿಂದ ಕೇಳುವ ನರನು ಜಯಂತೇಶ್ವರನ ಅನುಗ್ರಹದಿಂದ ಸಕಲ ಪಾಪಮುಕ್ತನಾಗಿ ಸಕಲೇಷ್ಟಗಳನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ ''ಇಂದ್ರೇಶ್ವರ ಜಯಂತೇಶ್ವರ ಮಹಿಮಾನುವರ್ಣನ''ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ವಿಂಶೋಽಧ್ಯಾಯಃ

## ಧರಾಕ್ಷೇತ್ರವರ್ಣನಂ

ವ್ಯಾಸ ಉವಾಚ :—

ಅತಃ ಪರಂ ಪ್ರವಕ್ಷ್ಯಾಮಿ ಶಿವತೀರ್ಥಮನುತ್ತಮಂ ।
ಯತ್ರಾಽಸೌ ಶಂಕರೋ ದೇವಃ ಪುನರ್ಜನ್ಮಧರೋಽಭವತ್ ॥ ೧ ॥
ಕೀಲಿತೋ ದೇವದೇವೇಶಃ ಶಂಕರಶ್ಚ ತ್ರಿಲೋಚನಃ ।
ಗಿರಿಜಯಾ ಮಹಾಭಾಗ ಪಾತಿತೋ ಭೂಮಿಮಂಡಲೇ ॥ ೨ ॥
ಛಲಿತೋ ಮುಹ್ಯಮಾನಸ್ತು ದಿವಾರಾತ್ರಿಂ ನ ವೇತ್ತಿ ಚ ।
ಪುಂಸ್ತ್ರೀನಪುಂಸಕಾಶ್ಚೈವ ಜಡೀಭೂತಸ್ತ್ರಿಲೋಚನಃ ॥ ೩ ॥
ಕಲ್ಪಾಂತಮಿವ ಸಂಜಾತಂ ತದಾ ತಸ್ಮಿಂಶ್ಚ ಕೀಲಿತೇ ।
ಪಾರ್ವತ್ಯಾ ಸಹಸಾ ತಸ್ಯ ಕೃತಂ ಕೀಲನಕಂ ತದಾ ॥ ೪ ॥

ಯುಧಿಷ್ಠಿರ ಉವಾಚ :—

ಏತದಾಶ್ಚರ್ಯಮತುಲಂ ವಚನಂ ಯತ್ತ್ವಯೋದಿತಂ ।
ಯೋ ಗುರುಃ ಸರ್ವದೇವಾನಾಂ ಯೋಗಿನಾಂ ಚೈವ ಸರ್ವದಾ ॥ ೫ ॥
ಪಾರ್ವತ್ಯಾ ಕೀಲಿತಃ ಕಸ್ಮಾನ್ನಷ್ಟವೃತ್ತಿಃ ಶಿವಃ ಕಥಂ ।
ಕಾರಣಂ ಕಥ್ಯತಾಂ ತತ್ರ ಪರಂ ಕೌತೂಹಲಂ ಹಿ ಮೇ ॥ ೬ ॥

---

## ಕನ್ನಡದ ಅನುವಾದ

### ಧರಾಕ್ಷೇತ್ರವರ್ಣನ

೧. ವ್ಯಾಸನು ಹೇಳುತ್ತಾನೆ :—ಇನ್ನುಮುಂದೆ, ಶಂಕರನು ಪುನರ್ಜನ್ಮವನ್ನು ಪಡೆದ ಅತ್ಯುತ್ತಮವಾದ ಶಿವತೀರ್ಥವನ್ನು ನಿನಗೆ ತಿಳಿಸುವೆನು.

೨. ಪಾರ್ವತಿಯು ಶಿವನನ್ನು ಭೂಮಿಯಲ್ಲಿ ಕೆಡವಿ ಇಲ್ಲಿ ಬಂಧಿಸಿರುವಳು.

೩. ಪಾರ್ವತಿಯಿಂದ ಮೋಸಗೊಳಿಸಲ್ಪಟ್ಟ ಶಿವನು ಮೋಹಗೊಂಡು ಸ್ತಬ್ಧನಾಗಿ ಪುರುಷಾದಿ ಜಾತಿಗಳನ್ನೂ, ಹಗಲು ರಾತ್ರಿಗಳನ್ನೂ ತಿಳಿಯು ತ್ತಿರಲಿಲ್ಲ.

೪. ಪಾರ್ವತಿಯಿಂದ ಆಲೋಚಿಸದೆ ಶಿವನು ಬಂಧಿಸಲ್ಪಟ್ಟು ಅಲ್ಲಿರುವಾಗ ಕಲ್ಪಾಂತದಂತಾಯಿತು.

೫-೬. ಯುಧಿಷ್ಠಿರನು ಕೇಳುತ್ತಾನೆ:—ನೀನು ಹೇಳಿದುದು ಅತ್ಯಂತ ಆಶ್ಚರ್ಯಕರವಾದುದು. ಸಕಲ ದಿವಿಜರಿಗೂ ಯೋಗಿಗಳಿಗೂ ಗುರುವಾದ ಶಂಕರನು ಪಾರ್ವತಿಯಿಂದ ಏಕೆ ಬದ್ಧನಾದನು? ಅವನು ಕಾರ್ಯವಿಲ್ಲದೆ ನಿಶ್ಚಲನಾದುದು ಹೇಗೆ? ಇದರ ಕಾರಣವನ್ನು ಹೇಳುವವನಾಗು. ನನಗೆ ಬಹಳ ಕುತೂಹಲವುಂಟಾಗಿದೆ.

CC-0. Jangamwadi Math Collection. Digitized by eGangotri

ವ್ಯಾಸ ಉವಾಚ :—

ಮಂತ್ರೌಘಾ ವಿವಿಧಾ ರಾಜಂ ಛಂಕರೇಣ ಪ್ರಕಾಶಿತಾಃ ।
ಪಾರ್ವತ್ಯಗ್ರೇ ಮಹಾರಾಜ ಅಥರ್ವಣೋಪವೇದಜಾಃ ॥ ೭ ॥
ಶಾಕಿನೀ ಡಾಕಿನೀ ಚೈವ ಕಾಕಿನೀ ಹಾಕಿನೀ ತಥಾ ।
ಏಕಿನೀ ಲಾಕಿನೀ ಹ್ಯೇತಾಃ ಷಡ್ಭೇದಾಸ್ತತ್ರ ಕೀರ್ತಿತಾಃ ॥ ೮ ॥
ಬೀಜಾನ್ಯುದ್ಧೃತ್ಯ ವೈ ತಾಭ್ಯೋ ಮಾಲಾ ಚೈಕಾ ವೃತಾ ಕೃತಾ ।
ಶಂಭುನಾ ಕಥಿತಾ ಚೈವ ಪಾರ್ವತ್ಯಗ್ರೇ ನೃಪೋತ್ತಮ ॥ ೯ ॥
ತೈಶ್ಚೈವ ಅಷ್ಟಾ ಭವತಿ ಮಂತ್ರೋದ್ಧಾರಃ ಕೃತಸ್ತು ಸಾ ।
ಸಾಧಯೇತ್ಸಾ ಮಹಾದುಷ್ಟಾ ಶಾಕಿನೀ ಪ್ರಮದಾನಘೇ ॥ ೧೦ ॥

ಶ್ರೀಪಾರ್ವತ್ಯುವಾಚ :—

ಪ್ರಕಾಶಿತಾಸ್ತ್ವಯಾ ನಾಥ ಭೇದಾ ಹ್ಯೇತೇ ಷಡೇವ ಹಿ ।
ಷಡ್ವಿಧಾಃ ಶಕ್ತಯೋ ನಾಥ ಅಗಮ್ಯಾ ಯೋಗಮಾಲಿನೀಃ ।
ಷಡ್ವಿಧೋಕ್ತಂ ತ್ವಯೈಕೇನ ಕೂಟಾತ್ಕೃತಂ ವದಸ್ವ ಮಾಂ ॥ ೧೧ ॥

ಶ್ರೀ ಮಹಾದೇವ ಉವಾಚ :—

ಅಪ್ರಕಾಶೋ ಮಹಾದೇವಿ ದೇವಾಽಸುರೈಸ್ತು ಮಾನವೈಃ ॥ ೧೨ ॥

---

೭. ವ್ಯಾಸನು ಹೇಳುತ್ತಾನೆ :—ಮಹಾರಾಜ! ಶಂಕರನು ಪಾರ್ವತಿಯ ಮುಂದೆ ಅಥರ್ವವೇದದ ಉಪವೇದದಲ್ಲಿ ಹೇಳಿರುವ ಮಂತ್ರಗಳ ಸಮೂಹವನ್ನು ಪ್ರಕಾಶಗೊಳಿಸಿದನು.

೮. ಅವು ಶಾಕಿನೀ, ಡಾಕಿನೀ, ಕಾಕಿನೀ, ಹಾಕಿನೀ, ಏಕಿನೀ, ಲಾಕಿನೀ ಎಂದು ಆರು ವಿಧವಾಗಿರುವುವು.

೯. ಶಂಕರನು ಆ ಮಂತ್ರಗಳಿಂದ ಮೂಲಮಂತ್ರಗಳನ್ನು ತೆಗೆದು ಮಂತ್ರ ಮಾಲೆಯನ್ನು ಮಾಡಿ ಪಾರ್ವತಿಯ ಮುಂದೆ ಹೇಳಿದನು.

೧೦. "ಎಲೌ ನಿರ್ದುಷ್ಟಳಾದ ಅಂಗನೆಯೆ! ಈ ಮಂತ್ರಗಳ ಆರಿಕೆಯಲ್ಲಿ ಎಂಟನೆಯವಳೂ, ಅತ್ಯಂತ ದುಷ್ಟಳೂ ಆದ ಶಾಕಿನಿಯು ಕಾರ್ಯವನ್ನು ಸಾಧಿಸುವಳು" ಎಂದನು.

೧೧. ಶ್ರೀಪಾರ್ವತಿಯು ಕೇಳುತ್ತಾಳೆ :—ನಾಥ! ನೀನು ಆರು ವಿಧವಾದ ಶಕ್ತಿದೇವತೆಗಳನ್ನು ಮಾತ್ರ ಹೇಳಿರುವೆ. ಆ ಮಂತ್ರಗಳಿಂದ ಕೂಟಮಂತ್ರವನ್ನು ಮಾಡಿದ ಕ್ರಮವನ್ನು ಹೇಳು.

೧೨. ಶ್ರೀ ಮಹಾದೇವನು ಹೇಳುತ್ತಾನೆ :—ಮಹಾದೇವಿ! ಇದು ದೇವ ದಾನವ ಮಾನವರಾರಿಗೂ ಪ್ರಕಾಶಗೊಳಿಸತಕ್ಕುದಲ್ಲ.

CC-0. Jangamwadi Math Collection. Digitized by eGangotri

ಪಾರ್ವತ್ಯುವಾಚ :—

ನಮಸ್ತೇ ಸರ್ವರೂಪಾಯ ನಮಸ್ತೇ ವೃಷಭಧ್ವಜ ।
ಜಟಿಲೇಶ ನಮಸ್ತುಭ್ಯಂ ನೀಲಕಂಠ ನಮೋಽಸ್ತುತೇ ॥ ೧೩ ॥
ಕೃಪಾಸಿಂಧೋ ನಮಸ್ತುಭ್ಯಂ ನಮಸ್ತೇ ಕಾಲರೂಪಿಣೇ ।
ಏತೈಶ್ಚ ಬಹುಭಿರ್ವಾಕ್ಯೈಃ ಕೋಮಲೈಃ ಕರುಣಾನಿಧಿಂ ॥ ೧೪ ॥
ತೋಷಯಿತ್ವಾಽದ್ರಿತನಯಾ ದಂಡವತ್ಪ್ರಣಿಪತ್ಯ ಚ ।
ಜಗ್ರಾಹ ಪಾದಯುಗಲಂ ತಾಂ ಪ್ರೋವಾಚ ದಯಾಪರಃ ॥ ೧೫ ॥
ಕಿಮರ್ಥಂ ಸ್ತೂಯಸೇ ಭದ್ರೇ ಯಾಚ್ಯತಾಂ ಮನಸೀಪ್ಸಿತಂ ॥ ೧೬ ॥

ಪಾರ್ವತ್ಯುವಾಚ :—

ಸಮಾಹಾರಂ ಚ ಸಧ್ಯಾನಂ ಕಥಯಸ್ವ ಸವಿಸ್ತರಂ ।
ಅಸಂದೇಹಮಶೇಷಂ ಚ ಯದ್ಯಹಂ ವಲ್ಲಭಾ ತವ ॥ ೧೭ ॥

ಶ್ರೀರುದ್ರ ಉವಾಚ :—

ನ ಪ್ರಕಾಶ್ಯಂ ತ್ವಯಾ ದೇವಿ ಸಮಾಹಾರೋದ್ಭವಂ ಫಲಂ ।
ಸರ್ವಂ ತತ್ತ್ವಮಹಂ ವಕ್ಷ್ಯೇ ಮಂತ್ರಕೂಟಾದ್ಯಮೇವ ಹಿ ॥ ೧೮ ॥
ಮಾಯಾಬೀಜಂ ತು ಸರ್ವೇಷಾಂ ಕೂಟಾನಾಂ ಹಿ ವರಾನನೇ ।
ಸರ್ವೇಷಾಂ ಮಧ್ಯಮೋ ವರ್ಣೋ ಬಿಂದುನಾದಾದಿಶೋಭಿತಃ ॥ ೧೯ ॥

---

೧೩. ಪಾರ್ವತಿಯು ಹೇಳಿದಳು :—"ಸರ್ವಸ್ವರೂಪನೂ, ವೃಷಭಧ್ವಜನೂ, ಜಟಾಧಾರಿಯೂ ಆಗಿರುವ ಓ ನೀಲಕಂಠ! ನಿನಗೆ ನಮಸ್ಕಾರವು.

೧೪–೧೫. ದಯಾಸಮುದ್ರನೂ, ಕಾಲರೂಪನೂ ಆಗಿರುವ ನಿನಗೆ ವಂದನೆ." ಪಾರ್ವತಿಯು ಕೋಮಲವಾದ ಈ ವಾಕ್ಯಗಳಿಂದ ದಯಾಲುವಾದ ಶಿವನನ್ನು ಸಂತೋಷಗೊಳಿಸಿ ಸಾಷ್ಟಾಂಗಪ್ರಣಾಮಮಾಡಿ ಎರಡು ಕಾಲುಗಳನ್ನೂ ಹಿಡಿದು-ಕೊಳ್ಳಲು ದಯಾಳುವಾದ ಅವನು ಇಂತೆಂದನು.

೧೬. "ಮಂಗಳಕರಳೆ! ನನ್ನನ್ನು ಏಕೆ ಸ್ತುತಿಸುತ್ತಿರುವೆ? ನಿನ್ನ ಇಷ್ಟಾರ್ಥ ವನ್ನು ಬೇಡಿಕೊ."

೧೭. ಪಾರ್ವತಿಯು ಕೇಳುತ್ತಾಳೆ:—"ನಾಥ! ನಾನು ನಿನ್ನ ಸತಿಯಾಗಿ ದ್ದರೆ ಆ ಕೂಟಮಂತ್ರವನ್ನು ಧ್ಯಾನಸಹಿತವಾಗಿಯೂ, ಸಂದೇಹವಿಲ್ಲದಂತೆಯೂ ಸಂಪೂರ್ಣವಾಗಿಯೂ ನನಗೆ ತಿಳಿಯಹೇಳು."

೧೮. ಶ್ರೀರುದ್ರನು ಹೇಳುತ್ತಾನೆ:—"ದೇವಿ! ನಾನು ನಿನಗೆ ಸಮಾಹಾರ ದಿಂದುಂಟಾಗುವ ಫಲವನ್ನೂ, ಮಂತ್ರಕೂಟವೇ ಮೊದಲಾಗುಳ್ಳ ತತ್ತ್ವವನ್ನೂ ಹೇಳುವೆನು.

೧೯–೨೨. ಸಕಲ ಕೂಟಗಳಿಗೂ ಮಧ್ಯಮ ವರ್ಣವು ಬಿಂದು, ನಾದಾದಿ

CC-0. Jangamwadi Math Collection. Digitized by eGangotri

ವಹ್ನಿಬೀಜಂ ಸವಾತಂ ಚ ಕೂರ್ಮಬೀಜಸಮನ್ವಿತಂ ।
ಆದಿತ್ಯಪ್ರಭವಂ ಬೀಜಂ ಶಕ್ತಿಬೀಜೋದ್ಭವಂ ಸದಾ ॥ ೨೦ ॥
ಏತತ್ಕೂಟಂ ಚಾಽದ್ಯಬೀಜಂ ದ್ವಿತೀಯಂ ಚ ವಿಭೋರ್ಮತಂ ।
ತೃತೀಯಂ ಚಾಽಗ್ನಿಬೀಜಂ ತು ಸಂಯುಕ್ತಂ ಬಿಂದುನೇಂದುನಾ ॥ ೨೧ ॥
ಚತುರ್ಥಂ ಯುಕ್ತಂ ಶೇಷೇಣ ಬ್ರಹ್ಮಬೀಜಮೃಷಿಸ್ತಥಾ ।
ಪಂಚಮಂ ಕಾಲಬೀಜಂ ಚ ಷಷ್ಠಂ ಪಾರ್ಥಿವಬೀಜಕಂ ॥ ೨೨ ॥
ಸಪ್ತಮೋ ಚಾಽಷ್ಟಮೋ ಬಾಹ್ಯಂ ನೃಸಿಂಹೇನ ಸಮನ್ವಿತಂ ।
ನವಮೋ ದ್ವಿತೀಯಮೇಕಂ ಚ ದಶಮೋ ಚಾಽಷ್ಟಕೂಟಕಂ ॥ ೨೩ ॥
ವಿಪರೀತಂ ತಯೋರ್ಬೀಜಂ ರುದ್ರಾಽಕ್ಷೇ ವರಚಾರಿಣಿ ।
ಚತುರ್ದಶೇ ಚತುರ್ಥ್ಯರ್ಥಂ ಪೃಥ್ವೀಬೀಜೇನ ಸಂಯುತಂ ॥ ೨೪ ॥
ಕೂಟಾಃ ಶೇಷಾಽಕ್ಷರಾಃ ಕೇಚಿದ್ರಕ್ಷಿತಾ ಮೇನಕಾತ್ಮಜೇ ।
ಸ ಪಪಾತ ಯದೋರ್ವ್ಯಾಂ ಹಿ ಶಿವಪತ್ನೀ ತದಾ ನೃಪ ॥ ೨೫ ॥
ರಾಮೇಣಾಶ್ವಾಸಿತಾ ತತ್ರ ಪ್ರಹಸಂಸ್ತ್ರಿಪುರಾಽಂತಕಃ ।
ಭದ್ರೇ ಯಸ್ಮಾತ್ತ್ವಯಾಪನ್ನಂ ಜೀವಶಕ್ತಿರ್ಭವಿಷ್ಯತಿ ॥ ೨೬ ॥
ಮಾರಣೇ ಮೋಹನೇ ವಶ್ಯೇ ಆಕರ್ಷಣೇ ಚ ಕ್ಷೋಭಣೇ ।
ಯಂ ಯಂ ಕಾಮಯತೇ ನೂನಂ ತತ್ತತ್ಸಿದ್ಧಿರ್ಭವಿಷ್ಯತಿ ॥ ೨೭ ॥
ಇತಿ ಶ್ರುತ್ವಾ ತದಾ ದೇವೀ ದುಷ್ಟಚಿತ್ತಾ ಶುಚಿಸ್ಮಿತಾ ।
ಕೂಟಶೇಷಾಸ್ತತೋ ವೀರಾಃ ಪ್ರೋಕ್ತಾಸ್ತಸ್ಯೈ ತು ಶಂಭುನಾ ॥ ೨೮ ॥

---

ಗಳಿಂದ ಪ್ರಕಾಶಮಾನವಾದುದು. ಮಾಯಾ, ವಹ್ನಿ, ವಾತ, ಕೂರ್ಮ, ಆದಿತ್ಯ, ಶಕ್ತಿಬೀಜಗಳೊಂದಾಗಿ ಈ ಕೂಟದ ಮೊದಲನೆ ಬೀಜವಾಗುವುದು. ವಿಭುಬೀಜವು ಎರಡನೆಯದು. ಇಂದುಬಿಂದುವಿನಿಂದ ಸಹಿತವಾದ ಅಗ್ನಿ ಬೀಜವು ಮೂರನೆಯದು. ಶೇಷ, ಬ್ರಹ್ಮ, ಋಷಿ ಬೀಜವು ನಾಲ್ಕನೆಯದು. ಕಾಲಬೀಜವು ಐದನೆಯದು. ಪಾರ್ಥಿವಬೀಜವು ಆರನೆಯದು."

೨೩–೨೫. ಶಿವನು ಹೀಗೆ ಇನ್ನೂ ಕೆಲವು ಬೀಜಾಕ್ಷರಗಳನ್ನು ಹೇಳಿ "ಕೆಲವು ಅಕ್ಷರಗಳನ್ನು ನಿನಗೆ ಹೇಳುವುದಿಲ್ಲವೆಂ"ದನು. ಆಗ ಪಾರ್ವತಿಯು ನೆಲದಮೇಲೆ ಬಿದ್ದು ಆತನಿಗೆ ವಂದಿಸಿದಳು.

೨೬–೨೭. ಹರನು ನಗುತ್ತ ಅವಳನ್ನು ಸಮಾಧಾನಗೊಳಿಸಿ ನೀನು ಈ ರೀತಿಯೆಣಿಸಿದುದರಿಂದ ನಿನ್ನ ಅಪೇಕ್ಷೆಯಂತೆ ಕೊಲ್ಲುವುದು, ಮೋಹಗೊಳಿಸುವುದು, ವಶಮಾಡಿಕೊಳ್ಳುವುದು, ಸೆಳೆಯುವುದು, ಕ್ಷೋಭೆಗೊಳಿಸುವುದು—ಇವುಗಳಲ್ಲಿ ಮಂತ್ರಸಿದ್ಧಿಯನ್ನು ಪಡೆಯುವೆ" ಎಂದನು.

೨೮–೨೯. ಈ ಮಾತನ್ನು ಕೇಳಿ ದುಷ್ಟಮನಸ್ಸುಳ್ಳ ಆ ದೇವಿಯು ನಕ್ಕಳು.

CC-0. Jangamwadi Math Collection. Digitized by eGangotri

ಉವಾಚ ಚ ಕೃಪಾಸಿಂಧುಃ ಸಾಧಯಸ್ವ ಯಥಾವಿಧಿ ।
ಕೈಲಾಸಾತ್ತು ಹರಸ್ತತ್ರ ಧರ್ಮಾರಣ್ಯಂ ಗತೋ ಭೃಶಂ ॥ ೨೯ ॥
ಜ್ಞಾತ್ವಾ ದೇವೀ ಯಯೌ ತತ್ರ ಯತ್ರಾಽಸೌ ವೃಷಭಧ್ವಜಃ ।
ತತ್ಕ್ಷಣಾತ್ಪತಿತೋ ಭೂಮೌ ಧರ್ಮಾರಣ್ಯೇ ನೃಪೋತ್ತಮ ॥ ೩೦ ॥
ಜಟಾಚಂದ್ರೋರಗಾಃ ಶೂಲಂ ವೃಷಭಾದ್ಯಾಯುಧಾನಿ ವೈ ।
ಮುಂಡಮಾಲಾ ಚ ಕೌಪೀನಂ ಕಪಾಲಂ ಬ್ರಹ್ಮಣಸ್ತು ವೈ ॥ ೩೧ ॥
ಗಂತಾ ಗಣಾಶ್ಚ ಸರ್ವತ್ರ ಭೂತಪ್ರೇತಾ ದಿಶೋದಶ ।
ವಿಸಂಜ್ಞಂ ಚ ಸ್ವಮಾತ್ಮಾನಂ ಜ್ಞಾತ್ವಾ ದೇವೋ ಮಹೇಶ್ವರಃ ॥ ೩೨ ॥
ಸ್ವೇದಜಾಸ್ತು ಸಮುತ್ಪನ್ನಾ ಗಣಾಃ ಕೂಟಾದಯಸ್ತಥಾ ।
ಪಂಚಕೂಟಾನ್ಸಮುತ್ಪಾದ್ಯ ತಸ್ಮಾತ್ತದಾಧಮೂಲಿನೇ ॥ ೩೩ ॥
ಸಾಧಕಾಸ್ತೇ ಮಹಾರಾಜ ಜಪಹೋಮಪರಾಯಣಾಃ ।
ಪ್ರೇತಾಸನಾಸ್ತು ತೇ ಸರ್ವೇ ಕಾಲಕೂಟೋಪರಿ ಸ್ಥಿತಾಃ ॥ ೩೪ ॥
ಕಥಯಂತಿ ಸ್ವಮಾತ್ಮಾನಂ ಯೇನ ಮೋಕ್ಷಃ ಪಿನಾಕಿನಃ ।
ತತಃ ಕಷ್ಟಸಮಾವಿಷ್ಟಾ ಗೌರೀ ವಹ್ನಿಭಯಾತುರಾ ॥ ೩೫ ॥
ಸಭಾಜಿತಃ ಶಿವಸ್ತೈಶ್ಚ ಗೌರೀ ಹ್ರೀಣಾತ್ವಧೋಮುಖೀ ।
ತಪಸ್ತೇಪೇ ಚ ತತ್ರಸ್ಥಾ ಶಂಕರಾದೇಶಕಾರಿಣೀ ॥ ೩೬ ॥

---

ಶಂಕರನು ಅವಳಿಗೆ ಉಳಿದ ಕೂಟಮಂತ್ರಗಳ ರಹಸ್ಯವನ್ನು ತಿಳಿಸಿ ಕ್ರಮವರಿತು ಸಾಧಿಸೆಂದು ಹೇಳಿ ತಾನು ಕೈಲಾಸದಿಂದ ಧರ್ಮಾರಣ್ಯಕ್ಕೆ ತೆರಳಿದನು.

೩೦. ದೇವಿಯು ಇದನ್ನು ತಿಳಿದು ಶಿವನೆಡೆಗೆ ಹೋದಳು. ಕೂಡಲೆ ಮಹೇಶ್ವರನು ಭೂಮಿಯಲ್ಲಿ ಬಿದ್ದನು.

೩೧–೩೩. ಜಟೆ, ಚಂದ್ರ, ಸರ್ಪ, ಶೂಲ, ವೃಷಭ, ಆಯುಧಗಳು, ಮುಂಡಮಾಲೆ, ಕೌಪೀನ, ಬ್ರಹ್ಮಕಪಾಲ, ಗಣಗಳು, ಭೂತಪ್ರೇತಗಳು ಇವು ದಶದಿಕ್ಕುಗಳಿಗೆ ಹಾರಿಹೋದುವು. ಶಂಕರನು ನಿಶ್ಚೇತನನಾದ ತನ್ನನ್ನು ತಿಳಿದು ಬೆವರಿನಿಂದ ಹುಟ್ಟುವ ಐದು ಕೂಟಗಣಗಳನ್ನು ಸೃಷ್ಟಿಸಿದನು.

೩೪–೩೫. ಕಾರ್ಯಸಾಧಕರಾದ ಆ ಗಣಗಳು ಕಾಲಕೂಟ ವಿಷದಮೇಲೆ ಪ್ರೇತಾಸನಗಳಲ್ಲಿ ಕುಳಿತು ಜಪಹೋಮನಿರತರಾಗಿ ತಮ್ಮಲ್ಲಿಯೇ ಶಿವನಿಗೆ ಈ ಆಪತ್ತು ಹೇಗೆ ಪರಿಹಾರವಾಗುವುದೆಂದು ಯೋಚಿಸಿದರು. ಅನಂತರ ಗೌರಿಯು ಬೆಂಕಿಯ ಭಯದಿಂದ ಪೀಡಿತಳಾಗಿ ಕಷ್ಟಪಟ್ಟಳು.

೩೬. ಆ ಗಣಗಳು ಶಿವನನ್ನು ಸತ್ಕರಿಸಿದುವು. ಗೌರಿಯು ನಾಚಿಕೆಗೊಂಡು ತಲೆ ತಗ್ಗಿಸಿ ಅಲ್ಲಿದ್ದು ಶಂಕರನ ಅಪ್ಪಣೆಯನ್ನು ನೆರವೇರಿಸುವವಳಾಗಿ ತಪಸ್ಸನ್ನಾಚರಿಸಿದಳು.

CC-0. Jangamwadi Math Collection. Digitized by eGangotri

ಪಂಚಾಽಗ್ನಿಸೇವನಂ ಕೃತ್ವಾ ಧೂಮ್ರಪಾನಮಧೋಮುಖೀ ।
ಕೂಟಾಽಕ್ಷರೈಃ ಸ್ತುತಸ್ತೈಸ್ತು ತೋಷಿತೋ ವೃಷಭಧ್ವಜಃ ॥ ೩೭ ॥
ಧರಾಕ್ಷೇತ್ರಮಿದಂ ರಾಜನ್ಪಾಪಘ್ನಂ ಸರ್ವಕಾಮದಂ ।
ದೇವಮಜ್ಜನಕಂ ಶುಭ್ರಂ ಸ್ಥಾನಕೇಽಸ್ಮಿನ್ವಿರಾಜತೇ ॥ ೩೮ ॥
ಆಶ್ವಿನೇ ಕೃಷ್ಣಪಕ್ಷೇ ಚ ಚತುರ್ದಶ್ಯಾಂ ದಿನೇ ನೃಪ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಸರ್ವಪಾಪೈಃ ಪ್ರಮುಚ್ಯತೇ ॥ ೩೯ ॥
ಪೂಜಯಿತ್ವಾ ಚ ದೇವೇಶಮುಪೋಷ್ಯ ಚ ವಿಧಾನತಃ ।
ಶಾಕಿನೀ ಡಾಕಿನೀ ಚೈವ ವೇತಾಲಾಃ ಪಿತರೋ ಗ್ರಹಾಃ ॥ ೪೦ ॥
ಗ್ರಹಾ ಧಿಷ್ಣ್ಯಾ ನ ಪೀಡ್ಯಂತೇ ಸತ್ಯಂ ಸತ್ಯಂ ವರಾನನೇ ।
ಸಾಂಗಂ ರುದ್ರಜಪಂ ತತ್ರ ಕೃತ್ವಾ ಪಾಪೈಃ ಪ್ರಮುಚ್ಯತೇ ॥ ೪೧ ॥
ನಶ್ಯಂತಿ ತ್ರಿವಿಧಾ ರೋಗಾಃ ಸತ್ಯಂ ಸತ್ಯಂ ಚ ಭೂಪತೇ ।
ಏತತ್ಸರ್ವಂ ಮಯಾಖ್ಯಾತಂ ದೇವಮಜ್ಜನಕಂ ಶೃಣು ॥ ೪೨ ॥
ಅಶ್ವಮೇಧಸಹಸ್ರೈಸ್ತು ಕೃತೈಸ್ತು ಭೂರಿದಕ್ಷಿಣೈಃ ।
ತತ್ಫಲಂ ಸಮವಾಪ್ನೋತಿ ಶ್ರೋತಾ ಶ್ರಾವಯಿತಾ ನರಃ ॥ ೪೩ ॥

---

೩೭. ಪಂಚಾಗ್ನಿ ಮಧ್ಯದಲ್ಲಿ ಹೊಗೆಯನ್ನು ಕುಡಿಯುತ್ತ ಅಧೋಮುಖಳಾಗಿ ಆ ಕೂಟಾಕ್ಷರಗಳಿಂದ ಶಿವನನ್ನು ದೇವಿಯು ಸ್ತುತಿಸಿ ಸಂತೋಷಗೊಳಿಸಿದಳು.

೩೮. ಈ ಧರಾಕ್ಷೇತ್ರವು ಪಾಪವನ್ನು ನೀಗಿಸುವುದೂ, ಸಕಲೇಷ್ಟಾರ್ಥಗಳನ್ನು ಕೊಡುವುದೂ ಆಗಿರುವುದು. ಇಲ್ಲಿ ದೇವಮಜ್ಜನಕವೆಂಬ ಶುದ್ಧವಾದ ಸರಸ್ಸು ಕಂಗೊಳಿಸುತ್ತಿದೆ.

೩೯. ಆಶ್ವಯುಜಮಾಸದ ಕೃಷ್ಣಪಕ್ಷ ಚತುರ್ದಶಿಯ ದಿನ ಇಲ್ಲಿ ಮಿಂದು ನೀರನ್ನು ಪಾನಮಾಡಿದವನು ಸಕಲ ಪಾಪಮುಕ್ತನಾಗುವನು.

೪೦–೪೨. ದೇವೇಶನಾದ ಶಂಕರನನ್ನು ಉಪವಾಸವಿದ್ದು ವಿಧಿಯಂತೆ ಪೂಜಿಸಿದವನಿಗೆ ನಿಜವಾಗಿಯೂ ಶಾಕಿನೀಡಾಕಿನ್ಯಾದಿ ಗ್ರಹಗಳ ಪೀಡೆಯು ಸಂಭವಿಸುವುದಿಲ್ಲ. ಅಂಗನ್ಯಾಸ ಸಹಿತವಾಗಿ ರುದ್ರಜಪವನ್ನು ಮಾಡಿದವನು ಸಕಲ ಪಾಪಮುಕ್ತನಾಗುವನು. ಮತ್ತು ಅವನ ತ್ರಿವಿಧ ರೋಗಗಳೂ ಮಾಯವಾಗುವುವು. ಹೀಗೆ ದೇವಮಜ್ಜನಕ ತೀರ್ಥದ ವಿಷಯವನ್ನು ಹೇಳಿರುವೆನು.

೪೩. ಈ ಉಪಾಖ್ಯಾನವನ್ನು ಕೇಳಿದ ಮತ್ತು ಹೇಳಿದ ಮಾನವನು ಬಹುವಾಗಿ ದಕ್ಷಿಣೆಗಳನ್ನಿತ್ತು ನೆರವೇರಿಸಿದ ಸಾವಿರಾರು ಅಶ್ವಮೇಧಯಾಗಗಳ ಫಲವನ್ನು ಪಡೆಯುವನು.

CC-0. Jangamwadi Math Collection. Digitized by eGangotri

ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಧನಮಾಪ್ನುಯಾತ್ ।
ಆಯುರಾರೋಗ್ಯಮೈಶ್ವರ್ಯಂ ಲಭತೇ ನಾಽತ್ರ ಸಂಶಯಃ ॥ ೪೪ ॥
ಮನೋವಾಕ್ಕಾಯಜನಿತಂ ಪಾತಕಂ ತ್ರಿವಿಧಂ ಚ ಯತ್ ।
ತತ್ಸರ್ವಂ ನಾಶಮಾಯಾತಿ ಸ್ಮರಣಾತ್ಕೀರ್ತನಾನ್ನೃಪ ॥ ೪೫ ॥
ಧನ್ಯಂ ಯಶಸ್ಯಮಾಯುಷ್ಯಂ ಸುಖಸಂತಾನದಾಯಕಂ ।
ಮಾಹಾತ್ಮ್ಯಂ ಶೃಣುಯಾದ್ವತ್ಸ ಸರ್ವಸೌಖ್ಯಾನ್ವಿತೋ ಭವೇತ್ ॥ ೪೬ ॥
ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ।
ಸರ್ವಯಜ್ಞೈಶ್ಚ ಯತ್ಪುಣ್ಯಂ ಜಾಯತೇ ಶ್ರವಣಾನ್ನೃಪ ॥ ೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಧರಾಕ್ಷೇತ್ರ ವರ್ಣನಂ" ನಾಮ ವಿಂಶೋಽಧ್ಯಾಯಃ

---

೪೪. ಮಕ್ಕಳಿಲ್ಲದವನು ಮಕ್ಕಳನ್ನೂ, ಧನವಿಲ್ಲದವನು ಧನವನ್ನೂ, ಆಯುಸ್ಸು, ಆರೋಗ್ಯ ಐಶ್ವರ್ಯಗಳನ್ನೂ ಪಡೆಯುವನು; ಸಂದೇಹವಿಲ್ಲ.

೪೫. ಈ ಧರಾಕ್ಷೇತ್ರವನ್ನು ಸ್ಮರಿಸುವುದರಿಂದಲೂ ಅದರ ಮಾಹಾತ್ಮ್ಯೆಯನ್ನು ಹೇಳುವುದರಿಂದಲೂ ಮನಸ್ಸು, ಮಾತು, ದೇಹಗಳಿಂದುಂಟಾದ ತ್ರಿವಿಧ ಪಾಪವು ನಾಶವಾಗುವುದು.

೪೬. ಮಗು! ಧನ, ಕೀರ್ತಿ, ಆಯುಷ್ಯ, ಸೌಖ್ಯ ಸಂತತಿಗಳನ್ನೀಯುವ ಈ ಮಾಹಾತ್ಮ್ಯೆಯನ್ನು ಕೇಳಿದವನು ಸಕಲ ಸೌಖ್ಯಗಳನ್ನೂ ಪಡೆಯುವನು.

೪೭. ಇದರ ಶ್ರವಣದಿಂದ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವೂ, ಸಕಲ ದಾನಗಳ ಫಲವೂ, ಸಕಲ ಯಜ್ಞಗಳನ್ನು ಮಾಡಿದ ಪುಣ್ಯವೂ ಉಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಧರಾಕ್ಷೇತ್ರವರ್ಣನ"ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕವಿಂಶೋಽಧ್ಯಾಯಃ

### ಶ್ರೀಮಾತಾಕಥಿತ ನಾಮಗೋತ್ರಪ್ರವರಕೃತ ದೇವ್ಯವಟಂಕ ಕಥನಂ

ವ್ಯಾಸ ಉವಾಚ :—

ತಯಾ ಚೋತ್ಪಾದಿತಾ ರಾಜಂಛರೀರಾತ್ಕುಲದೇವತಾಃ ।
ಭಟ್ಟಾರಿಕಾ ೧ ತಥಾ ಛತ್ರಾ ೨ ಓವಿಕಾ ೩ ಜ್ಞಾನಜಾ ತಥಾ ೪ ॥ ೧ ॥
ಭದ್ರಕಾಲೀ ಚ ೫ ಮಾಹೇಶೀ ೬ ಸಿಂಹೋರೀ ೭ ಧನಮರ್ದನೀ ೮ । ಗಾತ್ರಾ
೯ ಶಾಂತಾ ೧೦ ಶೇಷದೇವೀ ೧೧ ವಾರಾಹೀ ೧೨ ಭದ್ರಯೋಗಿನೀ ೧೩॥೨॥
ಯೋಗೇಶ್ವರೀ ೧೪ ಮೋಹಲಜ್ಜಾ ೧೫ ಕುಲೇಶೀ ೧೬ ಶಕುಲಾಚಿತಾ ೧೭ ।
ತಾರಣೀ ೧೮ ಕನಕಾನಂದಾ ೧೯ ಚಾಮುಂಡಾ ೨೦ ಚ ಸುರೇಶ್ವರೀ ೨೧॥೩॥
ದಾರಭಟ್ಟಾರಿಕೇತ್ಯಾ ೨೨ ದ್ಯಾ ಪ್ರತ್ಯೇಕಾ ಶತಧಾ ಪುನಃ ।
ಉತ್ಪನ್ನಾಃ ಶಕ್ತಯಸ್ತಿಸ್ರಸ್ತಸ್ಮಿನ್ನಾನಾರೂಪಾನ್ವಿತಾಃ ಶುಭಾಃ ।
ಅತಃ ಪರಂ ಪ್ರವಕ್ಷ್ಯಾಮಿ ಪ್ರವರಾಣ್ಯಥ ದೇವತಾಃ ॥ ೪ ॥
ಔಪಮನ್ಯವಸ ಗೋತ್ರ ಪ್ರವರ ೩ ಗೋತ್ರ ದೇವ್ಯಾಗಾತ್ರಾ ವಸಿಷ್ಠ ೧
ಭರದ್ವಾಜ ೨ ಇಂದ್ರಪ್ರಮದ ಕಾಶ್ಯಪಸಗೋತ್ರ ಶಗೋತ್ರ ದೇವ್ಯಾ
ಜ್ಞಾನಜಾ ೨ ಪ್ರವರ ೩ ಕಾಶ್ಯಪಃ ಅವತ್ಸಾರಃ ೨ ರೈಭ್ಯಃ ೩ ಮಾಂಡವ್ಯ
ಸಗೋತ್ರ ೩ ಗೋತ್ರಜಾದಾಭಧಾರಿಕಾ ೩ ಪ್ರವರ ೫ ಭಾರ್ಗವಚ್ಯವನಾ

---

### ಕನ್ನಡದ ಅನುವಾದ

#### ಶ್ರೀಮಾತಾಕಥಿತ ನಾಮಗೋತ್ರಪ್ರವರಕೃತ ದೇವ್ಯವಟಂಕ ಕಥನ

೧—೪. ಆ ಶ್ರೀಮಾತೆಯು ತನ್ನ ಶರೀರದಿಂದ ೧ ಭಟ್ಟಾರಿಕೀ ೨ ಛತ್ರಾ ೩ ಓವಿಕಾ ೪ ಜ್ಞಾನಜಾ ೫ ಭದ್ರಕಾಳೀ ೬ ಮಾಹೇಶೀ ೭ ಸಿಂಹೋರೀ ೮ ಧನಮರ್ದನೀ ೯ ಗಾತ್ರಾ ೧೦ ಶಾಂತಾ ೧೧ ಶೇಷದೇವೀ ೧೨ ವಾರಾಹೀ ೧೩ ಭದ್ರಯೋಗಿನೀ ೧೪ ಯೋಗೇಶ್ವರೀ ೧೫ ಮೋಹಲಜ್ಜಾ ೧೬ ಕುಲೇಶೀ ೧೭ ಶಕುಲಾಚಿತಾ ೧೮ ತಾರಣೀ ೧೯ ಕನಕಾನಂದಾ ೨೦ ಚಾಮುಂಡಾ ೨೧ ಸುರೇಶ್ವರೀ ೨೨ ದಾರಭಟ್ಟಾರಿಕಾ ಮೊದಲಾದ ದೇವಿಯರನ್ನು ಸೃಜಿಸಿದಳು. ಇವರಲ್ಲಿ ಒಬ್ಬೊಬ್ಬರಿಗೂ ನಾನಾರೂಪವುಳ್ಳ ನೂರು ಮಂದಿ ದೇವತೆಗಳು ಹುಟ್ಟಿದರು. ಇನ್ನು ಮುಂದೆ ಪ್ರವರ ಮತ್ತು ದೇವತೆಗಳನ್ನು ಹೇಳುವೆನು.

೫. ಔಪಮನ್ಯವಗೋತ್ರರಿಗೆ ಗೋತ್ರದೇವೀ—ಗಾತ್ರಾ, ಪ್ರವರ—ವಸಿಷ್ಠ, ಭರದ್ವಾಜ. ಇಂದ್ರಪ್ರಮದಕಾಶ್ಯಪಸಗೋತ್ರದವರಿಗೆ ಗೋತ್ರದೇವೀ—ಜ್ಞಾನಜಾ, ಪ್ರವರ—ಕಾಶ್ಯಪ, ಅವತ್ಸಾರ, ರೈಭ್ಯ. ಮಾಂಡವ್ಯಗೋತ್ರದವರಿಗೆ ಗೋತ್ರದೇವೀ—ದಾರಭಟ್ಟಾರಿಕಾ, ಪ್ರವರ—ಭಾರ್ಗವ, ಚ್ಯವನ, ಅತ್ರಿ, ಅವೀ,

CC-0. Jangamwadi Math Collection. Digitized by eGangotri

ಅತ್ರಿಅವೀ ಜಮದಗ್ನಿಃ ೫ ಕುಶಿಕ ಸಗೋತ್ರಸ್ಯ ಜಾ ತಾರಿಣೀ ೬ ಮಹಾಬಲಾ ಪ್ರವರ ೩ ವಿಶ್ವಾಮಿತ್ರ ದೇವರಾಜ ಉದ್ದಾಲಕ ೬ ಶೌನಕಸಗೋತ್ರ ೭ ಗೋತ್ರದೇವೀ ೭ ಶಾಂತಾ ಪ್ರವರ ೩ ಭಾರ್ಗವಾಣ್ಯೈನಹೋತ್ರಗಾರ್ತ್ಸಮದ ೩ ಕೃಷ್ಣಾತ್ರೇಯಸಗೋತ್ರವೀಗೋತ್ರ ದೇವೀ ಭದ್ರಯೋಗಿನೀ ೮ ಪ್ರವರ ೩ ಆತ್ರೇಯ ಅರ್ಚನಾನಸಶ್ಯಾವಾಶ್ವ ೩ ಗಾರ್ಗ್ಯಾಯಣಸಗೋತ್ರ ಗೋತ್ರಜಾ ಶಾಂತಾ ಪ್ರವರ ೫ ಭಾರ್ಗವಚ್ಯವನ ಆಪ್ನವಾನ್ ಅವೀಜಮ ದಗ್ನಿಃ ೧೦ ಗಾರ್ಗಾಯಣ ಗೋತ್ರ ಗೋತ್ರಜಾ ಜ್ಞಾನಜಾ ಪ್ರವರ ೫ ಕಾಶ್ಯಪ ಅವತ್ಸಾರಶಾಂಡಿಲ ಅಸಿತದೇವಲ ೧೧ ಗಾಂಗೇಯಸಗೋತ್ರ ದೇವಾಶಾಂತಾ ದ್ವಾರವಾಸಿನೀ ಪ್ರವರ ೩ ಗಾರ್ಗ್ಯಗಾರ್ಗಿಶಂಖಲಿಖಿತ ೧೨ ಪೈಂಗ್ಯಸಗೋತ್ರಜಾ ಜ್ಞಾನಜಾ ಶೇಷಲಉಥಪ್ರವರ ಆಂಗಿರಸ ಆಂಬರೀಷ ಯೌವನಾಶ್ವ ೧೩ ವತ್ಸಸಗೋತ್ರ ಗೋತ್ರಜಾ ಜ್ಞಾನಜಾ ಪ್ರವರ ೫ ಭಾರ್ಗವಚ್ಯಾವನ ಆಪ್ನುವಾನ ಜಾರ್ವಪುರೋಧಸಃ ೧೪ ವಾತ್ಸಸಗೋತ್ರ ಗೋತ್ರಜಾ ಜ್ಞಾನಜಾ ಪ್ರವರ ೫ ಭಾರ್ಗವಚ್ಯಾವನ ಆಪ್ನವಾನ್ ಔರ್ವ ಪುರೋಧಸಃ ೧೫ ವಾತ್ಸ್ಯ ಸಗೋತ್ರಸ್ಯ ಗೋತ್ರಜಾ ಶೀಹರೀ ಪ್ರವರ ೫ ಭಾರ್ಗವಚ್ಯಾವನ ಆಪ್ನುವಾನ್ ಔರ್ವಪುರೋಧಸಃ ೧೬ ಶ್ಯಾಮಾಯನಸ ಗೋತ್ರಸ್ಯ ಗೋತ್ರಜಾ ಶೀಹರೀ ಪ್ರವರ ಭಾರ್ಗವಚ್ಯಾವನ ಆಪ್ನುವಾನ್ ಅವಿ ಜಮದಗ್ನಿಃ ೧೭ ಧಾರಣಸಗೋತ್ರಸ್ಯ ಗೋತ್ರಜಾ ಛತ್ರಜಾ ಪ್ರವರ ೩

---

ಜಮದಗ್ನಿ. ಕುಶಿಕಗೋತ್ರದವರಿಗೆ ಗೋತ್ರದೇವೀ–ತಾರಣೀ, ಪ್ರವರ–ವಿಶ್ವಾಮಿತ್ರ, ದೇವರಾತ, ಉದ್ದಾಲಕ. ಶೌನಕಗೋತ್ರದವರಿಗೆ ಗೋತ್ರದೇವೀ–ಶಾಂತಾ, ಪ್ರವರ–ಭಾರ್ಗವ, ಆಣ್ಯೈನಹೋತ್ರ, ಗಾರ್ತ್ಸಮದ. ಆತ್ರೇಯಸ ಗೋತ್ರದವರಿಗೆ ಗೋತ್ರದೇವೀ–ಭದ್ರಯೋಗಿನೀ, ಪ್ರವರ–ಆತ್ರೇಯ, ಅರ್ಚನಾನಸ, ಶ್ಯಾವಾಶ್ವ. ಗಾರ್ಗ್ಯಾಯಣಗೋತ್ರದವರಿಗೆ ಗೋತ್ರದೇವೀ–ಶಾಂತಾ, ಪ್ರವರ–ಭಾರ್ಗವ, ಚ್ಯಾವನ, ಆಪ್ನವಾನ, ಅವೀ, ಜಮದಗ್ನಿ. ಗಾರ್ಗಾಯಣಗೋತ್ರದವರಿಗೆ ಗೋತ್ರದೇವೀ ಜ್ಞಾನಜಾ, ಪ್ರವರ–ಕಾಶ್ಯಪ, ಅವತ್ಸಾರ, ಶಾಂಡಿಲ, ಅಸಿತ, ದೇವಲ. ಗಾಂಗೇಯಗೋತ್ರದವರಿಗೆ ಗೋತ್ರ ದೇವೀ–ಶಾಂತಾ, ಪ್ರವರ–ಗಾರ್ಗಿ, ಅಗಾರ್ಗಿ, ಶಂಖ, ಲಿಖಿತ. ಪೈಂಗ್ಯಗೋತ್ರ ದವರಿಗೆ ಗೋತ್ರದೇವೀ–ಜ್ಞಾನಜಾ, ಪ್ರವರ–ಆಂಗಿರಸ, ಆಂಬರೀಷ, ಯೌವನಾಶ್ವ. ವತ್ಸಗೋತ್ರದವರಿಗೆ ಗೋತ್ರದೇವೀ–ಜ್ಞಾನಜಾ, ಪ್ರವರ–ಭಾರ್ಗವ, ಚ್ಯಾವನ, ಆಪ್ನವಾನ, ಔರ್ವ, ಪುರೋಧಸ. ವಾತ್ಸಗೋತ್ರ ದವರಿಗೆ ಗೋತ್ರದೇವೀ–ಜ್ಞಾನಜಾ, ಪ್ರವರ–ಭಾರ್ಗವ, ಚ್ಯಾವನ, ಆಪ್ನವಾನ್, ಔರ್ವ, ಪುರೋಧಸಃ. ವಾತ್ಸ್ಯಗೋತ್ರದವರಿಗೆ ಗೋತ್ರದೇವೀ–ಶೀಹರೀ, ಪ್ರವರ–ಭಾರ್ಗವ, ಚ್ಯಾವನ, ಆಪ್ನುವಾನ್, ಔರ್ವ, ಪುರೋಧಸಃ. ಶ್ಯಾಮಾಯನಗೋತ್ರದವರಿಗೆ ಗೋತ್ರದೇವೀ–ಶೀಹರೀ, ಪ್ರವರ–ಭಾರ್ಗವ,

CC-0. Jangamwadi Math Collection. Digitized by eGangotri

ಅಗಸ್ತ್ಯ ದಾರ್ವಚ್ಯುತ ದಧ್ಯವಾಹನ ೧೮ ಕಾಶ್ಯಪ ಗೋತ್ರಸ್ಯ ಗೋತ್ರಜಾ ಚಾಮುಂಡಾ ಪ್ರವರ ೩ ಕಾಶ್ಯಪಸ್ಯಾವತ್ಸಾರ ನೈಧ್ರುವ ೧೯ ಭರದ್ವಾಜ ಗೋತ್ರಸ್ಯ ಗೋತ್ರಜಾ ಪಕ್ಷಿಣೀ ಪ್ರವರ ೩ ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ೨೨ ಮಾಂಡವ್ಯಸಗೋತ್ರಸ್ಯ ವತ್ಸಸ ವಾತ್ಸ್ಯಸ ವಾತ್ಸ್ಯಾಯನಸ ೪ ಸಾಮಾನ್ಯಲೌಗಾಕ್ಷಸಗೋತ್ರಸ್ಯ ಗೋತ್ರಜಾ ಭದ್ರಯೋಗಿನೀ ಪ್ರವರ ೩ ಕಾಶ್ಯಪ ವಸಿಷ್ಠ ಅವತ್ಸಾರ ೨೦ ಕೌಶಿಕ ಸಗೋತ್ರಸ್ಯ ಗೋತ್ರಜಾ ಪಕ್ಷಿಣೀ ಪ್ರವರ ೩ ವಿಶ್ವಾಮಿತ್ರ ಅಥರ್ವ ಭಾರದ್ವಾಜ ೨೧ ಸಾಮಾನ್ಯ ಪ್ರವರ ೧ ಪೈಂಗ್ಯಸ ಭರದ್ವಾಜ ೨ ಸಮಾನ ಪ್ರವರಾ ೨ ಲೌಗಾಕ್ಷ ಸ ಗಾರ್ಗ್ಯಾಯನಸ ಕಾಶ್ಯಪ ಕಶ್ಯಪ ೪ ಸಮಾನ ಪ್ರವರ ೩ ಕೌಶಿಕ ಕುಶಿಕಸಾಃ ೨ ಸಮಾನ ಪ್ರವರಃ ೪ ಔಪಮನ್ಯು ಲೌಗಾಕ್ಷಸ ೨ ಸಮಾನ ಪ್ರವರಾಃ ೫.

ಯಾವತಾಂ ಪ್ರವರೇಷ್ವೇಕೋ ವಿಶ್ವಾಮಿತ್ರೋಽನುವರ್ತತೇ ।
ನ ತಾವತಾಂ ಸಗೋತ್ರತ್ವಾದ್ವಿವಾಹಃ ಸ್ಯಾತ್ಪರಸ್ಪರಂ ॥ ೫ ॥
ತ್ಯಜೇತ್ಸಮಾನಪ್ರವರಾಂ ಸಗೋತ್ರಾಂ
ಮಾತುಃ ಸ ಪಿಂಡಾಮಚಿಕಿತ್ಸ್ಯರೋಗಾಂ ।
ಅಜಾತಲೋಮ್ನೀಂ ಚ ತಥಾ ನ ಪೂರ್ವಾಂ
ಸುತೇನ ಹೀನಸ್ಯ ಸುತಾಂ ಸುಕೃಷ್ಣಾಂ ॥ ೬ ॥

---

ಚ್ಯಾವನ, ಆಪ್ನುವಾನ್, ಅವಿ, ಜಮದಗ್ನಿ. ಧಾರಣಗೋತ್ರದವರಿಗೆ ಗೋತ್ರ ದೇವೀ–ಛತ್ರಜಾ, ಪ್ರವರ–ಅಗಸ್ತ್ಯ, ದಾರ್ವಚ್ಯುತ, ದಧ್ಯವಾಹನ. ಕಾಶ್ಯಪ ಗೋತ್ರದವರಿಗೆ ಗೋತ್ರದೇವೀ–ಚಾಮುಂಡಾ, ಪ್ರವರ–ಕಾಶ್ಯಪ, ಅವತ್ಸಾರ, ನೈಧ್ರುವ. ಭರದ್ವಾಜಗೋತ್ರದವರಿಗೆ ಗೋತ್ರದೇವೀ–ಪಕ್ಷಿಣೀ, ಪ್ರವರ–ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ. ಮಾಂಡವ್ಯಗೋತ್ರದವರಿಗೆ, ಪ್ರವರ–ವತ್ಸಸ, ವಾತ್ಸಸ, ವಾತ್ಸ್ಯಾಯನಸ. ಸಾಮಾನ್ಯಲೌಗಾಕ್ಷಗೋತ್ರದವರಿಗೆ ಗೋತ್ರದೇವೀ–ಭದ್ರಯೋಗಿನೀ, ಪ್ರವರ–ಕಾಶ್ಯಪ, ವಸಿಷ್ಠ, ಅವತ್ಸಾರ. ಕೌಶಿಕಗೋತ್ರದವರಿಗೆ ಗೋತ್ರದೇವೀ–ಪಕ್ಷಿಣೀ, ಪ್ರವರ–ವಿಶ್ವಾಮಿತ್ರ, ಅಥರ್ವ, ಭಾರದ್ವಾಜ. ಸಾಮಾನ್ಯ ಪ್ರವರದವರು–ಪೈಂಗ್ಯಸ, ಭರದ್ವಾಜರು. ಲೌಗಾಕ್ಷಸ, ಗಾರ್ಗ್ಯಾಯನಸ, ಕಶ್ಯಪ ಕಾಶ್ಯಪರು. ಕೌಶಿಕ, ಕುಶಿಕಸರು. ಔಪಮನ್ಯು, ಲೌಗಾಕ್ಷಸರು. ಎಷ್ಟು ಗೋತ್ರದವರ ಪ್ರವರಗಳಲ್ಲಿ ವಿಶ್ವಾಮಿತ್ರ ಪ್ರವರವು ಇರುವುದೊ, ಅವರು ಸಗೋತ್ರರಾದುದರಿಂದ ಅವರಲ್ಲಿ ಪರಸ್ಪರ ವಿವಾಹ ಮಾಡಕೂಡದು.

೬. ಸಮಾನಪ್ರವರಳೂ, ಸಗೋತ್ರಳೂ, ತಾಯಿಯ ಸಪಿಂಡಳೂ, ಚಿಕಿತ್ಸೆಮಾಡಲಾಗದ ರೋಗವುಳ್ಳವಳೂ, ರೋಮಗಳು ಹುಟ್ಟದಿರುವಳೂ, ಇನ್ನೊಬ್ಬನಿಗೆ ಮದುವೆಯಾದವಳೂ, ಗಂಡುಮಕ್ಕಳಿಲ್ಲದವನ ಮಗಳೂ,

CC-0. Jangamwadi Math Collection. Digitized by eGangotri

ಏಕ ಏವ ಋಷಿರ್ಯತ್ರ ಪ್ರವರೇಷ್ವನುವರ್ತತೇ ।
ತಾವತ್ಸಮಾನಗೋತ್ರತ್ವಮೃತೇ ಭೃಗ್ವಂಗಿರೋಗಣಾತ್ ॥ ೭ ॥
ಪಂಚಸು ತ್ರಿಷು ಸಾಮಾನ್ಯಾದವಿವಾಹಸ್ತ್ರಿಷು ದ್ವಯೋಃ ।
ಭೃಗ್ವಂಗಿರೋಗಣೇಷ್ವೇವಂ ಶೇಷೇಷ್ವೇಕೋಽಪಿ ವಾರಯೇತ್ ॥ ೮ ॥
ಸಮಾನಗೋತ್ರಪ್ರವರಾಂ ಕನ್ಯಾಮೂಢ್ವೋಪಗಮ್ಯ ಚ ।
ತಸ್ಯಾಮುತ್ಪಾದ್ಯ ಚಾಂಡಾಲಂ ಬ್ರಾಹ್ಮಣ್ಯಾದೇವ ಹೀಯತೇ ॥ ೯ ॥

॥ ಕಾತ್ಯಾಯನಃ ॥

ಪರಿಣೀಯ ಸಗೋತ್ರಾಂ ತು ಸಮಾನಪ್ರವರಾಂ ತಥಾ ।
ತ್ಯಾಗಂ ಕೃತ್ವಾ ದ್ವಿಜಸ್ತಸ್ಯಾಸ್ತತಶ್ಚಾಂದ್ರಾಯಣಂ ಚರೇತ್ ॥ ೧೦ ॥
ಉತ್ಸೃಜ್ಯ ತಾಂ ತತೋ ಭಾರ್ಯಾಂ ಮಾತೃವತ್ಪರಿಪಾಲಯೇತ್ ॥ ೧೧ ॥

॥ ಯಾಜ್ಞವಲ್ಕ್ಯಃ ॥

ಅರೋಗಿಣೀಂ ಭ್ರಾತೃಮತೀಮಸಮಾನಾರ್ಷಗೋತ್ರಜಾಂ ।
ಪಂಚಮಾತ್ಸಪ್ತಮಾದೂರ್ಧ್ವಂ ಮಾತೃತಃ ಪಿತೃತ ಸ್ತಥಾ ॥ ೧೨ ॥

---

ಅಚ್ಚ ಕಪ್ಪುಬಣ್ಣದವಳೂ ಆಗಿರುವ ಕನ್ಯೆಯನ್ನು ವಿವಾಹಮಾಡಿಕೊಳ್ಳ ಕೂಡದು.

೭. ಭೃಗ್ವಂಗಿರರ ಗುಂಪನ್ನು ಬಿಟ್ಟು ಪ್ರವರಗಳಲ್ಲಿ ಒಬ್ಬನೆ ಋಷಿಯು ಅನುವರ್ತಿಸಿದರೆ ಆ ಪ್ರವರದವರೆಲ್ಲ ಸಮಾನ ಗೋತ್ರರು.

೮. ಭೃಗ್ವಂಗಿರಗಣಗಳಲ್ಲಿಯೂ ಐದು ಪ್ರವರಗಳಲ್ಲಿ ಮೂರು ಪ್ರವರಗಳು ಸಮಾನವಾಗಿದ್ದರೂ, ಮೂರು ಪ್ರವರಗಳಲ್ಲಿ ಎರಡು ಪ್ರವರಗಳು ಸಮಾನವಾಗಿದ್ದರೂ ಸಗೋತ್ರರೇ ಆಗುವರು. ಉಳಿದ ಗೋತ್ರಗಳಲ್ಲಿ ಒಂದು ಪ್ರವರವು ಸಮಾನವಾಗಿದ್ದರೂ ಸಗೋತ್ರರೇ ಆಗುವರು.

೯. ಸಮಾನ ಗೋತ್ರ ಮತ್ತು ಪ್ರವರವುಳ್ಳ ಕನ್ಯೆಯನ್ನು ಮದುವೆಯಾಗಿ ಅವಳಲ್ಲಿ ಪುತ್ರನು ಜನಿಸಿದರೆ ಅವನು ಚಂಡಾಲನಾಗುವನು. ತಂದೆಯು ಬ್ರಾಹ್ಮಣ್ಯವನ್ನು ಕಳೆದುಕೊಳ್ಳುವನು.

೧೦–೧೧. ಕಾತ್ಯಾಯನ:—ಸಗೋತ್ರಳೂ, ಸಮಾನಪ್ರವರಳೂ ಆಗಿರುವ ಕನ್ಯೆಯನ್ನು ಮದುವೆಮಾಡಿಕೊಂಡರೆ ಅವಳನ್ನು ಬಿಟ್ಟು ಪ್ರಾಯಶ್ಚಿತ್ತಕ್ಕಾಗಿ ಚಾಂದ್ರಾಯಣ ವ್ರತವನ್ನಾಚರಿಸಬೇಕು. ಅವಳನ್ನು ಬಿಟ್ಟಬಳಿಕ ಅವಳನ್ನು ತಾಯಿಯಂತೆ ಪಾಲಿಸಬೇಕು.

೧೨. ಯಾಜ್ಞವಲ್ಕ್ಯ:—ತಾಯಿಯ ಕುಲದಲ್ಲಿ ಐದನೆ ತಲೆಯ ಮೇಲೂ, ತಂದೆಯ ಕುಲದಲ್ಲಿ ಏಳನೆ ತಲೆಯ ಮೇಲೂ ರೋಗವಿಲ್ಲದೆಯೂ, ಸಹೋದರನುಳ್ಳವಳೂ ಆಗಿರುವ ಸಮಾನ ಗೋತ್ರಪ್ರವರದವಳಲ್ಲದ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು.

CC-0. Jangamwadi Math Collection. Digitized by eGangotri

॥ ಅಸಮಾನಪ್ರವರ್ಕೈರ್ವಿವಾಹ ಇತಿ ಗೌತಮಃ ॥

ಯದ್ಯೇಕಂ ಪ್ರವರಂ ಭಿನ್ನಂ ಮಾತೃಗೋತ್ರ ವರಸ್ಯ ಚ ।
ತತ್ರೋದ್ವಾಹೋ ನ ಕರ್ತವ್ಯಃ ಸಾ ಕನ್ಯಾ ಭಗಿನೀ ಭವೇತ್ ॥ ೧೩ ॥
ದಾರಾಽಗ್ನಿಹೋತ್ರಸಂಯೋಗಂ ಕುರುತೇ ಯೋಽಗ್ರಜೇ ಸ್ಥಿತೇ ।
ಪರಿವೇತ್ತಾ ಸ ವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ ॥ ೧೪ ॥
ಸದಾ ಪೌನರ್ಭವಾ ಕನ್ಯಾ ವರ್ಜನೀಯಾ ಕುಲಾಽಧಮಾ ।
ವಾಚಾದತ್ತಾ ಮನೋದತ್ತಾ ಕೃತಕೌತುಕಮಂಗಲಾ ॥ ೧೫ ॥
ಉದಕಸ್ಪರ್ಶಿತಾ ಯಾ ಚ ಯಾ ಚ ಪಾಣಿಗೃಹೀತಕಾ ।
ಅಗ್ನಿಂ ಪರಿಗತಾ ಯಾ ಚ ಪುನರ್ಭೂಃ ಪ್ರಸವಾ ಚ ಯಾ ॥ ೧೬ ॥
ಇತ್ಯೇತಾಃ ಕಾಶ್ಯಪೇನೋಕ್ತಾ ದಹಂತಿಕುಲಮಗ್ನಿವತ್ ॥ ೧೭ ॥
ಅಥಾವಟಂಕಾಃ ಕಥ್ಯಂತೇ ಗೋತ್ರ ೧ ಪಾತ್ರ ೨ ದಾತ್ರ ೩ ತ್ರಾಶಯತ್ರ ೪
ಲಡಕಾತ್ರ ೫ ಮಂಡಕೀಯಾತ್ರ ೬ ವಿಡಲಾತ್ರ ೭ ರಹಿಲಾ ೮
ಭಾದಿಲ ೯ ವಾಲೂಅ ೧೦ ಪೋಕೀಯಾ ೧೧ ವಾಕೀಯಾ ೧೨
ಮಕಾಲ್ಯಾ ೧೩ ಲಾಡಅ ೧೪ ಮಾಣವೇದಾ ೧೫ ಕಾಲೀಯಾ ೧೬
ತಾಲೀ ೧೭ ವೇಲೀಯಾ ೧೮ ಪಾವಲನ್ದೀಯಾ ೧೯ ಮೂಢಾ ೨೦

---

೧೩. ಗೌತಮರು ಅಸಮಾನಪ್ರವರದವರೊಡನೆ ವಿವಾಹಮಾಡಿಕೊಳ್ಳಬೇಕೆಂದು ಹೇಳಿರುವರು. ಕನ್ಯೆಯ ತಾಯಿಯ ಗೋತ್ರವೂ ವರನ ಗೋತ್ರವೂ ಒಂದಾಗಿ ಪ್ರವರ ಮಾತ್ರ ಬೇರೆಯಾಗಿದ್ದರೆ ಆ ಕನ್ಯೆಯು ಆ ವರನಿಗೆ ಸಹೋದರಿಯಾಗುವುದರಿಂದ ಅವರೀರ್ವರಿಗೆ ವಿವಾಹಮಾಡಕೂಡದು.

೧೪. ಅಣ್ಣನಿಗೆ ಮದುವೆಯಾಗದಿರುವಾಗ ತಮ್ಮನು ಹೆಂಡತಿ ಮತ್ತು ಅಗ್ನಿಹೋತ್ರಗಳ ಸಂಬಂಧವನ್ನು ಮಾಡಿದರೆ ಅವನು ಪರಿವೇತ್ತ ಎಂದೂ, ಅಣ್ಣನು ಪರವಿತ್ತಿಯೆಂದೂ ಹೆಸರನ್ನು ಪಡೆಯುವರು.

೧೫–೧೭. ಮಾತಿನಿಂದಲೂ, ಮನಸ್ಸಿನಿಂದಲೂ ದಾನಮಾಡಲ್ಪಟ್ಟವಳೂ, ಕೌತುಕಮಂಗಳವಾಗಿರುವವಳೂ, ಉದಕಸ್ಪರ್ಶವಾದವಳೂ, ಪಾಣಿಗ್ರಹಣವಾದವಳೂ, ಸಪ್ತಪದಿಯಾದವಳೂ, ಪ್ರಸವಿಸಿದವಳೂ ಪುನುರ್ಭೂ ಎನ್ನಿಸಿಕೊಳ್ಳುವಳು. ಈ ನೀಚಳನ್ನು ಪುನಃ ಮದುವೆಯಾಗಬಾರದು. ಕಾಶ್ಯಪರು ಹೇಳಿದ ಇವರನ್ನು ಮದುವೆಯಾದರೆ ಇವರು ವಂಶವನ್ನು ಅಗ್ನಿಯಂತೆ ಸುಡುವರು.

೧೮. ಈಗ ಅವಟಂಕಗಳನ್ನು ಹೇಳುವೆನು:—ಇವು ಗೋತ್ರ, ಪಾತ್ರ, ದಾತ್ರ, ತ್ರಾಶಯತ್ರ, ಲಡಕಾತ್ರ, ಮಂಡಕೀಯಾತ್ರ, ವಿಡಲಾತ್ರ, ರಹಿಲಾ, ಭಾದಿಲ, ವಾಲೂಅ, ಪೋಕೀಯಾ, ವಾಕೀಯಾ, ಮಕಾಲ್ಯಾ, ಲಾಡಅ,

CC-0. Jangamwadi Math Collection. Digitized by eGangotri

ಪೀತೂಲಾ ೨೧ ಧಿಗಮುಘ ೨೨ ಭೂತಪಾದವಾದೀ ೨೩ ಹೋಪೋಯಾ ೨೪ ಶೇವಾರ್ದತ ೨೫ ವಪಾರ ೨೬ ವಥಾರ ೨೭ ಸಾಧಕಾ ೨೮ ಬಹುಧಿಯಾ ೨೯ ॥ ೧೮ ॥

ಮಾತುಲಸ್ಯ ಸುತಾಮೂಢ್ವಾ ಮಾತೃಗೋತ್ರಾಂ ತಥೈವ ಚ ।
ಸಮಾನಪ್ರವರಾಂ ಚೈವ ತ್ಯಕ್ತ್ವಾ ಚಾಂದ್ರಾಯಣಂ ಚರೇತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಶ್ರೀಮಾತಾಕಥಿತ ನಾಮಗೋತ್ರಪ್ರವರಕೃತ ದೇವ್ಯವಟಂಕಕಥನಂ" ನಾಮ್ಯೆಕವಿಂಶೋಽಧ್ಯಾಯಃ

---

ಮಾಣವೇದಾ, ಕಾಲೀಯಾ, ತಾಲೀ, ವೇಲಿಯಾ, ಪಾಂವಲಂಡೀಯಾ, ಮೂಢಾ, ಪೀತೂಲಾ, ಧಿಗಮುಘ, ಭೂತಪಾದವಾದೀ, ಹೋಪೋಯಾ, ಶೇವಾರ್ದತ, ವಪಾರ, ವಥಾರ, ಸಾಧಕಾ, ಬಹುಧಿಯಾ ಎಂದು ಇಪ್ಪತ್ತೊಂಬತ್ತು ವಿಧವು.

೧೯. ಸೋದರಮಾವನ ಮಗಳನ್ನೂ, ತಾಯಿಯ ಗೋತ್ರದವಳನ್ನೂ, ಸಮಾನಪ್ರವರದವಳನ್ನೂ ಮದುವೆಮಾಡಿಕೊಂಡರೆ ಅವಳನ್ನು ಬಿಟ್ಟು ಚಾಂದ್ರಾಯಣವ್ರತವನ್ನಾಚರಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಶ್ರೀಮಾತಾಕಥಿತ ನಾಮಗೋತ್ರಪ್ರವರಕೃತ ದೇವ್ಯವಟಂಕ ಕಥನ"ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದ್ವಾವಿಂಶೋಽಧ್ಯಾಯಃ

### ದೇವತಾಸ್ಥಾಪನಂ

ಯುಧಿಷ್ಠಿರ ಉವಾಚ :—

ಸ್ಥಾನವಾಸಿನ್ಯೋ ಯೋಗಿನ್ಯಃ ಕಾಜೇಶೇನ ವಿನಿರ್ಮಿತಾಃ ।
ಕಸ್ಮಿನ್ಸ್ಥಾನೇ ಹಿ ಕಾ ದೇವ್ಯಃ ಕೀದೃಶ್ಯಸ್ತಾ ವದಸ್ವ ಮೇ ॥ ೧ ॥

ವ್ಯಾಸ ಉವಾಚ :—

ಸರ್ವಜ್ಞೋಽಸಿ ಕುಲೀನೋಽಸಿ ಸಾಧು ಪೃಷ್ಟಂ ತ್ವಯಾಽನಘ ।
ಕಥಯಿಷ್ಯಾಮ್ಯಹಂ ಸರ್ವಮಖಿಲೇನ ಯುಧಿಷ್ಠಿರ ॥ ೨ ॥
ನಾನಾಭರಣಭೂಷಾಢ್ಯಾ ನಾನಾರತ್ನೋಪಶೋಭಿತಾಃ ।
ನಾನಾವಸನಸಂವೀತಾ ನಾನಾಯುಧಸಮನ್ವಿತಾಃ ॥ ೩ ॥
ನಾನಾವಾಹನಸಂಯುಕ್ತಾ ನಾನಾಸ್ವರನಿನಾದಿನೀಃ ।
ಭಯನಾಶಾಯ ವಿಪ್ರಾಣಾಂ ಕಾಜೇಶೇನ ವಿನಿರ್ಮಿತಾಃ ॥ ೪ ॥
ಪ್ರಾಚ್ಯಾಂ ಯಾಮ್ಯಾಮುದೀಚ್ಯಾಂ ಚ ಪ್ರತೀಚ್ಯಾಂ ಸ್ಥಾಪಿತಾ ಹಿ ತಾಃ ।
ಆಗ್ನೇಯ್ಯಾಂ ನೈರ್ಋತೇ ದೇಶೇ ವಾಯವ್ಯೇಶಾನಯೋಸ್ತಥಾ ॥ ೫ ॥

---

## ಕನ್ನಡದ ಅನುವಾದ

### ದೇವತಾಸ್ಥಾಪನ

೧. ಯುಧಿಷ್ಠಿರನು ಕೇಳುತ್ತಾನೆ :—ಬ್ರಹ್ಮಾದಿಗಳಿಂದ ನಿರ್ಮಿತವಾದ ಈ ಕ್ಷೇತ್ರವಾಸಿಗಳಾದ ಯೋಗಿನಿಯರಲ್ಲಿ ಯಾವ ಯಾವ ದೇವಿಯರು ಎಲ್ಲೆಲ್ಲಿ ನೆಲೆಸಿದರೆಂಬುದನ್ನು ನನಗೆ ಹೇಳು.

೨. ವ್ಯಾಸನು ಹೇಳುತ್ತಾನೆ :—ಯುಧಿಷ್ಠಿರ ! ನೀನು ಸಕಲವನ್ನರಿತವನೂ, ಸತ್ಕುಲಪ್ರಸೂತನೂ ಆಗಿರುವೆ. ಚೆನ್ನಾಗಿ ಕೇಳಿದೆ. ನಾನು ನಿನಗೆ ಸಂಪೂರ್ಣವಾಗಿ ಹೇಳುವೆನು.

೩–೪. ಬ್ರಹ್ಮಾದಿಗಳು ಬ್ರಾಹ್ಮಣರ ಭಯನಿವಾರಣೆಗಾಗಿ ಬಗೆಬಗೆಯ ಒಡವೆಗಳಿಂದ ಅಲಂಕೃತರೂ, ಅನೇಕ ವಿಧ ರತ್ನಗಳಿಂದ ವಿರಾಜಮಾನರೂ, ಬಗೆಬಗೆಯ ಬಟ್ಟೆಗಳನ್ನುಟ್ಟವರೂ, ಬಹು ವಿಧ ಆಯುಧಗಳನ್ನು ಹಿಡಿದವರೂ, ನಾನಾ ವಿಧ ವಾಹನವನ್ನೇರಿದವರೂ, ಅನೇಕವಿಧ ಸ್ವರವುಳ್ಳವರೂ ಆಗಿರುವ ದೇವಿಯರನ್ನು ಸೃಷ್ಟಿಸಿರುವರು.

೫–೮. ಪೂರ್ವ, ದಕ್ಷಿಣ, ಉತ್ತರ, ಪಶ್ಚಿಮ, ಆಗ್ನೇಯ, ನೈಋತ್ಯ ವಾಯವ್ಯ, ಈಶಾನ್ಯ ದಿಕ್ಕುಗಳಲ್ಲಿ ಆಶಾಪುರೀ, ಗಾತ್ರಾಣೀ, ಛತ್ರಾಣೀ,

CC-0. Jangamwadi Math Collection. Digitized by eGangotri

ಆಶಾಪುರೀ ಚ ಗಾತ್ರಾಕೀ ಛತ್ರಾಕೀ ಜ್ಞಾನಜಾ ತಥಾ ।
ಪಿಪ್ಪಲಾಂಬಾ ತಥಾ ಶಾಂತಾ ಸಿದ್ಧಾ ಭಟ್ಟಾರಿಕಾ ತಥಾ ॥ ೬ ॥
ಕದಂಬಾ ವಿಕಟಾ ಮೀಠಾ ಸುಪರ್ಣಾ ವಸುಜಾ ತಥಾ ।
ಮಾತಂಗೀ ಚ ಮಹಾದೇವೀ ವಾರಾಹೀ ಮುಕುಟೇಶ್ವರೀ ॥ ೭ ॥
ಭದ್ರಾ ಚೈವ ಮಹಾಶಕ್ತಿಃ ಸಿಂಹಾರಾ ಚ ಮಹಾಬಲಾ ।
ಏತಾಶ್ಚಾನ್ಯಾಶ್ಚ ಬಹವಃ ಕಥಿತುಂ ನೈವ ಶಕ್ಯತೇ ॥ ೮ ॥
ನಾನಾರೂಪಧರಾ ದೇವ್ಯೋ ನಾನಾವೇಷಸಮಾಶ್ರಿತಾಃ ।
ಸ್ಥಾನಾದುತ್ತರದಿಗ್ಭಾಗೇ ಆಶಾಪೂರ್ಣಾಸಮೀಪತಃ ॥ ೯ ॥
ಪೂರ್ವೇ ತು ವಿದ್ಯತೇ ದೇವೀ ಆನಂದಾನಂದದಾಯಿನೀ ।
ವಸಂತಿ ಚೋತ್ತರೇ ದೇವ್ಯೋ ನಾನಾರೂಪಧರಾ ಮುದಾ ॥ ೧೦ ॥
ಇಷ್ಟಾನ್ಕಾಮಾನ್ದದಾತ್ಯೇತಾ ಜಲದಾನೇನ ತರ್ಪಿತಾಃ ।
ಸ್ಥಾನೇ ನೈರ್ಋತಿದಿಗ್ಭಾಗೇ ಶಾಂತಾ ಶಾಂತಿಪ್ರದಾಯಿನೀ ॥ ೧೧ ॥
ಸಿಂಹೋಪರಿ ಸಮಾಸೀನಾ ಚತುರ್ಹಸ್ತಾ ವರಪ್ರದಾ ।
ಭಟ್ಟಾರೀ ಚ ಮಹಾಶಕ್ತಿಃ ಪುನಸ್ತತ್ರೈವ ತಿಷ್ಠತಿ ॥ ೧೨ ॥
ಸಂಸ್ತುತಾ ಪೂಜಿತಾ ಭಕ್ತ್ಯಾ ಭಕ್ತಾನಾಂ ಭಯನಾಶಿನೀ ।
ಸ್ಥಾನಾತ್ತು ಸಪ್ತಮೇ ಕ್ರೋಶೇ ಕ್ಷೇಮಲಾಭಾ ವ್ಯವಸ್ಥಿತಾ ॥ ೧೩ ॥

---

ಜ್ಞಾನಜಾ, ಪಿಪ್ಪಲಾಂಬಾ, ಶಾಂತಾ, ಸಿದ್ಧಾ, ಭಟ್ಟಾರಿಕಾ, ಕದಂಬಾ, ವಿಕಟಾ, ಮೀಠಾ, ಸುಪರ್ಣಾ, ವಸುಜಾ, ಮಾತಂಗೀ, ವಾರಾಹೀ, ಮುಕುಟೇಶ್ವರೀ, ಭದ್ರಾ, ಸಿಂಹಾರ ಇವರನ್ನೂ ಇನ್ನೂ ಹೇಳಲಾಗದಷ್ಟು ಮಂದಿ ದೇವಿಯರನ್ನೂ ಸ್ಥಾಪಿಸಿರುತ್ತಾರೆ.

೯. ಈ ಕ್ಷೇತ್ರದ ಉತ್ತರದಿಕ್ಕಿನಲ್ಲಿ ಆಶಾಪೂರ್ಣೆಯ ಬಳಿ ನಾನಾ ವೇಷ ರೂಪಗಳನ್ನು ಧರಿಸಿದ ಹಲವು ಮಂದಿ ದೇವಿಯರು ನೆಲೆಸಿದ್ದಾರೆ.

೧೦. ಪೂರ್ವದಿಕ್ಕಿನಲ್ಲಿ ಆನಂದವನ್ನೀಯುವ ಆನಂದೆಯು ವಾಸವಾಗಿದ್ದಾಳೆ. ಇವಳಿಗೆ ಉತ್ತರದಿಕ್ಕಿನಲ್ಲಿ ನಾನಾ ರೂಪಗಳುಳ್ಳ ದೇವಿಯರಿದ್ದಾರೆ.

೧೧. ಇವರು ಜಲವನ್ನರ್ಪಿಸುವುದರಿಂದ ಸಂತೋಷಗೊಂಡು ಇಷ್ಟಾರ್ಥಗಳನ್ನೀಯುವರು. ನೈರ್ಋತ್ಯದಿಕ್ಕಿನಲ್ಲಿ ಶಾಂತಿಪ್ರದಳಾದ ಶಾಂತಿಯೂ ನೆಲೆಸಿರುವಳು.

೧೨. ಅಲ್ಲಿಯೇ ಸಿಂಹದಮೇಲೆ ಕುಳಿತಿರುವವಳೂ, ನಾಲ್ಕು ಕೈಯುಳ್ಳವಳೂ, ವರವನ್ನು ಕೊಡುವವಳೂ ಆಗಿರುವ ಭಟ್ಟಾರಿಯೆಂಬ ಮಹಾಶಕ್ತಿಯಿರುವಳು.

೧೩. ಇವಳು ಭಕ್ತಿಯಿಂದ ಸ್ತುತಿಸಿ ಪೂಜಿಸಿದ ಭಕ್ತರಿಗೆ ಭಯವನ್ನು

CC-0. Jangamwadi Math Collection. Digitized by eGangotri

ಸಾ ವಿಲೇಪಮಯೀ ಪೂಜ್ಯಾ ಚಿಂತಿತಾ ಸಿದ್ಧಿದಾಯಿನೀ ।
ಪೂರ್ವಸ್ಯಾಂ ದಿಶಿ ಲೋಕೈಸ್ತು ಬಲಿದಾನೇನ ತರ್ಪಿತಾ ।
ಪರಿವಾರೇಣ ಸಂಯುಕ್ತಾ ಭುಕ್ತಿಮುಕ್ತಿಪ್ರದಾಯಿನೀ ॥ ೧೪ ॥
ಅಚಿಂತ್ಯರೂಪಚರಿತಾ ಸರ್ವಶತ್ರುವಿನಾಶಿನೀ ।
ಸಂಧ್ಯಾಯಾಸ್ತ್ರಿಷು ಕಾಲೇಷು ಪ್ರತ್ಯಕ್ಷೈವ ಹಿ ದೃಶ್ಯತೇ ॥ ೧೫ ॥
ಸ್ಥಾನಾತ್ತು ಸಪ್ತಮೇ ಕ್ರೋಶೇ ದಕ್ಷಿಣಾ ವಿಂಧ್ಯವಾಸಿನೀ ।
ಸಾಯುಧಾ ರೂಪಸಂಪನ್ನಾ ಭಕ್ತಾನಾಂ ಭಯಹಾರಿಣೀ ॥ ೧೬ ॥
ಪಶ್ಚಿಮೇ ನಿಂಬಜಾ ದೇವೀ ತಾವದ್ಭೂಮಿಸಮಾಶ್ರಿತಾ ।
ಮಹಾಬಲಾ ಸಾ ದೃಷ್ಟ್ವಾಽಪಿ ನಯನಾನಂದದಾಯಿನೀ ॥ ೧೭ ॥
ಸ್ಥಾನಾದುತ್ತರದಿಗ್ಭಾಗೇ ತಾವದ್ಭೂಮಿಸಮಾಶ್ರಿತಾ ।
ಶಕ್ತಿರ್ಬಹುಸುವರ್ಣಾಕ್ಷಾ ಪೂಜಿತಾ ಸಾ ಸುವರ್ಣದಾ ॥ ೧೮ ॥
ಸ್ಥಾನಾದ್ವಾಯವ್ಯಕೋಣೇ ಚ ಕ್ರೋಶಮಾತ್ರಮಿತೇ ಶ್ರಿತಾ ।
ಕ್ಷೇತ್ರಧರಾ ಮಹಾದೇವೀ ಸಮಯೇಚ್ಛಾಗಧಾರಿಣೀ ॥ ೧೯ ॥

---

ಹೋಗಲಾಡಿಸುವಳು. ಈ ಸ್ಥಳದಿಂದ ಏಳುಕ್ರೋಶಗಳ ದೂರದಲ್ಲಿ ಕ್ಷೇಮಲಾಭೆ ಇರುವಳು.

೧೪-೧೫. ಲೇಪನದ್ರವ್ಯಗಳಿಂದ ಲಿಪ್ತಳಾಗಿ ಪೂಜ್ಯಳಾದ ಅವಳು ಧ್ಯಾನಿಸುವುದರಿಂದಲೇ ಕಾರ್ಯಸಿದ್ಧಿಯನ್ನೀಯುವಳು. ಪೂರ್ವದಿಕ್ಕಿನಲ್ಲಿ ಜನರಿಂದ ಬಲಿಯನ್ನಿತ್ತು ಸಂತೋಷಗೊಳಿಸಲ್ಪಟ್ಟವಳೂ, ಪರಿವಾರಸಹಿತಳೂ, ಭೋಗ ಮತ್ತು ಮೋಕ್ಷಗಳನ್ನು ಕೊಡುವವಳೂ, ಆಲೋಚಿಸಲಾಗದ ರೂಪ ಮತ್ತು ನಡತೆಯುಳ್ಳವಳೂ, ಸಕಲಶತ್ರುನಾಶಕಳೂ ಆಗಿರುವ ಈ ಕ್ಷೇಮಲಾಭೆಯು ಮೂರು ಸಂಧ್ಯಾಕಾಲಗಳಲ್ಲಿಯೂ ಪ್ರತ್ಯಕ್ಷವಾಗಿ ಕಾಣುವಳು.

೧೬. ಈ ಸ್ಥಳದಿಂದ ಹದಿನಾಲ್ಕನೆಯ ಮೈಲಿಯಲ್ಲಿ ಆಯುಧಸಹಿತಳೂ, ರೂಪಸಂಪನ್ನಳೂ ಭಕ್ತರ ಭಯನಾಶಕಳೂ ಆಗಿರುವ ವಿಂಧ್ಯಪರ್ವತ ನಿವಾಸಿನಿಯಾದ ದಕ್ಷಿಣೆಯಿರುವಳು.

೧೭. ಪಶ್ಚಿಮದಲ್ಲಿ ಅತಿ ಬಲಿಷ್ಠಳಾಗಿ ನೋಡುವ ಮಾತ್ರದಿಂದಲೇ ಕಣ್ಣುಗಳಿಗಾನಂದವನ್ನೀಯುವ ನಿಂಬಜಾದೇವಿಯು ಇರುವಳು.

೧೮. ಉತ್ತರದಿಕ್ಕಿನಲ್ಲಿ ಸುವರ್ಣದಂತೆ ನಯನಗಳುಳ್ಳ ಶಕ್ತಿದೇವತೆಯಿರುವಳು. ಇವಳು ಪೂಜಿಸುವ ಭಕ್ತರಿಗೆ ಸುವರ್ಣವನ್ನು ಕೊಡುವಳು.

೧೯. ವಾಯುವ್ಯ ದಿಕ್ಕಿನಲ್ಲಿ ಎರಡು ಮೈಲಿಯಲ್ಲಿಯೇ ಆಡನ್ನು ಧರಿಸಿರುವ ಕ್ಷೇತ್ರಧರೆಯು ನೆಲೆಸಿರುವಳು.

CC-0. Jangamwadi Math Collection. Digitized by eGangotri

ಪುರಾದುತ್ತರದಿಗ್ಭಾಗೇ ಕ್ರೋಶಮಾತ್ರೇ ತು ಕರ್ಣಿಕಾ ।
ಸರ್ವೋಪಕಾರನಿರತಾ ಸ್ಥಾನೋಪದ್ರವನಾಶಿನೀ ॥ ೨೦ ॥
ಸ್ಥಾನಾನ್ನಿರ್ಋತಿದಿಗ್ಭಾಗೇ ಬ್ರಹ್ಮಾಣೀಪ್ರಮುಖಾಸ್ತಥಾ ।
ನಾನಾರೂಪಧರಾ ದೇವ್ಯೋ ವಿದ್ಯಂತೇ ಜಲಮಾತರಃ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ದೇವತಾ ಸ್ಥಾಪನಂ"ನಾಮ ದ್ವಾವಿಂಶೋಽಧ್ಯಾಯಃ

---

೨೦. ಪಟ್ಟಣದ ಉತ್ತರ ದಿಕ್ಕಿನಲ್ಲಿ ಎರಡು ಮೈಲಿ ದೂರದಲ್ಲಿ ಸಕಲರಿಗೂ ಉಪಕಾರವನ್ನು ಮಾಡುವವಳೂ, ಆ ಕ್ಷೇತ್ರಕ್ಕೊದಗುವ ತೊಂದರೆಯನ್ನು ನೀಗಿಸುವವಳೂ ಆಗಿರುವ ಕರ್ಣಿಕೆಯಿದ್ದಾಳೆ.

೨೧. ಈ ಕ್ಷೇತ್ರದ ನೈರ್ಋತ್ಯದಿಕ್ಕಿನಲ್ಲಿ ಬ್ರಹ್ಮಾಣಿಯೆ ಮೊದಲಾದ ನಾನಾ ರೂಪಗಳನ್ನು ಧರಿಸಿದ ಜಲಮಾತೃಗಳಾದ ದೇವಿಯರು ನೆಲೆಸಿರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ದೇವತಾಸ್ಥಾಪನ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

## ಜ್ಞಾತಿಭೇದವರ್ಣನಂ

ವ್ಯಾಸ ಉವಾಚ :—

ಅತಃಪರಂ ಪ್ರವಕ್ಷ್ಯಾಮಿ ಬ್ರಹ್ಮಣಾ ಯತ್ಕೃತಂ ಪುರಾ ।
ತತ್ಸರ್ವಂ ಕಥಯಾಮ್ಯದ್ಯ ಶೃಣುಷ್ವೈಕಾಗ್ರಮಾನಸಃ ॥ ೧ ॥
ದೇವಾನಾಂ ದಾನವಾನಾಂ ಚ ವೈರಾದ್ಯುದ್ಧಂ ಬಭೂವ ಹ ।
ತಸ್ಮಿನ್ಯುದ್ಧೇ ಮಹಾದುಷ್ಟೇ ದೇವಾಃ ಸಂಕ್ಲಿಷ್ಟಮಾನಸಾಃ ॥ ೨ ॥
ಬಭೂವುಸ್ತತ್ರ ಸೋದ್ವೇಗಾ ಬ್ರಹ್ಮಾಣಂ ಶರಣಂ ಯಯುಃ ॥ ೩ ॥

ದೇವಾ ಊಚುಃ :—

ಬ್ರಹ್ಮನ್ಕೇನ ಪ್ರಕಾರೇಣ ದೈತ್ಯಾನಾಂ ವಧನೇವ ಚ ।
ಕುರ್ಮೋಽದ್ಯ ಉಪಾಯಂ ಹಿ ಕಥ್ಯತಾಂ ಶೀಘ್ರಮೇವ ನಃ ॥ ೪ ॥

ಬ್ರಹ್ಮೋವಾಚ :—

ಮಯಾ ಹಿ ಶಂಕರೇಣೈವ ವಿಷ್ಣುನಾ ಹಿ ತಥಾ ಪುರಾ ।
ಯಮಸ್ಯ ತಪಸಾ ತುಷ್ಟೈರ್ಧರ್ಮಾರಣ್ಯಂ ವಿನಿರ್ಮಿತಂ ॥ ೫ ॥
ತತ್ರ ಯದ್ದೀಯತೇ ದಾನಂ ಯಜ್ಞಂ ವಾ ತಪ ಉತ್ತಮಂ ।
ತತ್ಸರ್ವಂ ಕೋಟಿಗುಣಿತಂ ಭವೇದಿತಿ ನ ಸಂಶಯಃ ॥ ೬ ॥

---

## ಕನ್ನಡದ ಅನುವಾದ

### ಜ್ಞಾತಿಭೇದವರ್ಣನ

೧. ವ್ಯಾಸನು ಹೇಳುತ್ತಾನೆ :— ಇನ್ನು ಮುಂದೆ ಬ್ರಹ್ಮನು ಮಾಡಿದ ಕೆಲಸವನ್ನು ಹೇಳುವೆನು. ಒಮ್ಮನಸ್ಸಿನಿಂದ ಕೇಳು.

೨-೩. ದೇವದಾನವರಿಗೆ ದ್ವೇಷದಿಂದ ಯುದ್ಧವು ನಡೆಯಲು ದೇವತೆಗಳು ಆ ಕೆಟ್ಟಯುದ್ಧದಲ್ಲಿ ಕ್ಲೇಶಗೊಂಡು ಬ್ರಹ್ಮನನ್ನು ಮರೆಹೊಕ್ಕರು.

೪. ದೇವತೆಗಳು ಕೇಳುತ್ತಾರೆ :— ಪಿತಾಮಹ ! ದೈತ್ಯರನ್ನು ಕೊಲ್ಲುವ ಬಗೆ ಹೇಗೆ ? ಅದರ ಉಪಾಯವನ್ನು ಶೀಘ್ರವಾಗಿ ಹೇಳು.

೫. ಬ್ರಹ್ಮನು ಹೇಳುತ್ತಾನೆ :— ಯಮನ ತಪಸ್ಸಿಗೆ ಮೆಚ್ಚಿದ ನಾನೂ, ವಿಷ್ಣುವೂ, ಶಂಕರನೂ ಸೇರಿ ಧರ್ಮಾರಣ್ಯವನ್ನು ನಿರ್ಮಿಸಿದ್ದೇವೆ.

೬. ಆ ಧರ್ಮಾರಣ್ಯದಲ್ಲಿ ಕೊಟ್ಟ ದಾನ, ಯಜ್ಞ, ಉತ್ತಮವಾದ ತಪಸ್ಸುಗಳು ಇವುಗಳೆಲ್ಲ ಕೋಟಿಮಡಿಯಾಗುವುವು.

CC-0. Jangamwadi Math Collection. Digitized by eGangotri

ಪಾಪಂ ವಾ ಯದಿ ವಾ ಪುಣ್ಯಂ ಸರ್ವಂ ಕೋಟಿಗುಣಂ ಭವೇತ್ ।
ತಸ್ಮಾದ್ದೈತ್ಯೈರ್ನ ಧರ್ಷಿತಂ ಕದಾಚಿದಪಿ ಭೋಃ ಸುರಾಃ ॥ ೭ ॥
ಶ್ರುತ್ವಾ ತು ಬ್ರಹ್ಮಣೋ ವಾಕ್ಯಂ ದೇವಾಃ ಸರ್ವೇ ಸವಿಸ್ಮಯಾಃ ।
ಬ್ರಹ್ಮಾಣಂ ತ್ವಗ್ರತಃ ಕೃತ್ವಾ ಧರ್ಮಾರಣ್ಯಮುಪಾಯಯುಃ ॥ ೮ ॥
ಸತ್ರಂ ತತ್ರ ಸಮಾರಭ್ಯ ಸಹಸ್ರಾಬ್ದಮನುತ್ತಮಂ ।
ವೃತ್ವಾಚಾರ್ಯಂ ಚಾಽಂಗಿರಸಂ ಮಾರ್ಕಂಡೇಯಂ ತಥೈವ ಚ ॥ ೯ ॥
ಅತ್ರಿಂ ಚ ಕಶ್ಯಪಂ ಚೈವ ಹೋತೄನ್ಕೃತ್ವಾ ಮಹಾಮತೀ ।
ಜಮದಗ್ನಿಂ ಗೌತಮಂ ಚ ಅಧ್ವರ್ಯೂತ್ವೇ ನ್ಯವೇದಯನ್ ॥ ೧೦ ॥
ಭರದ್ವಾಜಂ ವಸಿಷ್ಠಂ ತು ಪ್ರತ್ಯಧ್ವರ್ಯೂತ್ವಮಾದಿಶನ್ ।
ನಾರದಂ ಚೈವ ವಾಲ್ಮೀಕಿಂ ನೋದನಾಯಾಽಕರೋತ್ತದಾ ॥ ೧೧ ॥
ಬ್ರಹ್ಮಾಸನೇ ಚ ಬ್ರಹ್ಮಾಣಂ ಸ್ಥಾಪಯಾಮಾಸುರಾದರಾತ್ ।
ಕ್ರೋಶಚತುಷ್ಕಮಾತ್ರಾಂ ಚ ವೇದಿಂ ಕೃತ್ವಾ ಸುರೈಸ್ತತಃ ॥ ೧೨ ॥
ದ್ವಿಜಾಃ ಸರ್ವೇ ಸಮಾಹೂತಾ ಯಜ್ಞಸ್ಯಾರ್ಥೇ ಹಿ ಜಾಪಕಾಃ ।
ಋಗ್ಯಜುಃಸಾಮಾಽಥರ್ವಾಣ್ವೈ ವೇದಾನುದ್ಗಿರಯಂತಿ ಯೇ ॥ ೧೩ ॥
ಗಣನಾಥಂ ಶಂಭುಸುತಂ ಕಾರ್ತಿಕೇಯಂ ತಥೈವ ಚ ।
ಇಂದ್ರಂ ವಜ್ರಧರಂ ಚೈವ ಜಯಂತಂ ಚಂದ್ರಸೂನುಕಂ ॥ ೧೪ ॥

---

೭. ದೇವತೆಗಳೆ! ಅಲ್ಲಿ ಮಾಡಿದ ಪಾಪವಾಗಲಿ, ಪುಣ್ಯವಾಗಲಿ ಕೋಟಿ ಮಡಿಯಾಗುವುದರಿಂದ ದೈತ್ಯರು ಯಾವಾಗಲೂ ಅದನ್ನು ಆಕ್ರಮಿಸಲಿಲ್ಲ.

೮. ದೇವತೆಗಳೆಲ್ಲರೂ ಬ್ರಹ್ಮನ ಈ ನುಡಿಯನ್ನು ಕೇಳಿ ಆಶ್ಚರ್ಯಗೊಂಡು ಬ್ರಹ್ಮನನ್ನು ಮುಂದಿರಿಸಿಕೊಂಡು ಧರ್ಮಾರಣ್ಯಕ್ಕೆ ಹೋದರು.

೯–೧೧. ಅಲ್ಲಿ ದೇವತೆಗಳು ಸಾವಿರವರ್ಷ ನೆರವೇರಿಸುವ ಸತ್ರವೊಂದನ್ನಾರಂಭಿಸಿ ಅದರಲ್ಲಿ ಅಂಗೀರಸ, ಮಾರ್ಕಂಡೇಯರನ್ನು ಆಚಾರ್ಯರನ್ನಾಗಿಯೂ, ಅತ್ರಿ, ಕಶ್ಯಪರನ್ನು ಹೋತೃಗಳನ್ನಾಗಿಯೂ, ಜಮದಗ್ನಿ, ಗೌತಮರನ್ನು ಅಧ್ವರ್ಯುಗಳನ್ನಾಗಿಯೂ, ಭರದ್ವಾಜ, ವಸಿಷ್ಠರನ್ನು ಪ್ರತ್ಯಧ್ವರ್ಯುಗಳನ್ನಾಗಿಯೂ, ನೇಮಿಸಿ ನಾರದ, ವಾಲ್ಮೀಕಿಗಳನ್ನು ಚೋದನೆಗಾಗಿ ಇಟ್ಟರು.

೧೨. ಎಂಟು ಮೈಲಿ ಪರಿಮಾಣದ ವೇದಿಯನ್ನು ನಿರ್ಮಿಸಿ ಅಲ್ಲಿ ಬ್ರಹ್ಮಾಸನದಲ್ಲಿ ಬ್ರಹ್ಮನನ್ನು ಕುಳ್ಳಿರಿಸಿದರು.

೧೩. ಯಜ್ಞಕ್ಕಾಗಿ ಜಪಿಸುವ ಬ್ರಾಹ್ಮಣರನ್ನೆಲ್ಲ ಕರೆಯಿಸಿದರು. ಅವರು ಋಗ್ಯಜುಸ್ಸಾಮಾಥರ್ವ ವೇದಗಳನ್ನು ಪಾರಾಯಣಮಾಡಿದರು.

೧೪–೧೫. ಗಣನಾಥ, ಷಣ್ಮುಖ, ವಜ್ರವನ್ನು ಹಿಡಿದಿರುವ ಇಂದ್ರ, ಚಂದ್ರನ ಮಗನಾದ ಜಯಂತ, ಈ ನಾಲ್ಕು ಜನ ಶೂರರಾದ ದೇವತೆಗಳನ್ನು

CC-0. Jangamwadi Math Collection. Digitized by eGangotri

ಚತ್ವಾರೋ ದ್ವಾರಪಾಲಾಶ್ಚ ದೇವಾಃ ಶೂರಾ ವಿನಿರ್ಮಿತಾಃ ।
ತತೋ ರಾಕ್ಷೋಘ್ನಮಂತ್ರೇಣ ಹೂಯತೇ ಹವ್ಯವಾಹನಃ ॥ ೧೫ ॥
ತಿಲಾಂಶ್ಚ ಯವಮಿಶ್ರಾಂಶ್ಚ ಮಧ್ವಾಜ್ಯೇನ ಚ ಮಿಶ್ರಿತಾನ್ ।
ಜುಹುವುಸ್ತೇ ತದಾ ದೇವಾ ವೇದಮಂತ್ರೈರ್ನರೇಶ್ವರ ॥ ೧೬ ॥
ಆಘಾರಾವಾಜ್ಯಭಾಗೌ ಚ ಹುತ್ವಾ ಚೈವ ತತಃ ಪರಂ ।
ದ್ರಾಕ್ಷೇಕ್ಷುಪೂಗನಾರಂಗಜಂಬೀರಂ ಬೀಜಪೂರಕಂ ॥ ೧೭ ॥
ಉತ್ತರತೋ ನಾಲಿಕೇರಂ ದಾಡಿಮಂ ಚ ಯಥಾಕ್ರಮಂ ।
ಮಧ್ವಾಜ್ಯಂ ಪಯಸಾ ಯುಕ್ತಂ ಕೃಶರಂ ಶರ್ಕರಾಯುತಂ ॥ ೧೮ ॥
ತಂಡುಲೈಃ ಶತಪತ್ರೈಶ್ಚ ಯಜ್ಞೇ ಪಾಕಂ ನಿಯುಮ್ಯ ಚ ।
ವಿಚಿಂತ್ಯ ಚ ಮಹಾಭಾಗಾಃ ಕೃತ್ವಾ ಯಜ್ಞಂ ಸದಕ್ಷಿಣಂ ॥ ೧೯ ॥
ಉತ್ತಮಂ ಚ ಶುಭಂ ಸ್ತೋಮಂ ಕೃತ್ವಾ ಹರ್ಷಮುಪಾಯಯುಃ ।
ಅವಾರಿತಾನ್ನಮದದನ್ದೀನಾಂಧಕೃಪಣೇಷ್ವಪಿ ॥ ೨೦ ॥
ಬ್ರಾಹ್ಮಣೇಭ್ಯೋ ವಿಶೇಷೇಣ ದತ್ತಮನ್ನಂ ಯಥೇಪ್ಸಿತಂ ।
ಪಾಯಸಂ ಶರ್ಕರಾಯುಕ್ತಂ ಸಾಜ್ಯಶಾಕಸಮನ್ವಿತಂ ॥ ೨೧ ॥
ಮಂಡಕಾ ವಟಿಕಾಃ ಪೂಪಾಸ್ತಥಾ ವೈವೇಷ್ಟಿಕಾಃ ಶುಭಾಃ ।
ಸಹಸ್ರನೋದಕಾಶ್ಚಾಽಪಿ ಫೇಣಿಕಾ ಘುರ್ಘುರಾದಯಃ ॥ ೨೨ ॥
ಓದನಶ್ಚ ತಥಾ ದಾಲೀ ಆಢಕೀಸಂಭವಾ ಶುಭಾ ।
ತಥಾ ವೈ ಮುದ್ಗದಾಲೀ ಚ ಪರ್ಪಟಾವಟಿಕಾ ತಥಾ ॥ ೨೩ ॥

---

ದ್ವಾರಪಾಲಕರನ್ನಾಗಿ ನೇಮಿಸಿದರು. ಬಳಿಕ ರಕ್ಷೋಘ್ನಮಂತ್ರದಿಂದ ಅಗ್ನಿಯಲ್ಲಿ ಹೋಮಮಾಡಿದರು.

೧೬. ಮಹಾರಾಜ! ಯವಧಾನ್ಯ, ಜೇನುತುಪ್ಪ, ತುಪ್ಪ ಇವುಗಳಿಂದ ಸೇರಿದ ಎಳ್ಳಿನಿಂದ ವೇದಮಂತ್ರಗಳನ್ನು ಹೇಳಿ ಹೋಮಮಾಡಿದರು.

೧೭–೧೯. ಆಘಾರಾಜ್ಯಭಾಗಗಳಿಂದ ಹೋಮಿಸಿ ದ್ರಾಕ್ಷೆ, ಕಬ್ಬು, ಅಡಿಕೆ, ಕಿತ್ತಳೆ, ಲಿಂಬೆಹಣ್ಣು, ಸೇರಳೆಹಣ್ಣು, ತೆಂಗಿನಕಾಯಿ, ದಾಳಿಂಬದಹಣ್ಣು, ಜೇನುತುಪ್ಪ, ತುಪ್ಪ, ಹಾಲು, ಹುಗ್ಗಿ, ಸಕ್ಕರೆ, ಅಕ್ಕಿ, ತಾವರೆಹೂವು ಇವುಗಳನ್ನು ಸಮರ್ಪಿಸಿ ಮೌನವಾಗಿ ಧ್ಯಾನಿಸಿ ದಕ್ಷಿಣೆಯನ್ನಿತ್ತು ಯಜ್ಞವನ್ನು ಮಾಡಿದರು.

೨೦. ಉತ್ತಮವಾದ ಬ್ರಾಹ್ಮಣರ ಸಭೆಯನ್ನು ಮಾಡಿ ಸಂತೋಷಗೊಂಡರು. ಬಡವರು, ಕುರುಡರು, ಕೃಪಣರು ಇವರಿಗೆ ತಡೆಯದೆ ಅನ್ನವನ್ನು ನೀಡಿದರು.

೨೧–೨೬. ಸಕ್ಕರೆ ಸಹಿತವಾದ ಪಾಯಸ, ತುಪ್ಪ, ಮಂಡಿಗೆ, ವಡೆ, ದೋಸೆ, ವೇಷ್ಟಿಕಾ, ಸಾವಿರಾರು ಕಡುಬು, ಫೇಣಿ, ಘುರ್ಘುರ, ತೊಗರಿ, ಹೆಸರು

CC-0. Jangamwadi Math Collection. Digitized by eGangotri

ಪ್ರಲೇಹ್ಯಾನಿ ವಿಚಿತ್ರಾಣಿ ಯುಕ್ತಾಸ್ತ್ರೂಷಣಸಂಚಯೈಃ ।
ಕುಲ್ಮಾಷಾವೇಲ್ಲಕಾಶ್ಚೈವ ಕೋಮಲಾ ವಾಲಕಾಃ ಶುಭಾಃ ॥ ೨೪ ॥
ಕರ್ಕಟಿಕಾಶ್ಚಾರ್ದ್ರಯುತಾ ಮರಿಚೇನ ಸಮನ್ವಿತಾಃ ।
ಏವಂ ವಿಧಾನಿ ಚಾಽನ್ನಾನಿ ಶಾಕಾನಿ ವಿವಿಧಾನಿ ಚ ॥ ೨೫ ॥
ಭೋಜಯಿತ್ವಾ ದ್ವಿಜಾನ್ಸರ್ವಾನ್ಧರ್ಮಾಽರಣ್ಯನಿವಾಸಿನಃ ।
ಅಷ್ಟಾದಶಸಹಸ್ರಾಣಿ ಸಪುತ್ರಾಂಶ್ಚ ತದಾ ನೃಪ ॥ ೨೬ ॥
ಪ್ರತಿದಿನಂ ತದಾ ದೇವಾ ಭೋಜಯಂತಿಸ್ಮ ವಾಡವಾನ್ ।
ಏವಂ ವರ್ಷಸಹಸ್ರಂ ವೈ ಕೃತ್ವಾ ಯಜ್ಞಂ ತದಾಮರಾಃ ॥ ೨೭ ॥
ಕೃತ್ವಾ ದೈತ್ಯವಧಂ ರಾಜನ್ನಿರ್ಭಯತ್ವಮವಾಪ್ನುವನ್ ।
ಸ್ವರ್ಗಂ ಜಗ್ಮುಸ್ತೇ ಸಹಸಾ ದೇವಾಃ ಸರ್ವೇ ಮರುದ್ಗಣಾಃ ॥ ೨೮ ॥
ತಥೈವಾಽಪ್ಸರಸಃ ಸರ್ವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಕೈಲಾಸಶಿಖರಂ ರಮ್ಯಂ ವೈಕುಂಠಂ ವಿಷ್ಣುವಲ್ಲಭಂ ॥ ೨೯ ॥
ಬ್ರಹ್ಮಲೋಕಂ ಮಹಾಪುಣ್ಯಂ ಪ್ರಾಪ್ಯ ಸರ್ವೇ ದಿವೌಕಸಃ ।
ಪರಂ ಹರ್ಷಮುಪಾಜಗ್ಮುಃ ಪ್ರಾಪ್ಯ ನಂದನಮುತ್ತಮಂ ॥ ೩೦ ॥
ಸ್ವೇ ಸ್ವೇ ಸ್ಥಾನೇ ಸ್ಥಿರೀಭೂತ್ವಾ ತಸ್ಥುಃ ಸರ್ವೇ ಹಿ ನಿರ್ಭಯಾಃ ॥ ೩೧ ॥
ತತಃ ಕಾಲೇನ ಮಹತಾ ಕೃತಾಖ್ಯಯುಗಪರ್ಯಯೇ ।
ಲೋಹಾಽಸುರೋ ಮದೋನ್ಮತ್ತೋ ಬ್ರಹ್ಮವೇಷಧರಃ ಸದಾ ॥ ೩೨ ॥
ಆಗತ್ಯ ಸರ್ವಾನ್ವಿಪ್ರಾಂಶ್ಚ ಧರ್ಷಯೇದ್ಧರ್ಮವಿತ್ತಮಾನ್ ।
ಶೂದ್ರಾಂಶ್ಚ ವಣಿಜಶ್ಚೈವ ದಂಡಘಾತೇನ ತಾಡಯೇತ್ ॥ ೩೩ ॥

---

ಬೇಳೆಗಳು, ಹಪ್ಪಳ, ನಾನಾ ವಿಧಗಳಾದ ಗೊಜ್ಜುಗಳು ಇವೇ ಮೊದಲಾದ ಅನೇಕ ಭೋಜ್ಯವಸ್ತುಗಳಿಂದ ಧರ್ಮಾರಣ್ಯನಿವಾಸಿಗಳಾದ ಹದಿನೆಂಟುಸಾವಿರ ಬ್ರಾಹ್ಮಣರನ್ನು ಅವರ ಮಕ್ಕಳೊಡನೆ ಊಟಮಾಡಿಸಿದರು.

೨೭–೨೮. ದೇವತೆಗಳು ಹೀಗೆ ಒಂದುಸಾವಿರ ವರ್ಷಕಾಲ ಪ್ರತಿದಿನವೂ ಬ್ರಾಹ್ಮಣಭೋಜನವನ್ನು ಮಾಡಿಸುತ್ತ ಯಜ್ಞವನ್ನು ಪೂರೈಸಿದರು. ತರುವಾಯ ದೈತ್ಯರನ್ನು ಕೊಂದು ನಿರ್ಭಯರಾಗಿ ಸ್ವರ್ಗವನ್ನು ಸೇರಿದರು.

೨೯–೩೩. ಹಾಗೆಯೇ ಅಪ್ಸರರೂ, ಬ್ರಹ್ಮ, ವಿಷ್ಣು, ಮಹೇಶ್ವರರೂ ಎಲ್ಲರೂ ರಮ್ಯವಾದ ಕೈಲಾಸ, ವಿಷ್ಣುವಿಗೆ ಪ್ರಿಯವಾದ ವೈಕುಂಠ, ಅತಿಪವಿತ್ರ ವಾದ ಬ್ರಹ್ಮಲೋಕ, ನಂದನವನ ಇವುಗಳನ್ನು ಸೇರಿ ಅತ್ಯಂತ ಸಂತೋಷ ಪಟ್ಟರು. ಎಲ್ಲರೂ ನಿರ್ಭಯವಾಗಿ ತಮ್ಮತಮ್ಮ ಸ್ಥಳಗಳಲ್ಲಿ ಸ್ಥಿರವಾಗಿ ನೆಲೆಸಿ ದರು. ಬಹುಕಾಲದ ಬಳಿಕ ಕೃತಯುಗಾವಸಾನದಲ್ಲಿ ಮತ್ತನಾದ ಲೋಹಾ

CC-0. Jangamwadi Math Collection. Digitized by eGangotri

ವಿಧ್ವಂಸಯೇಚ್ಚ ಯಜ್ಞಾದೀನ್ಹೋಮದ್ರವ್ಯಾಣಿ ಭಕ್ಷಯೇತ್ ।
ವೇದಿಕಾ ದೀರ್ಘಿಕಾ ದೃಷ್ಟ್ವಾ ಕಶ್ಮಲೇನ ಪ್ರದೂಷಯೇತ್ ॥ ೩೪ ॥
ಮೂತ್ರೋತ್ಸರ್ಗಪುರೀಷೇಣ ದೂಷಯೇತ್ಪುಣ್ಯಭೂಮಿಕಾಃ ।
ಗಹನೇನ ತಥಾ ರಾಜನ್ಸ್ತ್ರಿಯೋ ದೂಷಯತೇ ಹಿ ಸಃ ॥ ೩೫ ॥
ತತಸ್ತೇ ವಾಡವಾಃ ಸರ್ವೇ ಲೋಹಾಸುರಭಯಾತುರಾಃ ।
ಪ್ರಣಷ್ಟಾಃ ಸಪರಿವಾರಾ ಗತಾಸ್ತೇ ವೈ ದಿಶೋದಶ ॥ ೩೬ ॥
ವಣಿಜಸ್ತೇ ಭಯೋದ್ವಿಗ್ನಾ ವಿಪ್ರಾನನುಯಯುರ್ನೃಪ ।
ಮಹಾಭಯೇನ ಸಂಭೀತಾ ದೂರಂ ಗತ್ವಾ ವಿಮೃಶ್ಯ ಚ ॥ ೩೭ ॥
ಸಹ ಶೂದ್ರೈರ್ದ್ವಿಜೈಃ ಸರ್ವ ಏಕೀಭೂತ್ವಾ ಗತಾಸ್ತದಾ ।
ಮುಕ್ತಾರಣ್ಯಂ ಪುಣ್ಯತಮಂ ನಿರ್ಜನಂ ಹಿ ಯಯುಶ್ಚ ತೇ ॥ ೩೮ ॥
ನಿವಾಸಂ ಕಾರಯಾಮಾಸುರ್ನಾತಿದೂರೇ ನರೇಶ್ವರ ।
ವಣಿಜ್ನಾಮ್ನಾ ಹಿ ತದ್ಗ್ರಾಮಂ ವಾಸಯಾಮಾಸುರೇವ ತೇ ॥ ೩೯ ॥
ಲೋಹಾಸುರಭಯಾದ್ರಾಜನ್ವಿಪ್ರನಾಮ್ನಾ ವಿನಿರ್ಮಿತಂ ।
ಶಂಭುನಾ ವಣಿಜಾ ಯಸ್ಮಾತ್ತಸ್ಮಾತ್ತನ್ನಾಮಧಾರಣಂ ॥ ೪೦ ॥

---

ಸುರನು ಬ್ರಾಹ್ಮಣವೇಷವನ್ನು ಧರಿಸಿ ಧರ್ಮಾರಣ್ಯಕ್ಕೆ ಬಂದು ಧರ್ಮಜ್ಞರಾದ ಬ್ರಾಹ್ಮಣರನ್ನೂ, ಶೂದ್ರರನ್ನೂ, ವರ್ತಕರನ್ನೂ ದೊಣ್ಣೆಯಿಂದ ಹೊಡೆದನು.

೩೪. ಯಜ್ಞ ಮೊದಲಾದುವುಗಳನ್ನು ಹಾಳುಮಾಡಿದನು. ಹೋಮದ ಸಾಮಗ್ರಿಗಳನ್ನು ತಿಂದನು. ಯಜ್ಞವೇದಿಗಳನ್ನೂ, ಕೊಳಗಳನ್ನೂ ಕೊಳೆಯಿಂದ ಕೆಡಿಸಿದನು.

೩೫. ಮಲಮೂತ್ರಗಳಿಂದ ಪವಿತ್ರವಾದ ಸ್ಥಳಗಳನ್ನು ಅಶುದ್ಧಗೊಳಿಸಿದನು. ಕಾಡಿಗೆ ಹೆಂಗಸರನ್ನು ಒಯ್ದು ಅವರನ್ನು ಕೆಡಿಸಿದನು.

೩೬. ಬಳಿಕ ಲೋಹಾಸುರನ ಭಯದಿಂದ ಪೀಡಿತರಾದ ಬ್ರಾಹ್ಮಣರೆಲ್ಲ ಪರಿವಾರ ಸಹಿತವಾಗಿ ಹತ್ತು ದಿಕ್ಕುಗಳಿಗೆ ಹೋಗಿ ಅಡಗಿಕೊಂಡರು.

೩೭–೩೮. ವರ್ತಕರೂ ಭಯಾರ್ತರಾಗಿ ಬ್ರಾಹ್ಮಣರನ್ನು ಹಿಂಬಾಲಿಸಿದರು. ಅವರು ಅತ್ಯಂತ ಭಯದಿಂದ ದೂರಹೋಗಿ ಶೂದ್ರ ಮತ್ತು ಬ್ರಾಹ್ಮಣರೊಡನೆ ಆಲೋಚಿಸಿ ಒಗ್ಗಟ್ಟಾಗಿ ಜನರಿಲ್ಲದ ಪವಿತ್ರವಾದ ಮುಕ್ತಾರಣ್ಯವನ್ನು ಸೇರಿದರು.

೩೯. ಆ ಅರಣ್ಯದ ಹತ್ತಿರದಲ್ಲಿ ವಣಿಗೆಂಬ ಒಂದು ಗ್ರಾಮದಲ್ಲಿ ಅವರೆಲ್ಲರೂ ವಾಸಮಾಡಿದರು.

೪೦. ಮಹಾರಾಜ! ವರ್ತಕರೂಪಿಯಾದ ಶಿವನೇ ಆ ಬ್ರಾಹ್ಮಣರ ಹೆಸರಿನಲ್ಲಿ ನಿರ್ಮಿಸಿ ಆ ಗ್ರಾಮಕ್ಕೆ ಲೋಹಾಸುರನ ಭಯದಿಂದ ವಣಿಕ್ಪುರವೆಂದು ಹೆಸರನ್ನಿಟ್ಟನು.

CC-0. Jangamwadi Math Collection. Digitized by eGangotri

ಶಂಭುಗ್ರಾಮಮಿತಿ ಖ್ಯಾತಂ ಲೋಕೇ ವಿಖ್ಯಾತಿಮಾಗತಂ ।
ಅಥ ಕೇಚಿದ್ಭಯಾನ್ನಷ್ಟಾ ವಣಿಜಃ ಪ್ರಥಮಂ ತದಾ ॥ ೪೧ ॥
ತೇ ನಾಽತಿದೂರೇ ಗತ್ವಾ ವೈ ಮಂಡಲಂ ಚಕ್ರುರುತ್ತಮಂ ।
ವಿಪ್ರಾಗಮನಕಾಂಕ್ಷಾಸ್ತೇ ತತ್ರ ವಾಸಮಕಲ್ಪಯನ್ ॥ ೪೨ ॥
ಮಂಡಲೇತಿ ಚ ನಾಮ್ನಾ ವೈ ಗ್ರಾಮಂ ಕೃತ್ವಾ ನ್ಯವೀವಸನ್ ।
ವಿಪ್ರಸಾರ್ಥಪರಿಭ್ರಷ್ಟಾಃ ಕೇಚಿತ್ತು ವಣಿಜಸ್ತದಾ ॥ ೪೩ ॥
ಅನ್ಯಮಾರ್ಗೇ ಗತಾ ಯೇ ವೈ ಲೋಹಾಽಸುರಭಯಾರ್ದಿತಾಃ ।
ಧರ್ಮಾರಣ್ಯಾನ್ನಾಽತಿದೂರೇ ಗತ್ವಾ ಚಿಂತಾಮುಪಾಯಯುಃ ॥ ೪೪ ॥
ಕಸ್ಮಿನ್ಮಾರ್ಗೇ ವಯಂ ಪ್ರಾಪ್ತಾಃ ಕಸ್ಮಿನ್ಪ್ರಾಪ್ತಾ ದ್ವಿಜಾತಯಃ ।
ಇತಿ ಚಿಂತಾಂ ಪರಂ ಪ್ರಾಪ್ತಾ ವಾಸಂ ತತ್ರ ತ್ವಕಾರಯನ್ ॥ ೪೫ ॥
ಅನ್ಯಮಾರ್ಗೇ ಗತಾ ಯಸ್ಮಾತ್ತಸ್ಮಾತ್ತನ್ನಾಮ ಸಂಭವಂ ।
ಗ್ರಾಮಂ ನಿವಾಸಯಾಮಾಸುರಡಾಲಂಜಮಿತಿ ಕ್ಷಿತೌ ॥ ೪೬ ॥
ಯಸ್ಮಿನ್ಗ್ರಾಮೇ ನಿವಾಸೀ ಯೋ ಯತ್ಸಂಜ್ಞಶ್ಚ ವಣಿಗ್ಭವೇತ್ ।
ತಸ್ಯ ಗ್ರಾಮಸ್ಯ ತನ್ನಾಮ ಹ್ಯಭವತ್ಪೃಥಿವೀಪತೇ ॥ ೪೭ ॥
ವಣಿಜಶ್ಚ ತಥಾ ವಿಪ್ರಾ ಮೋಹಂ ಪ್ರಾಪ್ತಾ ಭಯಾರ್ದಿತಾಃ ।
ತಸ್ಮಾನ್ಮೋಹೇತಿ ಸಂಜ್ಞಾಸ್ತೇ ರಾಜನ್ಸರ್ವೇ ನಿರಬ್ರುವನ್ ॥ ೪೮ ॥

---

೪೧–೪೪. ಶಂಭುಗ್ರಾಮವೆಂದೂ ಆ ಗ್ರಾಮವು ಪ್ರಸಿದ್ಧವಾಯಿತು. ಮೊದಲು ಭಯದಿಂದ ಓಡಿದ ವರ್ತಕರು ಸಮೀಪದಲ್ಲಿ ಗುಂಪು ಕೂಡಿ ಬ್ರಾಹ್ಮಣರ ಆಗಮನವನ್ನು ನಿರೀಕ್ಷಿಸುತ್ತ ಆ ಗ್ರಾಮಕ್ಕೆ ಮಂಡಲವೆಂದು ಹೆಸರಿಟ್ಟು ವಾಸಿಸಿದರು. ಬ್ರಾಹ್ಮಣರ ಗುಂಪಿನಿಂದ ಚದರಿದ ಕೆಲವರು ವರ್ತಕರು ಬೇರೆ ದಾರಿಯಲ್ಲಿ ಪಯಣಬೆಳೆಸಿ ಧರ್ಮಾರಣ್ಯದ ಸಮೀಪದಲ್ಲಿ ಒಟ್ಟು ಸೇರಿ ಚಿಂತಾಕ್ರಾಂತರಾದರು.

೪೫. "ಯಾವ ದಾರಿಯಲ್ಲಿ ನಾವು ಬಂದೆವೊ? ಯಾವ ದಾರಿಯಲ್ಲಿ ಬ್ರಾಹ್ಮಣರು ಸಾಗಿದರೊ? ಎಂದು ಚಿಂತಿಸುತ್ತ ಅಲ್ಲಿ ವಾಸಮಾಡಿದರು.

೪೬. ಬೇರೆ ದಾರಿಯಲ್ಲಿ ಪ್ರಯಾಣ ಮಾಡಿದುದರಿಂದ ಅಡಾಲಂಜ ವೆಂದು ವಿಖ್ಯಾತವಾದ ಆ ಗ್ರಾಮದಲ್ಲಿ ನೆಲೆಸಿದರು.

೪೭. ಅರಸ! ಯಾವ ಗ್ರಾಮದಲ್ಲಿ ಯಾವ ಹೆಸರಿನ ವೈಶ್ಯನು ವಾಸಿಸಿ ದನೊ, ಆ ಗ್ರಾಮಕ್ಕೆ ಅವನ ಹೆಸರಾಯಿತು.

೪೮. ವರ್ತಕರೂ, ವಿಪ್ರರೂ ಭಯಪೀಡಿತರಾಗಿ ಮೋಹಗೊಂಡುದರಿಂದ ಅವರು ಮೋಹರೆಂದು ಹೆಸರನ್ನು ಪಡೆದರು.

CC-0. Jangamwadi Math Collection. Digitized by eGangotri

ಏವಂ ಪ್ರಧರ್ಷಣಂ ನಷ್ಟಾಸ್ತೇ ಗತಾಶ್ಚ ದಿಶೋದಶ ।
ಧರ್ಮಾರಣ್ಯೇ ನ ತಿಷ್ಠಂತಿ ವಾಡವಾ ವಣಿಜೋಽಪಿವಾ ॥ ೪೯ ॥
ಉದ್ವಸಂ ಹಿ ತದಾ ಜಾತಂ ಧರ್ಮಾರಣ್ಯಂ ಚ ದುರ್ಲಭಂ ।
ಭೂಷಣಂ ಸರ್ವತೀರ್ಥಾನಾಂ ಕೃತಂ ಲೋಹಾಸುರೇಣ ತತ್ ॥ ೫೦ ॥
ನಷ್ಟದ್ವಿಜಂ ನಷ್ಟತೀರ್ಥಂ ಸ್ಥಾನಂ ಕೃತ್ವಾ ಹಿ ದಾನವಃ ।
ಪರಾಂ ಮುದಮವಾಪ್ಯೈವ ಜಗಾಮ ಸ್ವಾಲಯಂ ತತಃ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಜ್ಞಾತಿಭೇದ ವರ್ಣನಂ"ನಾಮ ತ್ರಯೋವಿಂಶೋಽಧ್ಯಾಯಃ

---

೪೯. ಹೀಗೆ ಬ್ರಾಹ್ಮಣರೂ ವರ್ತಕರೂ ದಿಕ್ಕುವಿದಿಕ್ಕುಗಳಿಗೆ ಓಡಿಹೋದುದರಿಂದ ಧರ್ಮಾರಣ್ಯದಲ್ಲಿ ಯಾರೂ ಇರಲಿಲ್ಲ.

೫೦. ಲೋಹಾಸುರನು ಸಕಲತೀರ್ಥಗಳಿಗೆ ಭೂಷಣವಾದ ಆ ಧರ್ಮಾರಣ್ಯವನ್ನು ಶೂನ್ಯಗೊಳಿಸಿದನು.

೫೧. ಹೀಗೆ ಆ ಧರ್ಮಾರಣ್ಯವನ್ನು ಬ್ರಾಹ್ಮಣರೂ, ತೀರ್ಥವೂ ಇಲ್ಲದುದನ್ನಾಗಿಸಿ ಲೋಹಾಸುರನು ಸಂತೋಷಗೊಂಡು ತನ್ನ ಮನೆಗೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಜ್ಞಾತಿಭೇದವರ್ಣನ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ಧರ್ಮಾರಣ್ಯತೀರ್ಥಪ್ರಭಾವಕಥನಂ

ವ್ಯಾಸ ಉವಾಚ :—

ಏತತ್ತೀರ್ಥಸ್ಯ ಮಾಹಾತ್ಮ್ಯಂ ಮಯಾ ಪ್ರೋಕ್ತಂ ತವಾಽಗ್ರತಃ ।
ಅನೇಕಪೂರ್ವಜನ್ಮೋತ್ಥಪಾತಕಘ್ನಂ ಮಹೀಪತೇ ॥ ೧ ॥
ಸ್ಥಾನಾನಾಮುತ್ತಮಂ ಸ್ಥಾನಂ ಪರಂ ಸ್ವಸ್ತ್ಯಯನಂ ಮಹತ್ ।
ಸ್ಕಂದಸ್ಯಾಽಗ್ರೇ ಪುರಾ ಪ್ರೋಕ್ತಂ ಮಹಾರುದ್ರೇಣ ಧೀಮತಾ ॥ ೨ ॥
ತ್ವಂ ಪಾರ್ಥ ತತ್ರ ಸ್ನಾತ್ವಾ ಹಿ ಮೋಕ್ಷ್ಯಸೇ ಸರ್ವಪಾತಕಾತ್ ।
ತಚ್ಛ್ರುತ್ವಾ ವ್ಯಾಸವಾಕ್ಯಂ ಹಿ ಧರ್ಮರಾಜೋ ಯುಧಿಷ್ಠಿರಃ ॥ ೩ ॥
ಧರ್ಮಾತ್ಮಜಸ್ತದಾ ತಾತ ಧರ್ಮಾಽರಣ್ಯಂ ಸಮಾವಿಶತ್ ।
ಮಹಾಪಾತಕನಾಶಾಯ ಸಾಧುಪಾಲನತತ್ಪರಃ ॥ ೪ ॥
ವಿಗಾಹ್ಯ ತತ್ರ ತೀರ್ಥಾನಿ ದೇವತಾಯತನಾನಿ ಚ ।
ಇಷ್ಟಾಪೂರ್ತಾದಿಕಂ ಸರ್ವಂ ಕೃತಂ ತೇನ ಯಥೇಪ್ಸಿತಂ ॥ ೫ ॥
ತತಃ ಪಾಪವಿನಿರ್ಮುಕ್ತಃ ಪುನರ್ಗತ್ವಾ ಸ್ವಕಂ ಪುರಂ ।
ಇಂದ್ರಪ್ರಸ್ಥಂ ಮಹಾಸೇನ ಶಶಾಸ ವಸುಧಾತಲಂ ॥ ೬ ॥

---

## ಕನ್ನಡದ ಅನುವಾದ

### ಧರ್ಮಾರಣ್ಯತೀರ್ಥಪ್ರಭಾವಕಥನ

೧. ವ್ಯಾಸನು ಹೇಳುತ್ತಾನೆ:—"ಮಹಾರಾಜ! ನಾನಾ ಜನ್ಮಗಳ ಪಾಪಗಳನ್ನು ನೀಗಿಸುವ ಈ ಧರ್ಮಾರಣ್ಯದ ಮಾಹಾತ್ಮ್ಯೆಯನ್ನು ನಾನು ನಿನಗೆ ಹೇಳಿದ್ದೇನೆ.

೨. ಹಿಂದೆ ಪ್ರಾಜ್ಞನಾದ ಮಹಾದೇವನು ಸ್ಕಂದನ ಮುಂದೆ ಈ ಕ್ಷೇತ್ರವು ಸಕಲ ಕ್ಷೇತ್ರಗಳಲ್ಲಿ ಉತ್ತಮವಾದುದೂ ಅತ್ಯಂತ ಮಂಗಳವನ್ನೀಯುವುದೂ ಆದ ಕ್ಷೇತ್ರವೆಂದು ಹೇಳಿರುವನು.

೩-೪. ಧರ್ಮರಾಜ! ನೀನು ಅಲ್ಲಿ ಮಿಂದರೆ ಸಕಲ ದುರಿತಗಳಿಂದ ಮುಕ್ತನಾಗುವೆ" ಎಂದು ವ್ಯಾಸನು ಹೇಳಲು ಧರ್ಮರಾಜನು ಅದನ್ನು ಕೇಳಿ ಮಹಾ ಪಾಪನಿವಾರಣೆಗಾಗಿ ಧರ್ಮಾರಣ್ಯವನ್ನು ಹೊಕ್ಕನು.

೫. ಅವನು ಅಲ್ಲಿ ತೀರ್ಥಗಳಲ್ಲಿ ಮಿಂದು ದೇವಾಲಯಗಳನ್ನು ಪ್ರವೇಶಿಸಿ ಯಥೇಚ್ಛವಾಗಿ ಯಾಗಮಾಡುವುದು, ಕೆರೆಕಟ್ಟುವುದು ಮೊದಲಾದ ಪವಿತ್ರ ಕಾರ್ಯಗಳನ್ನು ಮಾಡಿದನು.

೬. ಎಲೈ ಸ್ಕಂದನೆ! ಬಳಿಕ ಯುಧಿಷ್ಠಿರನು ಸಕಲ ಪಾಪಮುಕ್ತನಾಗಿ ಇಂದ್ರಪ್ರಸ್ಥಪುರವನ್ನು ಸೇರಿ ಭೂಮಂಡಲವನ್ನು ಆಳುತ್ತಿದ್ದನು.

CC-0. Jangamwadi Math Collection. Digitized by eGangotri

ಇದಂ ಹಿ ಸ್ಥಾನಮಾಸಾದ್ಯ ಯೇ ಶೃಣ್ವಂತಿ ನರೋತ್ತಮಾಃ ।
ತೇಷಾಂ ಭುಕ್ತಿಶ್ಚ ಮುಕ್ತಿಶ್ಚ ಭವಿಷ್ಯತಿ ನ ಸಂಶಯಃ ॥ ೭ ॥
ಭುಕ್ತ್ವಾ ಭೋಗಾನ್ಪಾರ್ಥಿವಾಂಶ್ಚ ಪರಂ ನಿರ್ವಾಣಮಾಪ್ನುಯುಃ ।
ಶ್ರಾದ್ಧಕಾಲೇ ಚ ಸಂಪ್ರಾಪ್ತೇ ಯೇ ಪಠಂತಿ ದ್ವಿಜಾತಯಃ ॥ ೮ ॥
ಉದ್ಧೃತಾಃ ಪಿತರಸ್ತೈಸ್ತು ಯಾವಚ್ಚಂದ್ರಾರ್ಕಭೂಮಯಃ ।
ದ್ವಾಪರೇ ಚ ಯುಗೇ ಭೂತ್ವಾ ವ್ಯಾಸೇನೋಕ್ತಂ ಮಹಾತ್ಮನಾ ॥ ೯ ॥
ವಾರಿಮಾತ್ರೇ ಧರ್ಮವಾಪ್ಯಾಂ ಗಯಾಶ್ರಾದ್ಧಫಲಂ ಲಭೇತ್ ।
ಅತ್ರಾಗತಸ್ಯ ಮರ್ತ್ಯಸ್ಯ ಪಾಪಂ ಯಮಪದೇ ಸ್ಥಿತಂ ॥ ೧೦ ॥
ಕಥಿತಂ ಧರ್ಮಪುತ್ರೇಣ ಲೋಕಾನಾಂ ಹಿತಕಾಮ್ಯಯಾ ।
ವಿನಾ ಅನ್ನೈರ್ವಿನಾ ದರ್ಭೈರ್ವಿನಾ ಚಾಸನಮೇವ ವಾ ॥ ೧೧ ॥
ತೋಯೇನ ನಾಶಮಾಯಾತಿ ಕೋಟಿಜನ್ಮಕೃತಂ ತ್ವಘಂ ।
ಸಹಸ್ರಮುರುಶೃಂಗೀಣಾಂ ಧೇನೂನಾಂ ಕುರುಜಾಂಗಲೇ ।
ದತ್ವಾ ಸೂರ್ಯಗ್ರಹೇ ಪುಣ್ಯಂ ಧರ್ಮವಾಪ್ಯಾಂ ಚ ತರ್ಪಣಂ ॥ ೧೨ ॥
ಏತದ್ವಃ ಕಥಿತಂ ಸರ್ವಂ ಧರ್ಮಾರಣ್ಯಸ್ಯ ಚೇಷ್ಟಿತಂ ।
ಯಚ್ಛ್ರುತ್ವಾ ಬ್ರಹ್ಮಹಾ ಗೋಘ್ನೋ ಮುಚ್ಯತೇ ಸರ್ವಪಾತಕೈಃ ॥ ೧೩ ॥

---

೭. ನರನು ಇಲ್ಲಿಗೆ ಬಂದು ಇದರ ಮಹಾತ್ಮ್ಯೆಯನ್ನು ಕೇಳಿದರೆ ಅವನಿಗೆ ವಿಷಯಭೋಗವೂ, ಮುಕ್ತಿಯೂ ಲಭಿಸುವುದು.

೮–೯. ಭೂಮಿಯಲ್ಲಿ ಸಕಲ ವಿಷಯಭೋಗಗಳನ್ನನುಭವಿಸಿ ಮೋಕ್ಷವನ್ನು ಪಡೆಯುವನು. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಇದನ್ನು ಪಠಿಸಿದರೆ ಅವರ ಪಿತೃಗಳು ಚಂದ್ರ, ಸೂರ್ಯ, ಭೂಮಿಗಳು ಇರುವವರೆಗೆ ಉದ್ಧೃತರಾಗುವರು. ಹೀಗೆಂದು ದ್ವಾಪರಯುಗದಲ್ಲಿ ಮಹಾತ್ಮರಾದ ವ್ಯಾಸರು ಹೇಳಿರುವರು.

೧೦–೧೨. ಇಲ್ಲಿರುವ ಧರ್ಮಕೂಪದಲ್ಲಿ ನೀರಿನಿಂದ ತರ್ಪಣಗೈದರೆ ಗಯಾಕ್ಷೇತ್ರದಲ್ಲಿ ಶ್ರಾದ್ಧಮಾಡಿದಷ್ಟು ಫಲವು ಲಭಿಸುವುದು. ಇಲ್ಲಿಗೆ ಬಂದ ಮನುಷ್ಯನ ಪಾಪವು ಯಮಪುರಿಯನ್ನೈದುವುದು. ಹೀಗೆಂದು ಧರ್ಮರಾಜನು ಲೋಕಕ್ಕೆ ಹಿತವನ್ನುಂಟುಮಾಡಲಿಚ್ಛೆಯಿಂದ ಹೇಳಿದ್ದಾನೆ. ಅನ್ನ, ದರ್ಭೆ, ಆಸನಗಳಿಲ್ಲದೆ ಕೇವಲ ತರ್ಪಣಹೊಂದುವುದರಿಂದ ಮಾನವನು ಅನೇಕ ಜನ್ಮಗಳಲ್ಲಿ ಮಾಡಿದ ಪಾಪದಿಂದ ಮುಕ್ತನಾಗುವನು. ಧರ್ಮವಾಪಿಯಲ್ಲಿ ತರ್ಪಣಮಾಡುವುದರಿಂದ ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ದೊಡ್ಡಕೊಂಬುಗಳುಳ್ಳ ಸಾವಿರ ಹಸುಗಳನ್ನು ದಾನಮಾಡಿದ ಪುಣ್ಯವು ದೊರಕುವುದು.

೧೩. ಧರ್ಮಾರಣ್ಯದ ಮಾಹಾತ್ಮ್ಯವನ್ನೆಲ್ಲ ನಿಮಗೆ ಹೇಳಿರುವೆನು. ಇದನ್ನು ಕೇಳಿದರೆ ಬ್ರಹ್ಮಹತ್ಯ ಮತ್ತು ಗೋಹತ್ಯಮಾಡಿದವನೂ ಸಮಸ್ತ ದುರಿತಗಳಿಂದ ಮುಕ್ತನಾಗುವನು.

CC-0. Jangamwadi Math Collection. Digitized by eGangotri

ಏಕವಿಂಶತಿವಾರೈಸ್ತು ಗಯಾಯಾಂ ಪಿಂಡಪಾತನೇ ।
ತತ್ಫಲಂ ಸಮವಾಪ್ನೋತಿ ಸಕೃದಸ್ಮಿಂಚ್ಛ್ರುತೇ ಸತಿ ॥ ೧೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಧರ್ಮಾರಣ್ಯತೀರ್ಥಪ್ರಭಾವಕಥನಂ"ನಾಮ ಚತುರ್ವಿಂಶೋಽಧ್ಯಾಯಃ

---

೧೪. ಒಂದುಸಾರಿ ಈ ಮಾಹಾತ್ಮ್ಯೆಯನ್ನು ಕೇಳಿದರೆ ಇಪ್ಪತ್ತೊಂದುಸಾರಿ ಗಯೆಯಲ್ಲಿ ಪಿತೃಗಳಿಗೆ ಪಿಂಡಪ್ರದಾನಮಾಡಿದ ಫಲವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯಮಾಹಾತ್ಮ್ಯದಲ್ಲಿ "ಧರ್ಮಾರಣ್ಯತೀರ್ಥಪ್ರಭಾವಕಥನ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY



CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ಸರಸ್ವತೀಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥಾಽನ್ಯತ್ಸಂಪ್ರವಕ್ಷ್ಯಾಮಿ ತೀರ್ಥಮಾಹಾತ್ಮ್ಯಮುತ್ತಮಂ ।
ಧರ್ಮಾರಣ್ಯೇ ಯಥಾಽಽನೀತಾ ಸತ್ಯಲೋಕಾತ್ಸರಸ್ವತೀ ॥ ೧ ॥
ಮಾರ್ಕಂಡೇಯಂ ಸುಖಾಸೀನಂ ಮಹಾಮುನಿನಿಷೇವಿತಂ ।
ತರುಣಾದಿತ್ಯಸಂಕಾಶಂ ಸರ್ವಶಾಸ್ತ್ರವಿಶಾರದಂ ॥ ೨ ॥
ಸರ್ವತೀರ್ಥಮಯಂ ದಿವ್ಯಮೃಷೀಣಾಂ ಪ್ರವರಂ ದ್ವಿಜಂ ।
ಆಸನಸ್ಥಂ ಸಮಾಯುಕ್ತಂ ಧನ್ಯಂ ಪೂಜ್ಯಂ ದೃಢವ್ರತಂ ॥ ೩ ॥
ಯೋಗಾತ್ಮಾನಂ ಪರಂ ಶಾಂತಂ ಕಮಂಡಲುಧರಂ ವಿಭುಂ ।
ಅಕ್ಷಸೂತ್ರಧರಂ ಶಾಂತಂ ತಥಾಽಕಲ್ಪಾಂತವಾಸಿನಂ ॥ ೪ ॥
ಅಕ್ಷೋಭ್ಯಂ ಜ್ಞಾನಿನಂ ಸ್ವಸ್ಥಂ ಪಿತಾಮಹಸಮದ್ಯುತಿಂ ।
ಏವಂ ದೃಷ್ಟ್ವಾ ಸಮಾಧಿಸ್ಥಂ ಪ್ರಹರ್ಷೋತ್ಫುಲ್ಲಲೋಚನಂ ॥ ೫ ॥
ಪ್ರಣಮ್ಯ ಸ್ತುತಿಭಿರ್ಯುಕ್ತ್ಯಾ ಮಾರ್ಕಂಡಂ ಮುನಯೋಽಬ್ರುವನ್ ।
ಭಗವನ್ನೈಮಿಷಾರಣ್ಯೇ ಸತ್ರೇ ದ್ವಾದಶವಾರ್ಷಿಕೇ ॥ ೬ ॥

---

## ಕನ್ನಡದ ಅನುವಾದ

### ಸರಸ್ವತೀಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ತರುವಾಯ ನಿನಗೆ ಮತ್ತೊಂದು ಉತ್ತಮ ತೀರ್ಥದ ಮಾಹಾತ್ಮ್ಯವನ್ನು ಹೇಳುವೆನು. ಧರ್ಮಾರಣ್ಯಕ್ಕೆ ಸತ್ಯಲೋಕದಿಂದ ಸರಸ್ವತಿಯನ್ನು ತಂದ ಬಗೆಯನ್ನು ತಿಳಿಸುವೆನು, ಕೇಳು.

೨-೯. ಮುನಿಗಳು ಸುಖವಾಗಿ ಕುಳಿತಿರುವವನೂ, ಮಹರ್ಷಿಗಳಿಂದ ಸೇವಿಸಲ್ಪಟ್ಟವನೂ, ತರುಣಸೂರ್ಯನಿಗೆ ಸಮಾನನೂ, ಸಕಲ ಶಾಸ್ತ್ರನಿಪುಣನೂ, ಸಕಲ ದಿವ್ಯತೀರ್ಥರೂಪನೂ, ಮಹರ್ಷಿವರೇಣ್ಯನೂ, ಪುಣ್ಯಶಾಲಿಯೂ, ಪೂಜ್ಯನೂ, ಸ್ಥಿರವಾದ ವ್ರತವುಳ್ಳವನೂ, ಯೋಗಿಯೂ, ಅತಿ ಶಾಂತನೂ, ಕಮಂಡಲಧಾರಿಯೂ, ಜಪಸರವನ್ನು ಹಿಡಿದವನೂ, ಚಿರಂಜೀವಿಯೂ, ಸ್ಥಿರನೂ, ಜ್ಞಾನಿಯೂ, ದೃಢವಾದ ಮನಸ್ಸುಳ್ಳವನೂ, ಬ್ರಹ್ಮನಿಗೆ ಸಮಾನವಾದ ಕಾಂತಿಯುಳ್ಳವನೂ, ಸಮಾಧಿನಿರತನೂ, ಸಂತೋಷದಿಂದರಳಿದ ನಯನಗಳುಳ್ಳವನೂ ಆಗಿರುವ ಮಾರ್ಕಂಡೇಯನನ್ನು ನಮಸ್ಕರಿಸಿ ಸ್ತುತಿಸಿ ಇಂತೆಂದರು. ಪೂಜ್ಯರೆ! ನೈಮಿಷಾರಣ್ಯದಲ್ಲಿ ಹನ್ನೆರಡುವರ್ಷ ನೆರವೇರಿಸುವ ಸತ್ರಯಾಗದಲ್ಲಿ

CC-0. Jangamwadi Math Collection. Digitized by eGangotri

ತ್ವಯಾಽವತಾರಿತಾ ಬ್ರಹ್ಮನ್ನದೀ ಯಾ ಬ್ರಹ್ಮಣಃ ಸುತಾ ।
ತಥಾ ಕೃತಂ ಚ ತತ್ರೈವ ಗಂಗಾಽವತರಣಂ ಕ್ಷಿತೌ ॥ ೭ ॥
ಗೀಯಮಾನೇ ಕುಲಪತೇಃ ಶೌನಕಸ್ಯ ಮುನೇಃ ಪುರಃ ।
ಸೂತೇನ ಮುನಿನಾ ಖ್ಯಾತಮನ್ಯೇಷಾಮಪಿ ಶೃಣ್ವತಾಂ ॥ ೮ ॥
ತಚ್ಛ್ರುತ್ವಾ ಮಹದಾಖ್ಯಾನಮಸ್ಮಾಕಂ ಹೃದಿ ಸಂಸ್ಥಿತಂ ।
ಪಾಪಘ್ನೀ ಪುಣ್ಯಜನನೀ ಪ್ರಾಣಿನಾಂ ದರ್ಶನಾದಪಿ ॥ ೯ ॥

ಮಾರ್ಕಂಡೇಯ ಉವಾಚ :—

ಧರ್ಮಾರಣ್ಯೇ ಮಯಾ ವಿಪ್ರಾಃ ಸತ್ಯಲೋಕಾತ್ಸರಸ್ವತೀ ।
ಸಮಾನೀತಾ ಸುರೇಖಾದ್ರೌ ಶರಣ್ಯಾ ಶರಣಾಽರ್ಥಿನಾಂ ॥ ೧೦ ॥
ಭಾದ್ರಪದೇ ಸಿತೇಪಕ್ಷೇ ದ್ವಾದಶೀ ಪುಣ್ಯಸಂಯುತಾ ।
ತತ್ರ ದ್ವಾರಾವತೀತೀರ್ಥೇ ಮುನಿಗಂಧರ್ವಸೇವಿತೇ ॥ ೧೧ ॥
ತಸ್ಮಿನ್ದಿನೇ ಚ ತತ್ತೀರ್ಥೇ ಪಿಂಡದಾನಾದಿ ಕಾರಯೇತ್ ।
ತತ್ಫಲಂ ಸಮವಾಪ್ನೋತಿ ಪಿತೄಣಾಂ ದತ್ತಮಕ್ಷಯಂ ॥ ೧೨ ॥
ಮಹದಾಖ್ಯಾನಮಖಿಲಂ ಪಾಪಘ್ನಂ ಪುಣ್ಯದಂ ಚ ಯತ್ ।
ಪವಿತ್ರಂ ಯತ್ಪವಿತ್ರಾಣಾಂ ಮಹಾಪಾತಕನಾಶನಂ ॥ ೧೩ ॥
ಸರ್ವಮಂಗಲಮಾಂಗಲ್ಯಂ ಪುಣ್ಯಂ ಸಾರಸ್ವತಂ ಜಲಂ ।
ಊರ್ಧ್ವಂ ಕಿಂ ದಿವಿ ಯತ್ಪುಣ್ಯಂ ಪ್ರಭಾಸಾಂತೇ ವ್ಯವಸ್ಥಿತಂ ॥ ೧೪ ॥

---

ಸೂತರು ಶೌನಕರ ಮುಂದೆ ಎಲ್ಲ ಮುನಿಗಳು ಕೇಳುತ್ತಿರುವಾಗ, ಬ್ರಹ್ಮನ ಮಗಳಾಗಿ ದರ್ಶನಮಾಡುವುದರಿಂದಲೇ ಎಲ್ಲ ಪ್ರಾಣಿಗಳ ಪಾಪಗಳನ್ನು ನೀಗಿಸಿ ಪುಣ್ಯವನ್ನುಂಟುಮಾಡುವ ಸರಸ್ವತೀನದಿಯನ್ನೂ, ಗಂಗೆಯನ್ನೂ, ಭೂಮಿಗೆ ಇಳಿಸಿದ ಕಥೆಯನ್ನು ನೀವು ಹೇಳಿದಿರಿ. ಅದು ಈಗ ನಮ್ಮ ಮನಸ್ಸಿನಲ್ಲಿ ನೆಲಸಿದೆ.

೧೦. ಮಾರ್ಕಂಡೇಯನು ಹೇಳುತ್ತಾನೆ:— ಅಯ್ಯಾ ದ್ವಿಜರೆ! ನಾನು ಧರ್ಮಾರಣ್ಯದಲ್ಲಿ ರಕ್ಷಣೆಯನ್ನಪೇಕ್ಷಿಸುವವರನ್ನು ಪೊರೆಯುವ ಸರಸ್ವತೀನದಿಯನ್ನು ಸತ್ಯಲೋಕದಿಂದ ಸುರೇಖಪರ್ವತದಲ್ಲಿಳಿಸಿದೆನು.

೧೧–೧೨. ಭಾದ್ರಪದ ಕೃಷ್ಣಪಕ್ಷದ ದ್ವಾದಶಿಯ ದಿನ ಮುನಿಗಳಿಂದಲೂ, ಗಂಧರ್ವರಿಂದಲೂ ಸೇವಿಸಲ್ಪಟ್ಟ ಆ ದ್ವಾರಾವತೀತೀರ್ಥದಲ್ಲಿ ಪಿತೃಗಳಿಗೆ ಮಾಡಿದ ಪಿಂಡಪ್ರದಾನವು ಅಕ್ಷಯವಾಗುವುದು.

೧೩. ಈ ಮಹಾಖ್ಯಾನವು ಅತಿ ಪವಿತ್ರವೂ, ಪಾಪನಾಶಕವೂ, ಪುಣ್ಯಪ್ರದವೂ ಆಗಿರುವುದು.

೧೪. ದೇವಲೋಕದಲ್ಲಿರುವ ಪ್ರಭಾಸತೀರ್ಥವು ಸಮಸ್ತ ಮಂಗಳವನ್ನೀಯುವ ಈ ಸರಸ್ವತೀತೀರ್ಥದಿಂದುಂಟಾಗಿರುವುದು.

CC-0. Jangamwadi Math Collection. Digitized by eGangotri

ಸಾರಸ್ವತಜಲಂ ನೄಣಾಂ ಬ್ರಹ್ಮಹತ್ಯಾಂ ವ್ಯಪೋಹತಿ ।
ಸರಸ್ವತ್ಯಾಂ ನರಾಃ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ।
ಪಶ್ಚಾತ್ಪಿಂಡಪ್ರದಾತಾರೋ ನ ಭವಂತಿ ಸ್ತನಂಧಯಾಃ ॥ ೧೫ ॥
ಯಥಾ ಕಾಮದುಘಾ ಗಾವೋ ಭವಂತೀಷ್ಟಫಲಪ್ರದಾಃ ।
ತಥಾ ಸ್ವರ್ಗಾಽಪವರ್ಗೈಕಹೇತುಭೂತಾ ಸರಸ್ವತೀ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಸರಸ್ವತೀ ಮಾಹಾತ್ಮ್ಯವರ್ಣನಂ" ನಾಮ ಪಂಚವಿಂಶೋಽಧ್ಯಾಯಃ

---

೧೫. ಸರಸ್ವತೀನದಿಯ ನೀರು ಮಾನವರ ಬ್ರಹ್ಮಹತ್ಯಾದೋಷವನ್ನೂ ಪರಿಹರಿಸುವುದು. ಸರಸ್ವತೀನದಿಯಲ್ಲಿ ಮಿಂದು ಪಿಂಡಪ್ರದಾನಮಾಡಿ ಪಿತೃಗಳನ್ನು ತೃಪ್ತಿಗೊಳಿಸುವವರು ತಿರುಗಿ ಭೂಲೋಕದಲ್ಲಿ ಹುಟ್ಟುವುದಿಲ್ಲ.

೧೬. ಕಾಮಧೇನುವು ಇಷ್ಟಾರ್ಥಗಳನ್ನೀಯುವಂತೆ ಸರಸ್ವತೀನದಿಯು ತನ್ನಲ್ಲಿ ಮಿಂದವರಿಗೆ ಸ್ವರ್ಗ ಮತ್ತು ಮೋಕ್ಷಗಳನ್ನು ಕೊಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಸರಸ್ವತೀಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಷಡ್ವಿಂಶೋಽಧ್ಯಾಯಃ

### ದ್ವಾರಕಾಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :–

ಮಾರ್ಕಂಡೇಯೋದ್ಘಾಟಿತಂ ವೈ ಸ್ವರ್ಗದ್ವಾರಮುಪಾವೃತಂ ।
ತತ್ರ ಯೇ ದೇಹಸಂತ್ಯಾಗಂ ಕುರ್ವಂತಿ ಫಲಕಾಂಕ್ಷಯಾ ॥ ೧ ॥
ಲಭಂತೇ ತತ್ಫಲಂ ಹ್ಯಂತೇ ವಿಷ್ಣೋಃ ಸಾಯುಜ್ಯಮಾಪ್ನುಯುಃ ।
ಅತಃ ಕಿಂ ಬಹುನೋಕ್ತೇನ ದ್ವಾರವತ್ಯಾಂ ಸದಾ ನರೈಃ ॥ ೨ ॥
ದೇಹತ್ಯಾಗಃ ಪ್ರಕರ್ತವ್ಯೋ ವಿಷ್ಣುಲೋಕಜಿಗೀಷಯಾ ।
ಅನಾಶಕೇ ಜಲೇ ವಾಽಗ್ನೌ ಯೇ ಚ ಸಂತಿ ನರೋತ್ತಮಾಃ ।
ಸರ್ವಪಾಪವಿನಿರ್ಮುಕ್ತಾ ಯಾಂತಿ ವಿಷ್ಣೋಃ ಪುರೀಂ ಸದಾ ॥ ೩ ॥
ಅನ್ಯೋಽಪಿ ವ್ಯಾಧಿರಹಿತೋ ಗಚ್ಛೇದನಶನಂ ತು ಯಃ ।
ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪುರೀಂ ನರಃ ॥ ೪ ॥
ಶತವರ್ಷಸಹಸ್ರಾಣಾಂ ವಸೇದಂತೇ ದಿವಿ ದ್ವಿಜಃ ।
ಬ್ರಾಹ್ಮಣೇಭ್ಯಃ ಪರಂ ನಾಽಸ್ತಿ ಪವಿತ್ರಂ ಪಾವನಂ ಭುವಿ ॥ ೫ ॥

---

## ಕನ್ನಡದ ಅನುವಾದ

### ದ್ವಾರಕಾಮಾಹಾತ್ಮ್ಯವರ್ಣನ

೧–೩. ವ್ಯಾಸನು ಹೇಳುತ್ತಾನೆ:–ಮಾರ್ಕಂಡೇಯಮಹರ್ಷಿಯು ಸ್ವರ್ಗದ ಬಾಗಿಲನ್ನು ತೆಗೆದಿರುವನು. ಅಲ್ಲಿ ಯಾರು ಯಾವ ಫಲದ ಅಪೇಕ್ಷೆಯಿಂದ ದೇಹವನ್ನು ಬಿಡುವರೊ, ಅವರು ಆ ಫಲವನ್ನು ಪಡೆದು ಕೊನೆಯಲ್ಲಿ ವಿಷ್ಣುವಿನ ಸಾಯುಜ್ಯವನ್ನು ಹೊಂದುವರು. ಇನ್ನು ಹೆಚ್ಚು ಹೇಳಿ ಪ್ರಯೋಜನವೇನು ? ಆ ದ್ವಾರವತಿಯಲ್ಲಿ ವಿಷ್ಣುಲೋಕವನ್ನು ಹೊಂದುವ ಅಪೇಕ್ಷೆಯಿಂದ ನೀರಿನಲ್ಲಾಗಲಿ, ಅಗ್ನಿಯಲ್ಲಾಗಲಿ ದೇಹವನ್ನು ತ್ಯಜಿಸಿದ ನರೋತ್ತಮರು ಸಕಲ ಪಾಪ ಮುಕ್ತರಾಗಿ ವೈಕುಂಠವನ್ನು ಹೊಂದುವರು.

೪–೫. ಅಲ್ಲಿ ರೋಗವಿಲ್ಲದವನು ಉಪವಾಸಮಾಡಿದರೆ ಸಕಲ ಪಾಪವಿಮುಕ್ತನಾಗಿ ವೈಕುಂಠವನ್ನು ಸೇರುವನು. ಒಂದುಲಕ್ಷ ವರ್ಷದವರೆಗೆ ಆ ದ್ವಿಜನು ಸ್ವರ್ಗವಾಸಿಯಾಗುವನು. ಭೂಮಿಯಲ್ಲಿ ಬ್ರಾಹ್ಮಣರಿಗಿಂತ ಪವಿತ್ರವಾದ ವಸ್ತುವು ಇಲ್ಲ.

CC-0. Jangamwadi Math Collection. Digitized by eGangotri

ಉಪವಾಸೈಸ್ತಥಾ ತುಲ್ಯಂ ತಪಃ ಕರ್ಮ ನ ವಿದ್ಯತೇ ।
ನಾಽಸ್ತಿ ವೇದಾತ್ಪರಂ ಶಾಸ್ತ್ರಂ ನಾಽಸ್ತಿ ಮಾತೃಸಮೋ ಗುರುಃ ॥ ೬ ॥
ನ ಧರ್ಮಾತ್ಪರಮಸ್ತೀಹ ತಪೋ ನಾಽನಶನಾತ್ಪರಂ ।
ಸ್ನಾತ್ವಾ ಯಃ ಕುರುತೇಽತ್ರಾಪಿ ಶ್ರಾದ್ಧಂ ಪಿಂಡೋದಕಕ್ರಿಯಾಂ ॥ ೭ ॥
ತೃಪ್ಯಂತಿ ಪಿತರಸ್ತಸ್ಯ ಯಾವದ್ಬ್ರಹ್ಮದಿವಾನಿಶಂ ।
ತತ್ರ ತೀರ್ಥೇ ನರಃ ಸ್ನಾತ್ವಾ ಕೇಶವಂ ಯಸ್ತು ಪೂಜಯೇತ್ ॥ ೮ ॥
ಸಮುಕ್ತಃ ಪಾತಕೈಃ ಸರ್ವೈರ್ವಿಷ್ಣುಲೋಕಮವಾಪ್ನುಯಾತ್ ।
ತೀರ್ಥಾನಾಮುತ್ತಮಂ ತೀರ್ಥಂ ಯತ್ರ ಸನ್ನಿಹಿತೋ ಹರಿಃ ॥ ೯ ॥
ಹರತೇ ಸಕಲಂ ಪಾಪಂ ತಸ್ಮಿಂಸ್ತೀರ್ಥೇ ಸ್ಥಿತಸ್ಯ ಸಃ ।
ಮುಕ್ತಿದಂ ಮೋಕ್ಷಕಾಮಾನಾಂ ಧನದಂ ಚ ಧನಾರ್ಥಿನಾಂ ।
ಆಯುರ್ದಂ ಸುಖದಂ ಚೈವ ಸರ್ವಕಾಮಫಲಪ್ರದಂ ॥ ೧೦ ॥
ಕಿಮನ್ಯೇನಾಽತ್ರ ತೀರ್ಥೇನ ಯತ್ರ ದೇವೋ ಜನಾರ್ದನಃ ।
ಸ್ವಯಂ ವಸತಿ ನಿತ್ಯಂ ಹಿ ಸರ್ವೇಷಾಮನುಕಂಪಯಾ ॥ ೧೧ ॥
ತತ್ರ ಯದ್ದೀಯತೇ ಕಿಂಚಿದ್ದಾನಂ ಶ್ರದ್ಧಾಸಮನ್ವಿತಂ ।
ಅಕ್ಷಯಂ ತದ್ಭವೇತ್ಸರ್ವಮಿಹಲೋಕೇ ಪರತ್ರ ಚ ॥ ೧೨ ॥

---

೬. ಉಪವಾಸಕ್ಕೆ ಸದೃಶವಾದ ತಪಸ್ಸೂ, ಕರ್ಮವೂ, ವೇದಕ್ಕಿಂತ ಉತ್ತಮವಾದ ಶಾಸ್ತ್ರವೂ, ತಾಯಿಗೆ ಸಮಾನವಾದ ಗುರುವೂ ಇಲ್ಲ.

೭–೧೦. ಧರ್ಮಕ್ಕಿಂತಲೂ ಉತ್ತಮವಾದ ತಪಸ್ಸಿಲ್ಲ. ಉಪವಾಸಕ್ಕಿಂತಲೂ ಉತ್ತಮವಾದ ಧರ್ಮಾನುಷ್ಠಾನವಿರುವುದಿಲ್ಲ. ಇಲ್ಲಿ ಮಿಂದು ಶ್ರಾದ್ಧ ಮಾಡಿ ತರ್ಪಣಗೈದರೆ ಅವನ ಪಿತೃಗಳು ಬ್ರಹ್ಮನ ಹಗಲು ರಾತ್ರಿಗಳು ಇರುವವರೆಗೆ ತೃಪ್ತಿಗೊಳ್ಳುತ್ತಾರೆ. ಈ ತೀರ್ಥದಲ್ಲಿ ಮಾನವನು ಮಿಂದು ವಿಷ್ಣುವನ್ನು ಪೂಜಿಸಿದರೆ ಅವನು ಪಾಪರಹಿತರಾದ ಎಲ್ಲರೊಡನೆ ವಿಷ್ಣುಲೋಕವನ್ನು ಸೇರುವನು. ಸಮಸ್ತತೀರ್ಥಗಳಲ್ಲಿಯೂ ಉತ್ತಮವಾದ ಈ ತೀರ್ಥದಲ್ಲಿ ಶ್ರೀವಿಷ್ಣುವು ಸನ್ನಿಹಿತನಾಗಿದ್ದು ಇಲ್ಲಿರುವ ಭಕ್ತರ ಸಕಲಪಾಪಗಳನ್ನು ಪರಿಹರಿಸುವನು. ಈ ತೀರ್ಥವು ಮೋಕ್ಷಾರ್ಥಿಗಳಿಗೆ ಮೋಕ್ಷವನ್ನೂ, ಧನಾರ್ಥಿಗಳಿಗೆ ಧನವನ್ನೂ, ಆಯುಸ್ಸು, ಸುಖ, ಸಕಲೇಷ್ಟಾರ್ಥಗಳನ್ನೂ ಕೊಡುವುದು.

೧೧. ಇಲ್ಲಿ ವಿಷ್ಣುವು ಸಮಸ್ತ ಜನರಲ್ಲಿ ದಯೆಯಿಂದ ನಿತ್ಯವೂ ವಾಸವಾಗಿರುವುದರಿಂದ ಬೇರೆ ತೀರ್ಥಗಳಿಂದೇನು ?

೧೨. ಇಲ್ಲಿ ಶ್ರದ್ಧೆಯಿಂದ ಯಾವ ಸಣ್ಣ ದಾನವನ್ನು ಮಾಡಿದರೂ ಅದು ಇಹಪರಗಳಲ್ಲಿ ಅಕ್ಷಯವಾಗುವುದು.

CC-0. Jangamwadi Math Collection. Digitized by eGangotri

ಯಜ್ಞೈರ್ದಾನೈಸ್ತಪೋಭಿಶ್ಚ ಯತ್ಫಲಂ ಪ್ರಾಪ್ಯತೇ ಬುಧೈಃ ।
ತದತ್ರ ಸ್ನಾನಮಾತ್ರೇಣ ಶೂದ್ರೈರಪಿ ಸುಸೇವಕೈಃ ॥ ೧೩ ॥
ತತ್ರ ಶ್ರಾದ್ಧಂ ಚ ಯಃ ಕುರ್ಯಾದೇಕಾದಶ್ಯಾಮುಪೋಷಿತಃ ।
ಸ ಪಿತೄನುದ್ಧರೇತ್ಸರ್ವಾನ್ನರಕೇಭ್ಯೋ ನ ಸಂಶಯಃ ॥ ೧೪ ॥
ಅಕ್ಷಯ್ಯಾಂ ತೃಪ್ತಿಮಾಪ್ನೋತಿ ಪರಮಾತ್ಮಾ ಜನಾರ್ದನಃ ।
ದೀಯತೇಽತ್ರ ಯದುದ್ದಿಶ್ಯ ತದಕ್ಷಯ್ಯಮುದಾಹೃತಂ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ದ್ವಾರಕಾ ಮಾಹಾತ್ಮ್ಯವರ್ಣನಂ"ನಾಮ ಷಡ್ವಿಂಶೋಽಧ್ಯಾಯಃ

---

೧೩. ಪ್ರಾಜ್ಞರು ಯಜ್ಞ, ದಾನ, ತಪಸ್ಸುಗಳಿಂದ ಪಡೆಯುವ ಫಲವನ್ನು ಇಲ್ಲಿ ಸ್ನಾನಮಾಡುವುದರಿಂದಲೇ ಪಡೆಯಬಹುದಲ್ಲದೆ, ಚೆನ್ನಾಗಿ ಸೇವಿಸುವ ಶೂದ್ರರೂ ಸ್ನಾನದಿಂದ ಅದೇ ಫಲವನ್ನೇ ಪಡೆಯುವರು.

೧೪. ಇಲ್ಲಿ ಏಕಾದಶೀ ದಿವಸ ಉಪವಾಸವಿದ್ದು ಶ್ರಾದ್ಧಮಾಡಿದ ಮಾನವನು ಸಕಲ ಪಿತೃಗಳನ್ನು ನರಕದಿಂದ ಉದ್ಧಾರಮಾಡುವನು.

೧೫. ಇಲ್ಲಿ ವಿಷ್ಣುವನ್ನುದ್ದೇಶಿಸಿ ಕೊಟ್ಟ ದಾನವು ಅಕ್ಷಯವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ದ್ವಾರಕಾಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

### ಬಲಾಹಕೋಪಾಖ್ಯಾನವರ್ಣನಂ

ಸೂತ ಉವಾಚ :—

ತತ್ರ ತಸ್ಯ ಸಮೀಪಸ್ಥಂ ಮಾರ್ಕಂಡೇನೋಪಲಕ್ಷಿತಂ ।
ತೀರ್ಥಂ ಗೋವತ್ಸಸಂಜ್ಞಂ ತು ಸರ್ವತ್ರ ಭುವಿ ಸಂಶ್ರುತಂ ॥ ೧ ॥
ತತ್ರಾಽವತೀರ್ಯ ಗೋವತ್ಸಸ್ವರೂಪೇಣಾಽಂಬಿಕಾಪತಿಃ ।
ಸ್ವಯಂಭೂರ್ಲಿಂಗರೂಪೇಣ ಸಂಸ್ಥಿತೋ ಜಗತಾಂ ಪತಿಃ ॥ ೨ ॥
ಆಸೀದ್ಬಲಾಹಕೋನಾಮ ರುದ್ರಭಕ್ತೋ ಮಹಾಬಲಃ ।
ಆಖೇಟಕಸಮಾಯುಕ್ತೋ ನೃಪಃ ಪರಪುರಂಜಯಃ ॥ ೩ ॥
ಮೃಗಯೂಥೇ ಸ್ಥಿತಂ ದೃಷ್ಟ್ವಾ ಗೋವತ್ಸಂ ತತ್ಪದಾತಿನಾ ।
ಉಕ್ತೋ ರಾಜಾ ಮಯಾ ದೃಷ್ಟಂ ಕೌತುಕಂ ನೃಪಸತ್ತಮ ॥ ೪ ॥
ಗೋವತ್ಸೋ ಮೃಗಯೂಥಸ್ಯ ದೃಷ್ಟೋ ಮಧ್ಯಸ್ಥಿತೋ ಮಯಾ ।
ತೇಷಾಮೇವಾಽನುರಕ್ತೋಽಸೌ ಜನನ್ಯಾ ರಹಿತಸ್ತಥಾ ॥ ೫ ॥
ದ್ರಷ್ಟುಂ ತಂ ಕೌತುಕಂ ರಾಜಾ ತಂ ಪದಾತಿಂ ಪುರಸ್ಸ್ಥಿತಂ ।
ಉವಾಚ ದರ್ಶಯಸ್ವೇತಿ ಗೋವತ್ಸಂ ಚ ಸಮಾವಿಶತ್ ॥ ೬ ॥

---

## ಕನ್ನಡದ ಅನುವಾದ

### ಬಲಾಹಕೋಪಾಖ್ಯಾನವರ್ಣನ

೧–೨. ಸೂತನು ಹೇಳುತ್ತಾನೆ:—ಆ ಧರ್ಮಾರಣ್ಯದ ಸಮೀಪದಲ್ಲಿಯೆ ಮಾರ್ಕಂಡೇಯನಿಂದ ಸಾಕ್ಷಾತ್ಕೃತವಾದ ಗೋವತ್ಸವೆಂಬ ಪ್ರಸಿದ್ಧ ತೀರ್ಥವಿರುವುದು. ಅಲ್ಲಿ ಪರಮೇಶ್ವರನು ಗೋವತ್ಸರೂಪದಿಂದಿಳಿದು ಸ್ವಯಂಭುಲಿಂಗರೂಪದಿಂದ ನೆಲಸಿರುವನು.

೩. ಶಿವಭಕ್ತನಾದ ಬಲಾಹಕನೆಂಬ ಬಲಿಷ್ಠನಾದ ರಾಜನೊಬ್ಬನು ಬೇಟೆಯಲ್ಲಾಸಕ್ತನಾಗಿದ್ದನು.

೪–೫. ಅವನ ಕಾಲಾಳು ಜಿಂಕೆಗಳ ಹಿಂಡಿನಲ್ಲಿರುವ ಹಸುವಿನ ಕರುವನ್ನು ನೋಡಿ ರಾಜನನ್ನು ಕುರಿತು, "ಮಹಾರಾಜ! ನಾನೊಂದು ಕೌತುಕವನ್ನುಂಟು ಮಾಡುವ ವಿಷಯವನ್ನು ಕಂಡಿರುವೆನು. ಒಂದು ಆಕಳ ಕರುವು ತಾಯಿಯಿಲ್ಲದೆ ಜಿಂಕೆಗಳಲ್ಲಿ ಪ್ರೀತಿಯುಳ್ಳುದಾಗಿ ಅವುಗಳ ಹಿಂಡಿನ ಮಧ್ಯದಲ್ಲಿದೆ."

೬. ರಾಜನು ಆ ಕೌತುಕವನ್ನು ನೋಡಲು ಬಯಸಿ ಅದನ್ನು ತೋರಿಸೆಂದು ಪದಾತಿಗೆ ಹೇಳಿದನು. ಅವನ ಮಾತಿನಂತೆ ಗೋವತ್ಸಕ್ಷೇತ್ರವನ್ನು ಪ್ರವೇಶಿಸಿದನು.

CC-0. Jangamwadi Math Collection. Digitized by eGangotri

ಗತ್ವಾಽಟವೀಂ ತದಾ ರಾಜ್ಞೇ ದರ್ಶಿತಃ ಸ ಪದಾತಿನಾ ।
ಪದಾತಿಭಿರ್ಮೃಗಾಽನೀಕಂ ದುದ್ರಾವ ತ್ರಾಸಿತಂ ಯದಾ ॥ ೭ ॥
ಪೀಲುಗುಲ್ಮಂ ಪ್ರತಿ ಗತಂ ಗೋವತ್ಸಃ ಪ್ರಸ್ಥಿತಸ್ತದಾ ।
ರಾಜಾ ತದ್ಧರಣಾಕಾಂಕ್ಷೋ ಪ್ರಾಽವಿಶದ್ಗುಲ್ಮಮಾದರಾತ್ ॥ ೮ ॥
ತತ್ರ ಸ್ಥಿತಂ ಸ ಗೋವತ್ಸಮುಪಶ್ಯನ್ನೃಪತಿಃ ಸ್ವಯಂ ।
ಯಾವದ್ಗೃಹ್ಣಾತಿ ತಂ ತಾವಲ್ಲಿಂಗಂ ಜಾತಂ ಸಮುಜ್ವಲಂ ॥ ೯ ॥
ತಂ ದೃಷ್ಟ್ವಾ ವಿಸ್ಮಿತೋ ರಾಜಾ ಕಿಮೇತದಿತ್ಯಚಿಂತಯತ್ ।
ಯಾವಚ್ಚಿಂತಯತೇ ಹ್ಯೇವಂ ದೇಹಂ ತ್ಯಕ್ತ್ವಾದಿವಂ ಗತಃ ॥ ೧೦ ॥
ಅತ್ರಾಂತರೇ ಗಗನತಲೇ ಸಮಂತತಃ
ಶ್ರೂಯತೇ ಸುರಜಯಕಾರಗರ್ಜಿತಂ ।
ಪಪಾತ ಪುಷ್ಪವೃಷ್ಟಿರಂಬರಾದ್ರಾಜಾ
ಗತಃ ಶಿವಭುವನಂ ಚ ತತ್ಕ್ಷಣಾತ್ ॥ ೧೧ ॥
ತಾವತ್ಪಶ್ಯತಿ ತನ್ನಾಭ್ಯಾಂ ಗೋವತ್ಸಂ ಬಾಲಕಂ ಸ್ಥಿತಂ ।
ನೂನಮೇಷ ಮಹಾದೇವೋ ವತ್ಸರೂಪೀ ಮಹೇಶ್ವರಃ ॥ ೧೨ ॥
ತಮಾನೇತುಂ ಸಮುದ್ಯುಕ್ತೋ ರಾಜಾ ತಮುಜ್ಜಹಾರ ಚ ।
ತದಾ ತದ್ದೇವಲಿಂಗಂ ತು ನೋತ್ತಿಷ್ಠತಿ ಕಥಂಚನ ।
ತದಾ ದೇವಾಃ ಸಹಾಽನೇನ ಪ್ರಾರ್ಥಯಾಮಾಸುರೀಶ್ವರಂ ॥ ೧೩ ॥

---

೭. ಕಾಲಾಳು ಕಾಡಿಗೆ ಹೋಗಿ ಆ ವತ್ಸವನ್ನು ತೋರಿಸಿದನು. ಅವರು ಜಿಂಕೆಗಳ ಹಿಂಡನ್ನು ಹೆದರಿಸಲು ಆ ಹಿಂಡು ಚೆದರಿತು.

೮–೯. ಆಗ ಗೋಣೀಮರದ ಪೊದೆಯನ್ನು ಹೊಕ್ಕು ಜಿಂಕೆಗಳ ಹಿಂಡನ್ನು ಹಿಂಬಾಲಿಸಿದ ಗೋವತ್ಸವನ್ನು ಹಿಡಿಯಲಪೇಕ್ಷೆಯಿಂದ ರಾಜನೂ ಪೊದೆಯನ್ನು ಪ್ರವೇಶಿಸಿದನು. ಅಲ್ಲಿರುವ ಆಕಳಕರುವನ್ನು ನೋಡಿ ನೃಪತಿಯು ಹಿಡಿಯಲು ಕೈಗಳನ್ನು ಚಾಚಲು ಅದು ಕೂಡಲೆ ಉಜ್ವಲವಾದ ಲಿಂಗವಾಯಿತು.

೧೦. ಅದನ್ನು ಕಂಡು ದೊರೆಯು ಆಶ್ಚರ್ಯಗೊಂಡು ಇದೇನೆಂದು ಚಿಂತಿಸುತ್ತಿರುವಂತೆಯೆ ದೇಹವನ್ನು ತ್ಯಜಿಸಿ ಅಮರಲೋಕಕ್ಕೆ ತೆರಳಿತು.

೧೧. ಈ ಮಧ್ಯದಲ್ಲಿ ಅಂಬರದಲ್ಲಿ ದೇವತೆಗಳ ಜಯಕಾರವು ಕೇಳಿಸಿತು. ಪುಷ್ಪವೃಷ್ಟಿಯಾಯಿತು. ಕೂಡಲೆ ದೊರೆಯು ಶಿವಾಲಯವನ್ನು ಸೇರಿದನು.

೧೨–೧೩. ಅಲ್ಲಿ ಅವನ ನಾಭಿಯಲ್ಲಿರುವ ಆಕಳ ಕರುವನ್ನು ಕಂಡು ಈ ಮಹಾದೇವನೆ ವತ್ಸರೂಪಿಯಾಗಿರುವನೆಂದರಿತು ಆ ವತ್ಸವನ್ನು ಮೇಲಕ್ಕೆಳೆಯಲು ರಾಜನು ಉದ್ಯುಕ್ತನಾದನು. ಆದರೆ ಅವನ ಯತ್ನವು ಸಾಗಲಿಲ್ಲ. ಆಗ ದೇವತೆಗಳು ಈ ರಾಜನೊಡನೆ ಈಶ್ವರನನ್ನು ಪ್ರಾರ್ಥಿಸಿದರು.



CC-0. Jangamwadi Math Collection. Digitized by eGangotri

ದೇವಾ ಊಚುಃ:—
ಭಗವನ್ಸರ್ವದೇವೇಶ ಸ್ಥಾತವ್ಯಂ ಭವತಾ ವಿಭೋ ।
ಶುಕ್ಲೇನ ಲಿಂಗರೂಪೇಣ ಸರ್ವಲೋಕಹಿತೈಷಿಣಾ ॥ ೧೪ ॥
ಶ್ರೀ ಮಹಾದೇವ ಉವಾಚ:—
ಸ್ಥಾಸ್ಯಾಮ್ಯಹಂ ಸದೈವಾಽತ್ರ ಲಿಂಗರೂಪೇಣ ದೇವತಾಃ ।
ಯಸ್ಮಾದ್ಭಾದ್ರಪದೇ ಮಾಸಿ ಕೃಷ್ಣಪಕ್ಷೇ ಕುಹೂದಿನೇ ॥ ೧೫ ॥
ತಥಾ ತದ್ದಿವಸೇ ತತ್ರ ಸ್ನಾನಂ ಕೃತ್ವಾ ವಿಧಾನತಃ ।
ಲಿಂಗಂ ಯೇ ಪೂಜಯಿಷ್ಯಂತಿ ನ ತೇಷಾಂ ವಿದ್ಯತೇ ಭಯಂ ॥ ೧೬ ॥
ಋತೇ ಚ ಪಿಂಡದಾನೇನ ಪೂರ್ವಜಾಃ ಶಾಶ್ವತೀಃ ಸಮಾಃ ।
ರೌರವೇ ನರಕೇ ಘೋರೇ ಕುಂಭೀಪಾಕೇ ಚ ಯೇ ಗತಾಃ ॥ ೧೭ ॥
ಅನೇಕನರಕಸ್ಥಾಶ್ಚ ತಿರ್ಯಗ್ಯೋನಿಗತಾಶ್ಚ ಯೇ ।
ಸಕೃತ್ಪಿಂಡಪ್ರದಾನೇನ ಸ್ಯಾತ್ತೇಷಾಮಕ್ಷಯಾ ಗತಿಃ ॥ ೧೮ ॥
ತತೋ ಬಲಾಹಕೋ ರಾಜಾ ಸರ್ವದೇವಸಮನ್ವಿತಃ ।
ಸ್ಥಾಪಯಾಮಾಸ ತಲ್ಲಿಂಗಂ ಸರ್ವದೇವಸಮೀಪತಃ ॥ ೧೯ ॥
ಚಕಾರ ಬಹುದಾನಾನಿ ಲೋಕಾನಾಂ ಹಿತಕಾಮ್ಯಯಾ ।
ಯಾವದರ್ಚಯತೇ ಹ್ಯೇವಂ ರುದ್ರೋಽಪಿ ಸ್ವಯಮಾಗತಃ ॥ ೨೦ ॥

---

೧೪. ದೇವತೆಗಳು ಹೇಳುತ್ತಾರೆ:—ಓ ಮಹಾದೇವ! ನೀನು ಸಕಲ ಲೋಕದ ಹಿತದೃಷ್ಟಿಯಿಂದ ಇಲ್ಲಿ ಶುಕ್ಲಲಿಂಗ ರೂಪದಿಂದ ನೆಲಸು.

೧೫–೧೬. ಶ್ರೀ ಮಹಾದೇವನು ಹೇಳುತ್ತಾನೆ:—ದೇವತೆಗಳೆ! ನಾನಿಲ್ಲಿ ಯಾವಾಗಲೂ ಲಿಂಗರೂಪದಿಂದಿರುವೆನು. ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ಇಲ್ಲಿ ಸ್ನಾನಮಾಡಿ ಶಾಸ್ತ್ರೋಕ್ತಕ್ರಮದಿಂದ ಲಿಂಗಪೂಜೆಗೈದ ಮಾನವರಿಗೆ ಭಯವಿರುವುದಿಲ್ಲ.

೧೭–೧೮. ಪಿಂಡವಿಲ್ಲದೆ ಅನೇಕ ವರ್ಷಗಳಿಂದ ರೌರವ, ಕುಂಭೀಪಾಕ ಮೊದಲಾದ ಅನೇಕಬಗೆಯ ನರಕಗಳನ್ನು ಹೊಂದಿದವರೂ, ಪಶುಪಕ್ಷಿಗಳಾದವರೂ ಒಮ್ಮೆ ಇಲ್ಲಿ ಪಿಂಡದಾನ ಮಾಡುವುದರಿಂದ ಅಕ್ಷಯಗತಿಯನ್ನು ಪಡೆಯು ವರು.

೧೯. ಬಳಿಕ ಬಲಾಹಕರಾಜನು ಸಮಸ್ತ ದೇವತೆಗಳೊಡನೆ ಆ ಲಿಂಗವನ್ನು ದೇವತೆಗಳ ಬಳಿಯಲ್ಲಿಯೆ ಸ್ಥಾಪಿಸಿದನು.

೨೦. ಲೋಕಗಳ ಹಿತದೃಷ್ಟಿಯಿಂದ ಅನೇಕ ದಾನಗಳನ್ನು ಮಾಡಿದನು. ಆತನಿಂತು ಆ ಲಿಂಗವನ್ನು ಪೂಜಿಸುತ್ತಿರುವಾಗ ರುದ್ರನೂ ಅಲ್ಲಿಗೆ ಬಂದನು.

CC-0. Jangamwadi Math Collection. Digitized by eGangotri

ರುದ್ರ ಉವಾಚ :—

ಅಸ್ಯಾಂ ರಾತ್ರೌ ತು ಮನುಜಾಃ ಶ್ರದ್ಧಾಭಕ್ತಿಸಮನ್ವಿತಾಃ ।
ಯೇಽರ್ಚಯಿಷ್ಯಂತಿ ದೇವೇಶಂ ತೇಷಾಂ ಪುಣ್ಯಮನಂತಕಂ ॥ ೨೧ ॥
ಜಾಗರಂ ಯೇ ಕರಿಷ್ಯಂತಿ ಗೀತಶಾಸ್ತ್ರಪುರಸ್ಸರಂ ।
ಉದ್ಧರಿಷ್ಯಂತಿ ತೇ ಮರ್ತ್ಯಾಃ ಕುಲಮೇಕೋತ್ತರಂ ಶತಂ ॥ ೨೨ ॥
ತಾವದ್ಗರ್ಜಂತಿ ತೀರ್ಥಾನಿ ನೈಮಿಷಂ ಪುಷ್ಕರಂ ಗಯಾ ।
ಪ್ರಯಾಗಂ ಚ ಪ್ರಭಾಸಂ ಚ ದ್ವಾರಕಾ ಮಥುರಾಽರ್ಬುದಃ ॥ ೨೩ ॥
ಯಾವನ್ನ ದೃಶ್ಯತೇ ಲಿಂಗಂ ಗೋವತ್ಸಂ ಪರಮಾಽದ್ಭುತಂ ।
ಯದಾ ಹಿ ಕುರುತೇ ಭಾವಂ ಗೋವತ್ಸಗಮನಂ ಪ್ರತಿ ॥ ೨೪ ॥
ಸ್ವವಂಶಜಾಸ್ತದಾ ಸರ್ವೇ ನೃತ್ಯಂತಿ ಹರ್ಷಿತಾ ಧ್ರುವಂ ॥ ೨೫ ॥

ಸೂತ ಉವಾಚ :—

ಯಚ್ಚಾಽನ್ಯದದ್ಭುತಂ ತತ್ರ ವೃತ್ತಾಂತಂ ಶೃಣುತ ದ್ವಿಜಾಃ ।
ಯೇನ ವೈ ಶ್ರುತಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೨೬ ॥
ಯದಾ ವೈ ಸ್ಥಾಪಿತಂ ಲಿಂಗಂ ಸರ್ವದೇವೈಃ ಪುರಾತನಂ ।
ವಿಷ್ಣೋಃ ಪ್ರತಿಷ್ಠಾನಗುಣಾತ್ಸರ್ವೇಷಾಂ ಚ ದಿವೌಕಸಾಂ ॥ ೨೭ ॥
ಅಣುಮಾತ್ರಪ್ರಮಾಣೇನ ಪ್ರತ್ಯಹಂ ಸಮವರ್ಧತ ।
ತತಸ್ತೇ ಮನುಜಾ ದೇವಾ ಭೀತಾಸ್ತಂ ಶರಣಂ ಯಯುಃ ॥ ೨೮ ॥

---

೨೧. ರುದ್ರನು ಹೇಳುತ್ತಾನೆ :—ಈ ದಿನ ರಾತ್ರಿ ಶ್ರದ್ಧಾಭಕ್ತಿಯಿಂದ ಮಹಾದೇವನನ್ನು ಪೂಜಿಸಿದ ಮನುಷ್ಯರ ಪುಣ್ಯವು ಅನಂತವಾದುದು.

೨೨. ಸಂಗೀತವನ್ನು ಹಾಡುತ್ತ, ಶಾಸ್ತ್ರವನ್ನು ಹೇಳುತ್ತ ಜಾಗರಣಮಾಡಿದ ಮಾನವರು ನೂರೊಂದು ಕುಲವನ್ನು ಉದ್ಧಾರಮಾಡುವರು.

೨೩. ಈ ಅದ್ಭುತವಾದ ಗೋವತ್ಸಲಿಂಗವನ್ನು ನೋಡದಿರುವತನಕ ನೈಮಿಷ, ಪುಷ್ಕರ, ಪ್ರಯಾಗ, ಪ್ರಭಾಸ, ದ್ವಾರಕಾ, ಮಥುರಾ, ಅರ್ಬುದ ತೀರ್ಥಗಳೆಲ್ಲ ಹೆಮ್ಮೆಪಡುವುವು.

೨೪–೨೫. ಈ ಗೋವತ್ಸಕ್ಕೆ ಹೋಗುವೆನೆಂದು ಮಾನವನು ಆಲೋಚಿಸಲು ಅವನ ವಂಶದವರೆಲ್ಲ ಸಂತೋಷದಿಂದ ಕುಣಿಯುವರು.

೨೬–೨೮. ಸೂತನು ಹೇಳುತ್ತಾನೆ :— ಎಲೈ ಬ್ರಾಹ್ಮಣರೆ! ಅಲ್ಲಿ ನಡೆದ ಮತ್ತೊಂದು ಸಮಾಚಾರವನ್ನು ಕೇಳಿರಿ. ಅದನ್ನು ಕೇಳಿದ ಕೂಡಲೆ ಸಕಲ ದುರಿತಗಳೂ ಮಾಯವಾಗುವುವು. ವಿಷ್ಣುವೂ, ಸಕಲ ದೇವತೆಗಳೂ ಸೇರಿ ಪ್ರತಿಷ್ಠಿಸಿದ್ದರಿಂದ ಆ ಲಿಂಗವು ಪ್ರತಿದಿನವೂ ಪರಮಾಣುವಿನಷ್ಟು ಬೆಳೆಯುತ್ತಿದ್ದಿತು. ಆದುದರಿಂದ ಮಾನವರೂ ದೇವತೆಗಳೂ ಹೆದರಿ ಆ ಶಂಕರನನ್ನೇ ಮರೆಹೊಕ್ಕರು.

CC-0. Jangamwadi Math Collection. Digitized by eGangotri

ದೇವಾ ಊಚುಃ:—

ವೃದ್ಧಿಂ ಸಂಹರ ದೇವೇಶ ಲೋಕಾನಾಂ ಸ್ವಸ್ತಿ ತದ್ಭವೇತ್ ।
ಏವಮುಕ್ತೇ ತತೋ ಲಿಂಗಾದ್ವಾಗುವಾಚಾಽಶರೀರಿಣೀ ॥ ೨೯ ॥

ಶಿವವಾಣ್ಯುವಾಚ:—

ಹೇ ಲೋಕಾ ಮಾಭಯಂ ವೋಽಸ್ತು ಉಪಾಯಃ ಶ್ರೂಯತಾಮಯಂ ।
ಕಂಚಿಚ್ಚಂಡಾಲಮಾನೀಯ ಮತ್ಪುರಃ ಸ್ಥಾಪ್ಯತಾಂ ಧ್ರುವಂ ॥ ೩೦ ॥
ಚಂಡಾಲಾಂಶ್ಚ ಸಮಾನೀಯ ದಧುರ್ದೇವಸ್ಯ ತೇ ಪುರಃ ।
ತಥಾಽಪಿ ತಸ್ಯ ವೃದ್ಧಿಸ್ತು ನೈವ ನಿರ್ವರ್ತತೇ ಪುನಃ ॥ ೩೧ ॥

ವಾಗುವಾಚ:—

ಕರ್ಮಣಾ ಯಸ್ತು ಚಂಡಾಲಃ ಸೋಽಗ್ರೇ ಮೇ ಸ್ಥಾಪ್ಯತಾಂ ಜನಾಃ ।
ತಚ್ಛ್ರುತ್ವಾ ಮಹದಾಶ್ಚರ್ಯಂ ಮತಿಂ ಚಕ್ರುರ್ವಿಲೋಚನೇ ॥ ೩೨ ॥
ಮಾರ್ಗಮಾಣಾಸ್ತದಾ ತೇ ತು ಗ್ರಾಮಾಣಿ ಚ ಪುರಾಣಿ ಚ ।
ಕಂಚಿತ್ಕರ್ಮರತಂ ಪಾಪಂ ದದೃಶುರ್ಬ್ರಾಹ್ಮಣಬ್ರುವಂ ॥ ೩೩ ॥
ವೃಷಭಾನ್ಭಾರಸಂಯುಕ್ತಾನ್ಮಧ್ಯಾಹ್ನೇ ವಾಹಯತ್ತುಸಃ ।
ಕ್ಷುತ್ತೃಟ್‌ಶ್ರಮಪರೀತಾಂಶ್ಚ ದುರ್ಬಲಾನ್ಕ್ರೂರಮಾನಸಃ ॥ ೩೪ ॥

---

೨೯. ದೇವತೆಗಳು ಹೇಳುತ್ತಾರೆ:—ದೇವೇಶ್ವರ! ನಿನ್ನ ಬೆಳವಣಿಗೆಯನ್ನು ಸಾಕುಮಾಡು. ಅದರಿಂದ ಲೋಕಗಳಿಗೆ ಕ್ಷೇಮವಾಗುವುದು. ಹೀಗೆನ್ನಲು ಆ ಲಿಂಗದಿಂದ ಅಶರೀರವಾಣಿಯಾಯಿತು.

೩೦. ಶಿವವಾಣಿಯು ಹೇಳುತ್ತದೆ:—ಓ ಜನರೇ! ಹೆದರಬೇಡಿರಿ. ಒಂದು ಉಪಾಯವನ್ನು ಹೇಳುವೆನು; ಲಾಲಿಸಿರಿ. ಒಬ್ಬ ಚಂಡಾಲನನ್ನು ಕರೆತಂದು ನನ್ನೆದುರಿಗೆ ನಿಲ್ಲಿಸಿರಿ.

೩೧. ಅವರು ಚಂಡಾಲರನ್ನು ಕರೆತಂದು ಲಿಂಗದ ಮುಂದೆ ನಿಲ್ಲಿಸಿದರೂ ಅದು ಮರಳಿ ಹಾಗೆಯೆ ಬೆಳೆಯುತ್ತಲಿದ್ದಿತು.

೩೨. ಶಿವವಾಣಿಯು ಹೇಳುತ್ತದೆ:—ಕರ್ಮಚಂಡಾಲನನ್ನು ನನ್ನಮುಂದೆ ನಿಲ್ಲಿಸಿರಿ. ಶಿವವಾಣಿಯ ಆಶ್ಚರ್ಯಕರವಾದ ಆ ಮಾತನ್ನು ಕೇಳಿ ಅವರು ಅಂತಹವನನ್ನು ಹುಡುಕತೊಡಗಿದರು.

೩೩. ಅವರು ಗ್ರಾಮ, ನಗರಗಳಲ್ಲಿ ಹುಡುಕುತ್ತ ಕೆಲಸಮಾಡುತ್ತಿರುವ ಒಬ್ಬ ಪಾಪಿಯಾದ ನೀಚಬ್ರಾಹ್ಮಣನನ್ನು ಕಂಡರು.

೩೪. ಅವನು ಮಧ್ಯಾಹ್ನದ ವೇಳೆಯಲ್ಲಿ ಹಸಿವು, ಬಾಯಾರಿಕೆ, ಆಯಾಸ ಗೊಂಡ ಅಶಕ್ತವಾದ ಎತ್ತುಗಳನ್ನು ಹೊರೆಹೊರಿಸಿ ಹೊಡೆಯುತ್ತಿದ್ದನು.

CC-0. Jangamwadi Math Collection. Digitized by eGangotri

ಅಸ್ನಾತ್ವಾಽಪಿ ಪರ್ಯುಷಿತಂ ಭಕ್ಷಯಂತೀಹ ವೈ ದ್ವಿಜಾಃ ।
ತಂ ಸಮಾದಾಯ ದೇವೇಶಂ ಜಗ್ಮುರ್ಯತ್ರ ಜಗದ್ಗುರುಃ ॥ ೩೫ ॥
ದೇವಾಲಯಾಽಗ್ರಭೂಮೌ ತಂ ಸ್ಥಾಪಯಾಮಾಸುರಾದೃತಾಃ ।
ಭಸ್ಮೀಬಭೂವ ಸಹಸಾ ಗೋವತ್ಸಾಗ್ರೇ ನಿರೂಪಿತಃ ॥ ೩೬ ॥
ಚಂಡಾಲಸ್ಥಲ ಇತ್ಯೇಷ ಪ್ರಸಿದ್ಧೋಽಸಾವಭವತ್ಕ್ಷಿತೌ ।
ತತ್ರ ಸ್ಥಿತೈರ್ನಚಾಽದ್ಯಾಽಪಿ ಪ್ರಾಸಾದೋ ದೃಶ್ಯತೇ ಹಿ ಸಃ ॥ ೩೭ ॥
ತದಾ ಪ್ರಭೃತಿ ತಲ್ಲಿಂಗಂ ಸಾಮ್ಯಭಾವಮುಪಾಗತಂ ।
ಧೌತಪಾಪ್ಮಾ ಗತಸ್ತೀರ್ಥಂ ದ್ವಿಜೋ ಲಿಂಗನಿರೀಕ್ಷಣಾತ್ ॥ ೩೮ ॥
ಪ್ರತ್ಯಹಂ ಪೂಜಯಾಮಾಸ ಗೋವತ್ಸಂ ಗತಕಿಲ್ಬಿಷಃ ।
ವಿಶೇಷಾತ್ಕೃಷ್ಣಪಕ್ಷಸ್ಯ ಚತುರ್ದಶ್ಯಾಂ ಸಮಾಗತಃ ॥ ೩೯ ॥
ಏತತ್ತದದ್ಭುತಂ ತಸ್ಯ ದೇವಸ್ಯ ಚ ತ್ರಿಶೂಲಿನಃ ।
ಶೃಣುಯಾದ್ಯೋ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೪೦ ॥

ಸೂತ ಉವಾಚ :—

ಗೋವತ್ಸಮಿತಿ ವಿಖ್ಯಾತಂ ನರಾಣಾಂ ಪುಣ್ಯದಂ ಪರಂ ।
ಅನೇಕಜನ್ಮಪಾಪಘ್ನಂ ಮಾರ್ಕಂಡೇಯೇನ ಭಾಷಿತಂ ॥ ೪೧ ॥

---

೩೫. ಮತ್ತು ಸ್ನಾನಮಾಡದೆ ತಂಗಳನ್ನುಣ್ಣುವ ಆ ಬ್ರಾಹ್ಮಣನನ್ನು ಲಿಂಗದೆಡೆಗೆ ಕರೆತಂದರು.

೩೬. ದೇವಾಲಯದಲ್ಲಿರುವ ಗೋವತ್ಸಲಿಂಗದ ಮುಂದೆ ಅವನನ್ನು ನಿಲ್ಲಿಸಲು ಕೂಡಲೆ ಅವನು ಬೂದಿಯಾಗಿಹೋದನು.

೩೭. ಅಂದಿನಿಂದ ಆ ಸ್ಥಳವು ಚಂಡಾಲಸ್ಥಳವೆಂದು ವಿಖ್ಯಾತವಾಯಿತು. ಅಲ್ಲಿ ನಿಂತು ಈಗಲೂ ಯಾರೂ ದೇವಾಲಯವನ್ನು ಕಾಣುವುದಿಲ್ಲ.

೩೮. ಅದು ಮೊದಲ್ಗೊಂಡು ಆ ಲಿಂಗವು ಬೆಳೆಯದೆ ಸಮಾನವಾಗಿದ್ದಿತು. ಬ್ರಾಹ್ಮಣನು ಲಿಂಗದರ್ಶನದಿಂದ ಪಾಪವನ್ನು ಕಳೆದುಕೊಂಡು ಹೊರಟು ಹೋದನು.

೩೯. ಹೀಗೆ ಗತಕಿಲ್ಬಿಷನಾಗಿ ಪ್ರತಿದಿನವೂ, ವಿಶೇಷವಾಗಿ ಕೃಷ್ಣಪಕ್ಷದ ಚತುರ್ದಶೀದಿನವೂ ಅಲ್ಲಿಗೆ ಬಂದು ಗೋವತ್ಸಲಿಂಗವನ್ನು ಪೂಜಿಸಿದನು.

೪೦. ಶಂಕರನ ಈ ಅದ್ಭುತಕಾರ್ಯವನ್ನು ಭಕ್ತಿಯಿಂದ ಕೇಳಿದ ನರನು ಸಕಲ ಪಾಪಮುಕ್ತನಾಗುವನು.

೪೧. ಸೂತನು ಹೇಳುತ್ತಾನೆ :—ಮಾರ್ಕಂಡೇಯನು ಹೇಳಿದ ಗೋವತ್ಸ ಲಿಂಗವು ನರರ ಸಕಲಪಾಪವನ್ನೂ ಪರಿಹರಿಸಿ ಅಮಿತವಾದ ಪುಣ್ಯವನ್ನೀಯುವುದು.

CC-0. Jangamwadi Math Collection. Digitized by eGangotri

ತತ್ರ ತೀರ್ಥೇ ಸಕೃತ್ಸ್ನಾನಂ ರುದ್ರಲೋಕಪ್ರದಂ ನೃಣಾಂ ।
ಪಾಪದೇಹವಿಶುದ್ಧ್ಯರ್ಥಂ ಪಾಪೇನೋಪಹತಾತ್ಮನಾಂ ॥ ೪೨ ॥
ಕೂಪೇ ತರ್ಪಣತಶ್ಚೈವ ಶ್ರಾದ್ಧತಶ್ಚೈವ ತೃಪ್ತತಾ ।
ಭಾದ್ರಪದೇ ವಿಶೇಷೇಣ ಪಕ್ಷಸ್ಯಾಂತೇ ಭವೇತ್ಕಲೌ ॥ ೪೩ ॥
ಏಕವಿಂಶತಿವಾರಾಂಸ್ತು ಗಯಾಯಾಂ ತರ್ಪಣೇ ಕೃತೇ ।
ಪಿತೄಣಾಂ ಪರಮಾ ತೃಪ್ತಿಃ ಸಕೃದ್ವೈ ಗಾಂಗಕೂಪಕೇ ॥ ೪೪ ॥
ತಸ್ಮಿನ್ಗೋವತ್ಸ ಸಾಮೀಪ್ಯೇ ತಿಷ್ಠತೇ ಗಾಂಗಕೂಪಕಃ ।
ತಸ್ಮಿಂಸ್ತಿಲೋದಕೇನಾಽಪಿ ಸದ್ಗತಿಂ ಯಾಂತಿ ತರ್ಪಿತಾಃ ॥ ೪೫ ॥
ಪಿತರೋ ನರಕಾದ್ವಾಽಪಿ ಸುಪುಣ್ಯೇನ ಸುಮೇಧಸಾ ।
ಗೋಪ್ರದಾನಂ ಪ್ರಶಂಸಂತಿ ತಸ್ಮಿಂಸ್ತೀರ್ಥೇ ಮುನೀಶ್ವರಾಃ ॥ ೪೬ ॥
ವಿಪ್ರಾಯ ಸ್ವರ್ಣದಾನಂ ತು ರುದ್ರಲೋಕೇ ನಯೇನ್ನರಂ ।
ಸರಸ್ವತೀ ಶಿವಕ್ಷೇತ್ರೇ ಗಂಗಾ ಚ ಗಾಂಗಕೂಪಕೇ ॥ ೪೭ ॥
ಏಕಸ್ಥಮೇತತ್ತ್ರಿತಯಂ ಸ್ವರ್ಗಾಽಪವರ್ಗಕಾರಣಂ ।
ಸೇವಿತಂ ಚರ್ಷಿಭಿಃ ಸಿದ್ಧೈಸ್ತೀರ್ಥಂ ಸರ್ವತ್ರ ವಿಶ್ರುತಂ ॥ ೪೮ ॥

---

೪೨. ಪಾಪಿಗಳು ಪಾಪದೇಹದ ಶುದ್ಧಿಗಾಗಿ ಆ ತೀರ್ಥದಲ್ಲಿ ಒಂದಾವೃತ್ತಿ ಮಿಂದರೆ ಅವರು ರುದ್ರಲೋಕವನ್ನೈದುವರು.

೪೩. ಕಲಿಯುಗದಲ್ಲಿ ಭಾದ್ರಪದಮಾಸದ ಪಕ್ಷಾಂತ್ಯದಲ್ಲಿ ತರ್ಪಣ ಮತ್ತು ಶ್ರಾದ್ಧವನ್ನು ಈ ಕೂಪದಲ್ಲಿ ಮಾಡುವುದರಿಂದ ಪಿತೃಗಳು ತೃಪ್ತರಾಗುವರು.

೪೪. ಗಯೆಯಲ್ಲಿ ಇಪ್ಪತ್ತೊಂದು ಸಾರಿ ತರ್ಪಣದಿಂದ ತೃಪ್ತರಾಗುವರು. ಆದರೆ ಈ ಗಾಂಗಕೂಪದಲ್ಲಿ ಒಂದೇಸಾರಿ ತರ್ಪಣಮಾಡುವುದರಿಂದ ತೃಪ್ತರಾಗುವರು.

೪೫–೪೬. ಆ ಧರ್ಮಾರಣ್ಯದಲ್ಲಿ ಗೋವತ್ಸದ ಹತ್ತಿರ ಗಾಂಗಕೂಪವಿರುವುದು. ಅಲ್ಲಿ ತಿಲೋದಕದಿಂದ ಪಿತೃಗಳು ನರಕದಿಂದ ಉದ್ಧೃತರಾಗಿ ಸದ್ಗತಿ ಪಡೆಯುವರು. ಆ ತೀರ್ಥದಲ್ಲಿ ಮಾಡಿದ ಗೋದಾನವನ್ನು ಮುನಿವರ್ಯರು ಬಹಳವಾಗಿ ಹೊಗಳುತ್ತಾರೆ.

೪೭. ಆ ಶಿವಕ್ಷೇತ್ರದಲ್ಲಿರುವ ಗಾಂಗಕೂಪದಲ್ಲಿ ಸರಸ್ವತೀಗಂಗೆಗಳಿರುವುದರಿಂದ ಅಲ್ಲಿ ಮಾನವನು ಬ್ರಾಹ್ಮಣನಿಗೆ ಸ್ವರ್ಣದಾನವನ್ನೆಸಗಿದರೆ ಅವನನ್ನು ರುದ್ರಲೋಕಕ್ಕೆ ಸೇರಿಸುವುದು.

೪೮. ಒಂದೇ ಎಡೆಯಲ್ಲಿರುವ ಸ್ವರ್ಗಮೋಕ್ಷಗಳನ್ನೀಯುವ ಈ ಮೂರು ದಿವ್ಯವಸ್ತುಗಳು ಮುನಿಗಳಿಂದಲೂ, ಸಿದ್ಧರಿಂದಲೂ ಸೇವಿತವಾಗಿ ಪ್ರಪಂಚದಲ್ಲಿಯೆ ಪ್ರಸಿದ್ಧವಾಗಿವೆ.

CC-0. Jangamwadi Math Collection. Digitized by eGangotri

ಪೀಲುಯುಗ್ಮಂ ಸ್ಥಿತಂ ತತ್ರ ತತ್ತೀರ್ಥಂ ಮುನಿಸೇವಿತಂ ।
ಸ್ನಾನಾತ್ಸ್ವರ್ಗಪ್ರದಂ ಚೈವ ಪಾನಾತ್ಪಾಪವಿಶುದ್ಧಿದಂ ॥ ೪೯ ॥
ಕೀರ್ತನಾತ್ಪುಣ್ಯಜನನಂ ಸೇವನಾನ್ಮುಕ್ತಿದಂ ಪರಂ ।
ತದ್ವೈ ಪಶ್ಯಂತಿ ಯೇ ಭಕ್ತ್ಯಾ ಬ್ರಹ್ಮಹಾ ಯದಿ ಮಾತೃಹಾ ॥ ೫೦ ॥
ಬಾಲಘಾತೀ ಚ ಗೋಘ್ನಶ್ಚ ಯೇ ಚ ಸ್ತ್ರೀಶೂದ್ರಘಾತಕಾಃ ।
ಗರದಾಶ್ಚಾಽಗ್ನಿದಾಶ್ಚೈವ ಗುರುದ್ರೋಹರತಾಶ್ಚ ಯೇ ॥ ೫೧ ॥
ತಪಸ್ವಿನಿಂದಕಾಶ್ಚೈವ ಕೂಟಸಾಕ್ಷ್ಯಂ ಕರೋತಿ ಯಃ ।
ವಕ್ತಾ ಚ ಪರದೋಷಸ್ಯ ಪರಸ್ಯ ಗುಣಲೋಪಕಃ ॥ ೫೨ ॥
ಸರ್ವಪಾಪಮಯೋಽಪ್ಯತ್ರ ಮುಚ್ಯತೇ ಲಿಂಗದರ್ಶನಾತ್ ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ಬಲಾಹಕೋಪಾಖ್ಯಾನವರ್ಣನಂ" ನಾಮ ಸಪ್ತವಿಂಶೋಽಧ್ಯಾಯಃ

---

೪೯. ಅಲ್ಲಿ ಎರಡು ಗೋಣೀಮರಗಳಿವೆ. ಮುನಿಸೇವಿತವಾದ ಆ ತೀರ್ಥವು ಸ್ನಾನಮಾಡುವುದರಿಂದ ಸ್ವರ್ಗವನ್ನೀಯುವುದು. ಪಾನದಿಂದ ಪಾಪಗಳನ್ನು ಕಳೆಯುವುದು.

೫೦–೫೩. ಹೊಗಳುವುದರಿಂದ ಪುಣ್ಯವನ್ನೂ, ಸೇವಿಸುವುದರಿಂದ ಮುಕ್ತಿಯನ್ನೂ ಕೊಡುವುದು. ಬ್ರಾಹ್ಮಣ, ತಾಯಿ, ಬಾಲಕ, ಗೋವು, ಹೆಂಗಸು, ಶೂದ್ರರನ್ನು ಕೊಂದವರೂ, ವಿಷವನ್ನಿತ್ತವರೂ, ಬೆಂಕಿಯನ್ನು ಹಚ್ಚಿದವರೂ, ಗುರುದ್ರೋಹನಿರತರೂ, ಮುನಿಗಳನ್ನು ನಿಂದಿಸುವವರೂ, ಸುಳ್ಳು ಸಾಕ್ಷಿ ಹೇಳಿದವರೂ, ಪರರ ದೋಷವನ್ನು ಹೇಳುವವರೂ, ಪರರ ಗುಣಗಳನ್ನು ನಿಂದಿಸುವವರೂ ಮೊದಲಾದ ಎಲ್ಲ ಪಾಪಿಗಳೂ ಈ ಲಿಂಗದ ದರ್ಶನದಿಂದ ಮುಕ್ತರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ಬಲಾಹಕೋಪಾಖ್ಯಾನವರ್ಣನ"ವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥಾಽಷ್ಟಾವಿಂಶೋಽಧ್ಯಾಯಃ

### ತೀರ್ಥಮಾಹಾತ್ಮ್ಯವರ್ಣನಂ

ವ್ಯಾಸ ಉವಾಚ :—

ಗೋವತ್ಸಾನ್ನೈರ್ಋತೇ ಭಾಗೇ ದೃಶ್ಯತೇ ಲೋಹಯಷ್ಟಿಕಾ ।
ಸ್ವಯಂಭುಲಿಂಗರೂಪೇಣ ರುದ್ರಸ್ತತ್ರ ಸ್ಥಿತಃ ಸ್ವಯಂ ॥ ೧ ॥

ಶ್ರೀ ಮಾರ್ಕಂಡೇಯ ಉವಾಚ :—

ಮೋಕ್ಷತೀರ್ಥೇ ಸರಸ್ವತ್ಯಾ ನಭಸ್ಯೇ ಚಂದ್ರಸಂಕ್ಷಯೇ ।
ವಿಪ್ರಾನ್ಸಂಪೂಜ್ಯ ವಿಧಿವತ್ತೇಭ್ಯೋ ದತ್ವಾ ಚ ದಕ್ಷಿಣಾಂ ॥ ೨ ॥
ಏಕವಿಂಶತಿವಾರಾಂಸ್ತು ಭಕ್ತ್ಯಾ ಪಿಂಡಸ್ಯ ಯತ್ಫಲಂ ।
ಗಯಾಯಾಂ ಪ್ರಾಪ್ಯತೇ ಪುಂಸಾಂ ಧ್ರುವಂ ತದಿಹ ತರ್ಪಣಾತ್ ॥ ೩ ॥
ಲೋಹಯಷ್ಟ್ಯಾಂ ಕೃತೇ ಶ್ರಾದ್ಧೇ ನಭಸ್ಯೇ ಚಂದ್ರಸಂಕ್ಷಯೇ ।
ಪ್ರೇತಯೋನಿವಿನಿರ್ಮುಕ್ತಾಃ ಕ್ರೀಡಂತಿ ಪಿತರೋ ದಿವಿ ॥ ೪ ॥
ಅಪಿ ನಃ ಸಂಕುಲೇ ಭೂಯಾದ್ಯೋ ವೈ ದದ್ಯಾತ್ತಿಲೋದಕಂ ।
ಪಿಂಡಂ ವಾಽಪ್ಯುದಕಂ ವಾಽಪಿ ಪ್ರೇತಪಕ್ಷೇ ವಿಧೂದಯೇ ॥ ೫ ॥

---

## ಕನ್ನಡದ ಅನುವಾದ

### ತೀರ್ಥಮಾಹಾತ್ಮ್ಯವರ್ಣನ

೧. ವ್ಯಾಸನು ಹೇಳುತ್ತಾನೆ:—ಗೋವತ್ಸದ ನೈರುತ್ಯದಿಕ್ಕಿನಲ್ಲಿ ಲೋಹಯಷ್ಟಿಯೆಂಬ ತೀರ್ಥವು ಕಾಣಿಸುವುದು. ಅದರಲ್ಲಿ ಮಹಾದೇವನು ಸ್ವಯಂಭುಲಿಂಗರೂಪದಿಂದ ಸನ್ನಿಧಾನಗೊಂಡಿರುವನು.

೨–೩. ಶ್ರೀಮಾರ್ಕಂಡೇಯನು ಹೇಳುತ್ತಾನೆ:— ಮೋಕ್ಷವನ್ನೀಯುವ ಸರಸ್ವತೀತೀರ್ಥದಲ್ಲಿ ಭಾದ್ರಪದಮಾಸದ ಅಮಾವಾಸ್ಯೆಯ ದಿನ ವಿಹಿತಕ್ರಮದಿಂದ ಬ್ರಾಹ್ಮಣರನ್ನರ್ಚಿಸಿ ಅವರಿಗೆ ದಕ್ಷಿಣೆಯನ್ನಿತ್ತು ತರ್ಪಣಮಾಡುವುದರಿಂದ ಗಯೆಯಲ್ಲಿ ಇಪ್ಪತೊಂದುಸಲ ಪಿಂಡಪ್ರದಾನ ಮಾಡಿದ ಫಲವು ಲಭಿಸುವುದು.

೪–೫. ಲೋಹಯಷ್ಟಿಯಲ್ಲಿ ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ಶ್ರಾದ್ಧಮಾಡಿದರೆ ಪಿತೃಗಳು ಪ್ರೇತಜನ್ಮವನ್ನು ತ್ಯಜಿಸಿ ಸ್ವರ್ಗದಲ್ಲಿ ವಿನೋದಪಡುವರು. ಪಿತೃಪಕ್ಷದಲ್ಲಿ ಪಿಂಡಪ್ರದಾನವನ್ನಾಗಲಿ, ತರ್ಪಣವನ್ನಾಗಲಿ ಮಾಡುವವನು ನಮ್ಮ ವಂಶದಲ್ಲಿ ಹುಟ್ಟಿಯಾನೇ ಎಂದೇ ಪಿತೃಗಳು ನಿರೀಕ್ಷಿಸುತ್ತಿರುತ್ತಾರೆ.

CC-0. Jangamwadi Math Collection. Digitized by eGangotri

ಲೋಹಯಷ್ಟ್ಯಾಮಮಾವಾಸ್ಯಾಂ ಕಾರ್ಯಂ ಭಾದ್ರಪದೇ ಜನೈಃ ।
ಶ್ರಾದ್ಧಂ ವೈ ಮುನಯಃ ಪ್ರಾಹುಃ ಪಿತರೋ ಯದಿ ವಲ್ಲಭಾಃ ॥ ೬ ॥
ಕ್ಷೀರೇಣ ತು ತಿಲೈಃ ಶ್ವೇತೈಃ ಸ್ನಾತ್ವಾ ಸಾರಸ್ವತೇ ಜಲೇ ।
ಪಿತೄಂಸ್ತರ್ಪಯತೇ ಯಸ್ತು ತೃಪ್ತಾಸ್ತತ್ಪಿತರೋ ಧ್ರುವಂ ॥ ೭ ॥
ತತ್ರಶ್ರಾದ್ಧಾನಿ ಕುರ್ವೀತ ಸಕ್ತುಭಿಃ ಪಯಸಾ ಸಹ ।
ಅಮಾವಾಸ್ಯಾದಿನಂ ಪ್ರಾಪ್ಯ ಪಿತೄಣಾಂ ಮೋಕ್ಷಮಿಚ್ಛಕೈಃ ॥ ೮ ॥
ರುದ್ರತೀರ್ಥೇ ತತೋ ಧೇನುಂ ದದ್ಯಾದ್ವಸ್ತ್ರಾದಿಭೂಷಿತಾಂ ।
ವಿಷ್ಣುತೀರ್ಥೇ ಹಿರಣ್ಯಂ ಚ ಪ್ರದದ್ಯಾನ್ಮೋಕ್ಷಮಿಚ್ಛುಕಃ ॥ ೯ ॥
ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।
ತಂ ಧ್ಯಾತ್ವಾ ಪುಂಡರೀಕಾಕ್ಷಂ ಮುಚ್ಯತೇ ಚ ಋಣತ್ರಯಾತ್ ॥ ೧೦ ॥
ಪ್ರಾರ್ಥಯೇತ್ತತ್ರ ಗತ್ವಾ ತಂ ದೇವದೇವಂ ಜನಾರ್ದನಂ ।
ಆಗತೋಽಸ್ಮಿ ಗಯಾಂ ದೇವ ಪಿತೃಭ್ಯಃ ಪಿಂಡದಿತ್ಸಯಾ ।
ಏಷ ಪಿಂಡೋ ಮಯಾ ದತ್ತಸ್ತವ ಹಸ್ತೇ ಜನಾರ್ದನ ॥ ೧೧ ॥
ಪರಲೋಕಗತೇಭ್ಯಶ್ಚ ತ್ವಂ ಹಿ ದಾತಾ ಭವಿಷ್ಯಸಿ ।
ಅನೇನೈವ ಚ ಮಂತ್ರೇಣ ತತ್ರ ದದ್ಯಾದ್ಧರೇಃ ಕರೇ ॥ ೧೨ ॥

---

೬. ಪಿತೃಗಳು ಪ್ರಿಯರಾಗಿದ್ದರೆ ಮಾನವರು ಲೋಹಯಷ್ಟಿಯಲ್ಲಿ ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ಶ್ರಾದ್ಧಮಾಡಬೇಕೆಂದು ಮುನಿಗಳು ನುಡಿದಿರುವರು.

೭. ಸರಸ್ವತೀತೀರ್ಥದ ಜಲದಲ್ಲಿ ಮಿಂದು ಬಿಳಿಯ ಎಳ್ಳುಮಿಶ್ರವಾದ ಹಾಲಿನಿಂದ ತರ್ಪಣಮಾಡಿದವನ ಪಿತೃಗಳು ನಿಶ್ಚಯವಾಗಿಯೂ ತೃಪ್ತಿಗೊಳ್ಳುವರು.

೮. ಅಲ್ಲಿ ಪಿತೃಗಳಿಗೆ ಮೋಕ್ಷವನ್ನು ಬಯಸುವ ಜನರು ಅಮಾವಾಸ್ಯೆ ದಿನ ಹಾಲು ಮಿಶ್ರವಾದ ಹಿಟ್ಟಿನಿಂದ ಶ್ರಾದ್ಧಮಾಡಬೇಕು.

೯. ಮೋಕ್ಷಾರ್ಥಿಯು ರುದ್ರತೀರ್ಥದಲ್ಲಿ ಬಟ್ಟೆ ಮೊದಲಾದುವುಗಳಿಂದ ಅಲಂಕೃತವಾದ ಆಕಳನ್ನೂ, ವಿಷ್ಣುತೀರ್ಥದಲ್ಲಿ ಚಿನ್ನವನ್ನೂ ದಾನಮಾಡಬೇಕು.

೧೦. ಗಯಾಕ್ಷೇತ್ರದಲ್ಲಿ ಶ್ರೀವಿಷ್ಣುವು ತಾನೇ ಸಾಕ್ಷಾತ್ತಾಗಿ ಪಿತೃರೂಪದಿಂದ ನೆಲೆಸಿರುವನು. ನರನು ಆ ಪುಂಡರೀಕಾಕ್ಷನನ್ನು ಧ್ಯಾನಿಸಿದರೆ ಋಣತ್ರಯಗಳಿಂದ ಮುಕ್ತನಾಗುವನು.

೧೧–೧೨. ಆ ಗಯೆಗೆ ಮಾನವನು ಹೋಗಿ, "ಸ್ವಾಮಿ! ಪಿತೃಗಳಿಗೆ ಪಿಂಡಪ್ರದಾನಮಾಡಲು ನಾನು ಇಲ್ಲಿಗೆ ಬಂದಿರುವೆನು. ಈ ಪಿಂಡವನ್ನು ನಾನು

CC-0. Jangamwadi Math Collection. Digitized by eGangotri

ಚಂದ್ರೇ ಕ್ಷೀಣೇ ಚತುರ್ದಶ್ಯಾಂ ನಭಸ್ಯೇ ಪಿಂಡಮಾಹರೇತ್ ।
ಪಿತೄಣಾಮಕ್ಷಯಾ ತೃಪ್ತಿರ್ಭವಿಷ್ಯತಿ ನ ಸಂಶಯಃ ॥ ೧೩ ॥
ಏಕವಿಂಶತಿವಾರಾಂಶ್ಚ ಗಯಾಯಾಂ ಪಿಂಡಪಾತನೈಃ ।
ಭಕ್ತ್ಯಾ ತೃಪ್ತಿಮವಾಪ್ನೋತಿ ಲೋಹಯಷ್ಟ್ಯಾಂ ಪಿತೃತರ್ಪಣೇ ॥ ೧೪ ॥
ವಾರಿದಸ್ತೃಪ್ತಿಮಾಪ್ನೋತಿ ಸುಖಮಕ್ಷಯ್ಯಮತ್ರ ಹಿ ।
ಫಲಪ್ರದಃ ಸುತಾನ್ಭಕ್ತಾನಾರೋಗ್ಯಮಭಯಪ್ರದಃ ॥ ೧೫ ॥
ವಿತ್ತಂ ನ್ಯಾಯಾರ್ಜಿತಂ ದತ್ತಂ ಸ್ವಲ್ಪಂ ತತ್ರ ಮಹಾಫಲಂ ।
ಸ್ನಾನೇನಾಽಪಿ ಹಿ ತತ್ತೀರ್ಥೇ ರುದ್ರಸ್ಯಾಽನುಚರೋ ಭವೇತ್ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ತೀರ್ಥಮಾಹಾತ್ಮ್ಯವರ್ಣನಂ" ನಾಮಾಷ್ಟಾವಿಂಶೋಽಧ್ಯಾಯಃ

---

ನಿನ್ನ ಕೈಯಲ್ಲಿಡುವೆನು. ಪರಲೋಕದಲ್ಲಿರುವ ಪಿತೃಗಳಿಗೆ ನೀನಿದನ್ನು ಒಪ್ಪಿಸು" ಎಂದು ಪ್ರಾರ್ಥಿಸಿ ಆ ವಿಷ್ಣುವಿನ ಹಸ್ತದಲ್ಲಿ ಪಿಂಡವನ್ನು ಕೊಡಬೇಕು.

೧೩. ಚಂದ್ರನು ಕ್ಷೀಣನಾಗಿರುವ ಭಾದ್ರಪದ ಬಹುಳ ಚತುರ್ದಶಿಯ ದಿನ ಪಿತೃಗಳಿಗೆ ಪಿಂಡಪ್ರದಾನ ಮಾಡಿದರೆ ಅವರು ಶಾಶ್ವತವಾದ ತೃಪ್ತಿಯನ್ನು ಪಡೆಯುವರು.

೧೪. ಗಯಾ ಕ್ಷೇತ್ರದಲ್ಲಿ ಇಪ್ಪತೊಂದು ಸಲ ಪಿಂಡಪ್ರದಾನದಿಂದ ಪಿತೃಗಳು ತೃಪ್ತರಾಗುವರು. ಈ ಲೋಹಯಷ್ಟಿ ತೀರ್ಥದಲ್ಲಿ ಭಕ್ತಿಯಿಂದ ತರ್ಪಣ ಮಾಡುವುದರಿಂದ ಮಾತ್ರವೇ ಅವರು ತೃಪ್ತಿಗೊಳ್ಳುವರು.

೧೫. ಇಲ್ಲಿ ಜಲದಾನಮಾಡಿದವನು ಶಾಶ್ವತಸುಖವನ್ನು ಪಡೆದು ತೃಪ್ತನಾಗುವನು. ಫಲದಾನವನ್ನಿತ್ತವನು ಭಕ್ತಿಯುಳ್ಳ ಪುತ್ರರನ್ನೂ, ಅಭಯದಾನಮಾಡಿದವನು ಆರೋಗ್ಯವನ್ನೂ ಹೊಂದುವನು.

೧೬. ನ್ಯಾಯರೀತಿಯಿಂದ ಗಳಿಸಿದ ಸ್ವಲ್ಪ ದ್ರವ್ಯವನ್ನು ದಾನಮಾಡಿದರೂ ಅದು ಮಹಾಫಲವನ್ನೀಯುವುದು. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದಲೇ ಮಹೇಶ್ವರನ ಸೇವಕನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ತೀರ್ಥಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕೋನತ್ರಿಂಶೋಽಧ್ಯಾಯಃ

### ಲೋಹಾಸುರಮಾಹಾತ್ಮ್ಯಸಂಪೂರ್ತಿವರ್ಣನಂ

ಸೂತ ಉವಾಚ:—

ಅತಃಪರಂ ಶೃಣುಧ್ವಂ ಹಿ ಲೋಹಾಸುರವಿಚೇಷ್ಟಿತಂ ।
ಬಲೇಃ ಪುತ್ರಶತಸ್ಯಾಪಿ ಕಥಯಿಷ್ಯಾಮಿ ವಿಶ್ರುತಂ ॥ ೧ ॥
ಯಥಾ ತೌ ಭ್ರಾತರೌ ವೃದ್ಧೌ ಪ್ರಾಪತುಃ ಸ್ಥಾನಮುತ್ತಮಂ ।
ತದಾಪ್ರಭೃತಿ ವೈರಾಗ್ಯಂ ದೈತ್ಯೋ ಲೋಹಾಸುರೇ ದಧೌ ॥ ೨ ॥
ಕಿಂ ಕರೋಮಿ ಕ್ವ ಗಚ್ಛಾಮಿ ತಪಸೇ ಸ್ಥಾನಮುತ್ತಮಂ ।
ಯಸ್ಯ ಪಾರಂ ನ ಜಾನಂತಿ ದೇವತಾ ಮುನಯೋ ನರಾಃ ॥ ೩ ॥
ಕೋ ಮಯಾರಾಧ್ಯತಾಂ ದೇವೋ ಹೃದಿ ಚಿಂತಯತೇ ಭೃಶಂ ।
ಇತಿ ಚಿಂತಯತಸ್ತಸ್ಯ ಮತಿರ್ಜಾತಾ ಮಹಾತ್ಮನಃ ॥ ೪ ॥
ದಧೌ ಗಂಗಾಂ ಸ್ವಶೀರ್ಷೇಣ ಪುಷ್ಪವಂತೌ ಚ ನೇತ್ರಯೋಃ ।
ಹೃದಾ ನಾರಾಯಣಂ ದೇವಂ ಬ್ರಹ್ಮಾಣಂ ಕಟಿಮಂಡಲೇ ॥ ೫ ॥
ಇಂದ್ರಾದ್ಯಾ ದೇವತಾಃ ಸರ್ವೇ ಯದ್ದೇಹೇ ಪ್ರತಿಬಿಂಬಿತಾಃ ।
ಪ್ರಪಶ್ಯಂತಿ ತದಾತ್ಮಾನಂ ಭಾಸ್ಕರಃ ಸಲಿಲೇ ಯಥಾ ॥ ೬ ॥

---

## ಕನ್ನಡದ ಅನುವಾದ

### ಲೋಹಾಸುರಮಾಹಾತ್ಮ್ಯಸಂಪೂರ್ತಿವರ್ಣನ

೧. ಸೂತನು ಹೇಳುತ್ತಾನೆ:—ಇನ್ನು ಮುಂದೆ ಲೋಹಾಸುರನ ಕಾರ್ಯವನ್ನು ಕೇಳಿರಿ. ಬಲಿಯ ನೂರು ಜನ ಮಕ್ಕಳ ಪ್ರಸಿದ್ಧ ಚರಿತ್ರೆಯನ್ನೂ ಹೇಳುವೆನು.

೨. ಮುದುಕರಾದ ಆ ಈರ್ವರು ಸಹೋದರರು ಆ ಉತ್ತಮಕ್ಷೇತ್ರಕ್ಕೆ ಬಂದರು. ಅದು ಮೊದಲ್ಗೊಂಡು ಲೋಹಾಸುರನು ವಿರಕ್ತನಾದನು.

೩–೪. "ಏನುಮಾಡಲಿ? ತಪಸ್ಸಿಗಾಗಿ ಯಾವ ಉತ್ತಮಸ್ಥಾನವನ್ನು ಸೇರಲಿ? ದೇವತೆಗಳಿಗೂ, ಮುನಿಗಳಿಗೂ, ನರರಿಗೂ ಸಂಪೂರ್ಣ ವಿಷಯವನ್ನರಿಯಲಾಗದ ಯಾವ ದೇವತೆಯನ್ನು ಪೂಜಿಸಲಿ?" ಎಂದು ಬಹಳವಾಗಿ ಚಿಂತಿಸುತ್ತಿರುವಾಗ ಅವನ ಮನಸ್ಸಿಗೆ ಹೀಗೆ ಹೊಳೆಯಿತು.

೫–೬. ಆ ದೈತ್ಯನು ಗಂಗೆಯನ್ನು ತಲೆಯಲ್ಲಿಯೂ, ಸೂರ್ಯಚಂದ್ರರನ್ನು ಕಣ್ಣುಗಳಲ್ಲಿಯೂ, ನಾರಾಯಣನನ್ನು ಹೃದಯದಲ್ಲಿಯೂ, ಬ್ರಹ್ಮನನ್ನು ಸೊಂಟದಲ್ಲಿಯೂ ಧರಿಸಿ, "ಇಂದ್ರಾದಿದೇವತೆಗಳು ದೇಹದಲ್ಲಿ ಪ್ರತಿಬಿಂಬಗೊಂಡು

CC-0. Jangamwadi Math Collection. Digitized by eGangotri

ತಮೇವಾರಾಧಯಿಷ್ಯಾಮಿ ನಿರಂಜನಮಕಲ್ಮಷಂ ।
ಏವಂ ಕೃತ್ವಾ ಮತಿಂ ದೈತ್ಯಸ್ತಪಸ್ತೇಪೇ ಸುದುಷ್ಕರಂ ।
ಭೀತೋ ಜನ್ಮಭಯಾದ್ಘೋರಾದ್ದುಷ್ಕರಂ ಯನ್ಮಹಾತ್ಮಭಿಃ ॥ ೭ ॥
ಅಂಬುಭಕ್ಷೋ ವಾಯುಭಕ್ಷಃ ಶೀರ್ಣಪರ್ಣಾಽಶನಸ್ತಥಾ ।
ದಿವ್ಯಂ ವರ್ಷಶತಂ ಸಾಗ್ರಂ ಯದಾ ತೇಪೇ ಮಹತ್ತಪಃ ।
ತತಸ್ತುತೋಷ ಭಗವಾಂಸ್ತ್ರಿಶೂಲವರಧಾರಕಃ ॥ ೮ ॥

ಈಶ್ವರ ಉವಾಚ :—

ವರಂ ವೃಣೀಷ್ವ ಭದ್ರಂ ತೇ ಮನಸಾ ಯದಭೀಪ್ಸಿತಂ ।
ಲೋಹಾಽಸುರ ಮಯಾ ದೇಯಂ ತವ ನಾಸ್ತಿ ತಪೋಬಲಾತ್ ॥ ೯ ॥
ಇತ್ಯುಕ್ತೋ ದಾನವಸ್ತತ್ರ ಶಂಕರಾಽಗ್ರೇ ವಚೋಽಬ್ರವೀತ್ ॥ ೧೦ ॥

ಲೋಹಾಽಸುರ ಉವಾಚ :—

ಯದಿ ತುಷ್ಟೋಽಸಿ ದೇವೇಶ ವರಮೇಕಂ ವೃಣೋಮ್ಯಹಂ ।
ಶರೀರಸ್ಯಾಽಜರತ್ವಂ ಚ ಮಾಮೃತ್ಯೋರಪಿ ಮೇ ಭಯಂ ॥ ೧೧ ॥
ಜನ್ಮನ್ಯಸ್ಮಿನ್ಪ್ರಭೋ ಭೂಯಾತ್ ಸ್ಥಾತವ್ಯಂ ಹೃದಯೇ ಮಮ ।
ಏವಮಸ್ತು ಶಿವಃ ಪ್ರಾಹ ತತ್ರ ತಂ ದಾನವೇಶ್ವರಂ ॥ ೧೨ ॥
ಶರ್ವಲಬ್ಧವರೋ ದೈವಾತ್ಪುನಸ್ತೇಪೇ ಮಹತ್ತಪಃ ।
ರಮ್ಯೇ ಸರಸ್ವತೀತೀರೇ ತರಣಾಯ ಭವಾಽರ್ಣವಾತ್ ॥ ೧೩ ॥

---

ನೀರಿನಲ್ಲಿ ಸೂರ್ಯನನ್ನು ಕಾಣುವಂತೆ ಕಾಣುತ್ತಿರುವ ನಿರ್ದೋಷಿಯಾದ ದೇವತೆಯನ್ನು ಆರಾಧಿಸುವೆನೆಂ"ದು ನಿರ್ಧರಿಸಿ ತಿರುಗಿ ತಿರುಗಿ ಹುಟ್ಟುವುದರಿಂದ ಭಯಗೊಂಡು ಮಹಾತ್ಮರಿಗೂ ಮಾಡಲಾಗದ ಘೋರತಪಸ್ಸನ್ನಾಚರಿಸಿದನು.

೮. ಆ ದೈತ್ಯನು ನೀರನ್ನು ಕುಡಿಯುತ್ತಲೂ, ವಾಯುವನ್ನು ಸೇವಿಸುತ್ತಲೂ, ಒಣಗಿದ ಎಲೆಗಳನ್ನು ಭಕ್ಷಿಸುತ್ತಲೂ ನೂರು ದಿವ್ಯವರ್ಷಗಳಕಾಲ ತಪಸ್ಸನ್ನಾಚರಿಸಿದನು. ಆಗ ತ್ರಿಶೂಲಧಾರಿಯಾದ ಶಂಕರನು ಸಂತುಷ್ಟನಾದನು.

೯–೧೦. ಈಶ್ವರನು ಹೇಳುತ್ತಾನೆ:—ಎಲೈ ಮಂಗಳಕರನೆ! ನಿನ್ನ ಅಭೀಷ್ಟವನ್ನು ಕೇಳಿಕೊ. ಲೋಹಾಸುರ! ನಿನ್ನ ಮಹಾತಪಸ್ಸಿಗೆ ಮೆಚ್ಚಿರುವ ನಾನು ನಿನಗೆ ಕೊಡದಿರುವುದೇನಿದೆ? ಶಂಕರನು ಹೀಗೆ ಹೇಳಲು ಲೋಹಾಸುರನು ಇಂತೆಂದನು.

೧೧–೧೨. ಲೋಹಾಸುರನು ಕೇಳುತ್ತಾನೆ:—"ಶಂಕರ! ನೀನು ನನಗೆ ಪ್ರಸನ್ನನಾಗಿದ್ದರೆ ಮೃತ್ಯುವಿನ ಭಯವಿಲ್ಲದಂತೆ ಮಾಡಿ ನನ್ನ ದೇಹವನ್ನು ಶಾಶ್ವತಗೊಳಿಸು. ಈ ಜನ್ಮದಲ್ಲಿಯೆ ನೀನು ನನ್ನ ಹೃದಯದಲ್ಲಿ ನೆಲಸು" ಎಂದನು. ಮಹಾದೇವನು ಹಾಗೆಯೇ ಆಗಲೆಂದು ಒಪ್ಪಿದನು.

೧೩. ಆ ಲೋಹಾಸುರನು ಹೀಗೆ ಶಿವನಿಂದ ವರವನ್ನು ಪಡೆದು ಮರಳಿ

CC-0. Jangamwadi Math Collection. Digitized by eGangotri

ವತ್ಸರಾಣಾಂ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ಶಂಕತೇ ಭಗವಾನಿಂದ್ರೋ ಭೀತಸ್ತಸ್ಯ ತಪೋಬಲಾತ್ ॥ ೧೪ ॥
ಮಾಮೇ ಪದಚ್ಯುತಿರ್ಭೂಯಾದ್ದೈತ್ಯಾಲ್ಲೋಹಾಽಸುರಾತ್ಕ್ವಚಿತ್ ।
ಮಘವಾನ್ಗುಪ್ತರೂಪೇಣ ಸಮೇತ್ಯಾಶ್ರಮಕಾನನಂ ॥ ೧೫ ॥
ತಪೋಭಂಗಂ ಪ್ರಕುರುತೇ ಕಂಪಯಿತ್ವಾ ಮಹಾಽಸುರಂ ।
ತಾಡಯಂತಿ ಶರೀರೇ ತಂ ಮುಷ್ಟಿಭಿಸ್ತೀಕ್ಷ್ಣಕರ್ಕಶೈಃ ॥ ೧೬ ॥
ಅಥ ತೇನ ಚ ದೈತ್ಯೇನ ಧ್ಯಾನಮುತ್ಸೃಜ್ಯ ವೀಕ್ಷಿತಂ ।
ಇಂದ್ರೇಣ ತತ್ಕೃತಂ ಸರ್ವಂ ತಪೋಬಲವಿನಾಶನಂ ॥ ೧೭ ॥
ತಸ್ಯ ತೈರಭವದ್ಯುದ್ಧಮಿಂದ್ರಾದ್ಯೈರಥಕರ್ಕಶೈಃ ।
ಏಕಸ್ಯ ಬಹುಭಿಃ ಸಾರ್ಧಂ ದೇವಾಸ್ತೇ ತೇನ ಸಂಯುಗೇ ॥ ೧೮ ॥
ರುಧಿರಾಕ್ಲಿನ್ನದೇಹಾ ವೈ ಪ್ರಹಾರೈರ್ಜರ್ಜರೀಕೃತಾಃ ।
ಕೇಶವಂ ಶರಣಂ ಪ್ರಾಪ್ತಾ ತ್ರಾಹಿ ತ್ರಾಹೀತಿ ಭಾಷಿಣಃ ॥ ೧೯ ॥

ಸೂತ ಉವಾಚ :—

ದೇವಾನಾಂ ವಾಕ್ಯಮಾಕರ್ಣ್ಯ ವಾಸುದೇವೋ ಜನಾರ್ದನಃ ।
ಯುಯುಧೇ ಕೇಶವಸ್ತೇನ ಯುದ್ಧೇ ವರ್ಷಶತಂ ಕಿಲ ॥ ೨೦ ॥

---

ಸಂಸಾರಸಮುದ್ರವನ್ನು ದಾಟುವುದಕ್ಕಾಗಿ ರಮ್ಯವಾದ ಸರಸ್ವತೀನದಿಯ ತೀರದಲ್ಲಿ ಘೋರವಾದ ತಪಸ್ಸನ್ನಾಚರಿಸಿದನು.

೧೪. ಸಹಸ್ರ, ಲಕ್ಷ, ಅರ್ಬುದ ಸಂವತ್ಸರಗಳಕಾಲ ಅವನು ತಪಸ್ಸನ್ನು ಮಾಡಲು ಇಂದ್ರನು ಅವನ ತಪಸ್ಸಿನಿಂದ ಕಳವಳಗೊಂಡನು.

೧೫–೧೬. "ಈ ಲೋಹಾಸುರನ ತಪಸ್ಸಿನಿಂದ ನನ್ನ ಸ್ಥಾನವು ತಪ್ಪದಿರಲೆಂ"ದು ಇಂದ್ರನು ಗುಟ್ಟಾಗಿ ಅವನ ತಪೋವನಕ್ಕೆ ಬಂದು ಅವನನ್ನು ನಡುಗಿಸಿ ತಪೋಭಂಗವನ್ನು ಮಾಡಿದನು. ಬಹಳ ಘಟ್ಟಿಯಾದ ತನ್ನ ಮುಷ್ಟಿಯಿಂದ ಅವನನ್ನು ಗುದ್ದಿ ಬಾಧಿಸಿದನು.

೧೭. ಆಗ ದೈತ್ಯನು ಧ್ಯಾನವನ್ನು ತ್ಯಜಿಸಿ ಇಂದ್ರನು ಮಾಡಿದ ತಪೋಬಲನಾಶವನ್ನೆಲ್ಲ ಈಕ್ಷಿಸಿದನು.

೧೮–೧೯. ಆ ಲೋಹಾಸುರನಿಗೂ ಇಂದ್ರಾದ್ಯನೇಕದೇವತೆಗಳಿಗೂ ಕಾಳಗವಾಯಿತು. ದೇವತೆಗಳು ಆ ಯುದ್ಧದಲ್ಲಿ ರಕ್ತಸಿಕ್ತಾಂಗರಾಗಿ ಏಟುಗಳಿಂದ ಪುಡಿಪುಡಿಯಾದರು. ರಕ್ಷಿಸು ರಕ್ಷಿಸೆಂದು ಕೂಗುತ್ತ ವಿಷ್ಣುವನ್ನು ಮರೆಹೊಕ್ಕರು.

೨೦. ಸೂತನು ಹೇಳುತ್ತಾನೆ:—ಶ್ರೀಮಹಾವಿಷ್ಣುವು ದೇವತೆಗಳ ಮಾತನ್ನು ಕೇಳಿ ನೂರುವರ್ಷಗಳ ಕಾಲ ಆ ಅಸುರನೊಡನೆ ಯುದ್ಧಮಾಡಿದನು.

CC-0. Jangamwadi Math Collection. Digitized by eGangotri

ತತೋ ನಾರಾಯಣಂ ತತ್ರ ಜಿಗಾಯ ಸ ವರೋರ್ಜಿತಃ ।
ಅಥ ನಾರಾಯಣೋ ದೇವೋ ಜಿತೋ ಲೋಹಾಸುರೇಣ ತು ॥ ೨೧ ॥
ಮಂತ್ರಯಾಮಾಸ ರುದ್ರೇಣ ಬ್ರಹ್ಮಣಾ ಚ ಪುನಃ ಪುನಃ ।
ಮೀಮಾಂಸಿತ್ವಾ ತ್ರಯೋ ದೇವಾಃ ಪುನರ್ಯುದ್ಧಾಯ ಸಮುದ್ಯಮಂ ॥೨೨॥
ಲೋಹಾಸುರಸ್ಯ ದೈತ್ಯಸ್ಯ ವಪುರ್ದೃಷ್ಟ್ವಾ ಪುನರ್ನವಂ ।
ಮಹದಾಸೀತ್ಪುನರ್ಯುದ್ಧಂ ದೈತ್ಯಕೇಶವಯೋಸ್ತತಃ ॥ ೨೩ ॥
ನ ಮಮಾರ ಯದಾ ದೈತ್ಯೋ ವಿಷ್ಣುನಾ ಪ್ರಭವಿಷ್ಣುನಾ ।
ತರಸಾ ತಂ ಕೇಶವೋಽಪಿ ಪಾತಯಾಮಾಸ ಭೂತಲೇ ॥ ೨೪ ॥
ಉತ್ತಾನಂ ಪತಿತಂ ದೃಷ್ಟ್ವಾ ಪಿನಾಕೀ ಪರಮೇಶ್ವರಃ ।
ದಧಾರ ಹೃದಯೇ ತಸ್ಯ ಸ್ವರೂಪಂ ರೂಪವರ್ಜಿತಃ ॥ ೨೫ ॥
ಕಂಠೇ ತಸ್ಥೌ ತತೋ ಬ್ರಹ್ಮಾ ತಸ್ಯ ಲೋಹಾಸುರಸ್ಯ ಚ ।
ಚರಣೌ ಪೀಡಯಾಮಾಸ ಸ್ವಸ್ಥಿತ್ವಾ ಪುರುಷೋತ್ತಮಃ ॥ ೨೬ ॥
ಅಥ ದೈತ್ಯಃ ಸಮುತ್ತಸ್ಥೌ ಭೃಶಂ ವಿದ್ಧೋಽಪಿ ಭೂತಲೇ ।
ದೃಷ್ಟ್ವೋತ್ಥಿತಂ ತತೋ ದೈತ್ಯಂ ಪಾತಯಂತಂ ಸುರೋತ್ತಮಾನ್ ॥೨೭॥
ಉವಾಚ ದಿವ್ಯಯಾ ವಾಚಾ ವಿರಿಂಚಿಃ ಕಮಲಾಸನಃ ॥ ೨೮ ॥

ಬ್ರಹ್ಮೋವಾಚ :—

ಲೋಹಾಸುರ ಸದಾ ರಕ್ಷ ವಾಚೋ ಧರ್ಮಮಭೀಕ್ಷ್ಣಶಃ ।
ತ್ವಯಾ ಯತ್ಪ್ರಾರ್ಥಿತಂ ರುದ್ರಾತ್ತದೇವ ಸಮುಪಸ್ಥಿತಂ ॥ ೨೯ ॥

---

೨೧—೨೩. ಶಂಕರನ ವರದಿಂದ ಬಲಗೊಂಡ ಆ ಲೋಹಾಸುರನು ನಾರಾಯಣನನ್ನು ಗೆದ್ದನು. ಅವನಿಂದ ಜಿತನಾದ ವಿಷ್ಣುವು ಬ್ರಹ್ಮರುದ್ರರೊಡನೆ ತಿರುಗಿ ಆಲೋಚಿಸಿ ಯುದ್ಧವನ್ನು ಹೂಡಿದನು. ಮರಳಿ ಹೊಸ ಶರೀರವನ್ನು ಪಡೆದ ಲೋಹಾಸುರನಿಗೂ ವಿಷ್ಣುವಿಗೂ ಘೋರ ಯುದ್ಧವು ನಡೆಯಿತು.

೨೪—೨೫. ಸಮರ್ಥನಾದ ವಿಷ್ಣುವು ಆ ದೈತ್ಯನನ್ನು ಕೊಲ್ಲಲಾಗದೆ ಕೂಡಲೆ ಭೂಮಿಯಲ್ಲಿ ಅವನನ್ನು ಕೆಡವಿದನು. ಮೇಲ್ಮುಖನಾಗಿ ಬಿದ್ದಿರುವ ಅವನನ್ನು ಕಂಡು ಪರಮೇಶ್ವರನು ಅವನ ಹೃದಯದಲ್ಲಿ ನೆಲೆಸಿದನು.

೨೬. ಬ್ರಹ್ಮನು ಆ ಲೋಹಾಸುರನ ಕಂಠದಲ್ಲಿ ನೆಲಸಿದನು. ವಿಷ್ಣುವು ಕಾಲುಗಳಲ್ಲಿದ್ದು ಅವುಗಳನ್ನು ಒತ್ತಿದನು.

೨೭—೨೮. ಬಳಿಕ ಭೂಮಿಯಲ್ಲಿ ಬಿದ್ದಿದ್ದ ದೈತ್ಯನು ಮೇಲಕ್ಕೆದ್ದು ದೇವತೆಗಳನ್ನು ಹೊಡೆದು ಕೆಡವುತ್ತಿರಲು ಬ್ರಹ್ಮನು ದಿವ್ಯವಾಣಿಯಿಂದ ಹೀಗೆಂದನು.

೨೯. ಬ್ರಹ್ಮನು ಹೇಳುತ್ತಾನೆ :—ಲೋಹಾಸುರ! ನೀನು ಆಡಿದ ಮಾತನ್ನು ನಡೆಯಿಸು. ನೀನು ಮಹೇಶ್ವರನಿಂದ ಬೇಡಿದುದು ಇದೀಗ ಕೈಗೂಡಿತು.

CC-0. Jangamwadi Math Collection. Digitized by eGangotri

ಅಹಂ ವಿಷ್ಣುಶ್ಚ ರುದ್ರಶ್ಚ ತ್ರಯೋಽಮೀ ಸುರಸತ್ತಮಾಃ ।
ತ್ವದ್ದೇಹಮುಪವೇಕ್ಷ್ಯಾಮೋ ಯಾವದಾಭೂತಸಂಪ್ಲವಂ ॥ ೩೦ ॥
ದಾನವೇಶ ಶಿವಪ್ರಾಪ್ತಿರ್ಭಾವಭಕ್ತ್ಯೈವ ಜಾಯತೇ ।
ಶಿವಂ ಚಾಲಯಿತುಂ ಬುದ್ಧಿಃ ಕಥಂ ತವ ಭವಿಷ್ಯತಿ ॥ ೩೧ ॥
ಅಚಲಾಂಶ್ಚಾಲಯೇದ್ಯಸ್ತು ಪ್ರಾಸಾದಾನ್ಬ್ರಾಹ್ಮಣಾನ್ಸುರಾನ್ ।
ಅಚಿರೇಣೈವ ಕಾಲೇನ ಪಾತಕೇನೈವ ಲಿಪ್ಯತೇ ॥ ೩೨ ॥
ಶ್ಮಶಾನವತ್ಪರಿತ್ಯಾಜ್ಯಃ ಸತ್ಯಧರ್ಮಬಹಿಷ್ಕೃತಃ ।
ಸತ್ಯವಾಗಸಿ ಭದ್ರಂ ತೇ ಮಾವಿಚಾಲಯ ದೇವತಾಃ ॥ ೩೩ ॥
ಯೇನ ಯಾತಾಸ್ತು ಪಿತರೋ ಯೇನ ಯಾತಾಃ ಪಿತಾಮಹಾಃ ।
ತೇನ ಮಾರ್ಗೇಣ ಗಂತವ್ಯಂ ನ ಚೋಲ್ಲಂಘ್ಯಾ ಸತಾಂ ಗತಿಃ ॥ ೩೪ ॥
ದಾನವೇಶ ಪಿತಾ ತೇಹಿ ದದೌ ಲೋಕತ್ರಯಂ ಹರೇಃ ।
ವಾಕ್ಪಾಶಬದ್ಧಃ ಪಾತಾಲೇ ರಾಜ್ಯಂ ಚಕ್ರೇ ಮಹೀಪತಿಃ ॥ ೩೫ ॥
ತಥಾ ತ್ವಮಸಿ ವಾಕ್ಪಾಶಾಚ್ಛಿವಭಕ್ತಿಸಮನ್ವಿತಃ ।
ಭೂತಲೇ ತಿಷ್ಠ ದೈತ್ಯೇಂದ್ರ ಮಾವಾಗ್ವೈಕಲ್ಯಮಾಪ್ನುಹಿ ॥ ೩೬ ॥

---

೩೦. ಪ್ರಳಯಕಾಲದವರೆಗೆ ನಾನೂ, ವಿಷ್ಣುವೂ, ಮಹೇಶ್ವರನೂ ಈ ಮೂವರೂ ನಿನ್ನ ಶರೀರದಲ್ಲಿ ನೆಲಸಿರುವೆವು.

೩೧. ದಾನವೇಂದ್ರ! ಶಿವಪ್ರಾಪ್ತಿಯು ಭಕ್ತಿಯಿಂದಲೇ ಆಗುವುದು. ಶಿವನನ್ನು ಚಂಚಲನನ್ನಾಗಿ ಮಾಡಲು ನೀನೇತಕ್ಕೆ ಆಲೋಚಿಸುವೆ.

೩೨. ಸ್ಥಿರವಾದ ದೇವಾಲಯ, ಬ್ರಾಹ್ಮಣರು, ದೇವತಾಮೂರ್ತಿಗಳು ಇವುಗಳನ್ನು ಚಲಿಸುವಂತೆ ಮಾಡುವವನು ಕೂಡಲೇ ಪಾತಕಿಯಾಗುವನು.

೩೩. ಸತ್ಯಧರ್ಮಗಳಿಂದ ಬಾಹ್ಯನಾದ ಮನುಜನು ಶ್ಮಶಾನದಂತೆ ತ್ಯಾಜ್ಯನು. ನೀನು ಸತ್ಯವಾದ ಮಾತುಳ್ಳವನಾಗಿರುವೆ. ನಿನಗೆ ಕಲ್ಯಾಣ ವಾಗಲಿ. ದೇವತೆಗಳನ್ನು ಚಲಿಸುವಂತೆ ಮಾಡಲು ಯತ್ನಿಸಬೇಡ.

೩೪. ನೀನು ನಿನ್ನ ಪಿತೃಪಿತಾಮಹರು ನಡೆದ ದಾರಿಯಲ್ಲಿ ನಡೆಯಬೇಕು. ಸಜ್ಜನರ ಮಾರ್ಗವನ್ನು ಮೀರಬಾರದು.

೩೫. ದಾನವೇಂದ್ರ! ನಿನ್ನ ತಂದೆಯು ಮಾತಿಗೆ ಕಟ್ಟುಬಿದ್ದು ಮೂರು ಲೋಕಗಳನ್ನೂ ಶ್ರೀಹರಿಗೆ ದಾನಮಾಡಿ ತಾನು ಪಾತಾಳದಲ್ಲಿ ರಾಜ್ಯವನ್ನು ನಿರ್ಮಿಸಿದನು.

೩೬. ಅಸುರೇಂದ್ರ! ನೀನೂ ಹಾಗೆಯೇ ಆಡಿದ ಮಾತನ್ನು ಮೀರದೆ ಶಿವಭಕ್ತಿಸಂಪನ್ನನಾಗಿ ಭೂಮಿಯಲ್ಲಿ ಬಾಳು. ವಚನೋಲ್ಲಂಘನವನ್ನು ಮಾಡಬೇಡ.

CC-0. Jangamwadi Math Collection. Digitized by eGangotri

ವರಾಂಸ್ತೇ ಚ ಪ್ರದಾಸ್ಯಾಮೋ ಮಾ ವಿಚಾಲ್ಯಾ ಹಿ ದೇವತಾಃ ॥ ೩೭ ॥

ವ್ಯಾಸ ಉವಾಚ :—

ತಚ್ಛ್ರುತ್ವಾ ಬ್ರಹ್ಮಣೋ ವಾಕ್ಯಂ ಸಂತುಷ್ಟೋ ದಾನವೇಶ್ವರಃ ।
ಪ್ರಾಹ ಪ್ರಸನ್ನಯಾ ವಾಚಾ ಬ್ರಹ್ಮಾಣಂ ಕೇಶವಂ ಹರಂ ॥ ೩೮ ॥

ಲೋಹಾಸುರ ಉವಾಚ :—

ವಾಕ್ಪಾಶಬದ್ಧಸ್ತಿಷ್ಠಾಮಿ ನ ಪುನರ್ಭವತಾಂ ಬಲೇ ।
ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ತ್ರಯೋಽಮೀ ಸುರಸತ್ತಮಾಃ ॥ ೩೯ ॥
ಸ್ಥಾಸ್ಯಂತಿ ಚೇಚ್ಛರೀರೇ ಮೇ ಕಿಂ ನ ಲಬ್ಧಂ ಮಯಾ ತತಃ ।
ಇದಂ ಕಲೇವರಂ ಮೇ ಹಿ ಸಮಾರೂಢಂ ತ್ರಿಭಿಃ ಸುರೈಃ ॥ ೪೦ ॥
ಭೂಮ್ಯಾಂ ಭವತು ವಿಖ್ಯಾತಂ ಮತ್ಪ್ರಭಾವಾತ್ಸುರೋತ್ತಮಾಃ ॥ ೪೧ ॥
ಲೋಹಾಸುರಸ್ಯ ವಾಕ್ಯೇನ ಹರ್ಷಿತಾಸ್ತ್ರಿದಶಾದಯಃ ।
ದದುಃ ಪ್ರತ್ಯುತ್ತರಂ ತಸ್ಮೈ ಬ್ರಹ್ಮವಿಷ್ಣುಸುರೇಶ್ವರಾಃ ॥ ೪೨ ॥
ಸತ್ಯವಾಕ್ಪಾಶತೋ ದೈತ್ಯೋ ನ ಸತ್ಯಾಚ್ಚಲಿತೋ ಯತಃ ।
ತೇನ ಸತ್ಯೇನ ಸಂತುಷ್ಟಾ ದಾಸ್ಯಾಮಸ್ತೇ ಮನೀಪ್ಸಿತಂ ॥ ೪೩ ॥

ಬ್ರಹ್ಮೋವಾಚ :—

ಯಥಾಸ್ನಾನಂ ಬ್ರಹ್ಮಜ್ಞಾನಂ ದೇಹತ್ಯಾಗೋ ಗಯಾತಲೇ ।
ಧರ್ಮಾರಣ್ಯೇ ತಥಾ ದೈತ್ಯ ಧರ್ಮೇಶ್ವರಪುರಃ ಸ್ಥಿತೇ ॥ ೪೪ ॥

---

೩೭. ನಿನಗೆ ವರವನ್ನೀಯುವೆವು. ದೇವತೆಗಳನ್ನು ಚಂಚಲರನ್ನಾಗಿಸಬೇಡ.

೩೮. ವ್ಯಾಸನು ಹೇಳುತ್ತಾನೆ:—ಆ ಪಿತಾಮಹನ ನುಡಿಯನ್ನು ಕೇಳಿ ಸಂತುಷ್ಟನಾದ ದಾನವೇಂದ್ರನು ಪ್ರಸನ್ನವಾಣಿಯಿಂದ ಬ್ರಹ್ಮವಿಷ್ಣುಮಹೇಶ್ವರರನ್ನು ಕುರಿತು ಇಂತೆಂದನು.

೩೯–೪೧. ಲೋಹಾಸುರನು ಹೇಳುತ್ತಾನೆ:—ನಾನು ನನ್ನ ಮಾತಿಗೆ ಕಟ್ಟು ಬಿದ್ದು ಹಾಗೆಯೆ ಮಾಡುವೆನು. ನಿಮ್ಮ ಬಲಕ್ಕೆ ಸೋತು ಹಾಗೆ ಮಾಡುವುದಿಲ್ಲ. ದೇವೋತ್ತಮರಾದಸ್ಥಬ್ರಹ್ಮ, ವಿಷ್ಣು, ಮಹೇಶ್ವರರು ನನ್ನ ದೇಹದಲ್ಲಿ ನೆಲಸಿರುವುದಾದರೆ ನನ್ನ ಮನೋರಥವು ಕೈಗೂಡಿತು. ಅಯ್ಯಾ ದೇವೋತ್ತಮರೆ! ಈ ವಿಷಯವು ಭೂಮಿಯಲ್ಲಿ ಪ್ರಸಿದ್ಧಿಗೊಳ್ಳಲಿ.''

೪೨. ಲೋಹಾಸುರನ ಈ ಮಾತಿನಿಂದ ಹರ್ಷಗೊಂಡ ಬ್ರಹ್ಮಾದಿಗಳು ಹೀಗೆಂದರು.

೪೩. " ದೈತ್ಯರಾಜ! ನೀನು ಸತ್ಯವಚನಕ್ಕೆ ತಪ್ಪದಿರುವಕಾರಣ ಬಹಳ ಸಂತೋಷಗೊಂಡ ನಾವು ನಿನ್ನ ಇಷ್ಟಾರ್ಥವನ್ನು ಕೊಡುವೆವು.

೪೪. ಬ್ರಹ್ಮನು ಹೇಳುತ್ತಾನೆ:—ಗಯಾಕ್ಷೇತ್ರದಲ್ಲಿ ಸ್ನಾನ, ಮರಣಗಳಿಂದ ಆಗುವ ಫಲವು ಈ ಧರ್ಮೇಶ್ವರನ ಮುಂದಿರುವ ಧರ್ಮಾರಣ್ಯದಲ್ಲಾಗುವುದು.

CC-0. Jangamwadi Math Collection. Digitized by eGangotri

ಕೂಪೇ ತರ್ಪಣಕಂ ಶ್ರಾದ್ಧಂ ಶಂಸಂತಿ ಪಿತರೋ ದಿವಿ ।
ಸಂತುಷ್ಟಾ ಪಿಂಡದಾನೇನ ಗಯಾಯಾಂ ಪಿತರೋ ಯಥಾ ॥ ೪೫ ॥
ವಾಂಛಂತಿ ತರ್ಪಣಂ ಕೂಪೇ ಧರ್ಮಾರಣ್ಯೇ ವಿಶುದ್ಧಯೇ ।
ದಾನವೇಂದ್ರ ಶರೀರಂ ತು ತೀರ್ಥಂ ತವ ಭವಿಷ್ಯತಿ ॥ ೪೬ ॥
ಏಕವಿಂಶತಿವಾರಾಂಸ್ತು ಗಯಾಯಾಂ ತರ್ಪಣೇ ಕೃತೇ ।
ಪಿತೄಣಾಂ ಯಾ ಪರಾತೃಪ್ತಿರ್ಜಾಯತೇ ದಾನವಾಽಧಿಪ ॥ ೪೭ ॥
ಧರ್ಮೇಶ್ವರಪುರಸ್ತಾತ್ತಸ್ಯೈಕದಾ ಪಿತೃತರ್ಪಣಾತ್ ।
ಸ್ಯಾದ್ವೈ ದಶಗುಣಾ ತೃಪ್ತಿಃ ಸತ್ಯಮೇವ ನ ಸಂಶಯಃ ॥ ೪೮ ॥
ಪಿತೄಣಾಂ ಪಿಂಡದಾನೇನ ಅಕ್ಷಯ್ಯಾ ತೃಪ್ತಿರಸ್ತ್ವಿಹ ।
ಶಿವರೂಪಾಂತರಾಲೇ ವೈ ಧರ್ಮಾರಣ್ಯೇ ಧರಾತಲೇ ॥ ೪೯ ॥
ಶ್ರದ್ಧಯೈವ ಹಿ ಕರ್ತವ್ಯಾಃ ಶ್ರಾದ್ಧಪಿಂಡೋದಕಕ್ರಿಯಾಃ ।
ತಥಾಂತರಾಲೇ ಚಾಽಸ್ಮಾಕಂ ಶ್ರಾದ್ಧಪಿಂಡೌ ವಿಶೇಷತಃ ॥ ೫೦ ॥
ತಥಾ ಶರೀರೇ ಕ್ವಾಪ್ಯಸ್ಯಾಸ್ತಾಂ ಚಿಂತಾ ಸತ್ಯೋಽಸಿ ಸುವ್ರತ ।
ತ್ರಿಷು ಲೋಕೇಷು ದುಷ್ಪ್ರಾಪಂ ಸತ್ಯಂ ತೇ ದಿವಿ ಸಂಸ್ಥಿತಂ ॥ ೫೧ ॥
ಅಸ್ಮದ್ವಾಕ್ಯೇನ ಸತ್ಯೇನ ತತ್ತಥಾಽಸುರಸತ್ತಮ ।
ಗಯಾ ಸಮಧಿಕಂ ತೀರ್ಥಂ ತವ ಜಾತಂ ಧರಾತಲೇ ॥ ೫೨ ॥

---

೪೫. ಸ್ವರ್ಗವಾಸಿಗಳಾದ ಪಿತೃಗಳು ಈ ಧರ್ಮಕೂಪದಲ್ಲಿ ನೆರವೇರಿಸುವ ತರ್ಪಣ, ಶ್ರಾದ್ಧಗಳನ್ನು ಹೊಗಳುತ್ತಾರೆ. ಇಲ್ಲಿ ಪಿಂಡಪ್ರದಾನಮಾಡುವುದರಿಂದ ಪಿತೃಗಳು ಗಯೆಯಲ್ಲಿ ಎಂತೋ ಅಂತು ತೃಪ್ತರಾಗುವರು.

೪೬. ದಾನವೇಂದ್ರ! ಪಿತೃಗಳು ಶುದ್ಧಿಗಾಗಿ ಈ ಧರ್ಮಕೂಪದಲ್ಲಿ ತರ್ಪಣ ಮಾಡಬೇಕೆಂದು ಬಯಸುವರು. ಈ ನಿನ್ನ ಶರೀರವೇ ಇಲ್ಲಿ ತೀರ್ಥವಾಗುವುದು.

೪೭–೪೮. ಅಸುರೇಂದ್ರ! ಗಯೆಯಲ್ಲಿ ಇಪ್ಪತ್ತೊಂದು ಸಾರಿ ತರ್ಪಣ ಮಾಡುವುದರಿಂದ ಪಿತೃಗಳಿಗಾಗುವ ತೃಪ್ತಿಗಿಂತ ಈ ಧರ್ಮೇಶ್ವರನ ಮುಂದೆ ಒಂದು ಸಾರಿ ಮಾಡುವ ತರ್ಪಣದಿಂದ ಹತ್ತರಷ್ಟು ತೃಪ್ತಿಯಾಗುವುದು.

೪೯. ಧರ್ಮಾರಣ್ಯದಲ್ಲಿ ಧರ್ಮೇಶ್ವರನ ಮುಂದೆ ಮಾಡಿದ ಪಿಂಡದಾನದಿಂದ ಪಿತೃಗಳಿಗೆ ಅಕ್ಷಯವಾದ ತೃಪ್ತಿಯಾಗಲಿ.

೫೦. ಶ್ರಾದ್ಧದಲ್ಲಿ ಪಿಂಡಪ್ರದಾನ, ತರ್ಪಣಗಳನ್ನು ಶ್ರದ್ಧೆಯಿಂದ ಮಾಡಬೇಕು. ಅದರಲ್ಲಿಯೂ ನಮ್ಮ ಮುಂದೆ ಅತ್ಯಂತ ಶ್ರದ್ಧೆಯಿಂದ ಮಾಡಬೇಕು.

೫೧–೫೨. ಮೂರು ಲೋಕದಲ್ಲಿ ಯಾರಲ್ಲಿಯೂ ಇಲ್ಲದ ಸತ್ಯವು ನಿನ್ನಲ್ಲಿ ನೆಲಸಿರುವುದು. ಅಸುರೇಂದ್ರ! ನಮ್ಮ ಸತ್ಯವಚನದಿಂದ ಭೂಮಿಯಲ್ಲಿ ನಿನ್ನ ಕ್ಷೇತ್ರವು ಗಯೆಗಿಂತಲೂ ಅಧಿಕವಾಗುವುದು.

CC-0. Jangamwadi Math Collection. Digitized by eGangotri

ಅಸ್ಮಾಕಂ ಸ್ಥಿತಿರವ್ಯಗ್ರಾ ತವ ದೇಹೇ ನ ಸಂಶಯಃ ।
ಸತ್ಯಪಾಶೇನ ಬದ್ಧಾಃಸ್ಮ ದೃಢಮೇವ ತ್ವಯಾಽನಘ ॥ ೫೩ ॥

ವಿಷ್ಣುರುವಾಚ :—

ಗಯಾ ಪ್ರಯಾಗತಸ್ಯಾಽಪಿ ಫಲಂ ಸಮಧಿಕಂ ಸ್ಮೃತಂ ।
ಚತುರ್ದಶ್ಯಾಮಮಾವಾಸ್ಯಾಂ ಲೋಹಯಷ್ಟ್ಯಾಂ ಪಿಂಡದಾನತಃ ॥ ೫೪ ॥
ಬಲಿಪುತ್ರಸ್ಯ ಸತ್ಯೇನ ಮಹತೀತೃಪ್ತಿರತ್ರ ಹಿ ।
ಮಾಕುರುಷ್ವಾಽತ್ರ ಸಂದೇಹಂ ತವ ದೇಹೇ ಸ್ಥಿತಾ ಸ್ವಯಂ ॥ ೫೫ ॥
ಸರಸ್ವತೀ ಪುಣ್ಯತೋಯಾ ಬ್ರಹ್ಮಲೋಕಾತ್ಪ್ರಯಾತ್ಯತ ।
ಪ್ಲಾವಯಿಷ್ಯಂತಿ ದೇಹಾಂಗಂ ಮಯಾ ಸಹ ಸುಸಂಗತಾ ॥ ೫೬ ॥
ಯಥಾ ವೈ ದ್ವಾರಕಾವಾಸೋ ದೇವಸ್ತತ್ರ ಮಹೇಶ್ವರಃ ।
ವಿರಿಂಚಿರ್ಯತ್ರ ತೀರ್ಥಾನಿ ತ್ರೀಣ್ಯೇತಾನಿ ಧರಾತಲೇ ॥ ೫೭ ॥
ಭವಿಷ್ಯತಿ ಚ ಪಾತಾಲೇ ಸ್ವರ್ಗಲೋಕೇ ಯಮಕ್ಷಯೇ ।
ವಿಖ್ಯಾತಾನ್ಯಸುರಶ್ರೇಷ್ಠ ಪಿತೄಣಾಂ ತೃಪ್ತಿಹೇತವೇ ॥ ೫೮ ॥
ಅಥಾಽನ್ಯತ್ಸಂಪ್ರವಕ್ಷ್ಯಾಮಿ ಗಾಥಾಂ ಪಿತೃಕೃತಾಂ ಪರಾಂ ।
ಆಜ್ಞಾರೂಪಾಂ ಹಿ ಪುತ್ರಾಣಾಂ ತಾಂ ಶೃಣುಷ್ವ ಮಮಾಽನಘ ॥ ೫೯ ॥

---

೫೩. ಓ ನಿರ್ದುಷ್ಟನಾದ ದೈತ್ಯನೆ! ನಾವು ನಿನ್ನ ಸತ್ಯವಾಕ್ಯವೆಂಬ ಪಾಶದಿಂದ ಬದ್ಧರಾಗಿ ನಿನ್ನ ಶರೀರದಲ್ಲಿ ಸ್ಥಿರವಾಗಿ ನೆಲಸಿರುವೆವು.

೫೪. ವಿಷ್ಣುವು ಹೇಳುತ್ತಾನೆ:—ಚತುರ್ದಶೀ ಅಮಾವಾಸ್ಯೆಯ ದಿನಗಳಲ್ಲಿ ಲೋಹಯಷ್ಟಿಯಲ್ಲಿ ಪಿಂಡದಾನ ಮಾಡಿದರೆ ಅದರ ಫಲವು ಗಯಾಪ್ರಯಾಗಗಳ ಫಲಕ್ಕಿಂತಲೂ ಮಿಗಿಲಾಗುವುದು.

೫೫. ಬಲಿಯ ಮಗನಾದ ನಿನ್ನ ಸತ್ಯದಿಂದ ನಮಗೆ ಅತ್ಯಂತ ಸಂತೋಷವಾಗಿದೆ. ನೀನು ಸಂದೇಹಪಡಬೇಡ. ನಾವು ನಿನ್ನ ದೇಹದಲ್ಲಿರುವೆವು.

೫೬. ಬ್ರಹ್ಮಲೋಕದಿಂದ ಹೊರಟ ಪುಣ್ಯಜಲವುಳ್ಳ ಸರಸ್ವತೀ ನದಿಯು ನನ್ನೊಡನೆ ನಿನ್ನ ದೇಹವನ್ನು ಸೇರಿ ನೆನೆಯಿಸುವುದು.

೫೭. ಬ್ರಹ್ಮವಿಷ್ಣುಮಹೇಶ್ವರರು ವಾಸವಾಗಿರುವ ಮೂರು ತೀರ್ಥಗಳೂ ಈ ಭೂಮಿಯಲ್ಲಿ ನೆಲಸಿವೆ.

೫೮. ಅಸುರೇಂದ್ರ! ಈ ತೀರ್ಥಗಳು ಪಿತೃಗಳ ತೃಪ್ತಿಗಾಗಿ ಸ್ವರ್ಗ, ಪಾತಾಳ, ಯಮಲೋಕಗಳಲ್ಲಿ ವಿಖ್ಯಾತವಾಗುವುವು.

೫೯. ನಿರ್ದೋಷಿಯಾದ ಎಲೈ ದೈತ್ಯನೆ! ಪಿತೃಗಳು ತಮ್ಮ ಮಕ್ಕಳಿಗೆ ಕಳುಹಿಸಿದ ಈ ಸಂದೇಶವನ್ನು ಹೇಳುವೆನು ಕೇಳು.

CC-0. Jangamwadi Math Collection. Digitized by eGangotri

ಪಿತರ ಊಚುಃ :—
ಶಂಕರಸ್ಯಾಽಗ್ರತಃ ಸ್ಥಾನಂ ರುದ್ರಲೋಕಪ್ರದಂ ನೃಣಾಂ ।
ಪಾಪದೇಹವಿಶುದ್ಧ್ಯರ್ಥಂ ಪಾಪೇನೋಪಹತಾತ್ಮನಾಂ ॥ ೬೦ ॥
ತಸ್ಮಿಂಸ್ತಿಲೋದಕೇನಾಽಪಿ ಸದ್ಗತಿಂ ಯಾಂತಿ ತರ್ಪಿತಾಃ ।
ಪಿತರೋ ನರಕಾದ್ವಾಽಪಿ ಸುಪುತ್ರೇಣ ಸುಮೇಧಸಾ ॥ ೬೧ ॥
ಗೋಪ್ರದಾನಂ ಪ್ರಶಂಸಂತಿ ತತ್ತತ್ರ ಪಿತೃಮುಕ್ತಯೇ ।
ಪಿತ್ರಾದಿಕಾನ್ಸಮುದ್ದಿಶ್ಯ ದೃಷ್ಟ್ವಾ ರುದ್ರಂ ಚ ಕೇಶವಂ ॥ ೬೨ ॥
ತಿಲಪಿಣ್ಯಾಕಪಿಂಡೇನ ತೃಪ್ತಿಂ ಯಾಸ್ಯಾಮಹೇ ಪರಾಂ ।
ಚತುರ್ದಶ್ಯಾಮಮಾವಾಸ್ಯಾಂ ತಥಾ ಚ ಪಿತೃತರ್ಪಣಂ ॥ ೬೩ ॥
ಅಜ್ಞಾತಗೋತ್ರಜನ್ಮಾನಸ್ತೇಭ್ಯಃ ಪಿಂಡಾಂಸ್ತು ನಿರ್ವಪೇತ್ ।
ತೇಽಪಿ ಯಾಂತಿ ದಿವಂ ಸರ್ವೇ ಪಿಂಡೇ ದತ್ತ ಇತಿ ಶ್ರುತಿಃ ॥ ೬೪ ॥
ಸರ್ವಕಾರ್ಯಾಣಿ ಸಂತ್ಯಜ್ಯ ಮಾನವೈಃ ಪುಣ್ಯಮಿಪ್ಸುಭಿಃ ।
ಪ್ರಾಪ್ತೇ ಭಾದ್ರಪದೇ ಮಾಸೇ ಗಂತವ್ಯಾ ಲೋಹಯಷ್ಟಿಕಾ ।
ಅಜ್ಞಾತಗೋತ್ರನಾಮ್ನಾ ತು ಪಿಂಡಮಂತ್ರಮಿಮಂ ಶೃಣು ॥ ೬೫ ॥
ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ತಥೈವ ಚ ।
ಅತೀತಗೋತ್ರಜಾಸ್ತೇಭ್ಯಃ ಪಿಂಡೋಽಯಮುಪತಿಷ್ಠತು ॥ ೬೬ ॥

---

೬೦. ಪಿತೃಗಳು ಹೇಳುತ್ತಾರೆ:—ಪಾಪಿಗಳ ಪಾಪದೇಹದ ಶುದ್ಧಿಗಾಗಿ ಶಂಕರನ ಮುಂದಿರುವ ಈ ಕ್ಷೇತ್ರವು ರುದ್ರಲೋಕವನ್ನೀಯುವುದು.

೬೧. ಸುಪುತ್ರನು ಆ ಕ್ಷೇತ್ರದಲ್ಲಿ ಶ್ರದ್ಧೆಯಿಂದ ಮಾಡಿದ ತಿಲತರ್ಪಣದಿಂದ ಪಿತೃಗಳು ನರಕವನ್ನು ತ್ಯಜಿಸಿ ಸದ್ಗತಿಯನ್ನೈದುವರು.

೬೨. ಅವರು ಪಿತ್ರಾದಿಗಳನ್ನುದ್ದೇಶಿಸಿ ರುದ್ರ ಮತ್ತು ವಿಷ್ಣುವನ್ನು ದರ್ಶನಗೈಯುತ್ತ ಪಿತೃಮುಕ್ತಿಗಾಗಿ ಮಾಡಿದ ಗೋದಾನವನ್ನು ಹೊಗಳುತ್ತಾರೆ.

೬೩. ಚತುರ್ದಶೀ ಮತ್ತು ಅಮಾವಾಸ್ಯೆಯ ದಿನಗಳಲ್ಲಿ ಎಳ್ಳುಹಿಂಡಿಯ ಪಿಂಡದಿಂದಲೂ, ತರ್ಪಣದಿಂದಲೂ ಅತ್ಯಂತ ತೃಪ್ತಿಗೊಳ್ಳುವೆವು.

೬೪. ಗೋತ್ರ ಮತ್ತು ಹುಟ್ಟು ತಿಳಿಯದವರಿಗೂ ಪಿಂಡಪ್ರದಾನ ಮಾಡಬೇಕು. ಅವರು ಅದರಿಂದ ಸ್ವರ್ಗವಾಸಿಗಳಾಗುವರು.

೬೫–೬೬. ಪುಣ್ಯವನ್ನು ಅಪೇಕ್ಷಿಸುವ ಮಾನವರು ಭಾದ್ರಪದ ಮಾಸದಲ್ಲಿ ಸಕಲ ಕಾರ್ಯಗಳನ್ನೂ ಬಿಟ್ಟು ಲೋಹಯಷ್ಟಿಗೆ ಹೋಗಬೇಕು. ಗೋತ್ರ ಮತ್ತು ಹೆಸರು ತಿಳಿಯದಿರುವವರಿಗೆ "ತಂದೆ ಮತ್ತು ತಾಯಿಯ ವಂಶದಲ್ಲಿ ಮೃತರಾದ ಅಜ್ಞಾತ ಗೋತ್ರರಿಗೆ ಈ ಪಿಂಡವು ಸೇರಲಿ" ಎಂಬ ಮಂತ್ರದಿಂದ ಪಿಂಡವನ್ನು ಕೊಡಬೇಕು.

CC-0. Jangamwadi Math Collection. Digitized by eGangotri

ವಿಷ್ಣುರುವಾಚ:—

ಅನೇನೈವ ತು ಮಂತ್ರೇಣ ಮಮಾಗ್ರೇಽಸುರಸತ್ತಮ ।
ಕ್ಷೀಣೇಚಂದ್ರೇ ಚತುರ್ದಶ್ಯಾಂ ನಭಸ್ಯೇ ಪಿಂಡಮಾಹರೇತ್ ॥ ೬೭ ॥
ಪಿತ್ರೂಣಾಮಕ್ಷಯಾ ತೃಪ್ತಿರ್ಭವಿಷ್ಯತಿ ನ ಸಂಶಯಃ ।
ತಿಲಪಿಣ್ಯಾಕಪಿಂಡೇನ ಪಿತರೋ ಮೋಕ್ಷಮಾಪ್ನುಯುಃ ॥ ೬೮ ॥
ಕ್ಷಣತ್ರಯವಿನಿರ್ಮುಕ್ತಾ ಮಾನವಾ ಜಗತೀತಲೇ ।
ಭವಿಷ್ಯಂತಿ ನ ಸಂದೇಹೋ ಲೋಹಯಷ್ಟ್ಯಾಂ ತಿಲತರ್ಪಣೇ ॥ ೬೯ ॥
ಸ್ನಾತ್ವಾ ಯಃ ಕುರುತೇ ಚಾಽತ್ರ ಪಿತೃಪಿಂಡೋದಕಕ್ರಿಯಾಃ ।
ಪಿತರಸ್ತಸ್ಯ ತೃಪ್ಯಂತಿ ಯಾವದ್ಬ್ರಹ್ಮದಿವಾನಿಶಂ ॥ ೭೦ ॥
ಅಮಾವಾಸ್ಯಾ ದಿನಂ ಪ್ರಾಪ್ಯ ಮಾಸಿ ಭಾದ್ರಪದೇ ನರಃ ।
ಬ್ರಹ್ಮಣೋ ಯಷ್ಟಿಕಾಯಾಂ ತು ಯಃ ಕುರ್ಯಾತ್ಪಿತೃತರ್ಪಣಂ ॥ ೭೧ ॥
ಪಿತರಸ್ತಸ್ಯ ತೃಪ್ತಾಃ ಸ್ಯುರ್ಯಾವದಾಭೂತಸಂಪ್ಲವಂ ।
ತೇಷಾಂ ಪ್ರಸನ್ನೋ ಭಗವಾನಾದಿದೇವೋ ಮಹೇಶ್ವರಃ ॥ ೭೨ ॥
ಅಸ್ಯ ತೀರ್ಥಸ್ಯ ಯಾತ್ರಾಯಾಂ ಮತಿರ್ಯೇಷಾಂ ಭವಿಷ್ಯತಿ ।
ಗೋಕ್ಷೀರೇಣ ತಿಲೈಃ ಶ್ವೇತೈಃ ಸ್ನಾತ್ವಾ ಸಾರಸ್ವತೇ ಜಲೇ ॥ ೭೩ ॥

---

೬೭. ವಿಷ್ಣುವು ಹೇಳುತ್ತಾನೆ:—ಅಸುರೇಂದ್ರ! ಭಾದ್ರಪದ ಬಹುಳ ಚತುರ್ದಶಿಯ ದಿನ ನನ್ನಮುಂದೆ ಈ ಮಂತ್ರದಿಂದ ಪಿಂಡಪ್ರದಾನ ಮಾಡಬೇಕು.

೬೮. ಎಳ್ಳುಹಿಂಡಿಯ ಪಿಂಡದಿಂದ ಪಿತೃಗಳು ಅಕ್ಷಯವಾದ ತೃಪ್ತಿಯನ್ನು ಹೊಂದಿ ಮೋಕ್ಷವನ್ನು ಪಡೆಯುವರು.

೬೯. ಲೋಹಯಷ್ಟಿಯಲ್ಲಿ ತಿಲತರ್ಪಣಮಾಡುವುದರಿಂದ ಮಾನವರು ಮೂರು ಕ್ಷಣದಲ್ಲಿಯೆ ಮುಕ್ತರಾಗುವರು.

೭೦. ಇಲ್ಲಿ ಮಿಂದು ಪಿತೃಗಳಿಗೆ ಪಿಂಡಪ್ರದಾನ ಮತ್ತು ತರ್ಪಣಗಳನ್ನು ಮಾಡಿದವನ ಪಿತೃಗಳು ಬ್ರಹ್ಮ ಮತ್ತು ಹಗಲು ರಾತ್ರಿಗಳಿರುವವರೆಗೆ ತೃಪ್ತಿಗೊಳ್ಳುವರು.

೭೧—೭೬. ಭಾದ್ರಪದಮಾಸದ ಅಮಾವಾಸ್ಯೆಯ ದಿನ ಲೋಹಯಷ್ಟಿಯಲ್ಲಿ ಪಿತೃತರ್ಪಣಮಾಡಿದವರ ಪಿತೃಗಳು ಪ್ರಳಯಕಾಲದವರೆಗೆ ತೃಪ್ತರಾಗಿರುವರು. ಈ ತೀರ್ಥಕ್ಕೆ ಹೋಗಬೇಕೆಂದು ಆಲೋಚಿಸಿದವರಿಗೆ ಮಹೇಶ್ವರನು ಪ್ರಸನ್ನನಾಗುವನು. ಈ ಸರಸ್ವತೀನದಿಯ ಜಲದಲ್ಲಿ ಮಿಂದು ಆಕಳ ಹಾಲಿನಿಂದಲೂ, ಬಿಳಿಎಳ್ಳಿನಿಂದಲೂ ತರ್ಪಣಮಾಡಿದರೆ ಪಿತೃಗಳಿಗೆ ಅಕ್ಷಯವಾದ ತೃಪ್ತಿಯಾಗುವುದು. ಪಿತೃಗಳ ಸಂತುಷ್ಟಿಯನ್ನು ಬಯಸುವವನು ಇಲ್ಲಿ ಅಮಾವಾಸ್ಯೆ ದಿನ ಅರಳಹಿಟ್ಟು ಮತ್ತು ಹಾಲಿನಿಂದ ಶ್ರಾದ್ಧಮಾಡಬೇಕು. ಪಿತೃಗಳಿಗೆ

CC-0. Jangamwadi Math Collection. Digitized by eGangotri

ತರ್ಪಯೇದಕ್ಷಯಾ ತೃಪ್ತಿಃ ಪಿತೄಣಾಂ ತಸ್ಯ ಜಾಯತೇ ।
ಶ್ರಾದ್ಧಂ ಚೈವ ಪ್ರಕುರ್ವೀತ ಸಕ್ತುಭಿಃ ಪಯಸಾ ಸಹ ॥ ೭೪ ॥
ಅಮಾವಾಸ್ಯಾದಿನಂ ಪ್ರಾಪ್ಯ ಪಿತೄಣಾಂ ಮೋದಮಿಚ್ಛುಕಃ ।
ರುದ್ರತೀರ್ಥೇ ತತೋ ಧೇನುಂ ದದ್ಯಾದ್ವಸ್ತ್ರಾಣಿ ತೀರ್ಥಕೇ ॥ ೭೫ ॥
ವಿಷ್ಣುತೀರ್ಥೇ ಹಿರಣ್ಯಂ ಚ ಪಿತೄಣಾಂ ಮೋಕ್ಷಮಿಚ್ಛುಕಃ ।
ವಿನಾಽಕ್ಷತೈರ್ವಿನಾ ದರ್ಭೈರ್ವಿನಾ ಚಾಸನಮೇವ ಚ ।
ವಾರಿಮಾತ್ರಾಲ್ಲೋಹಯಷ್ಟ್ಯಾಂ ಗಯಾಶ್ರಾದ್ಧಫಲಂ ಲಭೇತ್ ॥ ೭೬ ॥

ಸೂತ ಉವಾಚ :—

ಏತದ್ವಃ ಕಥಿತಂ ವಿಪ್ರಾ ಲೋಹಾಸುರವಿಚೇಷ್ಟಿತಂ ।
ಯಚ್ಛ್ರುತ್ವಾ ಬ್ರಹ್ಮಹಾ ಗೋಘ್ನೋ ಮುಚ್ಯತೇ ಸರ್ವಪಾತಕೈಃ॥ ೭೭ ॥
ಏಕವಿಂಶತಿವಾರಂ ತು ಗಯಾಯಾಂ ಪಿಂಡಪಾತನೇ ।
ತತ್ಫಲಂ ಸಮವಾಪ್ನೋತಿ ಸಕೃದಸ್ಮಿಂಛ್ರುತೇ ಸತಿ ॥ ೭೮ ॥
ಚತುಷ್ಕೋಟಿದ್ವಿಲಕ್ಷಂ ಚ ಸಹಸ್ರಂ ಶತಮೇವ ಚ ।
ಧೇನವಸ್ತೇನ ದತ್ತಾಃ ಸ್ಯುರ್ಮಾಹಾತ್ಮ್ಯಂ ಶೃಣುಯಾತ್ತು ಯಃ ॥ ೭೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಲೋಹಾಽಸುರಮಾಹಾತ್ಮ್ಯಸಂಪೂರ್ತಿವರ್ಣನಂ" ನಾಮೈಕೋನತ್ರಿಂಶೋಽಧ್ಯಾಯಃ

---

ಮೋಕ್ಷವಾಗಬೇಕೆಂದಪೇಕ್ಷಿಸುವವನು ರುದ್ರತೀರ್ಥದಲ್ಲಿ ಗೋವನ್ನೂ, ಯಮ ತೀರ್ಥದಲ್ಲಿ ಬಟ್ಟೆಗಳನ್ನೂ, ವಿಷ್ಣುತೀರ್ಥದಲ್ಲಿ ಸುವರ್ಣವನ್ನೂ ದಾನಮಾಡ ಬೇಕು. ಅಕ್ಷತೆ, ದರ್ಭೆ, ಆಸನಗಳಿಲ್ಲದೆ ಲೋಹಯಷ್ಟಿಯಲ್ಲಿ ನೀರಿನಿಂದ ಮಾತ್ರ ತರ್ಪಣಮಾಡಿದರೂ ಗಯೆಯಲ್ಲಿ ಶ್ರಾದ್ಧಮಾಡಿದ ಫಲವು ಲಭಿಸುವುದು.

೭೭. ಸೂತನು ಹೇಳುತ್ತಾನೆ :—ಎಲೈ ದ್ವಿಜರೆ! ಹೀಗೆ ಈ ಲೋಹಾಸುರನ ಚರಿತ್ರೆಯನ್ನು ನಿಮಗೆ ಹೇಳಿರುವೆನು. ಇದನ್ನು ಕೇಳಿದರೆ ಬ್ರಹ್ಮಹತ್ಯೆ ಮತ್ತು ಗೋಹತ್ಯೆ ಮಾಡಿದವನೂ ಸಕಲ ಪಾಪವಿಮುಕ್ತನಾಗುವನು.

೭೮. ಮಾನವನು ಇದನ್ನು ಒಂದು ಸಾರಿ ಕೇಳಿದ ಮಾತ್ರದಿಂದಲೆ ಗಯೆ ಯಲ್ಲಿ ಇಪ್ಪತ್ತೊಂದು ಸಾರಿ ಪಿಂಡಪ್ರದಾನ ಮಾಡಿದ ಫಲವನ್ನು ಪಡೆಯುವನು.

೭೯. ಈ ಮಾಹಾತ್ಮ್ಯವನ್ನು ಕೇಳಿದವನು ನಾಲ್ಕುಕೋಟಿ ಎರಡುಲಕ್ಷದ ಸಾವಿರದ ನೂರು ಧೇನುಗಳನ್ನು ದಾನಮಾಡಿದಂತಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಲೋಹಾಸುರಮಾಹಾತ್ಮ್ಯಸಂಪೂರ್ತಿವರ್ಣನ"ವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ರಾಮಚರಿತ್ರವರ್ಣನಂ

ವ್ಯಾಸ ಉವಾಚ :—

ಪುರಾ ತ್ರೇತಾಯುಗೇ ಪ್ರಾಪ್ತೇ ವೈಷ್ಣವಾಂಶೋ ರಘೂದ್ವಹಃ ।
ಸೂರ್ಯವಂಶೇ ಸಮುತ್ಪನ್ನೋ ರಾಮೋ ರಾಜೀವಲೋಚನಃ ॥ ೧ ॥
ಸ ರಾಮೋ ಲಕ್ಷ್ಮಣಶ್ಚೈವ ಕಾಕಪಕ್ಷಧರಾವುಭೌ ।
ತಾತಸ್ಯ ವಚನಾತ್ತೌ ತು ವಿಶ್ವಾಮಿತ್ರಮನುವ್ರತೌ ॥ ೨ ॥
ಯಜ್ಞಸಂರಕ್ಷಣಾರ್ಥಾಯ ರಾಜ್ಞಾ ದತ್ತೌ ಕುಮಾರಕೌ ।
ಧನುಃ ಶರಧರೌ ವೀರೌ ಪಿತುರ್ವಚನಪಾಲಕೌ ॥ ೩ ॥
ಪಥಿ ಪ್ರವ್ರಜತೋ ಯಾವತ್ತಾಡಕಾ ನಾಮರಾಕ್ಷಸೀ ।
ತಾವದಾಗಮ್ಯ ಪುರತಸ್ತಸ್ಥೌ ವೈ ವಿಘ್ನಕಾರಣಾತ್ ॥ ೪ ॥
ಋಷೇರನುಜ್ಞಯಾ ರಾಮಸ್ತಾಡಕಾಂ ಸಮಘಾತಯತ್ ।
ಪ್ರಾದಿಶಚ್ಚ ಧನುರ್ವೇದವಿದ್ಯಾಂ ರಾಮಾಯ ಗಾಧಿಜಃ ॥ ೫ ॥
ತಸ್ಯ ಪಾದತಲಸ್ಪರ್ಶಾಚ್ಛಿಲಾ ವಾಸವಯೋಗತಃ ।
ಅಹಲ್ಯಾ ಗೌತಮವಧೂಃ ಪುನರ್ಜಾತಾ ಸ್ವರೂಪಿಣೀ ॥ ೬ ॥

---

## ಕನ್ನಡದ ಅನುವಾದ

### ರಾಮಚರಿತ್ರವರ್ಣನ

೧. ವ್ಯಾಸನು ಹೇಳುತ್ತಾನೆ :—ಹಿಂದೆ ತ್ರೇತಾಯುಗದಲ್ಲಿ ವಿಷ್ಣುವಿನ ಅಂಶಾವತಾರನಾದ ರಾಮಚಂದ್ರನು ಸೂರ್ಯವಂಶದಲ್ಲಿ ಅವತರಿಸಿದನು.

೨–೩. ಕಾಕಪಕ್ಷಧಾರಿಗಳಾದ ರಾಮಲಕ್ಷ್ಮಣರು ತಂದೆಯ ಅಪ್ಪಣೆಯಂತೆ ಬಿಲ್ಲುಬಾಣಗಳನ್ನು ಧರಿಸಿ ವಿಶ್ವಾಮಿತ್ರನ ಯಜ್ಞಸಂರಕ್ಷಣೆಗಾಗಿ ಅವನನ್ನು ಹಿಂಬಾಲಿಸಿದರು.

೪–೫. ದಾರಿಯಲ್ಲಿ ಹೋಗುತ್ತಿರುವಾಗ ತಾಟಕೆಯೆಂಬ ರಾಕ್ಷಸಿಯು ಮುಂದೆಬಂದು ನಿಂತು ಅಡ್ಡಿಮಾಡಿದಳು. ಆಗ ರಾಮನು ವಿಶ್ವಾಮಿತ್ರನ ಆಜ್ಞೆಯಂತೆ ಆ ತಾಟಕೆಯನ್ನು ಕೊಂದನು. ಗಾಧಿಪುತ್ರನಾದ ವಿಶ್ವಾಮಿತ್ರನು ರಾಮನಿಗೆ ಧನುರ್ವಿದ್ಯೆಯನ್ನು ಕಲಿಸಿದನು.

೬. ದಾರಿಯಲ್ಲಿ ಇಂದ್ರನ ಸಂಗದಿಂದ ಶಿಲೆಯಾಗಿ ಬಿದ್ದಿದ್ದ ಗೌತಮನ ಪತ್ನಿಯಾದ ಅಹಲ್ಯೆಯು ಆ ರಾಮನ ಪಾದಧೂಳಿನಿಂದ ತನ್ನ ಮೊದಲಿನ ರೂಪವನ್ನು ಪಡೆದಳು.

CC-0. Jangamwadi Math Collection. Digitized by eGangotri

ವಿಶ್ವಾಮಿತ್ರಸ್ಯ ಯಜ್ಞೇ ತು ಸಂಪ್ರವೃತ್ತೇ ರಘೂತ್ತಮಃ ।
ಮಾರೀಚಂ ಚ ಸುಬಾಹುಂ ಚ ಜಘಾನ ಪರಮೇಷುಭಿಃ ॥ ೭ ॥
ಈಶ್ವರಸ್ಯ ಧನುರ್ಭಗ್ನಂ ಜನಕಸ್ಯ ಗೃಹೇಸ್ಥಿತಂ ।
ರಾಮಃ ಪಂಚದಶೇ ವರ್ಷೇ ಷಡ್ವರ್ಷಾಂ ಚೈವ ಮೈಥಿಲೀಂ ॥ ೮ ॥
ಉಪಯೇಮೇ ತದಾ ರಾಜನ್ರಮ್ಯಾಂ ಸೀತಾಮಯೋನಿಜಾಂ ।
ಕೃತಕೃತ್ಯಸ್ತದಾ ಜಾತಃ ಸೀತಾಂ ಸಂಪ್ರಾಪ್ಯ ರಾಘವಃ ॥ ೯ ॥
ಅಯೋಧ್ಯಾಮಗಮನ್ಮಾರ್ಗೇ ಜಾಮದಗ್ನ್ಯಮವೇಕ್ಷ್ಯ ಚ ।
ಸಂಗ್ರಾಮೋಽಭೂತ್ತದಾ ರಾಜನ್ದೇವಾನಾಮಪಿ ದುಃಸಹಃ ॥ ೧೦ ॥
ತತೋ ರಾಮಂ ಪರಾಜಿತ್ಯ ಸೀತಯಾ ಗೃಹಮಾಗತಃ ।
ತತೋ ದ್ವಾದಶವರ್ಷಾಣಿ ರೇಮೇ ರಾಮಸ್ತಯಾಸಹ ॥ ೧೧ ॥
ಸಪ್ತವಿಂಶತಿಮೇ ವರ್ಷೇ ಯೌವರಾಜ್ಯಪ್ರದಾಯಕಂ ।
ರಾಜಾನಮಥ ಕೈಕೇಯಿ ವರದ್ವಯಮಯಾಚತ ॥ ೧೨ ॥
ತಯೋರೇಕೇನ ರಾಮಸ್ತು ಸಸೀತಃ ಸಹಲಕ್ಷ್ಮಣಃ ।
ಜಟಾಧರಃ ಪ್ರವ್ರಜತಾಂ ವರ್ಷಾಣೀಹ ಚತುರ್ದಶ ॥ ೧೩ ॥
ಭರತಸ್ತು ದ್ವಿತೀಯೇನ ಯೌವರಾಜ್ಯಾಧಿಪೋಽಸ್ತುಮೇ ।
ಮಂಥರಾವಚನಾನ್ಮೂಢಾ ವರಮೇತಮಯಾಚತ ॥ ೧೪ ॥

---

೭. ವಿಶ್ವಾಮಿತ್ರರ ಯಜ್ಞದಲ್ಲಿ ರಾಮನು ಉತ್ತಮವಾದ ಬಾಣಗಳಿಂದ ಮಾರೀಚ ಸುಬಾಹುಗಳನ್ನು ಹೊಡೆದು ಕೊಂದನು.

೮-೯. ತರುವಾಯ ಶ್ರೀರಾಮನು ಜನಕರಾಜನ ಮನೆಯಲ್ಲಿರುವ ಹರ ಧನುವನ್ನು ಮುರಿದು ತನ್ನ ಹದಿನೈದನೆಯ ವಯಸ್ಸಿನಲ್ಲಿ ಆರುವರ್ಷದ ವಯಸ್ಸಿನ ಅಯೋನಿಜಳೂ, ಸುಂದರಿಯೂ ಆದ ಸೀತೆಯನ್ನು ಮದುವೆಯಾಗಿ ಧನ್ಯನಾದನು.

೧೦-೧೧. ಅಯೋಧ್ಯೆಗೆ ಹೋಗುತ್ತಿರುವ ಶ್ರೀರಾಮಚಂದ್ರನಿಗೆ ಜಮದಗ್ನಿ ತನಯನಾದ ಪರಶುರಾಮನೊಡನೆ ದೇವತೆಗಳಿಗೂ ಸಹಿಸಲಾಗದ ಯುದ್ಧವು ನಡೆಯಿತು. ಆ ಸಮರದಲ್ಲಿ ರಾಮನು ಪರಶುರಾಮನನ್ನು ಸೋಲಿಸಿ ಸೀತೆಯೊಡನೆ ಅರಮನೆಯನ್ನು ಸೇರಿ ಹನ್ನೆರಡುವರ್ಷಕಾಲ ಅವಳೊಡನೆ ಸುಖದಿಂದಿದ್ದನು.

೧೨-೧೪. ರಾಮನಿಗೆ ಇಪ್ಪತ್ತೇಳನೆಯ ವಯಸ್ಸಿನಲ್ಲಿ ತಂದೆಯಾದ ದಶರಥನು ಯೌವರಾಜ್ಯಾಭಿಷೇಕ ಮಾಡಬಯಸಲು ರಾಜನ ಕಿರಿಯ ಹೆಂಡತಿಯಾದ ಕೈಕೇಯಿಯು ಮಂಥರೆಯ ಮಾತಿನಿಂದ ಪ್ರೇರಿತಳಾಗಿ ಒಂದು ವರದಿಂದ ರಾಮನು ಸೀತಾಲಕ್ಷ್ಮಣರೊಡನೆ ಜಟಾಧಾರಿಯಾಗಿ ಹದಿನಾಲ್ಕು ವರ್ಷ ವನವಾಸಿಯಾಗಿಲೆಂದೂ, ಮತ್ತೊಂದು ವರದಿಂದ ತನ್ನ ಸುತನಾದ ಭರತನು ಯುವರಾಜನಾಗಿರಲೆಂದೂ ಎರಡು ವರಗಳನ್ನು ಕೇಳಿಕೊಂಡಳು.

CC-0. Jangamwadi Math Collection. Digitized by eGangotri

ಜಾನಕೀಲಕ್ಷ್ಮಣಸಖಂ ರಾಮಂ ಪ್ರವ್ರಾಜಯನ್ನೃಪಃ ।
ತ್ರಿರಾತ್ರಮುದಕಾಹಾರಶ್ಚತುರ್ಥೇಽಹ್ನಿ ಫಲಾಶನಃ ॥ ೧೫ ॥
ಪಂಚಮೇ ಚಿತ್ರಕೂಟೇ ತು ರಾಮೋ ವಾಸಮಕಲ್ಪಯತ್ ।
ಗತೇ ದಶರಥೇ ಸ್ವರ್ಗಂ ರಾಮರಾಮ ಇತಿ ಬ್ರುವನ್ ।
ಬ್ರಹ್ಮಶಾಪಂ ತು ಸಫಲಂ ಕೃತ್ವಾ ಸ್ವರ್ಗಂ ಜಗಾಮ ಸಃ ॥ ೧೬ ॥
ತತೋ ಭರತಶತ್ರುಘ್ನೌ ಚಿತ್ರಕೂಟೇ ಸಮಾಗತೌ ॥ ೧೭ ॥
ಸ್ವರ್ಗತಂ ಪಿತರಂ ರಾಜನ್ರಾಮಾಯ ವಿನಿವೇದ್ಯ ಚ ।
ಸಾಂತ್ವನಂ ಭರತಸ್ಯಾಽಸ್ಯ ಕೃತ್ವಾ ನಿವರ್ತಸಂ ಪ್ರತಿ ॥ ೧೮ ॥
ತತೋ ಭರತಶತ್ರುಘ್ನೌ ನಂದಿಗ್ರಾಮಂ ಸಮಾಗತೌ ।
ಪಾದುಕಾಪೂಜನರತೌ ತತ್ರ ರಾಜ್ಯಧರಾವುಭೌ ॥ ೧೯ ॥
ಅತ್ರಿಂ ದೃಷ್ಟ್ವಾ ಮಹಾತ್ಮಾನಂ ದಂಡಕಾಽರಣ್ಯಮಾಗಮತ್ ।
ರಕ್ಷೋಗಣವಧಾರಂಭೇ ವಿರಾಧೇ ವಿನಿಪಾತಿತೇ ॥ ೨೦ ॥
ಅರ್ಧತ್ರಯೋದಶೇ ವರ್ಷೇ ಪಂಚವಟ್ಯಾಮುವಾಸ ಹ ।
ತತೋ ವಿರೂಪಯಾಮಾಸ ಶೂರ್ಪಣಖಾಂ ನಿಶಾಚರೀಂ ।
ವನೇ ವಿಚರತಸ್ತಸ್ಯ ಜಾನಕೀಸಹಿತಸ್ಯ ಚ ॥ ೨೧ ॥
ಆಗತೋ ರಾಕ್ಷಸೋ ಘೋರಃ ಸೀತಾಽಪಹರಣಾಯ ಸಃ ।
ತತೋ ಮಾಘಾಽಸಿತಾಷ್ಟಮ್ಯಾಂ ಮುಹೂರ್ತೇ ವೃಂದಸಂಜ್ಞಕೇ ॥ ೨೨ ॥

---

೧೫–೧೬. ದಶರಥನು ಸೀತಾಲಕ್ಷ್ಮಣರೊಡನೆ ರಾಮನನ್ನು ಹೊರಡಿಸಲು ಅವನು ಮೂರು ದಿನ ನೀರೇ ಆಹಾರವುಳ್ಳವನಾಗಿಯೂ, ನಾಲ್ಕನೆಯ ದಿನ ಹಣ್ಣಿನ ಆಹಾರವುಳ್ಳವನಾಗಿಯೂ ಇದ್ದು ಐದನೆಯ ದಿನ ಚಿತ್ರಕೂಟದಲ್ಲಿ ವಾಸಮಾಡಿದನು. ಆಗ ತಂದೆಯಾದ ದಶರಥನು 'ರಾಮ! ರಾಮಾ!' ಎಂದು ಪ್ರಲಪಿಸುತ್ತ ಬ್ರಾಹ್ಮಣ ಶಾಪವನ್ನು ಸಫಲಮಾಡುವನೊ ಎಂಬಂತೆ ಸ್ವರ್ಗಕ್ಕೆ ತೆರಳಿದನು.

೧೭–೧೯. ಬಳಿಕ ಭರತ ಶತ್ರುಘ್ನರು ಚಿತ್ರಕೂಟಕ್ಕೆ ಬಂದು ತಂದೆಯ ಮರಣವಾರ್ತೆಯನ್ನು ರಾಮನಿಗೆ ತಿಳಿಸಿದರು. ರಾಮನು ಭರತನನ್ನು ಸಮಾಧಾನಗೊಳಿಸಿ ತನ್ನ ಪಾದುಕೆಗಳನ್ನು ಕೊಟ್ಟು ಹಿಂದಕ್ಕೆ ಕಳುಹಿಸಿದನು. ಆ ಭರತ ಶತ್ರುಘ್ನರು ನಂದಿಗ್ರಾಮವನ್ನು ಸೇರಿ ಅಲ್ಲಿ ರಾಮನ ಪಾದುಕೆಗಳನ್ನು ಪೂಜಿಸುತ್ತ ರಾಜ್ಯಭಾರಮಾಡುತ್ತಿದ್ದರು.

೨೦–೨೨. ರಾಮನು ಮಹಾತ್ಮರಾದ ಅತ್ರಿಮುನಿಗಳನ್ನು ದರ್ಶನಮಾಡಿ ದಂಡಕಾರಣ್ಯಕ್ಕೆ ಬಂದನು. ರಾಕ್ಷಸರ ವಧೆಯಲ್ಲಿ ಮೊದಲು ವಧೆಗೆ ವಿಷಯನಾದ ವಿರಾಧನನ್ನು ಸದೆಬಡಿದು ಆರುವರೆವರ್ಷಗಳಕಾಲ ಪಂಚವಟಿಯಲ್ಲಿ ವಾಸಿಸಿದನು. ಅಲ್ಲಿ ಅವನು ಶೂರ್ಪನಖಿಯೆಂಬ ರಾಕ್ಷಸಿಯನ್ನು ವಿಕಾರಗೊಳಿಸಿದನು. ಜಾನಕಿ

CC-0. Jangamwadi Math Collection. Digitized by eGangotri

ರಾಘವಾಭ್ಯಾಂ ವಿನಾ ಸೀತಾಂ ಜಹಾರ ದಶಕಂಧರಃ ।
ಮಾರೀಚಸ್ಯಾಶ್ರಮಂ ಗತ್ವಾ ಮೃಗರೂಪೇಣ ತೇನ ಚ ॥ ೨೩ ॥
ನೀತ್ವಾ ದೂರಂ ರಾಘವಂ ಚ ಲಕ್ಷ್ಮಣೇನ ಸಮನ್ವಿತಂ ।
ತತೋ ರಾಮೋ ಜಘಾನಾಶು ಮಾರೀಚಂ ಮೃಗರೂಪಿಣಂ ॥ ೨೪ ॥
ಪುನಃ ಪ್ರಾಪ್ಯಾಶ್ರಮಂ ರಾಮೋ ವಿನಾಸೀತಾಂ ದದರ್ಶ ಹ ।
ತತ್ರೈವ ಹ್ರಿಯಮಾಣಾ ಸಾ ಚಕ್ರಂದ ಕುರರೀ ಯಥಾ ॥ ೨೫ ॥
ರಾಮರಾಮೇತಿ ಮಾಂ ರಕ್ಷ ರಕ್ಷ ಮಾಂ ರಕ್ಷಸಾ ಹೃತಾಂ ।
ಯಥಾ ಶ್ಯೇನಃ ಕ್ಷುಧಾಯುಕ್ತಃ ಕ್ರಂದಂತೀಂ ವರ್ತಿಕಾಂ ನಯೇತ್॥೨೬॥
ತಥಾ ಕಾಮವಶಂ ಪ್ರಾಪ್ತೋ ರಾಕ್ಷಸೋ ಜನಕಾತ್ಮಜಾಂ ।
ನಯತ್ಯೇಷ ಜನಕಜಾಂ ತಚ್ಛ್ರುತ್ವಾ ಪಕ್ಷಿರಾಟ್ ತದಾ ॥ ೨೭ ॥
ಯುಯುಧೇ ರಾಕ್ಷಸೇಂದ್ರೇಣ ರಾವಣೇನ ಹತೋಽಪತತ್ ।
ಮಾಘಾಽಸಿತನವಮ್ಯಾಂ ತು ವಸಂತೀಂ ರಾವಣಾಲಯೇ ॥ ೨೮ ॥
ಮಾರ್ಗಮಾಣೌ ತದಾ ತೌ ತು ಭ್ರಾತರೌ ರಾಮಲಕ್ಷ್ಮಣೌ ॥ ೨೯ ॥
ಜಟಾಯುಷಂ ತು ದೃಷ್ಟ್ವೈವ ಜ್ಞಾತ್ವಾ ರಾಕ್ಷಸಸಂಹೃತಾಂ ।
ಸೀತಾಂ ಜ್ಞಾತ್ವಾ ತತಃ ಪಕ್ಷೀ ಸಂಸ್ಕೃತಸ್ತೇನ ಭಕ್ತಿತಃ ॥ ೩೦ ॥

---

ಯೊಡನೆ ಕಾಡಿನಲ್ಲಿ ಸಂಚರಿಸುತ್ತಿದ್ದ ಈ ರಾಮನನ್ನು ರಾವಣನು ಮೃಗರೂಪಿಯಾದ ಮಾರೀಚನ ಮೂಲಕ ಮೋಸಗೊಳಿಸಿ ರಾಮಲಕ್ಷ್ಮಣರಿಲ್ಲದ ಸಮಯದಲ್ಲಿ ಮಾಘ ಕೃಷ್ಣಾಷ್ಟಮಿದಿನ ವೃಂದವೆಂಬ ಮುಹೂರ್ತದಲ್ಲಿ ಸೀತೆಯನ್ನು ಅಪಹರಿಸಿಕೊಂಡು ಹೋದನು. ರಾಮನು ಮಾರೀಚನನ್ನು ಕೊಂದು ಹಿಂದಿರುಗಿ ಆಶ್ರಮಕ್ಕೆ ಬಂದು ನೋಡಲು ಅಲ್ಲಿ ಸೀತೆಯಿರಲಿಲ್ಲ. ರಾವಣನು ಸೀತೆಯನ್ನು ಒಯ್ಯುತ್ತಿರುವಾಗ ಅವಳು "ರಾಮ! ರಾಮ! ರಾಕ್ಷಸನಿಂದ ಅಪಹೃತಳಾದ ನನ್ನನ್ನು ರಕ್ಷಿಸು" ಎಂದು ಕುರರಿ ಎಂಬ ಪಕ್ಷಿಯಂತೆ ಅರಚಿಕೊಂಡಳು. ಆದರೇನು? ಕಾಮಾಂಧನಾದ ರಾವಣನು ಹಸಿದ ಗಿಡಗವು ಕಿರಿಚಿಕೊಳ್ಳುತ್ತಿರುವ ಕೆಂದೆಲೆ ಹಕ್ಕಿಯನ್ನು ಎತ್ತಿಕೊಂಡು ಹೋಗುವಂತೆ ಜಾನಕಿಯನ್ನು ಒಯ್ಯುತ್ತಿದ್ದನು. ಸೀತೆಯ ಕೂಗು ಜಟಾಯುವಿಗೆ ಕೇಳಿಸಿತು.

೨೮–೩೦. ಅವನು ರಾವಣನೊಡನೆ ಜಗಳವಾಡಿ ಅವನಿಂದ ಕೊಲ್ಲಲ್ಪಟ್ಟು ಕೆಳಗೆ ಬಿದ್ದನು. ಸೀತೆಯು ಮಾಘಕೃಷ್ಣನವಮಿದಿನ ರಾವಣನ ಮನೆಯನ್ನು ಸೇರಿದಳು. ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತ ರಾವಣನಿಂದ ಹತನಾದ ಜಟಾಯುವನ್ನು ಕಂಡು ಅವನಿಂದ ಸೀತೆಯ ವಾರ್ತೆಯನ್ನರಿತು ಆ ಪಕ್ಷಿಗೆ ಭಕ್ತಿಯಿಂದ ದಹನಾದಿ ಸಂಸ್ಕಾರಮಾಡಿದರು.



CC-0. Jangamwadi Math Collection. Digitized by eGangotri

ಅಗ್ರತಃ ಪ್ರಯಯೌ ರಾಮೋ ಲಕ್ಷ್ಮಣಸ್ತತ್ಪದಾನುಗಃ ।
ಪಂಪಾಭ್ಯಾಶಮನುಪ್ರಾಪ್ಯ ಶಬರೀಮನುಗೃಹ್ಯ ಚ ॥ ೩೧ ॥
ತಜ್ಜಲಂ ಸಮುಪಸ್ಪೃಶ್ಯ ಹನುಮದ್ದರ್ಶನಂ ಕೃತಂ ।
ತತೋ ರಾಮೋ ಹನುಮತಾ ಸಹಸಖ್ಯಂ ಚಕಾರ ಹ ॥ ೩೨ ॥
ತತಃ ಸುಗ್ರೀವಮಭ್ಯೇತ್ಯ ಅಹನದ್ವಾಲಿವಾನರಂ ।
ಪ್ರೇಷಿತಾ ರಾಮದೇವೇನ ಹನುಮತ್ಪ್ರಮುಖಾಃ ಪ್ರಿಯಾಂ ॥ ೩೩ ॥
ಅಂಗುಲೀಯಕಮಾದಾಯ ವಾಯುಸೂನುಸ್ತದಾಗತಃ ।
ಸಂಪಾತಿರ್ದಶಮೇ ಮಾಸಿ ಆಚಖ್ಯೌ ವಾನರಾಯ ತಾಂ ॥ ೩೪ ॥
ತತಸ್ತದ್ವಚನಾದಬ್ಧಿಂ ಪುಪ್ಲುವೇ ಶತಯೋಜನಂ ।
ಹನುಮಾನ್ನಿಶಿ ತಸ್ಯಾಂ ತು ಲಂಕಾಯಾಂ ಪರಿತೋಽಚಿನೋತ್ ॥ ೩೫ ॥
ತದ್ರಾತ್ರಿಶೇಷೇ ಸೀತಾಯಾ ದರ್ಶನಂ ತು ಹನೂಮತಃ ।
ದ್ವಾದಶ್ಯಾಂ ಶಿಂಶುಪಾವೃಕ್ಷೇ ಹನುಮಾನ್ಪರ್ಯ್ಯವಸ್ಥಿತಃ ॥ ೩೬ ॥
ತಸ್ಯಾಂ ನಿಶಾಯಾಂ ಜಾನಕ್ಯಾ ವಿಶ್ವಾಸಾಯಾಹ ಸಂಕಥಾಂ ।
ಅಕ್ಷಾದಿಭಿಸ್ತ್ರಯೋದಶ್ಯಾಂ ತತೋ ಯುದ್ಧಮವರ್ತತ ॥ ೩೭ ॥

---

೩೧–೩೨. ಮುಂದೆ ರಾಮನು ನಡೆದನು. ಲಕ್ಷ್ಮಣನು ಅವನನ್ನು ಹಿಂಬಾಲಿಸಿದನು. ರಾಮನು ಪಂಪಾಸರೋವರದ ಸಮೀಪಕ್ಕೆ ಬಂದು ಶಬರಿಯನ್ನು ಅನುಗ್ರಹಿಸಿ ಆ ಪಂಪೆಯ ನೀರಿನಿಂದ ಆಚಮನಮಾಡಿ ಹನುಮಂತನನ್ನು ನೋಡಿ ಅವನೊಡನೆ ಸ್ನೇಹಮಾಡಿಕೊಂಡನು.

೩೩–೩೪. ಬಳಿಕ ಸುಗ್ರೀವನನ್ನು ಹೊಂದಿ ವಾಲಿಯನ್ನು ಕೊಂದನು. ಹನುಮಂತನೆ ಮೊದಲಾದ ಕಪಿಗಳನ್ನು ಸೀತೆಯನ್ನು ಹುಡುಕುವುದಕ್ಕಾಗಿ ಕಳುಹಿಸಿದನು. ವಾಯುತನಯನಾದ ಆಂಜನೇಯನು ರಾಮನ ಮುದ್ರೆಯುಂಗುರವನ್ನು ತೆಗೆದುಕೊಂಡು ಹೊರಟನು. ಹತ್ತನೆತಿಂಗಳಲ್ಲಿ ಅವನಿಗೆ ಸಂಪಾತಿಯು ಸೀತೆಯಿರುವ ಸ್ಥಳವನ್ನು ತಿಳಿಸಿದನು.

೩೫. ಅವನ ಮಾತಿನಂತೆ ಆಂಜನೇಯನು ನೂರು ಗಾವುದ ದೂರವುಳ್ಳ ಸಮುದ್ರವನ್ನು ದಾಟಿ ಲಂಕೆಯನ್ನು ಸೇರಿ ಅಲ್ಲಿ ರಾತ್ರಿಯಲ್ಲಿ ಸುತ್ತಲೂ ಸೀತೆಯನ್ನು ಹುಡುಕಿದನು.

೩೬. ದ್ವಾದಶಿಯಾದ ಆ ರಾತ್ರಿ ಬೆಳಗಿನ ಜಾಮದಲ್ಲಿ ಹನುಮಂತನು ಶಿಂಶುಪಾವೃಕ್ಷದೆಡೆಯಲ್ಲಿ ಸೀತೆಯನ್ನು ಕಂಡನು.

೩೭. ಆ ರಾತ್ರಿಯಲ್ಲಿ ಜಾನಕಿಯ ನಂಬುಗೆಗಾಗಿ ರಾಮನ ಕಥೆಯನ್ನು ನುಡಿದನು. ತ್ರಯೋದಶಿದಿನ ಹನುಮಂತನು ಅಕ್ಷಕುಮಾರನೆ ಮೊದಲಾದವರೊಡನೆ ಯುದ ಮಾಡಿದನು.

CC-0. Jangamwadi Math Collection. Digitized by eGangotri

ಬ್ರಹ್ಮಾಸ್ತ್ರೇಣ ತ್ರಯೋದಶ್ಯಾಂ ಬದ್ಧಃ ಶಕ್ರಜಿತಾ ಕಪಿಃ ।
ದಾರುಣಾನಿ ಚ ರೂಕ್ಷಾಣಿ ವಾಕ್ಯಾನಿ ರಾಕ್ಷಸಾಽಧಿಪಂ ॥ ೩೮ ॥
ಅಬ್ರವೀದ್ವಾಯುಸೂನುಸ್ತಂ ಬದ್ಧೋ ಬ್ರಹ್ಮಾಸ್ತ್ರಸಂಯುತಃ ।
ವಹ್ನಿನಾ ಪುಚ್ಛಯುಕ್ತೇನ ಲಂಕಾಯಾ ದಹನಂ ಕೃತಂ ॥ ೩೯ ॥
ಪೂರ್ಣಿಮಾಯಾಂ ಮಹೇಂದ್ರಾಽದ್ರೌ ಪುನರಾಗಮನಂ ಕಪೇಃ ।
ಮಾರ್ಗಶೀರ್ಷಪ್ರತಿಪದಃ ಪಂಚಭಿಃ ಪಥಿವಾಸರೈಃ ॥ ೪೦ ॥
ಪುನರಾಗತ್ಯ ವರ್ಷೇಽಹ್ನಿ ಧ್ವಸ್ತಂ ಮಧುವನಂ ಕಿಲ ।
ಸಪ್ತಮ್ಯಾಂ ಪ್ರತ್ಯಭಿಜ್ಞಾನದಾನಂ ಸರ್ವನಿವೇದನಂ ॥ ೪೧ ॥
ಮಣಿಪ್ರದಾನಂ ಸೀತಾಯಾಃ ಸರ್ವಂ ರಾಮಾಯ ಶಂಸಯತ್ ।
ಅಷ್ಟಮ್ಯುತ್ತರಫಾಲ್ಗುನ್ಯಾಂ ಮುಹೂರ್ತೇ ವಿಜಯಾಽಭಿಧೇ ॥ ೪೨ ॥
ಮಧ್ಯಂ ಪ್ರಾಪ್ತೇ ಸಹಸ್ರಾಂಶೌ ಪ್ರಸ್ಥಾನಂ ರಾಘವಸ್ಯ ಚ ।
ರಾಮಃ ಕೃತ್ವಾ ಪ್ರತಿಜ್ಞಾಂ ಹಿ ಪ್ರಯಾತುಂ ದಕ್ಷಿಣಾಂ ದಿಶಂ ॥ ೪೩ ॥
ತೀರ್ತ್ವಾಽಹಂ ಸಾಗರಮಪಿ ಹನಿಷ್ಯೇ ರಾಕ್ಷಸೇಶ್ವರಂ ।
ದಕ್ಷಿಣಾಶಾಂ ಪ್ರಯಾತಸ್ಯ ಸುಗ್ರೀವೋಽಥಾಽಭವತ್ಸಖಾ ॥ ೪೪ ॥
ವಾಸರೈಃ ಸಪ್ತಭಿಃ ಸಿಂಧೋಸ್ತೀರೇ ಸೈನ್ಯನಿವೇಶನಂ ।
ಪೌಷಶುಕ್ಲಪ್ರತಿಪದಸ್ತೃತೀಯಾಂ ಯಾವದಂಬುಧೌ ।
ಉಪಸ್ಥಾನಂ ಸಸೈನ್ಯಸ್ಯ ರಾಘವಸ್ಯ ಬಭೂವ ಹ ॥ ೪೫ ॥

---

೩೮–೩೯. ಆ ದಿನವೇ ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಸಿಲುಕಿ ರಾವಣನ ಮುಂದೆ ಹೋಗಿ ಅವನನ್ನು ಬಹುವಾಗಿ ಬಿರುಸಾಗಿ ಬೈದನು. ಆಗ ರಾವಣನು ಇವನ ಬಾಲಕ್ಕೆ ಬೆಂಕಿಯನ್ನು ಹೊತ್ತಿಸಲು ಆ ಬೆಂಕಿಯಿಂದ ಲಂಕೆಯನ್ನು ಬೂದಿಮಾಡಿದನು.

೪೦–೪೪. ಹನುಮಂತನು ಹುಣ್ಣಿಮೆದಿನ ಮಹೇಂದ್ರ ಪರ್ವತವನ್ನು ಸೇರಿ ಮಾರ್ಗಶೀರ್ಷ ಬಹುಳ ಪಂಚಮಿಾವರೆಗೆ ಪ್ರಯಾಣಮಾಡಿ ಮಧುವನವನ್ನು ಹೊಕ್ಕು ಅದನ್ನು ಪುಡಿಮಾಡಿ ಸಪ್ತಮಿಾದಿನ ಸೀತೆಯ ಚೂಡಾಮಣಿಯನ್ನು ರಾಮನಿಗೆ ಒಪ್ಪಿಸಿ ಸಕಲ ವೃತ್ತಾಂತವನ್ನು ಹೇಳಿದನು. ಶ್ರೀರಾಮನು ಅಷ್ಟಮಿ ದಿನ ಉತ್ತರ ಫಾಲ್ಗುನೀನಕ್ಷತ್ರ ಸಹಿತವಾದ ವಿಜಯವೆಂಬ ಮುಹೂರ್ತದಲ್ಲಿ ಮಧ್ಯಾಹ್ನ ವೇಳೆಯಲ್ಲಿ ವಿಜಯ ಪ್ರಸ್ಥಾನವನ್ನು ಬೆಳೆಸಿದನು. ದಕ್ಷಿಣದಿಕ್ಕಿಗೆ ಪ್ರಯಾಣಮಾಡಿ ಸಮುದ್ರವನ್ನು ದಾಟಿ ರಾವಣನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದನು. ಆಗ ಅವನಿಗೆ ಸುಗ್ರೀವನು ಬೆಂಬಲವಾಗಿದ್ದನು.

೪೫. ರಾಮನು ಹೀಗೆ ಸುಗ್ರೀವನೊಡನೆ ಏಳುದಿನ ಪ್ರಯಾಣಮಾಡಿ ಪುಷ್ಯ ಶುದ್ಧ ತದಿಗೆದಿನ ದಕ್ಷಿಣಸಾಗರದ ಹತ್ತಿರ ಸೇನೆಯನ್ನು ಶೇಖರಿಸಿದನು.

CC-0. Jangamwadi Math Collection. Digitized by eGangotri

ವಿಭೀಷಣಶ್ಚತುರ್ಥ್ಯಾಂ ತು ರಾಮೇಣ ಸಹ ಸಂಗತಃ ।
ಸಮುದ್ರತರಣಾರ್ಥಾಯ ಪಂಚಮ್ಯಾಂ ಮಂತ್ರ ಉದ್ಯತೇಃ ॥ ೪೬ ॥
ಪ್ರಾಯೋಪವೇಶನಂ ಚಕ್ರೇ ರಾಮೋ ದಿನಚತುಷ್ಟಯಂ ।
ಸಮುದ್ರಾದ್ವರಲಾಭಶ್ಚ ಸಹೋಪಾಯಪ್ರದರ್ಶನಃ ॥ ೪೭ ॥
ಸೇತೋರ್ದಶಮ್ಯಾಮಾರಂಭಸ್ತ್ರಯೋದಶ್ಯಾಂ ಸಮಾಪನಂ ।
ಚತುರ್ದಶ್ಯಾಂ ಸುವೇಲಾದ್ರೌ ರಾಮಃ ಸೇನಾಂ ನ್ಯವೇಶಯತ್ ॥ ೪೮ ॥
ಪೂರ್ಣಿಮಾಸ್ಯಾ ದ್ವಿತೀಯಾಯಾಂ ತ್ರಿದಿನೈಃ ಸೈನ್ಯತಾರಣಂ ।
ತೀರ್ತ್ವಾ ತೋಯನಿಧಿಂ ರಾಮಃ ಶೂರವಾನರಸೈನ್ಯವಾನ್ ॥ ೪೯ ॥
ರುರೋಧ ಚ ಪುರೀಂ ಲಂಕಾಂ ಸೀತಾರ್ಥಂ ಶುಭಲಕ್ಷಣಃ ।
ತೃತೀಯಾದಿ ದಶಮ್ಯಂತಂ ನಿವೇಶಶ್ಚ ದಿನಾಽಷ್ಟಕಃ ॥ ೫೦ ॥
ಶುಕಸಾರಣಯೋಸ್ತತ್ರ ಪ್ರಾಪ್ತಿರೇಕಾದಶೀದಿನೇ ।
ಪೌಷಾಽಸಿತೇ ಚ ದ್ವಾದಶ್ಯಾಂ ಸೈನ್ಯಸಂಖ್ಯಾನಮೇವ ಚ ॥ ೫೧ ॥
ಶಾರ್ದೂಲೇನ ಕಪೀಂದ್ರಾಣಾಂ ಸಾರಾಸಾರೋಪವರ್ಣನಂ ।
ತ್ರಯೋದಶ್ಯಾದ್ಯಮಾಂತೇ ಚ ಲಂಕಾಯಾಂ ದಿವಸೈಸ್ತ್ರಿಭಿಃ ॥ ೫೨ ॥
ರಾವಣಃ ಸೈನ್ಯಸಂಖ್ಯಾನಂ ರಣೋತ್ಸಾಹಂ ತದಾಽಕರೋತ್ ।
ಪ್ರಯಯಾವಂಗದೋ ದೌತ್ಯೇ ಮಾಘಶುಕ್ಲಾದ್ಯವಾಸರೇ ॥ ೫೩ ॥

---

೪೬–೪೭. ಚತುರ್ಥೀದಿನ ರಾವಣನ ತಮ್ಮನಾದ ವಿಭೀಷಣನು ಬಂದು ರಾಮನೊಡನೆ ಸೇರಿಕೊಂಡನು. ರಾಮನು ಸಮುದ್ರವನ್ನು ದಾಟುವುದಕ್ಕಾಗಿ ಪ್ರಾಯೋಪವೇಶವನ್ನು ಮಾಡಲು ಸಮುದ್ರರಾಜನು ವರವನ್ನಿತ್ತು ದಾಟುವ ಬಗೆಯನ್ನೂ ತಿಳಿಸಿದನು.

೪೮. ರಾಮನು ದಶಮಿಾದಿನ ಸೇತುವೆಯನ್ನು ಆರಂಭಿಸಿ ತ್ರಯೋದಶಿದಿನ ಪೂರ್ತಿಮಾಡಿ ಸುವೇಲ ಪರ್ವತದಲ್ಲಿ ಸೇನೆಯನ್ನು ನಿಲ್ಲಿಸಿದನು.

೪೯–೫೦. ಹುಣ್ಣಿಮೆಯಿಂದ ತದಿಗೆವರೆಗೆ ವಾನರಸೈನ್ಯದೊಡನೆ ರಾಮನು ಸೇತುವೆಯಮೂಲಕ ಸಮುದ್ರವನ್ನು ದಾಟಿ ಸೀತೆಗಾಗಿ ಲಂಕೆಯನ್ನು ಸೇರಿ ಅಲ್ಲಿ ದಶಮಿಯುವರೆಗೆ ಸೇನೆಯನ್ನು ಸಂಗ್ರಹಿಸಿ ನಿಲ್ಲಿಸಿದನು.

೫೧. ಏಕಾದಶೀದಿನ ಶುಕಸಾರಣರು ಅಲ್ಲಿಗೆ ಬಂದರು. ಪುಷ್ಯ ಬಹುಳ ದ್ವಾದಶಿ ಸೈನ್ಯದ ಎಣಿಕೆಯಾಯಿತು.

೫೨–೫೩. ಶಾರ್ದೂಲನು ಕಪಿಮುಖ್ಯರ ಬಲಾಬಲಗಳನ್ನು ವರ್ಣಿಸಿದನು. ತ್ರಯೋದಶಿಯಿಂದ ಆರಂಭಿಸಿ ಮೂರುದಿನ ರಾವಣನು ತನ್ನ ಸೈನ್ಯವನ್ನು ಎಣಿಸಿ ಯುದ್ಧಕ್ಕೆ ಸಿದ್ಧನಾದನು. ಅಂಗದನು ಮಾಘ ಶುದ್ಧ ಪಾಡ್ಯಮಿದಿನ ದೂತನಾಗಿ ರಾವಣನ ಬಳಿಗೆ ಹೋದನು.

CC-0. Jangamwadi Math Collection. Digitized by eGangotri

ಸೀತಾಯಾಶ್ಚ ತದಾ ಭರ್ತುರ್ಮಾಯಾಮೂರ್ಧಾದಿದರ್ಶನಂ ।
ಮಾಘಶುಕ್ಲದ್ವಿತೀಯಾಯಾಂ ದಿನೈಃ ಸಪ್ತಭಿರಷ್ಟಮೀಂ ॥ ೫೪ ॥
ರಕ್ಷಸಾಂ ವಾನರಾಣಾಂ ಚ ಯುದ್ಧಮಾಸೀಚ್ಚ ಸಂಕುಲಂ ।
ಮಾಘಶುಕ್ಲನವಮ್ಯಾಂ ತು ರಾತ್ರಾವಿಂದ್ರಜಿತಾ ರಣೇ ॥ ೫೫ ॥
ರಾಮಲಕ್ಷ್ಮಣಯೋರ್ನಾಗಪಾಶಬಂಧಃ ಕೃತಃ ಕಿಲ ।
ಆಕುಲೇಷು ಕಪೀಶೇಷು ಹತಾಶೇಷು ಚ ಸರ್ವಶಃ ॥ ೫೬ ॥
ವಾಯೂಪದೇಶಾದ್ಗರುಡಂ ಸಸ್ಮಾರ ರಾಘವಸ್ತದಾ ।
ನಾಗಪಾಶವಿಮೋಕ್ಷಾರ್ಥಂ ದಶಮ್ಯಾಂ ಗರುಡೋಽಭ್ಯಗಾತ್ ॥ ೫೭ ॥
ಅವಹಾರೋ ಮಾಘಶುಕ್ಲಸ್ಯೈಕಾದಶ್ಯಾಂ ದಿನದ್ವಯಂ ।
ದ್ವಾದಶ್ಯಾಮಾಂಜನೇಯೇನ ಧೂಮ್ರಾಕ್ಷಸ್ಯ ವಧಃ ಕೃತಃ ॥ ೫೮ ॥
ತ್ರಯೋದಶ್ಯಾಂ ತು ತೇನೈವ ನಿಹತೋಽಕಂಪನೋ ರಣೇ ।
ಮಾಯಾಸೀತಾಂ ದರ್ಶಯಿತ್ವಾ ರಾಮಾಯ ದಶಕಂಧರಃ ॥ ೫೯ ॥
ತ್ರಾಸಯಾಮಾಸ ಚ ತದಾ ಸರ್ವಾನ್ಸೈನ್ಯಗತಾನಪಿ ।
ಮಾಘಶುಕ್ಲಚತುರ್ದಶ್ಯಾಂ ಯಾವತ್ಕೃಷ್ಣಾದಿವಾಸರಂ ॥ ೬೦ ॥
ತ್ರಿದಿನೇನ ಪ್ರಹಸ್ತಸ್ಯ ನೀಲೇನ ವಿಹಿತೋ ವಧಃ ।
ಮಾಘಕೃಷ್ಣದ್ವಿತೀಯಾಯಾಶ್ಚತುರ್ಥ್ಯಂತಂ ತ್ರಿಭಿರ್ದಿನೈಃ ॥ ೬೧ ॥
ರಾಮೇಣ ತುಮುಲೇ ಯುದ್ಧೇ ರಾವಣೋ ದ್ರಾವಿತೋ ರಣಾತ್ ।
ಪಂಚಮ್ಯಾ ಅಷ್ಟಮೀ ಯಾವದ್ರಾವಣೇನ ಪ್ರಬೋಧಿತಃ ॥ ೬೨ ॥

---

೫೪–೫೭. ಆಗಲೆ ಸೀತೆಗೆ ಪತಿಯ ಮಾಯಾತಲೆಯ ದರ್ಶನವಾಯಿತು. ಮಾಘ ಶುದ್ಧ ಬಿದಿಗೆಯಿಂದ ಅಷ್ಟಮೀವರೆಗೆ ರಾಕ್ಷಸರಿಗೂ ವಾನರರಿಗೂ ಘೋರ ಸಮರವು ನಡೆಯಿತು. ನವಮೀರಾತ್ರಿ ಇಂದ್ರಜಿತ್ತು ರಾಮಲಕ್ಷ್ಮಣರನ್ನು ನಾಗ ಪಾಶದಿಂದ ಬಿಗಿದನು. ಆಗ ಕಪಿವೀರರು ಹತಾಶರಾಗಿ ವ್ಯಾಕುಲಗೊಳ್ಳುತ್ತಿರಲು ವಾಯುದೇವನ ಉಪದೇಶದಿಂದ ರಾಘವನು ನಾಗಪಾಶದಿಂದ ಬಿಡಿಸುವುದಕ್ಕಾಗಿ ಗರುಡನನ್ನು ಸ್ಮರಿಸಿದನು. ಅವನು ದಶಮೀ ದಿನ ಬಂದನು.

೫೮. ಗರುಡನಿಂದ ಏಕಾದಶೀದಿನ ನಾಗಪಾಶಮೋಚನವಾಗಲು ದ್ವಾದಶಿ ಹನುಮಂತನು ಧೂಮ್ರಾಕ್ಷನನ್ನು ಸಂಹರಿಸಿದನು.

೫೯–೬೪. ತ್ರಯೋದಶಿಯುದ್ಧದಲ್ಲಿ ಅಕಂಪನನನ್ನೂ ಕೊಂದನು. ರಾವಣನು ರಾಮನಿಗೆ ಮಾಯಾ ಸೀತೆಯನ್ನು ಪ್ರದರ್ಶಿಸಿ ಸೈನ್ಯದವರನ್ನೆಲ್ಲ ಹೆದರಿಸಿದನು. ಮಾಘ ಶುಕ್ಲ ಚತುರ್ದಶೀ ಮೊದಲ್ಗೊಂಡು ಕೃಷ್ಣಪಕ್ಷ ಪಾಡ್ಯಮೀವರೆಗೆ ನೀಲನು ಪ್ರಹಸ್ತನೊಡನೆ ಕಾಳಗವಾಡಿ ಅವನನ್ನು ಕೊಂದನು. ದ್ವಿತೀಯಾ ಮೊದಲ್ಗೊಂಡು ಚೌತಿತನಕ ಮೂರುದಿನ ರಾಮನು ಘೋರ ಸಮರದಲ್ಲಿ

CC-0. Jangamwadi Math Collection. Digitized by eGangotri

ಕುಂಭಕರ್ಣಸ್ತದಾ ಚಕ್ರೇಽಭ್ಯವಹಾರಂ ಚತುರ್ದಿನಂ ।
ಕುಂಭಕರ್ಣೋಽಕರೋದ್ಯುದ್ಧಂ ನವಮ್ಯಾದಿಚತುರ್ದಿನೈಃ ॥ ೬೩ ॥
ರಾಮೇಣ ನಿಹತೋ ಯುದ್ಧೇ ಬಹುವಾನರಭಕ್ಷಕಃ ।
ಅಮಾವಾಸ್ಯಾದಿನೇ ಶೋಕಾಽಭ್ಯವಹಾರೋ ಬಭೂವ ಹ ॥ ೬೪ ॥
ಫಾಲ್ಗುನಪ್ರತಿಪದಾದೌ ಚತುರ್ಥ್ಯಂತೈಶ್ಚತುರ್ದಿನೈಃ ।
ನರಾಂತಕಪ್ರಭೃತಯೋ ನಿಹತಾಃ ಪಂಚರಾಕ್ಷಸಾಃ ॥ ೬೫ ॥
ಪಂಚಮ್ಯಾಃ ಸಪ್ತಮೀ ಯಾವದತಿಕಾಯವಧಸ್ತ್ರ್ಯಹಾತ್ ।
ಅಷ್ಟಮ್ಯಾ ದ್ವಾದಶೀ ಯಾವನ್ನಿಹತೌ ದಿನಪಂಚಕಾತ್ ॥ ೬೬ ॥
ನಿಕುಂಭಕುಂಭೌ ದ್ವಾವೇತೌ ಮಕರಾಕ್ಷಶ್ಚತುರ್ದಿನೈಃ ।
ಫಾಲ್ಗುನಾಸಿತ ದ್ವಿತೀಯಾಯಾ ದಿನೇ ವೈ ಶಕ್ರಜಿಜ್ಜಿತಃ ॥ ೬೭ ॥
ತೃತೀಯಾದೌ ಸಪ್ತಮ್ಯಂತದಿನಪಂಚಕಮೇವ ಚ ।
ಓಷಧ್ಯಾನಯವೈಯಗ್ರ್ಯಾದವಹಾರೋ ಬಭೂವ ಹ ॥ ೬೮ ॥
ಅಷ್ಟಮ್ಯಾಂ ರಾವಣೋ ಮಾಯಾಮೈಥಿಲೀಂ ಹತವಾನ್ಸುಧೀಃ ।
ಶೋಕಾವೇಗಾತ್ತದಾ ರಾಮಶ್ಚಕ್ರೇ ಸೈನ್ಯಾಽವಧಾರಣಂ ॥ ೬೯ ॥
ತತಸ್ತ್ರಯೋದಶೀಂ ಯಾವದ್ದಿನೈಃ ಪಂಚಭಿರಿಂದ್ರಜಿತ್ ।
ಲಕ್ಷ್ಮಣೇನ ಹತೋ ಯುದ್ಧೇ ವಿಖ್ಯಾತಬಲಪೌರುಷಃ ॥ ೭೦ ॥

---

ರಾವಣನನ್ನು ಓಡಿಸಿದನು. ರಾವಣನು ಪಂಚಮಿಯಿಂದ ಅಷ್ಟಮಿವರೆಗೆ ಕುಂಭಕರ್ಣನನ್ನು ಎಬ್ಬಿಸಲು ಅವನು ನವಮಿಯಿಂದ ನಾಲ್ಕುದಿನ ವಾನರರನ್ನು ಭಕ್ಷಿಸುತ್ತ ಯುದ್ಧಮಾಡಿ ರಾಮನಿಂದ ಹತನಾದನು. ಅಮಾವಾಸ್ಯೆದಿನ ದುಃಖಮಯವಾಯಿತು.

೬೫. ಫಾಲ್ಗುನ ಶುದ್ಧ ಪಾಡ್ಯಮಿ ಮೊದಲು ಚೌತಿಯವರೆಗೆ ನಾಲ್ಕುದಿನ ನರಾಂತಕ ಮೊದಲಾದ ಐದುಮಂದಿ ರಕ್ಕಸರು ಯುದ್ಧಮಾಡಿ ಮಡಿದರು.

೬೬–೬೭. ಪಂಚಮಿಯಿಂದ ಸಪ್ತಮೀವರೆಗೆ ಅತಿಕಾಯನು ಯುದ್ಧಮಾಡಿ ಹತನಾದನು. ಅಷ್ಟಮಿಯಿಂದ ದ್ವಾದಶಿವರೆಗೆ ಐದುದಿನ ಕುಂಭನಿಕುಂಭರೂ, ತ್ರಯೋದಶಿಯಿಂದ ನಾಲ್ಕುದಿನ ಮಕರಾಕ್ಷನೂ ಯುದ್ಧಗೈದು ಹತರಾದರು. ಫಾಲ್ಗುನ ಬಹುಳ ದ್ವಿತೀಯಾದಿನ ಇಂದ್ರಜಿತ್ತು ಸೋಲಿಸಲ್ಪಟ್ಟನು.

೬೮–೬೯. ತದಿಗೆಯಿಂದ ಪಂಚಮೀವರೆಗೆ ಔಷಧವನ್ನು ತರುವ ವ್ಯಗ್ರತೆಯಿಂದ ಯುದ್ಧವು ಸಾಗಲಿಲ್ಲ. ಅಷ್ಟಮೀದಿನ ದುಷ್ಟ ರಾವಣನು ಮಾಯಾಸೀತೆಯನ್ನು ವಧಿಸಲು ರಾಮನು ದುಃಖಾವೇಗದಿಂದ ಸೈನ್ಯವನ್ನು ಸ್ಥಿರಗೊಳಿಸಿದನು.

೭೦. ಬಳಿಕ ತ್ರಯೋದಶಿಯವರೆಗೆ ಐದು ದಿನ ಇಂದ್ರಜಿತ್ತು ಯುದ್ಧಮಾಡಿ ಲಕ್ಷ್ಮಣನಿಂದ ಹತನಾದನು.

CC-0. Jangamwadi Math Collection. Digitized by eGangotri

ಚತುರ್ದಶ್ಯಾಂ ದಶಗ್ರೀವೋ ದೀಕ್ಷಾಮಾಪಾವಹಾರತಃ ।
ಅಮಾವಾಸ್ಯಾದಿನೇ ಪ್ರಾಗಾದ್ಯುದ್ಧಾಯ ದಶಕಂಧರಃ ॥ ೨೧ ॥
ಚೈತ್ರಶುಕ್ಲಪ್ರತಿಪದಃ ಪಂಚಮೀ ದಿನಪಂಚಕೇ ।
ರಾವಣೋ ಯುಧ್ಯಮಾನೋಽಭೂತ್ಪ್ರಚುರೋ ರಕ್ಷಸಾಂ ವರಃ ॥ ೨೨ ॥
ಚೈತ್ರಶುಕ್ಲಾಽಷ್ಟಮೀಂ ಯಾವತ್ಸ್ಯಂದನಾಶ್ವಾದಿಸೂದನಂ ।
ಚೈತ್ರಶುಕ್ಲನವಮ್ಯಾಂ ತು ಸೌಮಿತ್ರೇಃ ಶಕ್ತಿಭೇದನೇ ॥ ೨೩ ॥
ಕೋಪಾವಿಷ್ಟೇನ ರಾಮೇಣ ದ್ರಾವಿತೋ ದಶಕಂಧರಃ ।
ವಿಭೀಷಣೋಪದೇಶೇನ ಹನುಮದ್ಯುದ್ಧಮೇವ ಚ ॥ ೨೪ ॥
ದ್ರೋಣಾದ್ರೇರೋಷಧೀಂ ನೇತುಂ ಲಕ್ಷ್ಮಣಾಽರ್ಥಮುಪಾಗತಃ ।
ವಿಶಲ್ಯಾಂ ತು ಸಮಾದಾಯ ಲಕ್ಷ್ಮಣಂ ತಾಮುಪಾಯಯತ್ ॥ ೨೫ ॥
ದಶಮ್ಯಾಮವಹಾರೋಽಭೂದ್ರಾತ್ರೌ ಯುದ್ಧಂ ತು ರಕ್ಷಸಾಂ ।
ಏಕಾದಶ್ಯಾಂ ತು ರಾಮಾಯ ರಥೋ ಮಾತಲಿಸಾರಥಿಃ ॥ ೨೬ ॥
ಪ್ರಾಪ್ತೋ ಯುದ್ಧಾಯ ದ್ವಾದಶ್ಯಾಂ ಯಾವತ್ಕೃಷ್ಣಾ ಚತುರ್ದಶೀ ।
ಅಷ್ಟಾದಶದಿನೈ ರಾಮೋ ರಾವಣಂ ದ್ವೈರಥೇಽವಧೀತ್ ॥ ೨೭ ॥

---

೨೧. ರಾವಣನು ಚತುರ್ದಶೀ ಮತ್ತು ಅಮಾವಾಸ್ಯೆ ದಿನಗಳಲ್ಲಿ ಯುದ್ಧ ಮಾಡದೆ ದೀಕ್ಷೆಗೊಂಡನು.

೨೨. ಅವನು ಚೈತ್ರ ಶುಕ್ಲ ಪ್ರತಿಪತ್ತಿನಿಂದ ಪಂಚಮೀವರೆಗೆ ಯುದ್ಧ ಮಾಡಿದನು. ಆಗ ಬಹಳ ಮಂದಿ ರಾಕ್ಷಸರು ಮಡಿದರು.

೨೩. ಚೈತ್ರ ಶುಕ್ಲಾಷ್ಟಮೀದಿನ ರಾವಣನ ರಥ, ಕುದುರೆಗಳು ನಾಶ ವಾದುವು. ನವಮೀದಿನ ಲಕ್ಷ್ಮಣನಿಗೆ ರಾವಣನು ಶಕ್ತ್ಯಾಯುಧವನ್ನು ಪ್ರಯೋಗಿಸಿದನು.

೨೪–೨೫. ರಾಮನು ಕೋಪದಿಂದ ಅವನನ್ನು ಓಡಿಸಿದನು. ಬಳಿಕ ವಿಭೀಷಣನ ಮಾತಿನಂತೆ ಹನುಮಂತನು ಯುದ್ಧಮಾಡಿ ಲಕ್ಷ್ಮಣನಿಗಾಗಿ ದ್ರೋಣಾಚಲಕ್ಕೆ ಸಂಜೀವನೌಷಧವನ್ನು ತರುವುದಕ್ಕಾಗಿ ಹೋದನು. ಅದನ್ನು ತಂದು ಲಕ್ಷ್ಮಣನ ಮೂರ್ಛೆಯನ್ನು ನಿವಾರಿಸಿದನು.

೨೬. ದಶಮೀದಿನ ಹಗಲು ಯುದ್ಧವಾಗಲಿಲ್ಲ. ರಾತ್ರಿ ರಾಕ್ಷಸರೊಡನೆ ಯುದ್ಧನಡೆಯಲು ಏಕಾದಶೀದಿನ ಮಾತಲಿಯು ರಾಮನಿಗೆ ರಥವನ್ನು ತಂದನು.

೨೭. ರಾಮನು ದ್ವಾದಶೀ ಮೊದಲ್ಗೊಂಡು ಕೃಷ್ಣಚತುರ್ದಶಿಯವರೆಗೆ ಹದಿನೆಂಟುದಿನ ರಾವಣನೊಡನೆ ರಥದಲ್ಲಿ ಯುದ್ಧಮಾಡಿ ಅವನನ್ನು ಕೊಂದನು.

CC-0. Jangamwadi Math Collection. Digitized by eGangotri

ಸಂಸ್ಕಾರಾ ರಾವಣಾದೀನಾಮಮಾವಾಸ್ಯಾದಿನೇಽಭವನ್ ।
ಸಂಗ್ರಾಮೇ ತುಮುಲೇ ಜಾತೇ ರಾಮೋ ಜಯಮವಾಪ್ತವಾನ್ ॥ ೭೮ ॥
ಮಾಘಶುಕ್ಲದ್ವಿತೀಯಾದಿ ಚೈತ್ರಕೃಷ್ಣಚತುರ್ದಶೀಂ ।
ಸಪ್ತಾಶೀತಿದಿನಾನ್ಯೇವಂ ಮಧ್ಯೇ ಪಂಚದಶಾಹಕಂ ॥ ೭೯ ॥
ಯುದ್ಧಾವಹಾರಃ ಸಂಗ್ರಾಮೋ ದ್ವಾಸಪ್ತತಿದಿನಾನ್ಯಭೂತ್ ।
ವೈಶಾಖಾದಿತಿಥೌ ರಾಮ ಉವಾಸ ರಣಭೂಮಿಷು ।
ಅಭಿಷಿಕ್ತೋ ದ್ವಿತೀಯಾಯಾಂ ಲಂಕಾರಾಜ್ಯೇ ವಿಭೀಷಣಃ ॥ ೮೦ ॥
ಸೀತಾಶುದ್ಧಿಸ್ತೃತೀಯಾಯಾಂ ದೇವೇಭ್ಯೋ ವರಲಂಭನಂ ।
ದಶರಥಸ್ಯಾಗಮನಂ ತತ್ರ ಚೈವಾಽನುಮೋದನಂ ॥ ೮೧ ॥
ಹತ್ವಾ ತ್ವರೇಣ ಲಂಕೇಶಂ ಲಕ್ಷ್ಮಣಸ್ಯಾಽಗ್ರಜೋ ವಿಭುಃ ।
ಗೃಹೀತ್ವಾ ಜಾನಕೀಂ ಪುಣ್ಯಾಂ ದುಃಖಿತಾಂ ರಾಕ್ಷಸೇನ ತು ॥ ೮೨ ॥
ಆದಾಯ ಪರಯಾ ಪ್ರೀತ್ಯಾ ಜಾನಕೀಂ ಸ ನ್ಯವರ್ತತ ।
ವೈಶಾಖಸ್ಯ ಚತುರ್ಥ್ಯಾಂ ತು ರಾಮಃ ಪುಷ್ಪಕಮಾಶ್ರಿತಃ ॥ ೮೩ ॥
ವಿಹಾಯಸಾ ನಿವೃತ್ತಸ್ತು ಭೂಯೋಽಯೋಧ್ಯಾಂ ಪುರೀಂ ಪ್ರತಿ ।
ಪೂರ್ಣೇ ಚತುರ್ದಶೇ ವರ್ಷೇ ಪಂಚಮ್ಯಾಂ ಮಾಧವಸ್ಯ ಚ ॥ ೮೪ ॥
ಭಾರದ್ವಾಜಾಶ್ರಮೇ ರಾಮಃ ಸಗಣಃ ಸಮುಪಾವಿಶತ್ ।
ನಂದಿಗ್ರಾಮೇ ತು ಷಷ್ಠ್ಯಾಂ ಸ ಪುಷ್ಪಕೇಣ ಸಮಾಗತಃ ॥ ೮೫ ॥

---

೭೮. ಅಮಾವಾಸ್ಯೆದಿನ ರಾವಣಾದಿಗಳಿಗೆ ದಹನಾದಿ ಸಂಸ್ಕಾರಗಳು ನಡೆದುವು. ಹೀಗೆ ಘೋರ ಯುದ್ಧದಲ್ಲಿ ರಾಮನು ಜಯವನ್ನು ಪಡೆದನು.

೭೯–೮೦. ಮಾಘ ಶುದ್ಧ ದ್ವಿತೀಯಾ ಮೊದಲ್ಗೊಂಡು ಚೈತ್ರ ಕೃಷ್ಣ ಚತುರ್ದಶೀವರೆಗೆ ಎಂಭತ್ತೇಳು ದಿನಗಳಲ್ಲಿ ಮಧ್ಯೆ ಹದಿನೈದು ದಿನಗಳು ಯುದ್ಧವು ನಡೆಯಲಿಲ್ಲ. ಉಳಿದ ಎಪ್ಪತ್ತೆರಡು ದಿನಗಳು ಯುದ್ಧವು ನಡೆಯಿತು. ವೈಶಾಖ ಶುದ್ಧ ಪಾಡ್ಯಮಿದಿನ ರಾಮನು ಯುದ್ಧಾಂಗಣದಲ್ಲಿದ್ದನು. ಬಿದಿಗೆದಿವಸ ವಿಭೀಷಣನು ಲಂಕಾರಾಜ್ಯಾಭಿಷಿಕ್ತನಾದನು.

೮೧. ತದಿಗೆದಿವಸ ಸೀತೆಯ ಶುದ್ಧಿಯೂ, ದೇವತೆಗಳಿಂದ ವರಲಾಭವೂ, ದಶರಥನ ಆಗಮನವೂ, ಅವನ ಅನುಮತಿಯೂ ಆದುವು.

೮೨. ರಾಮನು ಶೀಘ್ರವಾಗಿ ರಾವಣನನ್ನು ಕೊಂದು ಅವನಿಂದ ದುಃಖಿತಳಾದ ಜಾನಕಿಯನ್ನು ಪರಿಗ್ರಹಿಸಿ ವೈಶಾಖ ಶುದ್ಧ ಚತುರ್ಥೀದಿವಸ ಅವಳೊಡನೆ ಪುಷ್ಪಕವಿಮಾನವನ್ನೇರಿದನು.

೮೩–೮೫. ಆಕಾಶಮಾರ್ಗದಿಂದ ಮರಳಿ ಅಯೋಧ್ಯೆಯನ್ನು ಕುರಿತು ಹೊರಟು ಹದಿನಾಲ್ಕನೆವರ್ಷ ಪೂರ್ತಿಯಾಗಲು ವೈಶಾಖಮಾಸ ಪಂಚಮಿದಿವಸ

CC-0. Jangamwadi Math Collection. Digitized by eGangotri

ಸಪ್ತಮ್ಯಾಮಭಿಷಿಕ್ತೋಽಸೌ ಭೂಯೋಽಯೋಧ್ಯಾಯಾಂ ರಘೂದ್ವಹಃ ।
ದಶಾಹಾಧಿಕಮಾಸಾಂಶ್ಚ ಚತುರ್ದಶ ಹಿ ಮೈಥಿಲೀ ॥ ೮೬ ॥
ಉವಾಸ ರಾಮರಹಿತಾ ರಾವಣಸ್ಯ ನಿವೇಶನೇ ।
ದ್ವಾಚತ್ವಾರಿಂಶಕೇ ವರ್ಷೇ ರಾಮೋ ರಾಜ್ಯಮಕಾರಯತ್ ॥ ೮೭ ॥
ಸೀತಾಯಾಸ್ತು ತ್ರಯಸ್ತ್ರಿಂಶದ್ವರ್ಷಾಣಿ ತು ತದಾಽಭವನ್ ।
ಸ ಚತುರ್ದಶವರ್ಷಾಂತೇ ಪ್ರವಿಷ್ಟಃ ಸ್ವಾಂ ಪುರೀಂ ಪ್ರಭುಃ ॥ ೮೮ ॥
ಅಯೋಧ್ಯಾಂ ನಾಮ ಮುದಿತೋ ರಾಮೋ ರಾವಣದರ್ಪಹಾ ।
ಭ್ರಾತೃಭಿಃ ಸಹಿತಸ್ತತ್ರ ರಾಮೋ ರಾಜ್ಯಮಕಾರಯತ್ ॥ ೮೯ ॥
ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ರಾಮೋ ರಾಜ್ಯಂ ಪಾಲಯಿತ್ವಾ ಜಗಾಮ ತ್ರಿದಿವಾಲಯಂ ॥ ೯೦ ॥
ರಾಮರಾಜ್ಯೇ ತದಾ ಲೋಕಾ ಹರ್ಷನಿರ್ಭರಮಾನಸಾಃ ।
ಬಭೂವುರ್ಧನಧಾನ್ಯಾಢ್ಯಾಃ ಪುತ್ರಪೌತ್ರಯುತಾ ನರಾಃ ॥ ೯೧ ॥
ಕಾಮವರ್ಷೀ ಚ ಪರ್ಜನ್ಯಃ ಸಸ್ಯಾನಿ ಗುಣವಂತಿ ಚ ।
ಗಾವಸ್ತು ಘಟದೋಹಿನ್ಯಃ ಪಾದಪಾಶ್ಚ ಸದಾಫಲಾಃ ॥ ೯೨ ॥

---

ಪರಿವಾರಸಮೇತ ಭರದ್ವಾಜಾಶ್ರಮವನ್ನು ಹೊಕ್ಕನು. ಷಷ್ಠೀದಿನ ಪುಷ್ಪಕ ವಿಮಾನದಲ್ಲಿ ನಂದಿಗ್ರಾಮಕ್ಕೆ ಬಂದನು.

೮೬–೮೭. ರಾಮಚಂದ್ರನು ವೈಶಾಖ ಶುದ್ಧ ಸಪ್ತಮಿಾದಿನ ತಿರುಗಿ ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾದನು. ಜಾನಕಿಯು ರಾಮನನ್ನಗಲಿ ಒಂದು ವರ್ಷ ಎರಡು ತಿಂಗಳು ಹತ್ತುದಿವಸಕಾಲ ರಾವಣನ ಮನೆಯಲ್ಲಿ ವಾಸ ವಾಗಿದ್ದಳು. ರಾಮನು ನಲವತ್ತೆರಡನೆ ವಯಸ್ಸಿನಲ್ಲಿ ರಾಜ್ಯವಾಳಲಾರಂಭಿ ಸಿದನು.

೮೮–೯೦. ಆಗ ಸೀತೆಗೆ ಮೂವತ್ತಮೂರುವರ್ಷ ವಯಸ್ಸಾಗಿತ್ತು. ರಾಮನು ಹೀಗೆ ಹದಿನಾಲ್ಕು ವರ್ಷಗಳ ಕೊನೆಯಲ್ಲಿ ತನ್ನ ನಗರಿಯಾದ ಅಯೋಧ್ಯೆಯನ್ನು ಪ್ರವೇಶಿಸಿ ಅಲ್ಲಿ ಸಹೋದರರೊಡನೆ ರಾಜ್ಯವಾಳುತ್ತಿದ್ದನು. ಹೀಗೆ ಹನ್ನೊಂದು ಸಾವಿರ ವರ್ಷ ರಾಜ್ಯಭಾರಮಾಡಿ ದೇವಲೋಕಕ್ಕೆ ತೆರಳಿದನು.

೯೧. ರಾಮನ ರಾಜ್ಯದಲ್ಲಿ ಆಗ ಪ್ರಜೆಗಳು ಹರ್ಷದಿಂದ ತುಂಬಿದವರೂ, ಧನಧಾನ್ಯಸಮೃದ್ಧಿಯುಳ್ಳವರೂ, ಪುತ್ರಪೌತ್ರಸಮೇತರೂ ಆಗಿದ್ದರು.

೯೨. ಮಳೆಯು ಯಥೇಚ್ಛವಾಗಿ ಸುರಿದು ಸಸ್ಯಗಳು ಸಮೃದ್ಧಿಯಾಗಿ ಬೆಳೆದುವು. ಗೋವುಗಳು ಹೆಚ್ಚು ಹಾಲನ್ನು ಕರೆಯುತ್ತಿದ್ದುವು. ಮರಗಳು ಯಾವಾಗಲೂ ಫಲಭರಿತಗಳಾಗಿದ್ದುವು.



CC-0. Jangamwadi Math Collection. Digitized by eGangotri

ನಾಧಯೋ ವ್ಯಾಧಯಶ್ಚೈವ ರಾಮರಾಜ್ಯೇ ನರಾಧಿಪ ।
ನಾರ್ಯಃ ಪತಿವ್ರತಾಶ್ಚಾಸನ್ಪಿತೃಭಕ್ತಿಪರಾ ನರಾಃ ॥ ೯೩ ॥
ದ್ವಿಜಾ ವೇದಪರಾ ನಿತ್ಯಂ ಕ್ಷತ್ರಿಯಾ ದ್ವಿಜಸೇವಿನಃ ।
ಕುರ್ವತೇ ವೈಶ್ಯವರ್ಣಾಶ್ಚ ಭಕ್ತಿಂ ದ್ವಿಜಗವಾಂ ಸದಾ ॥ ೯೪ ॥
ನ ಯೋನಿಸಂಕರಶ್ಚಾಸೀತ್ತತ್ರ ನಾಚಾರಸಂಕರಃ ।
ನ ವಂಧ್ಯಾ ದುರ್ಭಗಾ ನಾರೀ ಕಾಕವಂಧ್ಯಾ ಮೃತಪ್ರಜಾ ॥ ೯೫ ॥
ವಿಧವಾ ನೈವ ಕಾಪ್ಯಾಸೀತ್ಸಭರ್ತೃಕಾ ನ ಲಪ್ಯತೇ ।
ನಾಽವಜ್ಞಾಂ ಕುರ್ವತೇ ಕೇಽಪಿ ಮಾತಾಪಿತ್ರೋರ್ಗುರೋಸ್ತಥಾ ॥ ೯೬ ॥
ನ ಚ ವಾಕ್ಯಂ ಹಿ ವೃದ್ಧಾನಾಮುಲ್ಲಂಘಯತಿ ಪುಣ್ಯಕೃತ್ ।
ನ ಭೂಮಿಹರಣಂ ತತ್ರ ಪರನಾರೀಪರಾಙ್ಮುಖಾಃ ॥ ೯೭ ॥
ನಾಽಪವಾದಪರೋ ಲೋಕೋ ನ ದರಿದ್ರೋ ನ ರೋಗಭಾಕ್ ।
ನ ಸ್ತೇಯೋ ದ್ಯೂತಕಾರೀ ಚ ಮೈರೇಯೀ ಪಾಪಿನೋ ನ ಹಿ ॥ ೯೮ ॥
ನ ಹೇಮಹಾರೀ ಬ್ರಹ್ಮಘ್ನೋ ನ ಚೈವ ಗುರುತಲ್ಪಗಃ ।
ನ ಸ್ತ್ರೀಘ್ನೋ ನ ಚ ಬಾಲಘ್ನೋ ನ ಚೈವಾಽನೃತಭಾಷಣಃ ॥ ೯೯ ॥

---

೯೩-೯೪. ರಾಮನ ರಾಜ್ಯದಲ್ಲಿ ಆಧಿವ್ಯಾಧಿಗಳ ಸುಳಿವೇ ಇರಲಿಲ್ಲ. ಹೆಂಗಸರು ಪತಿವ್ರತೆಯರಾಗಿಯೂ, ಮಾನವರು ಪಿತೃಭಕ್ತಿಯುಳ್ಳವರಾಗಿಯೂ ಮೆರೆಯುತ್ತಿದ್ದರು. ದ್ವಿಜರು ವೇದಾಧ್ಯಯನನಿರತರೂ, ಕ್ಷತ್ರಿಯರು ಬ್ರಾಹ್ಮಣ ಸೇವಕರೂ ಆಗಿದ್ದರು. ವೈಶ್ಯರು ಬ್ರಾಹ್ಮಣರಲ್ಲಿಯೂ, ಗೋವುಗಳಲ್ಲಿಯೂ ಭಕ್ತಿಯುಳ್ಳವರಾಗಿದ್ದರು.

೯೫. ಜಾತಿಸಾಂಕರ್ಯವೂ, ಆಚಾರಸಾಂಕರ್ಯವೂ ಇರಲಿಲ್ಲ. ಬಂಜೆ, ಸಾಯುವ ಮಕ್ಕಳುಳ್ಳವಳು—ಇವರಿರಲಿಲ್ಲ.

೯೬. ಒಬ್ಬ ವಿಧವೆಯೂ ಇರಲಿಲ್ಲ. ಸುಮಂಗಲಿಯು ಪುತ್ರಾದಿ ಮರಣ ದಿಂದ ಗೋಳಾಡುತ್ತಿರಲಿಲ್ಲ. ಯಾರೂ ತಾಯಿ, ತಂದೆ, ಗುರುಗಳಿಗೆ ಅವಮಾನ ಮಾಡುತ್ತಿರಲಿಲ್ಲ.

೯೭. ಪುಣ್ಯವಂತನಾದ ಮಾನವನು ವೃದ್ಧರ ಮಾತನ್ನು ಮೀರುತ್ತಿರಲಿಲ್ಲ. ಯಾರೊಬ್ಬರೂ ಪರರ ಭೂಮಿಯನ್ನು ಅಪಹರಿಸುತ್ತಿರಲಿಲ್ಲ. ಎಲ್ಲರೂ ಪರರ ಹೆಂಗಸರಲ್ಲಿ ವಿಮುಖರಾಗಿದ್ದರು.

೯೮. ಇತರರ ಮೇಲೆ ಅಪವಾದವನ್ನು ಹೊರಿಸುವವನೂ, ಬಡವನೂ, ರೋಗಿಯೂ, ಕಳ್ಳನೂ, ಜೂಜುಗಾರನೂ, ಹೆಂಡವನ್ನು ಕುಡಿಯುವವನೂ, ಪಾಪಿಗಳೂ ಇರಲಿಲ್ಲ.

೯೯. ಸುವರ್ಣವನ್ನು ಕದಿಯುವವನೂ, ಬ್ರಾಹ್ಮಣನನ್ನು ಕೊಂದವನೂ.

CC-0. Jangamwadi Math Collection. Digitized by eGangotri

ನ ವೃತ್ತಿಲೋಪಕಶ್ಚಾಸೀತ್ಕೂಟಸಾಕ್ಷೀ ನ ಚೈವ ಹಿ ।
ನ ಶಠೋ ನ ಕೃತಘ್ನಶ್ಚ ಮಲಿನೋ ನೈವ ದೃಶ್ಯತೇ ॥ ೧೦೦ ॥
ಸದಾ ಸರ್ವತ್ರ ಪೂಜ್ಯಂತೇ ಬ್ರಾಹ್ಮಣಾ ವೇದಪಾರಗಾಃ ।
ನಾಽವೈಷ್ಣವೋಽವ್ರತೀ ರಾಜನ್ರಾಮರಾಜ್ಯೇಽತಿವಿಶ್ರುತೇ ॥ ೧೦೧ ॥
ರಾಜ್ಯಂ ಪ್ರಕುರ್ವತಸ್ತಸ್ಯ ಪುರೋಧಾ ವದತಾಂ ವರಃ ।
ವಸಿಷ್ಠೋ ಮುನಿಭಿಃ ಸಾರ್ಧಂ ಕೃತ್ವಾ ತೀರ್ಥಾನ್ಯನೇಕಶಃ ॥ ೧೦೨ ॥
ಅಜಗಾಮ ಬ್ರಹ್ಮಪುತ್ರೋ ಮಹಾಭಾಗಸ್ತಪೋನಿಧಿಃ ।
ರಾಮಸ್ತಂ ಪೂಜಯಾಮಾಸ ಮುನಿಭಿಃ ಸಹಿತಂ ಗುರುಂ ॥ ೧೦೩ ॥
ಅಭ್ಯುತ್ಥಾನಾಽರ್ಘ್ಯಪಾದ್ಯೈಶ್ಚ ಮಧುಪರ್ಕಾದಿಪೂಜಯಾ ।
ಪಪ್ರಚ್ಛ ಕುಶಲಂ ರಾಮಂ ವಸಿಷ್ಠೋ ಮುನಿಪುಂಗವಃ ॥ ೧೦೪ ॥
ರಾಜ್ಯೇ ಚಾಽಶ್ವೇ ಗಜೇ ಕೋಶೇ ದೇಶೇ ಸದ್ಭ್ರಾತೃಭೃತ್ಯಯೋಃ ।
ಕುಶಲಂ ವರ್ತತೇ ರಾಮ ಇತಿ ಪೃಷ್ಟೇ ಮುನೇಸ್ತದಾ ॥ ೧೦೫ ॥

ರಾಮ ಉವಾಚ :—

ಸರ್ವತ್ರ ಕುಶಲಂ ಮೇಽದ್ಯ ಪ್ರಸಾದಾದ್ಭವತಃ ಸದಾ ।
ಪಪ್ರಚ್ಛ ಕುಶಲಂ ರಾಮೋ ವಸಿಷ್ಠಂ ಮುನಿಪುಂಗವಂ ॥ ೧೦೬ ॥

---

ಗುರುಪತ್ನೀ ಸಂಗವನ್ನು ಮಾಡುವವನೂ, ಸ್ತ್ರೀ ಮತ್ತು ಬಾಲಕರನ್ನು ಕೊಂದವನೂ, ಸುಳ್ಳಾಡುವವನೂ ಇರಲಿಲ್ಲ.

೧೦೦. ಜೀವನವನ್ನು ಹಾಳುಮಾಡುವವನೂ, ಸುಳ್ಳು ಸಾಕ್ಷಿಯನ್ನು ಹೇಳುವವನೂ, ಮೂರ್ಖನೂ, ಕೃತಘ್ನನೂ, ಮಲಿನನಾದವನೂ ಇರಲಿಲ್ಲ.

೧೦೧. ಅತಿ ಪ್ರಸಿದ್ಧವಾದ ರಾಮರಾಜ್ಯದಲ್ಲಿ ವೇದಪಾರಂಗತರಾದ ಬ್ರಾಹ್ಮಣರು ಮಾನ್ಯರಾಗಿದ್ದರು. ವಿಷ್ಣುಭಕ್ತರಲ್ಲದವರೂ, ವ್ರತವಿಲ್ಲದವರೂ ಇರಲಿಲ್ಲ.

೧೦೨–೧೦೫. ಶ್ರೀರಾಮನು ರಾಜ್ಯವಾಳುತ್ತಿರುವಾಗ ಬ್ರಹ್ಮತನಯನೂ, ಅತಿ ಭಾಗ್ಯವಂತನೂ, ತಪಸ್ವಿಯೂ, ವಾಗ್ಮಿಯೂ ಆಗಿರುವ ಪುರೋಹಿತನಾದ ವಸಿಷ್ಠನು ಮುನಿಗಳೊಡನೆ ಬಂದನು. ಗುರುವನ್ನು ಎದುರುಗೊಳ್ಳುವುದರಿಂದಲೂ, ಅರ್ಘ್ಯ, ಪಾದ್ಯ, ಮಧುಪರ್ಕ ಇವುಗಳಿಂದಲೂ ರಾಮನು ಪೂಜಿಸಿದನು. ಮುನಿವರ್ಯನಾದ ವಸಿಷ್ಠನು ರಾಜ್ಯ, ಕುದುರೆ, ಆನೆ, ಬೊಕ್ಕಸ, ದೇಶ, ಸಹೋದರರು, ಸೇವಕರು ಇವರೆಲ್ಲ ಕ್ಷೇಮವಾಗಿರುವರೊ ಎಂದು ಪ್ರಶ್ನಿಸಿದನು.

೧೦೬–೧೦೮. ರಾಮನು ಹೇಳುತ್ತಾನೆ:—"ಗುರುವರ್ಯಾ! ತಮ್ಮ ಅನುಗ್ರಹದಿಂದ ನಾನು ಎಲ್ಲ ವಿಷಯದಲ್ಲಿಯೂ ಕ್ಷೇಮವಾಗಿರುವೆನು." ಎಂದು ರಾಮನು ವಸಿಷ್ಠರಿಗೆ ಹೇಳಿ "ಪತ್ನೀಪುತ್ರರಿಂದ ಸಹಿತರಾದ ತಾವು ಕ್ಷೇಮವಾಗಿ

CC-0. Jangamwadi Math Collection. Digitized by eGangotri

ಸರ್ವತಃ ಕುಶಲೀ ತ್ವಂ ಹಿ ಭಾರ್ಯಾಪುತ್ರಸಮನ್ವಿತಃ ।
ಸ ಸರ್ವಂ ಕಥಯಾಮಾಸ ಯಥಾ ತೀರ್ಥಾನ್ಯಶೇಷತಃ ॥ ೧೦೭ ॥
ಸೇವಿತಾನಿ ಧರಾಪೃಷ್ಠೇ ಕ್ಷೇತ್ರಾಣ್ಯಾಯತನಾನಿ ಚ ।
ರಾಮಾಯ ಕಥಯಾಮಾಸ ಸರ್ವತ್ರ ಕುಶಲಂ ತದಾ ॥ ೧೦೮ ॥
ತತಃ ಸ ವಿಸ್ಮಯಾವಿಷ್ಟೋ ರಾಮೋ ರಾಜೀವಲೋಚನಃ ।
ಪಪ್ರಚ್ಛ ತೀರ್ಥಮಾಹಾತ್ಮ್ಯಂ ಯತ್ತೀರ್ಥೇಷೂತ್ತಮೋತ್ತಮಂ ॥೧೦೯॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ರಾಮಚರಿತ್ರವರ್ಣನಂ"ನಾಮ ತ್ರಿಂಶೋಽಧ್ಯಾಯಃ

---

ರುವಿರೊ?" ಎಂದು ಕೇಳಿದನು. ಅದಕ್ಕೆ ವಶಿಷ್ಠನು ತಾವು ವಸುಧೆಯಲ್ಲಿ ಸೇವಿಸಿದ ಸಕಲ ತೀರ್ಥಗಳು ಮತ್ತು ದೇವಾಲಯಗಳನ್ನು ಸಮಗ್ರವಾಗಿ ತಿಳಿಸಿ ಎಲ್ಲ ವಿಷಯದಲ್ಲಿಯೂ ಕ್ಷೇಮವಾಗಿರುವೆವೆಂದು ಹೇಳಿದನು.

೧೦೯. ಕಮಲದಂತೆ ಕಣ್ಣುಗಳುಳ್ಳ ರಾಮನು ಆಶ್ಚರ್ಯಗೊಂಡು ತೀರ್ಥಗಳಲ್ಲಿ ಉತ್ತಮೋತ್ತಮವಾದುದನ್ನೂ, ಆ ತೀರ್ಥಗಳ ಮಾಹಾತ್ಮ್ಯೆಯನ್ನೂ ಕೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ರಾಮಚರಿತ್ರವರ್ಣನ"ವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕತ್ರಿಂಶೋಽಧ್ಯಾಯಃ

### ದೂತಾಗಮನಂ

ಶ್ರೀರಾಮ ಉವಾಚ :—

ಭಗವನ್ಯಾನಿ ತೀರ್ಥಾನಿ ಸೇವಿತಾನಿ ತ್ವಯಾ ವಿಭೋ ।
ಏತೇಷಾಂ ಪರಮಂ ತೀರ್ಥಂ ತನ್ಮಮಾಚಕ್ಷ್ವ ಮಾನದ ॥ ೧ ॥
ಮಯಾ ತು ಸೀತಾಹರಣೇ ನಿಹತಾ ಬ್ರಹ್ಮರಾಕ್ಷಸಾಃ ।
ತತ್ಪಾಪಸ್ಯ ವಿಶುದ್ಧ್ಯರ್ಥಂ ವದ ತೀರ್ಥೋತ್ತಮೋತ್ತಮಂ ॥ ೨ ॥

ವಸಿಷ್ಠ ಉವಾಚ :—

ಗಂಗಾ ಚ ನರ್ಮದಾ ತಾಪೀ ಯಮುನಾ ಚ ಸರಸ್ವತೀ ।
ಗಂಡಕೀ ಗೋಮತೀ ಪೂರ್ಣಾ ಏತಾ ನದ್ಯಃ ಸುಪಾವನಾಃ ॥ ೩ ॥
ಏತಾಸಾಂ ನರ್ಮದಾ ಶ್ರೇಷ್ಠಾ ಗಂಗಾ ತ್ರಿಪಥಗಾಮಿನೀ ।
ದಹತೇ ಕಿಲ್ಬಿಷಂ ಸರ್ವಂ ದರ್ಶನಾದೇವ ರಾಘವ ॥ ೪ ॥
ದೃಷ್ಟ್ವಾ ಜನ್ಮಶತಂ ಪಾಪಂ ಗತ್ವಾ ಜನ್ಮಶತತ್ರಯಂ ।
ಸ್ನಾತ್ವಾ ಜನ್ಮಸಹಸ್ರಂ ಚ ಹಂತಿ ರೇವಾ ಕಲೌ ಯುಗೇ ॥ ೫ ॥

---

## ಕನ್ನಡದ ಅನುವಾದ

### ದೂತಾಗಮನ

೧. ಶ್ರೀರಾಮನು ಹೇಳುತ್ತಾನೆ:—ಪೂಜ್ಯಗುರುಗಳೆ! ತಾವು ಯಾವ ತೀರ್ಥಗಳನ್ನು ಸೇವಿಸಿದಿರಿ? ಇವುಗಳಲ್ಲಿ ಉತ್ತಮವಾದುದಾವುದು? ಅದನ್ನು ನನಗೆ ಹೇಳಿರಿ.

೨. ನಾನು ಸೀತೆಯನ್ನು ತರುವುದಕ್ಕಾಗಿ ಬ್ರಾಹ್ಮಣಜನ್ಮದ ರಾಕ್ಷಸರನ್ನು ಕೊಂದಿರುವೆನು. ಆ ಪಾಪದ ಶುದ್ಧಿಗಾಗಿ ಉತ್ತಮ ತೀರ್ಥವನ್ನು ಹೇಳಿರಿ.

೩. ವಸಿಷ್ಠನು ಹೇಳುತ್ತಾನೆ:—ರಾಮ! ಗಂಗಾ, ನರ್ಮದಾ, ತಪತೀ, ಯಮುನಾ, ಸರಸ್ವತೀ, ಗಂಡಕೀ, ಗೋಮತೀ, ಪೂರ್ಣಾ ಈ ನದಿಗಳು ಅತಿ ಪವಿತ್ರವಾದುವು.

೪. ಇವುಗಳಲ್ಲಿ ನರ್ಮದೆಯು ಉತ್ತಮವಾದುದು. ಗಂಗೆಯು ಕಂಡ ಕೂಡಲೆ ಎಲ್ಲ ಪಾಪಗಳನ್ನು ನೀಗಿಸುವುದು.

೫. ನರ್ಮದೆಯು ಕಲಿಯುಗದಲ್ಲಿ ನೋಡುವುದರಿಂದ ನೂರು ಜನ್ಮಗಳ ಪಾಪವನ್ನೂ, ಅಲ್ಲಿಗೆ ಹೋಗುವುದರಿಂದ ಮುನ್ನೂರು ಜನ್ಮಗಳ ಪಾಪವನ್ನೂ, ಸ್ನಾನದಿಂದ ಸಾವಿರ ಜನ್ಮಗಳ ಪಾಪವನ್ನೂ ಕಳೆಯುವುದು.

CC-0. Jangamwadi Math Collection. Digitized by eGangotri

ನರ್ಮದಾತೀರಮಾಶ್ರಿತ್ಯ ಶಾಕಮೂಲಫಲೈರಪಿ ।
ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿಭೋಜಫಲಂ ಲಭೇತ್ ॥ ೬ ॥
ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೭ ॥
ಫಾಲ್ಗುನಾಂತೇ ಕುಹೂಂ ಪ್ರಾಪ್ಯ ತಥಾ ಪ್ರೌಷ್ಠಪದೇಽಸಿತೇ ।
ಪಕ್ಷೇ ಗಂಗಾಮಧಿಪ್ರಾಪ್ಯ ಸ್ನಾನಂ ಚ ಪಿತೃತರ್ಪಣಂ ॥ ೮ ॥
ಕುರುತೇ ಪಿಂಡದಾನಾನಿ ಸೋಽಕ್ಷಯಂ ಫಲಮಶ್ನುತೇ ।
ಶುಚೌ ಮಾಸೇ ಚ ಸಂಪ್ರಾಪ್ತೇ ಸ್ನಾನಂ ವಾಪ್ಯಾಂ ಕರೋತಿ ಯಃ ॥ ೯ ॥
ಚತುರಶೀತಿನರಕಾನ್ನ ಪಶ್ಯತಿ ನರೋ ನೃಪ ।
ತಪತ್ಯಾಃ ಸ್ಮರಣೇ ರಾಮ ಮಹಾಪಾತಕಿನಾಮಪಿ ॥ ೧೦ ॥
ಉದ್ಧರೇತ್ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಂ ।
ಯಮುನಾಯಾಂ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೧೧ ॥
ಮಹಾಪಾತಕಯುಕ್ತೋಽಪಿ ಸ ಗಚ್ಛೇತ್ಪರಮಾಂ ಗತಿಂ ।
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಸರಸ್ವತ್ಯಾಂ ನಿಮಜ್ಜಯೇತ್ ॥ ೧೨ ॥
ಗಚ್ಛೇತ್ಸ ಗರುಡಾರೂಢಃ ಸ್ತೂಯಮಾನಃ ಸುರೋತ್ತಮೈಃ ।
ಸ್ನಾತ್ವಾ ಯಃ ಕಾರ್ತಿಕೇ ಮಾಸಿ ಯತ್ರ ಪ್ರಾಚೀ ಸರಸ್ವತೀ ॥ ೧೩ ॥

---

೬. ನರ್ಮದಾತೀರದಲ್ಲಿ ತರಕಾರಿ, ಗೆಣಸು, ಹಣ್ಣುಗಳಿಂದಲಾದರೂ ಒಬ್ಬ ಬ್ರಾಹ್ಮಣನಿಗೆ ಊಟಮಾಡಿಸಿದರೆ ಕೋಟಿ ಬ್ರಾಹ್ಮಣರನ್ನು ಭೋಜನ ಮಾಡಿಸಿದಷ್ಟು ಫಲವು ಲಭಿಸುವುದು.

೭. ಅನೇಕ ಗಾವುದಗಳ ದೂರದಲ್ಲಿ ಗಂಗೆ, ಗಂಗೆ ಎಂದು ಹೇಳಿದವನೂ ಸಕಲ ಪಾಪಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು.

೮–೩೨. ಫಾಲ್ಗುನ ಬಹುಳ ಅಮಾವಾಸ್ಯೆಯಲ್ಲಿಯೂ, ಭಾದ್ರಪದ ಕೃಷ್ಣ ಪಕ್ಷದಲ್ಲಿಯೂ ಗಂಗೆಯನ್ನು ಹೊಂದಿ ಮಿಂದು ಪಿತೃಗಳಿಗೆ ಪಿಂಡಪ್ರದಾನ ಮತ್ತು ತರ್ಪಣಗಳನ್ನು ಮಾಡಿದವನು ಅಕ್ಷಯ ಫಲವನ್ನು ಹೊಂದುವನು. ಜ್ಯೇಷ್ಠಮಾಸದಲ್ಲಿ ವಾಪಿಯಲ್ಲಿ ಮಿಂದವನು ಎಂಭತ್ತುನಾಲ್ಕು ನರಕಗಳನ್ನು ನೋಡುವುದಿಲ್ಲ. ರಾಮ! ತಪತೀಸ್ಮರಣೆಯನ್ನು ಮಹಾ ಪಾಪಿಗಳು ಮಾಡಿದರೂ ಅವರ ಏಳು ಗೋತ್ರಗಳೂ, ನೂರೊಂದು ವಂಶಗಳೂ ಉದ್ಧಾರವಾಗುವುವು. ನರನು ಅತ್ಯಂತ ಪಾಪಿಯಾದಾಗ್ಯೂ ಯಮುನೆಯಲ್ಲಿ ಸ್ನಾನಮಾಡಿದರೆ ಅವನು ಸಮಸ್ತ ಪಾಪಮುಕ್ತನಾಗಿ ಉತ್ತಮ ಗತಿಯನ್ನು ಹೊಂದುವನು. ಕಾರ್ತಿಕಮಾಸದಲ್ಲಿ ಕೃತ್ತಿಕಾನಕ್ಷತ್ರಯೋಗವಿರುವಾಗ ಸರಸ್ವತೀ ನದಿಯಲ್ಲಿ ಮಿಂದರೆ ಅವನು ದೇವತೆಗಳಿಂದ ಹೊಗಳಿಸಿಕೊಳ್ಳುತ್ತ ಗರುಡಾರೂಢನಾಗಿ

CC-0. Jangamwadi Math Collection. Digitized by eGangotri

ಪ್ರಾಚೀಂ ಮಾಧವಮಾಸ್ತೂಯ ಸ ಗಚ್ಛೇತ್ಪರಮಾಂ ಗತಿಂ ।
ಗಂಡಕೀಪುಣ್ಯತೀರ್ಥೇ ಹಿ ಸ್ನಾನಂ ಯಃ ಕುರುತೇ ನರಃ ॥ ೧೪ ॥
ಶಾಲಗ್ರಾಮಶಿಲಾಮರ್ಚ್ಯ ನ ಭೂಯಃ ಸ್ತನಪೋ ಭವೇತ್ ।
ಗೋಮತೀಜಲಕಲ್ಲೋಲೈರ್ಮಜ್ಜಯೇತ್ಕೃಷ್ಣ ಸನ್ನಿಧೌ ॥ ೧೫ ॥
ಚತುರ್ಭುಜೋ ನರೋ ಭೂತ್ವಾ ವೈಕುಂಠೇ ಮೋದತೇ ಚಿರಂ ।
ಚರ್ಮಣ್ವತೀಂ ನಮಸ್ಕೃತ್ಯ ಅಪಃ ಸ್ಪೃಶತಿ ಯೋ ನರಃ ॥ ೧೬ ॥
ಸ ತಾರಯತಿ ಪೂರ್ವಜಾನ್ದಶಪೂರ್ವಾನ್ದಶಾಽಪರಾನ್ ।
ದ್ವಯೋಶ್ಚ ಸಂಗಮಂ ದೃಷ್ಟ್ವಾ ಶ್ರುತ್ವಾ ವಾ ಸಾಗರಧ್ವನಿಂ ॥ ೧೭ ॥
ಬ್ರಹ್ಮಹತ್ಯಾಯುತೋ ವಾಽಪಿ ಪೂತೋ ಗಚ್ಛೇತ್ಪರಾಂ ಗತಿಂ ।
ಮಾಘಮಾಸೇ ಪ್ರಯಾಗೇ ತು ಮಜ್ಜನಂ ಕುರುತೇ ನರಃ ॥ ೧೮ ॥
ಇಹಲೋಕೇ ಸುಖಂ ಭುಕ್ತ್ವಾ ಅಂತೇ ವಿಷ್ಣುಪದಂ ವ್ರಜೇತ್ ।
ಪ್ರಭಾಸೇ ಯೇ ನರಾ ರಾಮ ತ್ರಿರಾತ್ರಂ ಬ್ರಹ್ಮಚಾರಿಣಃ ॥ ೧೯ ॥
ಯಮಲೋಕಂ ನ ಪಶ್ಯೇಯುಃ ಕುಂಭೀಪಾಕಾದಿಕಂ ತಥಾ ।
ನೈಮಿಷಾಽರಣ್ಯವಾಸೀ ಯೋ ನರೋ ದೇವತ್ವಮಾಪ್ನುಯಾತ್ ॥ ೨೦ ॥
ದೇವಾನಾಮಾಲಯಂ ಯಸ್ಮಾತ್ತದೇವ ಭುವಿ ದುರ್ಲಭಂ ।
ಕುರುಕ್ಷೇತ್ರೇ ನರೋ ರಾಮ ಗ್ರಹಣೇ ಚಂದ್ರಸೂರ್ಯಯೋಃ ॥ ೨೧ ॥

---

ವೈಕುಂಠಕ್ಕೆ ತೆರಳುವನು. ಕಾರ್ತಿಕಮಾಸದಲ್ಲಿ ಪೂರ್ವದಿಕ್ಕಿಗೆ ಹರಿಯುವ ಸರಸ್ವತೀನದಿಯಲ್ಲಿ ಮಿಂದು ವಿಷ್ಣುವನ್ನು ಸ್ತೋತ್ರಮಾಡಿದರೆ ಉತ್ತಮಗತಿಯನ್ನು ಪಡೆಯುವನು. ಮಾನವನು ಗಂಡಕೀನದಿಯಲ್ಲಿ ಸ್ನಾನಮಾಡಿ ಶಾಲಗ್ರಾಮಶಿಲೆಯನ್ನು ಅರ್ಚಿಸಿದರೆ ಮರಳಿ ಹುಟ್ಟುವುದಿಲ್ಲ. ಗೋಮತಿಯ ನೀರಿನ ಅಲೆಗಳಲ್ಲಿ ಕೃಷ್ಣನ ಹತ್ತಿರ ಮಿಂದರೆ ನರನು ನಾಲ್ಕು ತೋಳುಗಳುಳ್ಳವನಾಗಿ ವೈಕುಂಠದಲ್ಲಿ ಅನೇಕ ವರ್ಷ ಸಂತೋಷಪಡುವನು. ಚರ್ಮಣ್ವತೀನದಿಯನ್ನು ವಂದಿಸಿ ಅದರ ನೀರನ್ನು ಮುಟ್ಟಿದರೆ ಅವನು ತನ್ನ ಹಿಂದಿನ ಹತ್ತುಜನರನ್ನೂ, ಮುಂದಿನ ಹತ್ತು ಜನರನ್ನೂ ಉದ್ಧರಿಸುವನು. ಈ ನದಿಯು ಸಮುದ್ರವನ್ನು ಸೇರುವ ಸ್ಥಳವನ್ನು ನೋಡಿದವನೂ, ಸಮುದ್ರದ ಶಬ್ದವನ್ನು ಕೇಳಿದವನೂ ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಪವಿತ್ರನಾಗಿ ಉತ್ತಮ ಗತಿಯನ್ನು ಪಡೆಯುವನು. ಮಾಘಮಾಸದಲ್ಲಿ ಪ್ರಯಾಗದಲ್ಲಿ ಮಿಂದವನು ಈ ಲೋಕದಲ್ಲಿ ಸುಖವನ್ನನುಭವಿಸಿ ಅವಸಾನದಲ್ಲಿ ವೈಕುಂಠಕ್ಕೆ ಹೋಗುವನು. ರಾಮ! ಪ್ರಭಾಸತೀರ್ಥದಲ್ಲಿ ಮೂರು ರಾತ್ರಿ ಬ್ರಹ್ಮಚಾರಿಗಳಾಗಿದ್ದವರು ಯಮಲೋಕವನ್ನೂ, ಕುಂಭೀಪಾಕ ನರಕವನ್ನೂ ನೋಡಲಾರರು. ನೈಮಿಷಾರಣ್ಯವು ಭೂಮಿಯಲ್ಲಿ ದುರ್ಲಭವಾದ ದೇವಾಲಯವಾದುದರಿಂದ ಅದರಲ್ಲಿ ವಾಸಮಾಡುವ ನರನ



CC-0. Jangamwadi Math Collection. Digitized by eGangotri

ಹೇಮದಾನಾಚ್ಚ ರಾಜೇಂದ್ರ ನ ಭೂಯಃ ಸ್ತನಪೋ ಭವೇತ್ ।
ಶ್ರೀಸ್ಥಲೇ ದರ್ಶನಂ ಕೃತ್ವಾ ನರಃ ಪಾಪಾತ್ಪ್ರಮುಚ್ಯತೇ ॥ ೨೨ ॥
ಸರ್ವದುಃಖವಿನಾಶೇ ಚ ವಿಷ್ಣುಲೋಕೇ ಮಹೀಯತೇ ।
ಕಾಶ್ಯಪೀಂ ಸ್ಪರ್ಶಯೇದ್ಯೋ ಗಾಂ ಮಾನವೋ ಭುವಿ ರಾಘವ ॥ ೨೩ ॥
ಸರ್ವಕಾಮದುಘಾನಾಸನ್ಮೃಷಿಲೋಕಂ ಸ ಗಚ್ಛತಿ ।
ಉಜ್ಜಯಿನ್ಯಾಂ ತು ವೈಶಾಖೇ ಶಿಪ್ರಾಯಾಂ ಸ್ನಾನಮಾಚರೇತ್ ॥ ೨೪ ॥
ಮೋಚಯೇದ್ರೌರವಾದ್ಘೋರಾತ್ಪೂರ್ವಜಾಂಶ್ಚ ಸಹಸ್ರಶಃ ।
ಸಿಂಧುಸ್ನಾನಂ ನರೋ ರಾಮ ಪ್ರಕರೋತಿ ದಿನತ್ರಯಂ ॥ ೨೫ ॥
ಸರ್ವಪಾಪವಿಶುದ್ಧಾತ್ಮಾ ಕೈಲಾಸೇ ಮೋದತೇ ನರಃ ।
ಕೋಟಿತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಕೋಟೀಶ್ವರಂ ಶಿವಂ ॥ ೨೬ ॥
ಬ್ರಹ್ಮಹತ್ಯಾದಿಭಿಃ ಪಾಪೈರ್ಲಿಪ್ಯತೇ ನ ಚ ಸ ಕ್ವಚಿತ್ ।
ಅಜ್ಞಾನಾಮಪಿ ಜಂತೂನಾಂ ಮಹಾಮೇಧ್ಯೇ ತು ಗಚ್ಛತಾಂ ॥ ೨೭ ॥
ಪಾದೋದ್ಭೂತಂ ಪಯಃ ಪೀತ್ವಾ ಸರ್ವಪಾಪಂ ಪ್ರಣಶ್ಯತಿ ।
ವೇದವತ್ಯಾಂ ನರೋ ಯಸ್ತು ಸ್ನಾತಿ ಸೂರ್ಯೋದಯೇ ಶುಭೇ ॥ ೨೮ ॥
ಸರ್ವರೋಗಾತ್ಪ್ರಮುಚ್ಯೇತ ಪರಂ ಸುಖಮವಾಪ್ನುಯಾತ್ ।
ತೀರ್ಥಾನಿ ರಾಮ ಸರ್ವತ್ರ ಸ್ನಾನಪಾನಾವಗಾಹನೈಃ ॥ ೨೯ ॥

---

ದೇವತ್ವವನ್ನು ಹೊಂದುವನು. ರಾಮ! ಕುರುಕ್ಷೇತ್ರದಲ್ಲಿ ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿ ಸುವರ್ಣದಾನ ಮಾಡಿದವನು ತಿರುಗಿ ಹುಟ್ಟುವುದಿಲ್ಲ. ಸಕಲ ದುಃಖನಿವಾರಕವಾದ ಶ್ರೀಸ್ಥಳವನ್ನು ದರ್ಶನಮಾಡಿದವನು ಪಾಪಮುಕ್ತನಾಗಿ ವೈಕುಂಠಲೋಕದಲ್ಲಿ ಪೂಜ್ಯನಾಗುವನು. ರಾಘವ! ಕಾಶ್ಯಪೀನದಿಯ ನೀರನ್ನು ಮುಟ್ಟಿದವನು ಸಕಲೇಷ್ಟಾರ್ಥವನ್ನೀಯುವ ಮಹರ್ಷಿಲೋಕವನ್ನೈದುವನು. ಉಜ್ಜಯಿನಿಯಲ್ಲಿರುವ ಶಿಪ್ರಾನದಿಯಲ್ಲಿ ವೈಶಾಖಮಾಸದಲ್ಲಿ ಮಿಂದವನು ಸಹಸ್ರಾರು ಪೂರ್ವಿಕರನ್ನು ಘೋರವಾದ ರೌರವ ನರಕದಿಂದ ಪಾರುಮಾಡುವನು. ಸಿಂಧುನದಿಯಲ್ಲಿ ಮೂರು ದಿನ ಸ್ನಾನಮಾಡಿದವನು ಸಕಲ ಪಾಪ ಮುಕ್ತನಾಗಿ ಕೈಲಾಸದಲ್ಲಿ ಸಂತೋಷಗೊಳ್ಳುವನು. ಕೋಟಿತೀರ್ಥದಲ್ಲಿ ಸ್ನಾನಮಾಡಿ ಕೋಟೀಶ್ವರ ಶಿವನನ್ನು ದರ್ಶನಗೈದವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುವನು. ಅತ್ಯಶುದ್ಧಸ್ಥಳದಲ್ಲಿ ಸಂಚರಿಸುವ ಮೂಢ ಪ್ರಾಣಿಗಳೂ ವಿಷ್ಣುಪಾದೋದಕವನ್ನು ಕುಡಿದರೆ ಸಕಲಪಾಪಮೋಚನವಾಗುವುದು. ವೇದವತೀ ನದಿಯಲ್ಲಿ ಸೂರ್ಯೋದಯದ ಕಾಲದಲ್ಲಿ ಮಿಂದವನು ಸಮಸ್ತರೋಗರಹಿತನಾಗಿ ಸುಖವನ್ನು ಪಡೆಯುವನು. ರಾಮ! ಎಲ್ಲೆಡೆಯಲ್ಲಿರುವ ತೀರ್ಥಗಳೂ ಸ್ನಾನ, ಪಾನಾದಿಗಳಿಂದ ಮನುಷ್ಯರ ಸಮಸ್ತ ಪಾಪ

CC-0. Jangamwadi Math Collection. Digitized by eGangotri

ನಾಶಯಂತಿ ಮನುಷ್ಯಾಣಾಂ ಸರ್ವಪಾಪಾನಿ ಲೀಲಯಾ ।
ತೀರ್ಥಾನಾಂ ಪರಮಂ ತೀರ್ಥಂ ಧರ್ಮಾರಣ್ಯಂ ಪ್ರಚಕ್ಷತೇ ॥ ೩೦ ॥
ಬ್ರಹ್ಮವಿಷ್ಣುಶಿವಾದ್ಯೈರ್ಯದಾದೌ ಸಂಸ್ಥಾಪಿತಂ ಪುರಾ ।
ಅರಣ್ಯಾನಾಂ ಚ ಸರ್ವೇಷಾಂ ತೀರ್ಥಾನಾಂ ಚ ವಿಶೇಷತಃ ॥ ೩೧ ॥
ಧರ್ಮಾರಣ್ಯಾತ್ಪರಂ ನಾಸ್ತಿ ಭುಕ್ತಿಮುಕ್ತಿಪ್ರದಾಯಕಂ ।
ಸ್ವರ್ಗೇ ದೇವಾಃ ಪ್ರಶಂಸಂತಿ ಧರ್ಮಾರಣ್ಯನಿವಾಸಿನಃ ॥ ೩೨ ॥
ತೇ ಪುಣ್ಯಾಸ್ತೇ ಪುಣ್ಯಕೃತೋ ಯೇ ವಸಂತಿ ಕಲೌ ನರಾಃ ।
ಧರ್ಮಾರಣ್ಯೇ ರಾಮದೇವ ಸರ್ವಕಿಲ್ಬಿಷನಾಶನೇ ॥ ೩೩ ॥
ಬ್ರಹ್ಮಹತ್ಯಾದಿಪಾಪಾನಿ ಸರ್ವಸ್ತೇಯಕೃತಾನಿ ಚ ।
ಪರದಾರಪ್ರಸಂಗಾದಿ ಅಭಕ್ಷ್ಯಭಕ್ಷಣಾದಿ ವೈ ॥ ೩೪ ॥
ಅಗಮ್ಯಾಗಮನಾದ್ಯಾನಿ ಅಸ್ಪರ್ಶಸ್ಪರ್ಶನಾದಿ ಚ ।
ಭಸ್ಮೀಭವಂತಿ ಲೋಕಾನಾಂ ಧರ್ಮಾರಣ್ಯಾವಗಾಹನಾತ್ ॥ ೩೫ ॥
ಬ್ರಹ್ಮಘ್ನಶ್ಚ ಕೃತಘ್ನಶ್ಚ ಬಾಲಘ್ನೋಽನೃತಭಾಷಣಃ ।
ಸ್ತ್ರೀಗೋಘ್ನಶ್ಚೈವ ಗ್ರಾಮಘ್ನೋ ಧರ್ಮಾರಣ್ಯೇ ವಿಮುಚ್ಯತೇ ॥ ೩೬ ॥

---

ಗಳನ್ನು ನೀಗಿಸುವುವು. ಹಿಂದೆ ಬ್ರಹ್ಮ ವಿಷ್ಣು ಮಹೇಶ್ವರರಿಂದ ಸ್ಥಾಪಿತವಾದ ಧರ್ಮಾರಣ್ಯವು ತೀರ್ಥಗಳಲ್ಲೆಲ್ಲ ಉತ್ತಮತೀರ್ಥವೆನಿಸುವುದು. ಸುಖಾನುಭವ ಮತ್ತು ಮೋಕ್ಷವನ್ನೀಯುವ ಧರ್ಮಾರಣ್ಯಕ್ಕಿಂತ ಉತ್ತಮವಾದ ಅರಣ್ಯ ವಾಗಲಿ, ತೀರ್ಥವಾಗಲಿ ಯಾವುದೂ ಇರುವುದಿಲ್ಲ. ಧರ್ಮಾರಣ್ಯದಲ್ಲಿ ವಾಸ ಮಾಡುವವರನ್ನು ಸ್ವರ್ಗದಲ್ಲಿರುವ ದೇವತೆಗಳೂ ಹೊಗಳುತ್ತಾರೆ.

೩೩. ಸಮಸ್ತ ಪಾಪಗಳನ್ನು ನಾಶಗೊಳಿಸುವ ಧರ್ಮಾರಣ್ಯದಲ್ಲಿ ಕಲಿಯುಗದಲ್ಲಿ ವಾಸಿಸುವ ನರರೇ ಪುಣ್ಯಶಾಲಿಗಳು. ಅವರೆ ಪುಣ್ಯವನ್ನು ಮಾಡಿದವರು.

೩೪–೩೫. ಧರ್ಮಾರಣ್ಯದಲ್ಲಿ ಸ್ನಾನಮಾಡುವುದರಿಂದ ಜನರ ಬ್ರಹ್ಮ ಹತ್ಯಾದಿ ಪಾಪಗಳೂ, ಸಕಲ ವಸ್ತುಗಳನ್ನು ಕದಿಯುವುದರಿಂದುಂಟಾದ ಪಾಪಗಳೂ, ಪರರ ಹೆಂಡತಿಯರ ಸಂಗದಿಂದುಂಟಾದ ಪಾಪವೂ, ಸಂಗಮಾಡ ಬಾರದ ಹೆಂಗಸಿನ ಸಂಗದಿಂದುಂಟಾದ ಪಾಪವೂ, ಅಸ್ಪೃಶ್ಯಸ್ಪರ್ಶದಿಂದುಂಟಾದ ಪಾಪವೂ ಬೂದಿಯಾಗುವುವು.

೩೬. ಬ್ರಹ್ಮಹತ್ಯೆಮಾಡಿದವನೂ, ಕೃತಘ್ನನೂ, ಬಾಲಕರನ್ನು ಕೊಂದ ವನೂ, ಸುಳ್ಳು ಹೇಳುವವನೂ, ಸ್ತ್ರೀ ಮತ್ತು ಗೋವುಗಳನ್ನು ಕೊಂದವನೂ, ಗ್ರಾಮವನ್ನು ಹಾಳುಮಾಡಿದವನೂ ಪಾಪಮುಕ್ತನಾಗುವನು.

CC-0. Jangamwadi Math Collection. Digitized by eGangotri

ನಾತಃ ಪರಂ ಪಾವನಂ ಹಿ ಪಾಪಿನಾಂ ಪ್ರಾಣಿನಾಂ ಭುವಿ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ವಾಂಛಿತಾರ್ಥಪ್ರದಂ ಶುಭಂ ॥ ೩೭ ॥
ಕಾಮಿನಾಂ ಕಾಮದಂ ಕ್ಷೇತ್ರಂ ಯತೀನಾಂ ಮುಕ್ತಿದಾಯಕಂ ।
ಸಿದ್ಧಾನಾಂ ಸಿದ್ಧಿದಂ ಪ್ರೋಕ್ತಂ ಧರ್ಮಾರಣ್ಯಂ ಯುಗೇ ಯುಗೇ॥ ೩೮ ॥

ಬ್ರಹ್ಮೋವಾಚ :—

ವಸಿಷ್ಠವಚನಂ ಶ್ರುತ್ವಾ ರಾಮೋ ಧರ್ಮಭೃತಾಂ ವರಃ ।
ಪರಂ ಹರ್ಷಮನುಪ್ರಾಪ್ಯ ಹೃದಯಾನಂದಕಾರಕಂ ॥ ೩೯ ॥
ಪ್ರೋತ್ಫುಲ್ಲಹೃದಯೋ ರಾಮೋ ರೋಮಾಂಚಿತತನೂರುಹಃ ।
ಗಮನಾಯ ಮತಿಂ ಚಕ್ರೇ ಧರ್ಮಾರಣ್ಯೇ ಶುಭವ್ರತಃ ॥ ೪೦ ॥
ಯಸ್ಮಿನ್ಕೀಟಪತಂಗಾದಿಮಾನುಷಾಃ ಪಶವಸ್ತಥಾ ।
ತ್ರಿರಾತ್ರಸೇವನೇನೈವ ಮುಚ್ಯಂತೇ ಸರ್ವಪಾತಕೈಃ ॥ ೪೧ ॥
ಕುಶಸ್ಥಲೀ ಯಥಾ ಕಾಶೀ ಶೂಲಪಾಣಿಶ್ಚ ಭೈರವಃ ।
ತಥಾ ವೈ ಮುಕ್ತಿದೋ ರಾಮ ಧರ್ಮಾರಣ್ಯಂ ತಥೋತ್ತಮಂ ॥ ೪೨ ॥
ತತೋ ರಾಮೋ ಮಹೇಷ್ವಾಸೋ ಮುದಾ ಪರಮಯಾ ಯುತಃ ।
ಪ್ರಸ್ಥಿತಸ್ತೀರ್ಥಯಾತ್ರಾಯಾಂ ಸೀತಯಾ ಭ್ರಾತೃಭಿಃ ಸಹ ॥ ೪೩ ॥

---

೩೭. ಪಾಪಿಗಳಾದ ಪ್ರಾಣಿಗಳಿಗೆ ಭೂಮಿಯಲ್ಲಿ ಸ್ವರ್ಗ, ಯಶಸ್ಸು, ಆಯುಷ್ಯ ಇಷ್ಟಾರ್ಥಗಳನ್ನು ಕೊಡುವ ಪವಿತ್ರವಾದ ಕ್ಷೇತ್ರವು ಇದಕ್ಕಿಂತ ಮತ್ತೊಂದಿಲ್ಲ.

೩೮. ಧರ್ಮಾರಣ್ಯವು ಪ್ರತಿ ಯುಗದಲ್ಲಿಯೂ ಕಾಮುಕರಿಗೆ ಕಾಮವನ್ನೂ ಯತಿಗಳಿಗೆ ಮೋಕ್ಷವನ್ನೂ, ಸಿದ್ಧಯೋಗಿಗಳಿಗೆ ಇಷ್ಟಸಿದ್ಧಿಯನ್ನೂ ಕೊಡುವ ಕ್ಷೇತ್ರವಾಗಿರುವುದು.

೩೯–೪೦. ಬ್ರಹ್ಮನು ಹೇಳುತ್ತಾನೆ:— ಧರ್ಮಾತ್ಮರಲ್ಲಿ ಶ್ರೇಷ್ಠನಾದ ಶ್ರೀರಾಮನು ವಸಿಷ್ಠರ ಮಾತನ್ನು ಕೇಳಿ ಅತ್ಯಂತ ಸಂತೋಷಗೊಂಡು ಅರಳಿದ ಮನಸ್ಸುಳ್ಳವನಾಗಿಯೂ, ರೋಮಾಂಚಗೊಂಡವನಾಗಿಯೂ ಧರ್ಮಾರಣ್ಯಕ್ಕೆ ಹೋಗಬೇಕೆಂದು ಇಚ್ಛಿಸಿದನು.

೪೧. ಈ ಧರ್ಮಾರಣ್ಯವನ್ನು ಕೀಟ, ಮಿಡತೆ, ಮನುಷ್ಯ, ಪಶುಗಳು ಮೂರು ರಾತ್ರಿ ಸೇವಿಸುವುದರಿಂದ ಸಮಸ್ತ ಪಾಪಮುಕ್ತಗಳಾಗುವುವು.

೪೨. ಕುಶಸ್ಥಲೀ, ಕಾಶೀ, ತ್ರಿಶೂಲಧಾರಿಯಾದ ಮಹೇಶ್ವರರಂತೆ ಧರ್ಮಾರಣ್ಯವು ಮುಕ್ತಿಯನ್ನೀಯುವ ಉತ್ತಮ ಕ್ಷೇತ್ರವಾಗಿರುವುದು.

೪೩. ಬಳಿಕ ರಾಮನು ಅತ್ಯಂತ ಸಂತೋಷದಿಂದ ಸೀತೆ ಮತ್ತು ಸಹೋದರರೊಡನೆ ತೀರ್ಥಯಾತ್ರೆಗೆ ಹೊರಟನು.

CC-0. Jangamwadi Math Collection. Digitized by eGangotri

ಅನುಜಗ್ಮುಸ್ತದಾ ರಾಮಂ ಹನುಮಾಂಶ್ಚ ಕಪೀಶ್ವರಃ ।
ಕೌಶಲ್ಯಾ ಸ ಸುಮಿತ್ರಾ ಚ ಕೈಕೇಯೀ ಚ ಮುದಾನ್ವಿತಾ ॥ ೪೪ ॥
ಲಕ್ಷ್ಮಣೋ ಲಕ್ಷಣೋಪೇತೋ ಭರತಶ್ಚ ಮಹಾಮತಿಃ ।
ಶತ್ರುಘ್ನಃ ಸೈನ್ಯಸಹಿತೋऽಪ್ಯಯೋಧ್ಯಾವಾಸಿನಸ್ತಥಾ ॥ ೪೫ ॥
ಪ್ರಕೃತಯೋ ಸರವ್ಯಾಘ್ರ ಧರ್ಮಾऽರಣ್ಯೇ ವಿನಿರ್ಯಯುಃ ।
ಅನುಜಗ್ಮುಸ್ತದಾ ರಾಮಂ ಮುದಾ ಪರಮಯಾ ಯುತಾಃ ॥ ೪೬ ॥
ತೀರ್ಥಯಾತ್ರಾವಿಧಿಂ ಕರ್ತುಂ ಗೃಹಾತ್ಪ್ರಚಲಿತೋ ನೃಪಃ ।
ವಸಿಷ್ಠಂ ಸ್ವಕುಲಾಚಾರ್ಯಮಿದಮಾಹ ಮಹೀಪತೇ ॥ ೪೭ ॥

ಶ್ರೀರಾಮ ಉವಾಚ:—

ಏತದಾಶ್ಚರ್ಯಮತುಲಂ ಕಿಮಾದಿ ದ್ವಾರಕಾऽಭವತ್ ।
ಕಿಯತ್ಕಾಲಸಮುತ್ಪನ್ನಾ ವಸಿಷ್ಠೇದಂ ವದಸ್ವ ಮೇ ॥ ೪೮ ॥

ವಸಿಷ್ಠ ಉವಾಚ:—

ನ ಜಾನಾಮಿ ಮಹಾರಾಜ ಕಿಯತ್ಕಾಲಾದಭೂದಿದಂ ।
ಲೋಮಶೋ ಜಾಂಬವಾಂಶ್ಚೈವ ಜಾನಾತೀತಿ ಚ ಕಾರಣಂ ॥ ೪೯ ॥
ಶರೀರೇ ಯತ್ಕೃತಂ ಪಾಪಂ ನಾನಾಜನ್ಮಾಂತರೇಷ್ವಪಿ ।
ಪ್ರಾಯಶ್ಚಿತ್ತಂ ಹಿ ಸರ್ವೇಷಾಮೇತತ್ಕ್ಷೇತ್ರಂ ಪರಂ ಸ್ಮೃತಂ ॥ ೫೦ ॥

---

೪೪–೪೬. ಆಗ ರಾಮನನ್ನು ಹನುಮಂತ, ಸುಗ್ರೀವ, ಕೌಸಲ್ಯಾ, ಸುಮಿತ್ರಾ, ಕೈಕೇಯೀ, ಲಕ್ಷ್ಮಣ, ಮಹಾನುಭಾವನಾದ ಭರತ, ಸೈನ್ಯಸಹಿತನಾದ ಶತ್ರುಘ್ನ, ಅಯೋಧ್ಯಾವಾಸಿಗಳಾದ ಪ್ರಜೆಗಳು ಇವರೆಲ್ಲರೂ ಬಹು ಸಂತೋಷದಿಂದ ಹಿಂಬಾಲಿಸಿದರು.

೪೭. ತೀರ್ಥಯಾತ್ರೆಗಾಗಿ ಮನೆಯಿಂದ ಹೊರಟ ರಾಮನು ತನ್ನ ಕುಲ ಪುರೋಹಿತನಾದ ವಸಿಷ್ಠನನ್ನು ಕುರಿತು ಇಂತೆಂದನು.

೪೮. ಶ್ರೀರಾಮನು ಹೇಳುತ್ತಾನೆ:—ವಸಿಷ್ಠರೆ! ದ್ವಾರಕೆಯು ಮೊದಲು ಹೇಗಾಯಿತು? ಅದು ಹುಟ್ಟಿ ಎಷ್ಟು ಕಾಲವಾಯಿತು? ಈ ವಿಷಯದಲ್ಲಿ ನನಗೆ ಬಹಳ ಆಶ್ಚರ್ಯವಾಗಿದೆ. ಇದನ್ನು ಹೇಳಿರಿ.

೪೯. ವಸಿಷ್ಠನು ಹೇಳುತ್ತಾನೆ:—ಮಹಾರಾಜ! ಈ ದ್ವಾರಕೆಯು ಎಷ್ಟು ಕಾಲದಿಂದಿದೆ ಎಂಬುದನ್ನು ನಾನರಿಯೆ. ಇದನ್ನು ಲೋಮಶನೂ ಜಾಂಬವಂತನೂ ತಿಳಿದಿದ್ದಾರೆ.

೫೦. ಸಮಸ್ತಜನರಿಗೂ ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತಮಾಡಿಕೊಳ್ಳಲು ಇದು ಉತ್ತಮ ಕ್ಷೇತ್ರವಾಗಿದೆ.

CC-0. Jangamwadi Math Collection. Digitized by eGangotri

ಶ್ರುತ್ವೇತಿ ವಚನಂ ತಸ್ಯ ರಾಮಃ ಜ್ಞಾನವತಾಂ ವರಃ ।
ಗಂತುಂ ಕೃತಮತಿಸ್ತೀರ್ಥಂ ಯಾತ್ರಾವಿಧಿಮಥಾಚರತ್ ॥ ೫೧ ॥
ವಸಿಷ್ಠಂ ಚಾಽಗ್ರತಃ ಕೃತ್ವಾ ಮಹಾಮಾಂಡಲಿಕೈರ್ನೃಪೈಃ ।
ಪುನಶ್ಚರವಿಧಿಂ ಕೃತ್ವಾ ಪ್ರಸ್ಥಿತಶ್ಚೋತ್ತರಾಂ ದಿಶಂ ॥ ೫೨ ॥
ವಸಿಷ್ಠಂ ಚಾಽಗ್ರತಃ ಕೃತ್ವಾ ಪ್ರತಸ್ಥೇ ಪಶ್ಚಿಮಾಂ ದಿಶಂ ।
ಗ್ರಾಮಾದ್ಗ್ರಾಮಮತಿಕ್ರಮ್ಯ ದೇಶಾದ್ದೇಶಂ ವನಾದ್ವನಂ ॥ ೫೩ ॥
ವಿಮುಚ್ಯ ನಿರ್ಯಯೌ ರಾಮಃ ಸಸೈನ್ಯಃ ಸಪರಿಚ್ಛದಃ ।
ಗಜವಾಜಿಸಹಸ್ರೌಘೈ ರಥೈರ್ಯಾನೈಶ್ಚ ಕೋಟಿಭಿಃ ॥ ೫೪ ॥
ಶಿಬಿಕಾಭಿಶ್ಚಾಽಸಂಖ್ಯಾಭಿಃ ಪ್ರಯಯೌ ರಾಘವಸ್ತದಾ ।
ಗಜಾರೂಢಃ ಪ್ರಪಶ್ಯಂಶ್ಚ ದೇಶಾನ್ನಿವಿಧಸೌಹೃದಾನ್ ॥ ೫೫ ॥
ಶ್ವೇತಾತಪತ್ರಂ ವಿಧೃತ್ಯ ಚಾಮರೇಣ ಶುಭೇನ ಚ ।
ವೀಜಿತಶ್ಚ ಜನೌಘೇನ ರಾಮಸ್ತತ್ರ ಸಮಭ್ಯಗಾತ್ ॥ ೫೬ ॥
ವಾದಿತ್ರಾಣಾಂ ಸ್ವನೈರ್ಘೋರೈರ್ನೃತ್ಯಗೀತಪುರಸ್ಸರೈಃ ।
ಸ್ತೂಯಮಾನೋಽಪಿ ಸೂತೈಶ್ಚ ಯಯೌ ರಾಮೋ ಮುದಾನ್ವಿತಃ॥ ೫೭ ॥
ದಶಮೇಽಹನಿ ಸಂಪ್ರಾಪ್ತಂ ಧರ್ಮಾರಣ್ಯಮನುತ್ತಮಂ ।
ಅದೂರೇ ಹಿ ತತೋ ರಾಮೋ ದೃಷ್ಟ್ವಾ ಮಾಂಡಲಿಕಂ ಪುರಂ ॥ ೫೮ ॥

---

೫೧. ಜ್ಞಾನಿವರೇಣ್ಯನಾದ ರಾಮನು ವಸಿಷ್ಠನ ಈ ಮಾತನ್ನು ಕೇಳಿ ಆ ತೀರ್ಥಕ್ಕೆ ಹೋಗಲು ಪ್ರಯಾಣವಿಧಿಯನ್ನಾಚರಿಸಿದನು.

೫೨. ವಸಿಷ್ಠನನ್ನು ಮುಂದಿರಿಸಿಕೊಂಡು ಸಾಮಂತರಾಜರೊಡನೆ ಪ್ರಸ್ಥಾನ ವಿಧಿಯನ್ನಾಚರಿಸಿ ಉತ್ತರದಿಕ್ಕಿಗೆ ಪ್ರಯಾಣಮಾಡಿದನು.

೫೩–೫೬. ಹಾಗೆಯೇ ವಸಿಷ್ಠನನ್ನು ಮುಂದಿರಿಸಿಕೊಂಡು ಪಶ್ಚಿಮದಿಕ್ಕಿಗೆ ಪ್ರಯಾಣಬೆಳೆಸಿ ಸೈನ್ಯ, ಆನೆ, ಕುದುರೆ, ರಥ, ಅನೇಕ ವಾಹನ, ಪಲ್ಲಕ್ಕಿ ಮೊದಲಾದ ಉಪಕರಣಗಳೊಡನೆ ಗ್ರಾಮದಿಂದ ಗ್ರಾಮವನ್ನೂ, ದೇಶದಿಂದ ದೇಶವನ್ನೂ, ಕಾಡಿನಿಂದ ಕಾಡನ್ನೂ ದಾಟಿ ಮುಂದೆ ಸಾಗಿದನು. ಆನೆಯನ್ನೇರಿ ನಾನಾ ಸ್ನೇಹಿತರುಳ್ಳ ದೇಶಗಳನ್ನು ನೋಡುತ್ತ ಶ್ವೇತಚ್ಛತ್ರಧಾರಿಯಾಗಿ ಜನರಿಂದ ಚಾಮರ ಬೀಸಿಕೊಳ್ಳಲ್ಪಡುತ್ತ ಅಲ್ಲಿಗೆ ಬಂದನು.

೫೭. ಅವನು ಪ್ರಯಾಣಮಾಡುತ್ತಿರುವಾಗ ವಾದ್ಯಗಳು ಮೊಳಗಿದುವು. ನೃತ್ಯ, ಗಾನಗಳು ನಡೆದುವು. ಹೊಗಳುಭಟ್ಟರು ಹೊಗಳಿದರು.

೫೮–೬೨. ಹತ್ತನೆಯ ದಿನ ರಾಮನು ಧರ್ಮಾರಣ್ಯವನ್ನು ಸೇರಿದನು. ಹತ್ತಿರದಲ್ಲಿ ಮಾಂಡಲಿಕ ನಗರವನ್ನು ಕಂಡು ಅಲ್ಲಿ ಆ ರಾತ್ರಿ ಸೈನ್ಯದೊಡನೆ ತಂಗಿದನು. ಧರ್ಮಾರಣ್ಯವನ್ನು ನಿರ್ಜನವೂ, ಭಯಂಕರವೂ, ವ್ಯಾಘ್ರ ಸಿಂಹ

CC-0. Jangamwadi Math Collection. Digitized by eGangotri

ತತ್ರ ಸ್ಥಿತ್ವಾ ಸಸೈನ್ಯಸ್ತು ಉವಾಸ ನಿಶಿ ತಾಂ ಪುರೀಂ ।
ಶ್ರುತ್ವಾ ತು ನಿರ್ಜನಂ ಕ್ಷೇತ್ರಮುದ್ವಸಂ ಚ ಭಯಾನಕಂ ॥ ೫೯ ॥
ವ್ಯಾಘ್ರಸಿಂಹಾಕುಲಂ ತತ್ರ ಯಕ್ಷರಾಕ್ಷಸಸೇವಿತಂ ।
ಶ್ರುತ್ವಾ ಜನಮುಖಾದ್ರಾಮೋ ಧರ್ಮಾರಣ್ಯಮರಣ್ಯಕಂ ।
ತಚ್ಛ್ರುತ್ವಾ ರಾಮದೇವಸ್ತು ನ ಚಿಂತಾ ಕ್ರಿಯತಾಮಿತಿ ॥ ೬೦ ॥
ತತ್ರಸ್ಥಾನ್ವಣಿಜಃ ಶೂರಾನ್ದಕ್ಷಾನ್ಸ್ವವ್ಯವಸಾಯಕೇ ॥ ೬೧ ॥
ಸಮರ್ಥಾನ್ಹಿ ಮಹಾಕಾಯಾನ್ಮಹಾಬಲಪರಾಕ್ರಮಾನ್ ।
ಸಮಾಹೂಯ ತದಾ ಕಾಲೇ ವಾಕ್ಯಮೇತದಥಾಽಬ್ರವೀತ್ ॥ ೬೨ ॥
ಶಿಬಿಕಾಂ ಸುಸುವರ್ಣಾಂ ಮೇ ಶೀಘ್ರಂ ವಾಹಯತಾಽಚಿರಂ ।
ಯಥಾ ಕ್ಷಣೇನ ಚೈಕೇನ ಧರ್ಮಾರಣ್ಯಂ ವ್ರಜಾಮ್ಯಹಂ ॥ ೬೩ ॥
ತತ್ರ ಸ್ನಾತ್ವಾ ಚ ಪೀತ್ವಾ ಚ ಸರ್ವಪಾಪಾತ್ಪ್ರಮುಚ್ಯತೇ ।
ಏವಂ ತೇ ವಣಿಜಃ ಸರ್ವೇ ರಾಮೇಣ ಪ್ರೇರಿತಾಸ್ತದಾ ॥ ೬೪ ॥
ತಥೇತ್ಯುಕ್ತ್ವಾ ಚ ತೇ ಸರ್ವೇ ಊಹುಸ್ತಚ್ಛಿಬಿಕಾಂ ತದಾ ।
ಕ್ಷೇತ್ರಮಧ್ಯೇ ಯದಾ ರಾಮಃ ಪ್ರವಿಷ್ಟಃ ಸಹ ಸೈನಿಕಃ ॥ ೬೫ ॥
ತದ್ಯಾನಸ್ಯ ಗತಿರ್ಮಂದಾ ಸಂಜಾತಾ ಕಿಲ ಭಾರತ ।
ಮಂದಶಬ್ದಾನಿ ವಾದ್ಯಾನಿ ಮಾತಂಗಾ ಮಂದಗಾಮಿನಃ ॥ ೬೬ ॥
ಹಯಾಶ್ಚ ತಾದೃಶಾ ಜಾತಾ ರಾಮೋ ವಿಸ್ಮಯಮಾಗತಃ ।
ಗುರುಂ ಪಪ್ರಚ್ಛ ವಿನಯಾದ್ವಸಿಷ್ಠಂ ಮುನಿಪುಂಗವಂ ॥ ೬೭ ॥

---

ಗಳುಳ್ಳದೂ, ಯಕ್ಷರಾಕ್ಷಸರಿಂದ ಸೇವಿಸಲ್ಪಟ್ಟದೂ ಆಗಿರುವುದನ್ನಾಗಿ ಜನರಿಂದ ತಿಳಿದು ಅವರಿಗೆ ಚಿಂತಿಸಬೇಡಿರೆಂದು ಹೇಳಿ ರಾಮನು ಅಲ್ಲಿರುವ ತಮ್ಮ ಕಾರ್ಯದಲ್ಲಿ ಕುಶಲರಾದ ವೈಶ್ಯರನ್ನು ಕರೆದು ಅವರನ್ನು ಕುರಿತು ಹೀಗೆಂದನು.

೬೩–೬೯. "ವರ್ತಕರೆ! ಸುವರ್ಣದ ನನ್ನ ಪಲ್ಲಕ್ಕಿಯನ್ನು ಹೊತ್ತುಕೊಳ್ಳಿರಿ. ಆದರಿಂದ ಕೂಡಲೆ ನಾನು ಧರ್ಮಾರಣ್ಯವನ್ನು ಸೇರಿ ಅಲ್ಲಿ ಸ್ನಾನಪಾನಮಾಡಿ ಸಮಸ್ತ ಪಾಪಮುಕ್ತನಾಗುವೆನು" ಎಂದು ರಾಮನು ವೈಶ್ಯರನ್ನು ಪ್ರೇರಿಸಲು ಅವರದನ್ನೊಪ್ಪಿ ಪಲ್ಲಕ್ಕಿಯನ್ನು ಹೊತ್ತರು. ರಾಮನು ಸೈನ್ಯದೊಡನೆ ಆ ಕ್ಷೇತ್ರದ ಮಧ್ಯವನ್ನು ಪ್ರವೇಶಿಸಿದ ಕೂಡಲೆ ಆ ವಾಹನದ ಗತಿಯು ಮೆಲ್ಲಗಾಯಿತು. ವಾದ್ಯಗಳ ದನಿಯು ಕುಗ್ಗಿತು. ಆನೆಗಳೂ, ಕುದುರೆಗಳೂ ಮೆಲ್ಲಗೆ ನಡೆದುವು. ಅದನ್ನು ನೋಡಿ ರಾಮನು ಆಶ್ಚರ್ಯಗೊಂಡು ಗುರುಗಳಾದ ವಸಿಷ್ಠರನ್ನು ಕುರಿತು, "ಗುರುಗಳೆ! ವಾಹನಾದಿಗಳು ಏತಕ್ಕೆ ಮಂದಗಾಮಿ

CC-0. Jangamwadi Math Collection. Digitized by eGangotri

ಕಿಮೇತನ್ಮಂದಗತಯಶ್ಚಿತ್ರಂ ಹೃದಿ ಮುನೀಶ್ವರ ।
ತ್ರಿಕಾಲಜ್ಞೋ ಮುನಿಃ ಪ್ರಾಹ ಧರ್ಮಕ್ಷೇತ್ರಮುಪಾಗತಂ ॥ ೬೮ ॥
ತೀರ್ಥೇ ಪುರಾತನೇ ರಾಮ ಪಾದಚಾರೇಣ ಗಮ್ಯತೇ ।
ಏವಂ ಕೃತೇ ತತಃ ಪಶ್ಚಾತ್ಸೈನ್ಯಸೌಖ್ಯಂ ಭವಿಷ್ಯತಿ ॥ ೬೯ ॥
ಪಾದಚಾರೀ ತತೋ ರಾಮಃ ಸೈನ್ಯೇನ ಸಹ ಸಂಯುತಃ ।
ಮಧುವಾಸನಕೇ ಗ್ರಾಮೇ ಪ್ರಾಪ್ತಃ ಪರಮಭಾವನಃ ॥ ೭೦ ॥
ಗುರುಣಾ ಚೋಕ್ತಮಾರ್ಗೇಣ ಮಾತೃಣಾಂ ಪೂಜನಂ ಕೃತಂ ।
ನಾನೋಪಹಾರೈರ್ವಿವಿಧೈಃ ಪ್ರತಿಷ್ಠಾವಿಧಿಪೂರ್ವಕಂ ॥ ೭೧ ॥
ತತೋ ರಾಮೋ ಹರಿಕ್ಷೇತ್ರಂ ಸುವರ್ಣಾದಕ್ಷಿಣೇ ತಟೇ ।
ನಿರೀಕ್ಷ್ಯ ಯಜ್ಞಯೋಗ್ಯಾಶ್ಚ ಭೂಮೀರ್ವೈ ಬಹುಶಸ್ತಥಾ ॥ ೭೨ ॥
ಕೃತಕೃತ್ಯಂ ತದಾತ್ಮಾನಂ ಮೇನೇ ರಾಮೋ ರಘೂದ್ವಹಃ ।
ಧರ್ಮಸ್ಥಾನಂ ನಿರೀಕ್ಷ್ಯಾಥ ಸುವರ್ಣಾಕ್ಸ್ಯೋತ್ತರೇ ತಟೇ ॥ ೭೩ ॥
ಸೈನ್ಯಸಂಘಂ ಸಮುತ್ತೀರ್ಯ ಬಭ್ರಾಮ ಕ್ಷೇತ್ರಮಧ್ಯತಃ ।
ತತ್ರ ತೀರ್ಥೇಷು ಸರ್ವೇಷು ದೇವತಾಯತನೇಷು ಚ ॥ ೭೪ ॥
ಯಥೋಕ್ತಾನಿ ಚ ಕರ್ಮಾಣಿ ರಾಮಶ್ಚಕ್ರೇ ವಿಧಾನತಃ ।
ಶ್ರಾದ್ಧಾನಿ ವಿಧಿವಚ್ಚಕ್ರೇ ಶ್ರದ್ಧಯಾ ಪರಯಾ ಯುತಃ ॥ ೭೫ ॥

---

ಗಳಾದುವು?" ಎಂದು ಕೇಳಿದನು. ಆಗ ತ್ರಿಕಾಲವನ್ನರಿತ ಮುನಿಗಳು "ರಾಮ! ಇಗೊ, ಧರ್ಮಕ್ಷೇತ್ರವು ಸಮೀಪಿಸಿದೆ. ಈ ಪುರಾತನ ಕ್ಷೇತ್ರದಲ್ಲಿ ಪಾದಚಾರಿಗಳಾದರೆ ಸೈನ್ಯಕ್ಕೆ ಸುಖವಾಗುವುದು" ಎಂದರು.

೭೦. ಬಳಿಕ ರಾಮನು ಅವರ ಮಾತಿನಂತೆ ಸೈನ್ಯದೊಡನೆ ಕಾಲ್ನಡಿಗೆಯಿಂದ ಮಧುವಾಸನಕವೆಂಬ ಗ್ರಾಮವನ್ನು ಸೇರಿದನು.

೭೧. ರಾಮನು ಗುರುಗಳು ಹೇಳಿದಂತೆ ಶ್ರೀ ಮಾತ್ರಾದಿಗಳನ್ನು ಪ್ರತಿಷ್ಠಾಪಿಸಿ ನಾನಾವಿಧ ಪೂಜಾ ಸಾಮಗ್ರಿಗಳಿಂದ ಅವರನ್ನು ಪೂಜಿಸಿದನು.

೭೨-೭೪. ತರುವಾಯ ಅವನು ಸುವರ್ಣಾನದಿಯ ದಕ್ಷಿಣ ದಡದಲ್ಲಿ ಹರಿಕ್ಷೇತ್ರವನ್ನೂ, ಯಜ್ಞಯೋಗ್ಯವಾದ ಅನೇಕ ಭೂಮಿಗಳನ್ನೂ ಕಂಡು ನಾನು ಧನ್ಯನಾದೆನೆಂದು ತಿಳಿದನು. ಅನಂತರ ಸುವರ್ಣಾನದಿಯ ಉತ್ತರ ದಡದಲ್ಲಿ ಧರ್ಮಕ್ಷೇತ್ರವನ್ನು ಕಂಡು ಸೈನ್ಯವನ್ನು ನಿಲ್ಲಿಸಿ ಕ್ಷೇತ್ರಮಧ್ಯದಲ್ಲಿರುವ ಸಕಲ ತೀರ್ಥಗಳಲ್ಲಿಯೂ, ದೇವಾಲಯಗಳಲ್ಲಿಯೂ ಸಂಚರಿಸಿದನು.

೭೫. ಅಲ್ಲಿ ವಿಧಿಯಂತೆ ಸಕಲ ಕಾರ್ಯಗಳನ್ನೂ ಶ್ರಾದ್ಧಗಳನ್ನೂ ಅತಿ ಶ್ರದ್ಧೆಯಿಂದ ನೆರವೇರಿಸಿದನು.

CC-0. Jangamwadi Math Collection. Digitized by eGangotri

ಸ್ಥಾಪಯಾಮಾಸ ರಾಮೇಶಂ ತಥಾ ಕಾಮೇಶ್ವರಂ ಪುನಃ ।
ಸ್ಥಾನಾದ್ವಾಯುಪ್ರದೇಶೇ ತು ಸುವರ್ಣೋಭಯತಸ್ತಟೇ ॥ ೭೬ ॥
ಕೃತ್ವೈವಂ ಕೃತಕೃತ್ಯೋಽಭೂದ್ರಾಮೋ ದಶರಥಾತ್ಮಜಃ ।
ಕೃತ್ವಾ ಸರ್ವವಿಧಿಂ ಚೈವ ಸಭಾಯಾಂ ಸಮುಪಾವಿಶತ್ ॥ ೭೭ ॥
ತಾಂ ನಿಶಾಂ ಸ ನದೀತೀರೇ ಸುಷ್ವಾಪ ರಘುನಂದನಃ ।
ತತೋಽರ್ಧರಾತ್ರೇ ಸಂಜಾತೇ ರಾಮೋ ರಾಜೀವಲೋಚನಃ ॥ ೭೮ ॥
ಜಾಗೃತಸ್ತು ತದಾ ಕಾಲ ಏಕಾಕೀ ಧರ್ಮವತ್ಸಲಃ ।
ಅಶ್ರೌಷೀಚ್ಚ ಕ್ಷಣೇ ತಸ್ಮಿನ್ರಾಮೋ ನಾರೀವಿರೋದನಂ ॥ ೭೯ ॥
ನಿಶಾಯಾಂ ಕರುಣೈರ್ವಾಕ್ಯೈ ರುದಂತೀಂ ಕುರರೀಮಿವ ।
ಚಾರೈರ್ವಿಲೋಕಯಾಮಾಸ ರಾಮಸ್ತ್ವಾಮತಿಸಂಭ್ರಮಾತ್ ॥ ೮೦ ॥
ದೃಷ್ಟ್ವಾಽತಿವಿಹ್ವಲಾಂ ನಾರೀಂ ಕ್ರಂದಂತೀಂ ಕರುಣೈಃ ಸ್ವರೈಃ ।
ಪೃಷ್ಟ್ವಾ ಸಾ ದುಃಖಿತಾ ನಾರೀ ರಾಮದೂತೈಸ್ತದಾಽನಘ ॥ ೮೧ ॥

ದೂತಾ ಊಚುಃ :—

ಕಾಸಿ ತ್ವಂ ಸುಭಗೇ ನಾರಿ ದೇವೀ ವಾ ದಾನವೀ ನು ಕಿಂ ।
ಕೇನ ವಾ ತ್ರಾಸಿತಾಸಿ ತ್ವಂ ಮುಷ್ಟಂ ಕೇನ ಧನಂ ತವ ॥ ೮೨ ॥
ವಿಕಲಾ ದಾರುಣಾನ್ಶಬ್ದಾನುದ್ಗಿರಂತೀ ಮುಹುರ್ಮುಹುಃ ।
ಕಥಯಸ್ವ ಯಥಾ ತಥ್ಯಂ ರಾಮೋ ರಾಜಾಽಭಿಪೃಚ್ಛತಿ ॥ ೮೩ ॥

---

೭೬. ಸುವರ್ಣಾನದಿಯ ಎರಡು ದಡಗಳ ವಾಯುವ್ಯ ದಿಕ್ಕಿನಲ್ಲಿ ರಾಮೇಶ್ವರನನ್ನೂ ಕಾಮೇಶ್ವರನನ್ನೂ ಪ್ರತಿಷ್ಠೆಮಾಡಿದನು.

೭೭–೭೯. ಹೀಗೆ ರಾಮನು ಸಕಲ ಕಾರ್ಯಗಳನ್ನು ಪೂರೈಸಿ ಸಭೆಯಲ್ಲಿ ಕುಳಿತುಕೊಂಡನು. ಆ ರಾತ್ರಿ ಅವನು ನದೀದಡದಲ್ಲಿ ಮಲಗಿ ಅರ್ಧರಾತ್ರಿ ವೇಳೆಯಲ್ಲಿ ಎಚ್ಚರಗೊಂಡು ಒಬ್ಬ ಹೆಂಗಸು ಅಳುವ ಶಬ್ದವನ್ನು ಕೇಳಿದನು.

೮೦. ರಾತ್ರಿಯಲ್ಲಿ ದೀನನುಡಿಯಿಂದ ಕುರರಿಯೆಂಬ ಪಕ್ಷಿಯಂತೆ ಗೋಳಾಡುತ್ತಿರುವ ಅವಳನ್ನು ಅತಿ ವೇಗವಾಗಿ ದೂತರಿಂದ ಹುಡುಕಿಸಿದನು.

೮೧. ಕರುಣಧ್ವನಿಯಿಂದ ಗೋಳಾಡುತ್ತಿರುವ ಅತ್ಯಂತ ವ್ಯಥೆಗೊಂಡ ಅವಳನ್ನು ನೋಡಿ ರಾಮದೂತರು ಹೀಗೆ ಕೇಳಿದರು.

೮೨. ದೂತರು ಹೇಳುತ್ತಾರೆ:—ಸುಂದರಿಯೆ! ನೀನಾರು? ದೇವಸ್ತ್ರೀಯೊ? ದಾನವಿಯೊ? ಯಾರಿಂದ ಭಯಗೊಂಡಿರುವೆ? ನಿನ್ನ ಧನವನ್ನು ಯಾರು ಕದ್ದರು?

೮೩. ರಾಮನು ಕೇಳುತ್ತಿರುವನು. ಭಯಂಕರವಾಗಿ ಗೋಳಾಡುತ್ತಿರುವ ನೀನು ನಿಜ ವಿಷಯವನ್ನು ತಿಳಿಸು.

CC-0. Jangamwadi Math Collection. Digitized by eGangotri

ತಯೋಕ್ತಂ ಸ್ವಾಮಿನಂ ದೂತಾಃ ಪ್ರೇಷಯಧ್ವಂ ಮಮಾಂತಿಕಂ ।
ಯಥಾಽಹಂ ಮಾನಸಂ ದುಃಖಂ ಶಾಂತ್ಯೈ ತಸ್ಮೈ ನಿವೇದಯೇ ॥ ೮೪ ॥
ತಥೇತ್ಯುಕ್ತ್ವಾ ತತೋ ದೂತಾ ರಾಮಮಾಗತ್ಯ ಚಾಬ್ರುವನ್ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ದೂತಾಗಮನಂ" ನಾಮ್ಯೈಕತ್ರಿಂಶೋಽಧ್ಯಾಯಃ

---

೮೪. ದೂತರೆ! ಆ ರಾಮನನ್ನು ನನ್ನ ಸಮೀಪಕ್ಕೆ ಕಳುಹಿಸಿರಿ. ನಾನು ನನ್ನ ಮನಸ್ಸಿನ ದುಃಖವನ್ನು ಶಾಂತಿಗಾಗಿ ಅವನಿಗೆ ತಿಳಿಸುವೆನು.

೮೫. ಬಳಿಕ ದೂತರು ಅವಳ ಮಾತನ್ನು ಒಪ್ಪಿ ಬಂದು ರಾಮನಿಗೆ ಹೇಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ದೂತಾಗಮನ" ವೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ದ್ವಾತ್ರಿಂಶೋಽಧ್ಯಾಯಃ

## ಬ್ರಹ್ಮನಾರದಸಂವಾದೇ ಸತ್ಯಮಂದಿರಸ್ಥಾಪನವರ್ಣನಂ

ವ್ಯಾಸ ಉವಾಚ :—

ತತಶ್ಚ ರಾಮದೂತಾಸ್ತೇ ನತ್ವಾ ರಾಮಮಥಾಬ್ರುವನ್ ।
ರಾಮ ರಾಮ ಮಹಾಬಾಹೋ ವರನಾರೀಂ ಶುಭಾನನಾಂ ॥ ೧ ॥
ಸುವಸ್ತ್ರಭೂಷಾಭರಣಾಂ ಮೃದುವಾಕ್ಯಪರಾಯಣಾಂ ।
ಏಕಾಕಿನೀಂ ಕ್ರಂದಮಾನಾಂ ದೃಷ್ಟ್ವಾ ತಾಂ ವಿಸ್ಮಿತಾ ವಯಂ ॥ ೨ ॥
ಸಮೀಪವರ್ತಿನೋ ಭೂತ್ವಾ ಪೃಷ್ಟ್ವಾ ಸಾ ಸುರಸುಂದರೀ ।
ಕಾ ತ್ವಂ ದೇವಿ ವರಾರೋಹೇ ದೇವೀ ವಾ ದಾನವೀ ನು ಕಿಂ ॥ ೩ ॥
ರಾಮಃ ಪೃಚ್ಛತಿ ದೇವಿ ತ್ವಾಂ ಬ್ರೂಹಿ ಸರ್ವಂ ಯಥಾತಥಂ ।
ತಚ್ಛ್ರುತ್ವಾ ವಚನಂ ರಾಮ ಸೋವಾಚ ಮಧುರಂ ವಚಃ ॥ ೪ ॥
ರಾಮಂ ಪ್ರೇಷಯತ ಭದ್ರಂ ವೋ ಮಮ ದುಃಖಾಪಹಂ ಪರಂ ॥ ೫ ॥
ತತೋ ರಾಮಸ್ತದಾಕರ್ಣ್ಯ ಸಂಭ್ರಮಾತ್ತ್ವರಿತೋ ಯಯೌ ।
ದೃಷ್ಟ್ವಾ ತಾಂ ದುಃಖಸಂತಪ್ತಾಂ ಸ್ವಯಂ ದುಃಖಮವಾಪ ಸಃ ।
ಉವಾಚ ವಚನಂ ರಾಮಃ ಕೃತಾಂಜಲಿಪುಟಸ್ತದಾ ॥ ೬ ॥

---

### ಕನ್ನಡದ ಅನುವಾದ

#### ಸತ್ಯಮಂದಿರಸ್ಥಾಪನ ವರ್ಣನ.

೧–೨. ಬಳಿಕ ಆ ದೂತರು ರಾಮನನ್ನು ನಮಸ್ಕರಿಸಿ ಹೀಗೆ ನುಡಿದರು. "ಸ್ವಾಮಿ! ಸುಂದರಿಯೂ, ಒಳ್ಳೆ ಬಟ್ಟೆ ಒಡವೆಗಳಿಂದಲಂಕೃತಳೂ, ಮೃದುವಾಗಿ ಮಾತಾಡುವವಳೂ, ಒಬ್ಬಂಟಿಗಳೂ ಆಗಿರುವ ಅಳುತ್ತಿರುವ ಒಬ್ಬ ಹೆಂಗಸನ್ನು ನೋಡಿ ನಾವು ಆಶ್ಚರ್ಯಗೊಂಡೆವು.

೩–೫. ಅವಳ ಹತ್ತಿರ ಹೋಗಿ "ಅಂಗನೆಯೆ! ನೀನಾರು, ದೇವತಾ ಸ್ತ್ರೀಯೊ? ದಾನವಸ್ತ್ರೀಯೊ? ರಾಮನು ನಿನ್ನನ್ನು ಕೇಳುತ್ತಾನೆ. ಇದ್ದಂತೆಯೇ ಎಲ್ಲವನ್ನೂ ಹೇಳು" ಎಂದು ಕೇಳಲು ಅವಳು ನಮ್ಮ ಮಾತನ್ನು ಕೇಳಿ ಮಧುರವಾಗಿ "ನನ್ನ ದುಃಖವನ್ನು ಪರಿಹರಿಸುವ ರಾಮನನ್ನು ಕಳುಹಿಸಿರಿ" ಎಂದಳು.

೬. ಅದನ್ನು ಕೇಳಿ ರಾಮನು ತ್ವರೆಯಿಂದ ಅಲ್ಲಿಗೆ ಹೋಗಿ ದುಃಖಗೊಂಡ ಅವಳನ್ನು ಕಂಡು ತಾನೂ ವ್ಯಥೆಯಿಂದ ಕೈಮುಗಿದುಕೊಂಡು ಹೀಗೆಂದನು.

CC-0. Jangamwadi Math Collection. Digitized by eGangotri

ಶ್ರೀರಾಮ ಉವಾಚ :—

ಕಾ ತ್ವಂ ಶುಭೇ ಕಸ್ಯ ಪರಿಗ್ರಹೋ ವಾ
ಕೇನಾಽವಧೂತಾ ವಿಜನೇ ನಿರಸ್ತಾ ।
ಮುಷ್ಟಂ ಧನಂ ಕೇನ ಚ ತಾವಕೀನಂ
ಆಚಕ್ಷ್ವ ಮಾತಃ ಸಕಲಂ ಮಮಾಽಗ್ರೇ ॥ ೭ ॥

ಇತ್ಯುಕ್ತ್ವಾ ಚಾಽತಿದುಃಖಾರ್ತೋಽ ರಾಮೋ ಮತಿಮತಾಂ ವರಃ ।
ಪ್ರಣಾಮಂ ದಂಡವಚ್ಚಕ್ರೇ ಚಕ್ರಪಾಣಿರಿವಾಽಪರಃ ॥ ೮ ॥
ತಯಾಽಭಿವಂದಿತೋ ರಾಮಃ ಪ್ರಣಮ್ಯ ಚ ಪುನಃ ಪುನಃ ।
ತುಷ್ಟಯಾ ಪರಯಾ ಪ್ರೀತ್ಯಾ ಸ್ತುತೋ ಮಧುರಯಾ ಗಿರಾ ॥ ೯ ॥
ಪರಮಾತ್ಮನ್ಪರೇಶಾನ ದುಃಖಹಾರಿನ್ಸನಾತನ ।
ಯದರ್ಥಮವತಾರಸ್ತೇ ತಚ್ಚ ಕಾರ್ಯಂ ತ್ವಯಾ ಕೃತಂ ॥ ೧೦ ॥
ರಾವಣಃ ಕುಂಭಕರ್ಣಶ್ಚ ಶಕ್ರಜಿತ್ಪ್ರಮುಖಾಸ್ತಥಾ ।
ಖರದೂಷಣತ್ರಿಶಿರೋಮಾರೀಚಾಽಕ್ಷಕುಮಾರಕಾಃ ॥ ೧೧ ॥
ಅಸಂಖ್ಯಾ ನಿರ್ಜಿತಾ ರೌದ್ರಾ ರಾಕ್ಷಸಾಃ ಸಮರಾಂಗಣೇ ॥ ೧೨ ॥

---

೭. ಶ್ರೀರಾಮನು ಹೇಳುತ್ತಾನೆ :—ಮಂಗಳಕರಳೆ! ನೀನಾರು? ಯಾರ ಹೆಂಡತಿಯು? ಯಾರು ನಿನ್ನನ್ನು ಧಿಕ್ಕರಿಸಿದರು? ನಿರ್ಜನ ಸ್ಥಳದಲ್ಲಿ ಯಾರು ನಿನ್ನನ್ನು ತ್ಯಜಿಸಿದರು? ನಿನ್ನ ಧನವನ್ನು ಯಾರು ಕದ್ದರು? ತಾಯಿ! ಅದನ್ನೆಲ್ಲ ನನ್ನ ಮುಂದೆ ಹೇಳು.

೮. ಅತ್ಯಂತ ದುಃಖಪೀಡಿತನೂ, ಮತಿವಂತರಲ್ಲಿ ಅಗ್ರೇಸರನೂ ಆದ ರಾಮನು ಹೀಗೆಂದು ಮತ್ತೊಬ್ಬ ವಿಷ್ಣುವಿನಂತೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು.

೯. ಸಂತೋಷಗೊಂಡ ಅವಳೂ ರಾಮನನ್ನು ಅನೇಕ ಸಾರಿ ನಮಸ್ಕರಿಸಿದಳು. ಮತ್ತು ಅತಿ ಪ್ರೀತಿಯಿಂದ ಸಹಿತಳಾಗಿ ಸವಿನುಡಿಯಿಂದ ಆತನನ್ನು ಹೊಗಳಿದಳು.

೧೦. ಪರೇಶನೂ, ದುಃಖನಾಶಕನೂ, ಸನಾತನನೂ ಆಗಿರುವ ಪರಮಾತ್ಮನೆ! ಯಾವುದಕ್ಕಾಗಿ ನೀನು ಅವತಾರಮಾಡಿರುವೆಯೊ, ಆ ಕಾರ್ಯವನ್ನು ಪೂರೈಸಿರುವೆ.

೧೧–೧೨. ಯುದ್ಧಭೂಮಿಯಲ್ಲಿ ರಾವಣ, ಕುಂಭಕರ್ಣ, ಇಂದ್ರಜಿತ್, ಖರ, ದೂಷಣ, ತ್ರಿಶಿರ, ಮಾರೀಚ, ಅಕ್ಷಕುಮಾರ ಇವರೇ ಮೊದಲಾದ ಅನೇಕ ಮಂದಿ ರಾಕ್ಷಸರನ್ನು ಕೊಂದಿರುವೆ.

CC-0. Jangamwadi Math Collection. Digitized by eGangotri

ಕಿಂ ವಚ್ಮಿ ಲೋಕೇಶ ಸುಕೀರ್ತಿಮದ್ಯ ತೇ
ವೇಧಾಸ್ತ್ವದೀಯಾಂಗಜಪದ್ಮಸಂಭವಃ ।
ವಿಶ್ವಂ ನಿವಿಷ್ಟಂ ಚ ತತೋ ದದರ್ಶ
ವಟಸ್ಯ ಪತ್ರೇ ಹಿ ಯಥಾವಟೋ ಮತಃ ॥ ೧೩ ॥
ಧನ್ಯೋ ದಶರಥೋ ಲೋಕೇ ಕೌಸಲ್ಯಾ ಜನನೀ ತವ ।
ಯಯೋರ್ಜಾತೋಽಸಿ ಗೋವಿಂದ ಜಗದೀಶ ಪರಃ ಪುಮಾನ್ ॥ ೧೪ ॥
ಧನ್ಯಂ ಚ ತತ್ಕುಲಂ ರಾಮ ಯತ್ರ ತ್ವಮಾಗತಃ ಸ್ವಯಂ ।
ಧನ್ಯಾಽಯೋಧ್ಯಾ ಪುರೀ ರಾಮ ಧನ್ಯೋ ಲೋಕಸ್ತ್ವದಾಶ್ರಯಃ ॥ ೧೫ ॥
ಧನ್ಯಃ ಸೋಽಪಿ ಹಿ ವಾಲ್ಮೀಕಿರ್ಯೇನ ರಾಮಾಯಣಂ ಕೃತಂ ।
ಕವಿನಾ ವಿಪ್ರಮುಖ್ಯೇಭ್ಯ ಆತ್ಮಬುದ್ಧ್ಯಾ ಹ್ಯನಾಗತಂ ॥ ೧೬ ॥
ತ್ವತ್ತೋಽಭವತ್ಕುಲಂ ಚೇದಂ ತ್ವಯಾ ದೇವ ಸುಪಾವಿತಂ ॥ ೧೭ ॥
ನರಪತಿರಿತಿ ಲೋಕೈಃ ಸ್ಮರ್ಯತೇ ವೈಷ್ಣವಾಂಶಃ
ಸ್ವಯಮಪಿ ರಮಣೀಯೈಸ್ತ್ವಂ ಗುಣೈರ್ವಿಷ್ಣುರೇವ ।
ಕಿಮಪಿ ಭುವನಕಾರ್ಯಂ ಯದ್ವಿಚಿಂತ್ಯಾಽವತೀರ್ಯ
ತದಿಹ ಘಟಯತಸ್ತೇ ವತ್ಸ ನಿರ್ವಿಘ್ನಮಸ್ತು ॥ ೧೮ ॥

---

೧೩. ಲೋಕನಾಥ! ನಿನ್ನ ಕೀರ್ತಿಯನ್ನು ಏನೆಂದು ಹೇಳಲಿ. ಆಲದೆಲೆಯಲ್ಲಿ ಮಲಗಿರುವ ನಿನ್ನ ದೇಹದಲ್ಲಿ ಹುಟ್ಟಿದ ಕಮಲದಿಂದ ಸಂಭೂತನಾದ ಬ್ರಹ್ಮನು ನಿನ್ನಲ್ಲಿ ಅಡಗಿರುವ ಸಮಸ್ತ ಲೋಕಗಳನ್ನು ನೋಡಿರುವನು.

೧೪. ಗೋವಿಂದ! ಜಗದೀಶನಾದ ನಿನ್ನನ್ನು ಮಗನನ್ನಾಗಿ ಪಡೆದಿರುವ ಕೌಸಲ್ಯೆ ಮತ್ತು ದಶರಥರು ಪುಣ್ಯವಂತರು.

೧೫. ನೀನು ಹುಟ್ಟಿದ ವಂಶವೂ, ಅಯೋಧ್ಯಾನಗರಿಯೂ, ನಿನ್ನನ್ನು ಆಶ್ರಯಿಸಿದ ಲೋಕವೂ ಧನ್ಯವಾದುದು.

೧೬. ಯಾವ ಬ್ರಾಹ್ಮಣೋತ್ತಮರೂ ಹೇಳದಿರುವ ರಾಮಾಯಣವನ್ನು ತನ್ನ ಬುದ್ಧಿಯಿಂದಲೆ ರಚಿಸಿದ ವಾಲ್ಮೀಕಿ ಕವಿಯೂ ಧನ್ಯನು.

೧೭–೧೮. ಸ್ವಾಮಿ! ನಿನ್ನಿಂದ ಈ ವಂಶವು ಅತ್ಯಂತ ಶುದ್ಧವಾಯಿತು. ವೈಷ್ಣವಾಂಶನಾದ ನಿನ್ನನ್ನು ಜನರು ರಾಜನೆಂದು ತಿಳಿದುಕೊಂಡಿದ್ದಾರೆ. ರಮ್ಯಗಳಾದ ಗುಣಗಳಿಂದ ನೀನು ವಿಷ್ಣುವೇ ಆಗಿದ್ದೀಯೆ. ಯಾವುದೊ ಒಂದು ಪ್ರಪಂಚದ ಕೆಲಸವನ್ನು ನೆರವೇರಿಸಬೇಕೆಂದು ಅವತರಿಸಿ ಅದನ್ನು ಸಾಧಿಸುತ್ತಿರುವ ನಿನಗೆ ವಿಘ್ನವುಂಟಾಗದಿರಲಿ.

CC-0. Jangamwadi Math Collection. Digitized by eGangotri

ಸ್ತುತ್ವಾ ವಾಚಾಽಥ ರಾಮಂ ಹಿ ತ್ವಯಿ ನಾಥೇ ನು ಸಾಂಪ್ರತಂ ।
ಶೂನ್ಯಾ ವರ್ತೇ ಚಿರಂ ಕಾಲಂ ಯಥಾದೋಷಸ್ತಥೈವ ಹಿ ॥ ೧೯ ॥
ಧರ್ಮಾರಣ್ಯಸ್ಯ ಕ್ಷೇತ್ರಸ್ಯ ವಿದ್ಧಿ ಮಾಮಧಿದೇವತಾಂ ।
ವರ್ಷಾಣಿ ದ್ವಾದಶೇಹೈವ ಜಾತಾನಿ ದುಃಖಿತಾಽಸ್ಮ್ಯಹಂ ॥ ೨೦ ॥
ನಿರ್ಜನತ್ವಂ ಮಮಾಽದ್ಯ ತ್ವಮುದ್ಧರಸ್ವ ಮಹಾಮತೇ ।
ಲೋಹಾಽಸುರಭಯಾದ್ರಾಮ ವಿಪ್ರಾಃ ಸರ್ವೇ ದಿಶೋದಶ ॥ ೨೧ ॥
ಗತಾಶ್ಚ ವಣಿಜಃ ಸರ್ವೇ ಯಥಾಸ್ಥಾನಂ ಸುದುಃಖಿತಾಃ ।
ಸ ದೈತ್ಯೋ ಘಾತಿತೋ ರಾಮ ದೇವೈಃ ಸುರಭಯಂಕರಃ ॥ ೨೨ ॥
ಆಕ್ರಮ್ಯಾತ್ರ ಮಹಾಮಾಯೋ ದುರಾಧರ್ಷೋ ದುರತ್ಯಯಃ ।
ನ ತೇ ಜನಾಃ ಸಮಾಯಾಂತಿ ತದ್ಭಯಾದತಿಶಂಕಿತಾಃ ॥ ೨೩ ॥
ಅದ್ಯ ವೈ ದ್ವಾದಶ ಸಮಾಃ ಶೂನ್ಯಾಗಾರಮನಾಥವತ್ ।
ಯಸ್ಮಾಚ್ಚ ದೀರ್ಘಿಕಾಯಾಂ ಮೇ ಸ್ನಾನದಾನೋದ್ಯತೋ ಜನಃ ॥ ೨೪ ॥
ರಾಮ ತಸ್ಯಾಂ ದೀರ್ಘಿಕಾಯಾಂ ನಿಪತಂತಿ ಚ ಸೂಕರಾಃ ।
ಯತ್ರಾಂಗನಾ ಭರ್ತೃಯುತಾ ಜಲಕ್ರೀಡಾಪರಾಯಣಾಃ ॥ ೨೫ ॥
ಚಿಕ್ರೀಡುಸ್ತತ್ರ ಮಹಿಷಾ ನಿಪತಂತಿ ಜಲಾಶಯೇ ।
ಯತ್ರ ಸ್ಥಾನೇ ಸುಪುಷ್ಪಾಣಾಂ ಪ್ರಕರಃ ಪ್ರಚುರೋಽಭವತ್ ॥ ೨೬ ॥

---

೧೯. ಹೀಗೆ ರಾಮನನ್ನು ಹೊಗಳಿ ನೀನು ನಾಥನಾಗಿರುವಾಗಲೂ ನಾನು ಬಹಳ ಕಾಲದಿಂದ ಶೂನ್ಯಳಾಗಿದ್ದೇನೆ. ಆ ದೋಷವು ಹಾಗೆಯೇ ಇದೆಯಲ್ಲ.

೨೦. ರಾಮ! ನಾನು ಧರ್ಮಾರಣ್ಯದ ಅಧಿದೇವತೆಯು. ನಾನು ಹೀಗೆಯೇ ಹನ್ನೆರಡು ವರ್ಷಗಳಿಂದ ದುಃಖಗೊಂಡಿರುತ್ತೇನೆ.

೨೧–೨೩. ನಿರ್ಜನವಾಗಿರುವ ನನ್ನ ಕ್ಷೇತ್ರವನ್ನು ಉದ್ಧಾರಮಾಡು. ಬ್ರಾಹ್ಮಣರೂ, ವೈಶ್ಯರೂ ಎಲ್ಲರೂ ಲೋಹಾಸುರನ ಭಯದಿಂದ ಹತ್ತು ದಿಕ್ಕುಗಳಿಗೆ ಹೊರಟುಹೋಗಿದ್ದಾರೆ. ಈಗ ಭಯಂಕರನೂ, ಅತ್ಯಂತ ಮಾಯೆಯುಳ್ಳವನೂ, ತಿರಸ್ಕರಿಸಲಶಕ್ಯನೂ, ನಾಶಮಾಡಲಸಾಧ್ಯನೂ ಆಗಿರುವ ಆ ದೈತ್ಯನನ್ನು ದೇವತೆಗಳು ಕೊಂದಿರುವರು. ಆದರೂ ಅವನಿಂದ ಭಯಗೊಂಡ ಆ ಜನರು ಈಗ ತಿರುಗಿ ಬರಲಿಲ್ಲ.

೨೪–೩೩. ಈಗ ಹನ್ನೆರಡು ವರ್ಷಗಳಿಂದ ರಕ್ಷಕರಿಲ್ಲದಂತೆ ಮನೆಗಳು ಶೂನ್ಯವಾಗಿವೆ. ಜನರು ಸ್ನಾನಮಾಡುತ್ತಿದ್ದ ಕೊಳಗಳಲ್ಲಿ ಹಂದಿಗಳು ಹೊರಳಾಡುತ್ತಿವೆ. ಅಂಗನೆಯರು ಪತಿಗಳೊಡನೆ ಜಲಕ್ರೀಡೆಯಾಡುತ್ತಿದ್ದ ಕೊಳಗಳಲ್ಲಿ ಕೋಣಗಳು ಮುಳುಗುತ್ತಿವೆ. ಒಳ್ಳೆ ಪುಷ್ಪಗಳ ರಾಶಿಗಳುಳ್ಳ ಸ್ಥಳದಲ್ಲಿ ಸಿಂಹ ವ್ಯಾಘ್ರಗಳಿಂದ ವ್ಯಾಪ್ತಗಳಾದ ಮುಳ್ಳುಮರಗಳು ಬೆಳೆದಿವೆ. ಹುಡುಗರು

CC-0. Jangamwadi Math Collection. Digitized by eGangotri

ತದ್ರುದ್ಧಂ ಕಂಟಕೈರ್ವೃಕ್ಷೈಃ ಸಿಂಹವ್ಯಾಘ್ರಸಮಾಕುಲೈಃ ।
ಸಂಚಿಕ್ರೀಡುಃ ಕುಮಾರಾಶ್ಚ ಯಸ್ಯಾಂ ಭೂಮೌ ನಿರಂತರಂ ॥ ೨೭ ॥
ಕುಮಾರ್ಯಶ್ಚಿತ್ರಕಾಣಾಂ ಚ ತತ್ರ ಕ್ರೀಡಂತಿ ಹರ್ಷಿತಾಃ ।
ಅಕುರ್ವನ್ವಾಡವಾ ಯತ್ರ ವೇದಗಾನಂ ನಿರಂತರಂ ॥ ೨೮ ॥
ಶಿವಾನಾಂ ತತ್ರ ಫೇತ್ಕಾರಾಃ ಶ್ರೂಯಂತೇಽತಿಭಯಂಕರಾಃ ।
ಯತ್ರ ಧೂಮೋಽಗ್ನಿಹೋತ್ರಾಣಾಂ ದೃಶ್ಯತೇ ವೈ ಗೃಹೇ ಗೃಹೇ ॥ ೨೯ ॥
ತತ್ರ ದಾವಾಃ ಸಧೂಮಾಶ್ಚ ದೃಶ್ಯಂತೇಽತ್ಯುಲ್ಬಣಾ ಭೃಶಂ ।
ನೃತ್ಯಂತೇ ನರ್ತಕಾ ಯತ್ರ ಹರ್ಷಿತಾ ಹಿ ದ್ವಿಜಾಗ್ರತಃ ॥ ೩೦ ॥
ತತ್ರೈವ ಭೂತವೇತಾಲಾಃ ಪ್ರೇತಾ ನೃತ್ಯಂತಿ ಮೋಹಿತಾಃ ।
ನೃಪಾ ಯತ್ರ ಸಭಾಯಾಂ ತು ನ್ಯಷೀದನ್ಮಂತ್ರತತ್ಪರಾಃ ॥ ೩೧ ॥
ತಸ್ಮಿನ್ಸ್ಥಾನೇ ನಿಷೀದಂತಿ ಗವಯಾ ಋಕ್ಷಶಲ್ಲಕಾಃ ।
ಆವಾಸಾ ಯತ್ರ ದೃಶ್ಯಂತೇ ದ್ವಿಜಾನಾಂ ವಣಿಜಾಂ ತಥಾ ॥ ೩೨ ॥
ಕುಟ್ಟಿಮಪ್ರತಿಮಾ ರಾಮ ದೃಶ್ಯಂತೇಽತ್ರ ಬಿಲಾನಿ ವೈ ।
ಕೋಟರಾಣೀಹ ವೃಕ್ಷಾಣಾಂ ಗವಾಕ್ಷಾಣೀಹ ಸರ್ವತಃ ॥ ೩೩ ॥
ಚತುಷ್ಕಾ ಯಜ್ಞವೇದಿರ್ಹಿ ಸೋಚ್ಛ್ರಾಯಾ ಹ್ಯಭವತ್ಪುರಾ ।
ಸೇಽತ್ರ ವಲ್ಮೀಕನಿಚಯೈರ್ದೃಶ್ಯಂತೇ ಪರಿವೇಷ್ಟಿತಾಃ ॥ ೩೪ ॥
ಏವಂವಿಧಂ ನಿವಾಸಂ ಮೇ ವಿದ್ಧಿ ರಾಮ ನೃಪೋತ್ತಮ ।
ಶೂನ್ಯಂ ತು ಸರ್ವತೋ ಯಸ್ಮಾನ್ನಿವಾಸಾಯ ದ್ವಿಜಾ ಗತಾಃ ॥ ೩೫ ॥

---

ಮತ್ತು ಹುಡುಗಿಯರು ಯಾವಾಗಲೂ ಆಡುತ್ತಿದ್ದ ಸ್ಥಳದಲ್ಲಿ ಚಿರತೆಗಳು ಸಂತೋಷದಿಂದ ಆಡುತ್ತಿವೆ. ಬ್ರಾಹ್ಮಣರು ವೇದಘೋಷಮಾಡುತ್ತಿದ್ದ ಸ್ಥಳದಲ್ಲಿ ನರಿಗಳ ಅತಿ ಭಯಂಕರವಾದ ಕೂಗುಗಳು ಕೇಳುತ್ತಿವೆ. ಅಗ್ನಿಹೋತ್ರಗಳ ಹೊಗೆಯಾಡುತ್ತಿದ್ದ ಮನೆಗಳಲ್ಲಿ ಕಾಳ್ಕಿಚ್ಚುಗಳು ಅತಿ ಭಯಂಕರವಾಗಿ ಹೊಗೆಯಿಂದ ಕೂಡಿ ಕಾಣುತ್ತಿವೆ. ನರ್ತಕರು ಸಂತೋಷದಿಂದ ಬ್ರಾಹ್ಮಣರ ಮುಂದೆ ಕುಣಿಯುತ್ತಿದ್ದ ಸ್ಥಳದಲ್ಲಿ ಭೂತ, ಬೇತಾಳ, ಪ್ರೇತಗಳು ಆನಂದಗೊಂಡು ಕುಣಿಯುತ್ತಿವೆ. ರಾಜರು ಮಂತ್ರಾಲೋಚನೆಗಾಗಿ ಕೂತುಕೊಳ್ಳುತ್ತಿದ್ದ ಸಭಾಭವನದಲ್ಲಿ ಗವಯ, ಕರಡಿ, ಮುಳ್ಳುಹಂದಿಗಳು ಮಲಗುತ್ತಿವೆ. ಬ್ರಾಹ್ಮಣರು ಮತ್ತು ವೈಶ್ಯರ ಮನೆಗಳಿರುವ ಸ್ಥಳಗಳಲ್ಲಿ ಬಿಲಗಳು ಕಾಣಿಸುತ್ತಿವೆ. ಮರಗಳ ಪೊಟರೆಗಳೆ ಗವಾಕ್ಷಗಳಾಗಿವೆ.

೩೪. ಹಿಂದೆ ಚೌಕವಾಗಿಯೂ, ಎತ್ತರವಾಗಿಯೂ ಇರುವ ಯಜ್ಞವೇದಿಯು ನೆಲೆಸಿದ್ದ ಸ್ಥಳದಲ್ಲಿ ಈಗ ಹುತ್ತಗಳು ಸುತ್ತಿಕೊಂಡಿವೆ.

೩೫. ಬ್ರಾಹ್ಮಣರು ಹೊರಟುಹೋಗಿರುವುದರಿಂದ ನನ್ನ ವಾಸಸ್ಥಳವು ಹೀಗೆ ಶೂನ್ಯವಾಗಿದೆಯೆಂದು ತಿಳಿ.

CC-0. Jangamwadi Math Collection. Digitized by eGangotri

ತೇನ ಮೇ ಸುಮಹದ್ದುಃಖಂ ತಸ್ಮಾತ್ತ್ರಾಹಿ ನರೇಶ್ವರ ।
ಏತಚ್ಛ್ರುತ್ವಾ ವಚೋ ರಾಮ ಉವಾಚ ವದತಾಂ ವರಃ ॥ ೩೬ ॥

ಶ್ರೀರಾಮ ಉವಾಚ :—

ನ ಜಾನೇ ತಾವಕಾನ್ವಿಪ್ರಾಂಶ್ಚತುರ್ದಿಕ್ಷು ಸಮಾಶ್ರಿತಾನ್
ನ ತೇಷಾಂ ವೇದ್ಮ್ಯಹಂ ಸಂಖ್ಯಾಂ ನಾಮಗೋತ್ರೇ ದ್ವಿಜನ್ಮನಾಂ ॥ ೩೭ ॥
ಯಥಾ ಜ್ಞಾತಿರ್ಯಥಾಗೋತ್ರಂ ಯಥಾತಥ್ಯಂ ನಿವೇದಯ ।
ತತ ಆನೀಯ ತಾನ್ಸರ್ವಾನ್ಸ್ವಸ್ಥಾನೇ ವಾಸಯಾಮ್ಯಹಂ ॥ ೩೮ ॥

ಶ್ರೀಮಾತೋವಾಚ :—

ಬ್ರಹ್ಮವಿಷ್ಣುಮಹೇಶೈಶ್ಚ ಸ್ಥಾಪಿತಾ ಯೇ ನರೇಶ್ವರ ।
ಅಷ್ಟಾದಶಸಹಸ್ರಾಣಿ ಬ್ರಾಹ್ಮಣಾ ವೇದಪಾರಗಾಃ ॥ ೩೯ ॥
ತ್ರಯೀವಿದ್ಯಾಸು ವಿಖ್ಯಾತಾ ಲೋಕೇಽಸ್ಮಿನ್ನಮಿತದ್ಯುತೇ ।
ಚತುಷ್ಷಷ್ಟಿಕಗೋತ್ರಾಣಾಂ ವಾಡವಾ ಯೇ ಪ್ರತಿಷ್ಠಿತಾಃ ॥ ೪೦ ॥
ಶ್ರೀಮಾತಾದಾತ್ತ್ರಯೀ ವಿದ್ಯಾಂ ಲೋಕೇ ಸರ್ವೇ ದ್ವಿಜೋತ್ತಮಾಃ ।
ಷಟ್ತ್ರಿಂಶಚ್ಚ ಸಹಸ್ರಾಣಿ ವೈಶ್ಯಾ ಧರ್ಮಪರಾಯಣಾಃ ॥ ೪೧ ॥
ಆರ್ಯವೃತ್ತಾಸ್ತು ವಿಜ್ಞೇಯಾ ದ್ವಿಜಶುಶ್ರೂಷಣೇ ರತಾಃ ।
ಬಹುಲಾರ್ಕೋ ನೃಪೋ ಯತ್ರ ಸಂಜ್ಞಯಾ ಸಹ ರಾಜತೇ ॥ ೪೨ ॥

---

೩೬. ಮಹಾರಾಜ! ಆದರಿಂದ ನನಗೆ ಬಹಳ ದುಃಖವಾಗಿದೆ. ಕಾಪಾಡು ಎಂದು ಮೊರೆಯಿಟ್ಟಳು. ಈ ಮಾತನ್ನು ಕೇಳಿ ವಾಗ್ಮಿಯಾದ ರಾಮನು ಹೀಗೆಂದನು.

೩೭–೩೮. ಶ್ರೀರಾಮನು ಹೇಳುತ್ತಾನೆ:—ದೇವಿ! ನಾಲ್ಕು ದಿಕ್ಕುಗಳಿಗೆ ಚದರಿಹೋದ ಬ್ರಾಹ್ಮಣರೆಷ್ಟೆಂಬುದನ್ನೂ, ಅವರ ಹೆಸರು ಮತ್ತು ಗೋತ್ರಗಳನ್ನೂ ನಾನರಿಯೆನು. ಅವರ ಬಂಧುಗಳನ್ನೂ, ಗೋತ್ರಗಳನ್ನೂ ತಿಳಿಸು. ಅಲ್ಲಿಂದವರನ್ನೆಲ್ಲ ಕರೆತಂದು ಅವರವರ ಸ್ಥಳದಲ್ಲಿ ವಾಸಮಾಡಿಸುವೆನು.

೩೯–೪೨. ಶ್ರೀಮಾತೆಯು ಹೇಳುತ್ತಾಳೆ:—ಮಹಾರಾಜ! ಬ್ರಹ್ಮವಿಷ್ಣುಮಹೇಶ್ವರರು ವೇದಪಾರಂಗತರೂ, ಪ್ರಪಂಚದಲ್ಲಿ ವೇದವಿದ್ಯೆಯಲ್ಲಿ ಪ್ರಖ್ಯಾತರೂ ಆಗಿರುವ ಅರವತ್ತನಾಲ್ಕು ಗೋತ್ರಗಳಲ್ಲಿ ಹುಟ್ಟಿದ ಶ್ರೀಮಾತೆಯಿಂದ ವೇದವಿದ್ಯೆಯನ್ನು ಪಡೆದ ಹದಿನೆಂಟು ಸಾವಿರ ಬ್ರಾಹ್ಮಣರನ್ನೂ, ಧರ್ಮದಲ್ಲಿ ಆಸಕ್ತರೂ, ಯೋಗ್ಯನಡತೆಯುಳ್ಳವರೂ, ಬ್ರಾಹ್ಮಣರ ಸೇವೆಯಲ್ಲಿ ನಿರತರೂ ಆಗಿರುವ ಮೂವತ್ತಾರು ಸಾವಿರ ವೈಶ್ಯರನ್ನೂ ಸ್ಥಾಪಿಸಿದರು. ಇಲ್ಲಿ ಬಹುಲಾರ್ಕನೆಂಬವನು ರಾಜನಾಗಿದ್ದನು.

CC-0. Jangamwadi Math Collection. Digitized by eGangotri

ಕುಮಾರಾವಶ್ವಿನೌ ದೇವೌ ಧನದೋ ವ್ಯಯಪೂರಕಃ ।
ಅಧಿಷ್ಠಾತ್ರೀ ತ್ವಹಂ ರಾಮ ನಾಮ್ನಾ ಭಟ್ಟಾರಿಕಾ ಸ್ಮೃತಾ ॥ ೪೩ ॥
ಶ್ರೀಸೂತ ಉವಾಚ :—
ಸ್ಥಾನಾಚಾರಾಶ್ಚ ಯೇ ಕೇಚಿತ್ಕುಲಾಚಾರಾಸ್ತಥೈವ ಚ ।
ಶ್ರೀಮಾತಾ ಕಥಿತಂ ಸರ್ವಂ ರಾಮಸ್ಯಾಽಗ್ರೇ ಪುರಾತನಂ ॥ ೪೪ ॥
ತಸ್ಯಾಸ್ತು ವಚನಂ ಶ್ರುತ್ವಾ ರಾಮೋ ಮುದಮವಾಪ ಹ ।
ಸತ್ಯಂ ಸತ್ಯಂ ಪುನಃ ಸತ್ಯಂ ಸತ್ಯಂ ಹಿ ಭಾಷಿತಂ ತ್ವಯಾ ॥ ೪೫ ॥
ಯಸ್ಮಾತ್ಸತ್ಯಂ ತ್ವಯಾ ಪ್ರೋಕ್ತಂ ತನ್ನಾಮ್ನಾ ನಗರಂ ಶುಭಂ ।
ವಾಸಯಾಮಿ ಜಗನ್ಮಾತಃ ಸತ್ಯಮಂದಿರಮೇವ ಚ ॥ ೪೬ ॥
ತ್ರೈಲೋಕ್ಯೇ ಖ್ಯಾತಿಮಾಪ್ನೋತು ಸತ್ಯಮಂದಿರಮುತ್ತಮಂ ॥ ೪೭ ॥
ಏತದುಕ್ತ್ವಾ ತತೋ ರಾಮಃ ಸಹಸ್ರಶತಸಂಖ್ಯಯಾ ।
ಸ್ವಭೃತ್ಯಾನ್ಪ್ರೇಷಯಾಮಾಸ ವಿಪ್ರಾನಯನಹೇತವೇ ॥ ೪೮ ॥
ಯಸ್ಮಿನ್ದೇಶೇ ಪ್ರದೇಶೇ ವಾ ವನೇ ವಾ ಸರಿತಸ್ತಟೇ ।
ಪರ್ಯಂತೇ ವಾ ಯಥಾಸ್ಥಾನೇ ಗ್ರಾಮೇ ವಾ ತತ್ರ ತತ್ರ ಚ ॥ ೪೯ ॥
ಧರ್ಮಾಽರಣ್ಯನಿವಾಸಾಶ್ಚ ಯಥಾ ಯತ್ರ ದ್ವಿಜೋತ್ತಮಾಃ ।
ಅರ್ಘಪಾದ್ಯೈಃ ಪೂಜಯಿತ್ವಾ ಶೀಘ್ರಮಾನಯತಾಽತ್ರ ತಾನ್ ॥ ೫೦ ॥

---

೪೩. ಅಶ್ವಿನೀದೇವತೆಗಳೂ, ವೆಚ್ಚಕ್ಕೆ ಹಣಗಳನ್ನು ಒದಗಿಸುವ ಕುಬೇರನೂ, ಭಟ್ಟಾರಿಕೆ ಎಂಬ ಹೆಸರನ್ನು ಪಡೆದ ಅಧಿದೇವತೆಯಾದ ನಾನೂ ಮಾತ್ರ ಇದ್ದೆವು.

೪೪. ಶ್ರೀ ಸೂತನು ಹೇಳುತ್ತಾನೆ:—ಶ್ರೀಮಾತೆಯು ರಾಮನಿಗೆ ಸ್ಥಳದ ಆಚಾರಗಳನ್ನೂ, ವಂಶದ ಆಚಾರಗಳನ್ನೂ ಹೇಳಿದಳು.

೪೫. ರಾಮನು ಅವಳ ಮಾತನ್ನು ಕೇಳಿ ಸಂತೋಷಗೊಂಡು ನೀನು ಸತ್ಯವನ್ನು ನುಡಿದಿರುವೆ.

೪೬–೪೭. ತಾಯಿ! ಆದ್ದರಿಂದ ಈ ನಗರವನ್ನು ಸತ್ಯಮಂದಿರವೆಂದು ಕರೆಯುವೆನು. ಇದು ಉತ್ತಮವಾದ ಸತ್ಯಮಂದಿರವೆಂದು ತ್ರಿಭುವನದಲ್ಲಿ ಪ್ರಸಿದ್ಧಿಗೊಳ್ಳಲಿ.

೪೮. ರಾಮನು ಹೀಗೆಂದು ಬ್ರಾಹ್ಮಣರನ್ನು ಕರೆಯುವುದಕ್ಕಾಗಿ ಲಕ್ಷ ಮಂದಿ ತನ್ನ ಸೇವಕರನ್ನು ಕಳುಹಿಸಿದನು.

೪೯–೫೦. ಧರ್ಮಾರಣ್ಯದಲ್ಲಿ ವಾಸವಾಗಿದ್ದ ಬ್ರಾಹ್ಮಣವರ್ಯರು ಯಾವ ದೇಶಕ್ಕಾಗಲಿ, ಯಾವ ಪ್ರದೇಶಕ್ಕಾಗಲಿ, ಯಾವ ಕಾಡಿಗಾಗಲಿ, ಯಾವ ನದೀ ದಡಕ್ಕಾಗಲಿ ಹೋಗಿರಲಿ, ಅವರನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಶೀಘ್ರವಾಗಿ ಕರೆತನ್ನಿರಿ.

CC-0. Jangamwadi Math Collection. Digitized by eGangotri

ಅಹಮತ್ರ ತದಾ ಭೋಕ್ಷ್ಯೇ ಯದಾ ದ್ರಕ್ಷ್ಯೇ ದ್ವಿಜೋತ್ತಮಾನ್ ॥೫೧॥
ವಿಮಾನ್ಯ ಚ ದ್ವಿಜಾನೇತಾನಾಗಮಿಷ್ಯತಿ ಯೋ ನರಃ ।
ಸ ಮೇ ವಧ್ಯಶ್ಚ ದಂಡ್ಯಶ್ಚ ನಿರ್ವಾಸ್ಯೋ ವಿಷಯಾದ್ಬಹಿಃ ॥ ೫೨ ॥
ತಚ್ಛ್ರುತ್ವಾ ದಾರುಣಂ ವಾಕ್ಯಂ ದುಃಸಹಂ ದುಷ್ಪ್ರಧರ್ಷಣಂ ।
ರಾಮಾಜ್ಞಾಕಾರಿಣೋ ದೂತಾ ಗತಾಃ ಸರ್ವೇ ದಿಶೋ ದಶ ॥ ೫೩ ॥
ಶೋಧಿತಾ ವಾಡವಾಃ ಸರ್ವೇ ಲಬ್ಧಾಃ ಸರ್ವೇ ಸುಹರ್ಷಿತಾಃ ।
ಯಥೋಕ್ತೇನ ವಿಧಾನೇನ ಅರ್ಘ್ಯಪಾದ್ಯೈರಪೂಜಯನ್ ॥ ೫೪ ॥
ಸ್ತುತಿಂ ಚಕ್ರುಶ್ಚ ವಿಧಿವದ್ವಿನಯಾಚಾರಪೂರ್ವಕಂ ।
ಆಮಂತ್ರ್ಯ ಚ ದ್ವಿಜಾನ್ಸರ್ವಾನ್ರಾಮವಾಕ್ಯಂ ಪ್ರಕಾಶಯನ್ ॥ ೫೫ ॥
ತತಸ್ತೇ ವಾಡವಾಃ ಸರ್ವೇ ದ್ವಿಜಾಃ ಸೇವಕಸಂಯುತಾಃ ।
ಗಮನಾಯೋದ್ಯತಾಃ ಸರ್ವೇ ವೇದಶಾಸ್ತ್ರಪರಾಯಣಾಃ ॥ ೫೬ ॥
ಆಗತಾ ರಾಮಪಾರ್ಶ್ವಂ ಚ ಬಹುಮಾನಪುರಸ್ಸರಾಃ ।
ಸಮಾಗತಾನ್ದ್ವಿಜಾನ್ದೃಷ್ಟ್ವಾ ರೋಮಾಂಚಿತತನೂರುಹಃ ॥ ೫೭ ॥
ಕೃತಕೃತ್ಯಮಿವಾತ್ಮಾನಂ ಮೇನೇ ದಾಶರಥಿರ್ನೃಪಃ ।
ಸ ಸಂಭ್ರಮಾತ್ಸಮುತ್ಥಾಯ ಪದಾತಿಃ ಪ್ರಯಯೌ ಪುರಃ ॥ ೫೮ ॥

---

೫೧. ನಾನು ಬ್ರಾಹ್ಮಣರನ್ನು ಕಾಣುವವರೆಗೂ ಭೋಜನವನ್ನು ಮಾಡುವುದಿಲ್ಲ.

೫೨. ಈ ಬ್ರಾಹ್ಮಣರನ್ನು ಅವಮಾನ ಮಾಡಿ ಬರುವವನು ವಧೆಗೂ, ಶಿಕ್ಷೆಗೂ, ದೇಶಭ್ರಷ್ಟತೆಗೂ ಯೋಗ್ಯನಾಗುವನು ಎಂದು ರಾಮನು ಆ ಭೃತ್ಯರಿಗೆ ಹೇಳಿಕಳುಹಿಸಿದನು.

೫೩. ದೂತರು ಕಠಿನವೂ, ಸಹಿಸಲಾಗದುದೂ, ತಿರಸ್ಕರಿಸಲಸಾಧ್ಯವೂ ಆಗಿರುವ ರಾಮನ ಆ ಮಾತನ್ನು ಕೇಳಿ ಅವನ ಅಪ್ಪಣೆಯನ್ನು ನೆರವೇರಿಸುವುದಕ್ಕಾಗಿ ದಿಕ್ಕು ದಿಕ್ಕುಗಳಿಗೆ ಹೊರಟರು.

೫೪. ಅವರು ಹುಡುಕಿ ಬ್ರಾಹ್ಮಣರನ್ನೆಲ್ಲ ಕಂಡುಹಿಡಿದು ಸಂತೋಷಗೊಂಡು ಅವರನ್ನು ಅರ್ಘ್ಯಾದಿಗಳಿಂದ ವಿಧಿಯಂತೆ ಪೂಜಿಸಿದರು.

೫೫. ಆ ಬ್ರಾಹ್ಮಣರನ್ನು ರಾಮಸೇವಕರು ಸ್ತುತಿಗೈದು ವಿನಯದಿಂದ ರಾಮನ ಮಾತನ್ನು ಹೇಳಿದರು.

೫೬–೫೮. ಬಳಿಕ ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರೆಲ್ಲ ಸೇವಕರೊಡನೆ ಬಹುಮಾನ ಸಹಿತರಾಗಿ ರಾಮನ ಹತ್ತಿರಕ್ಕೆ ಬಂದರು. ದಶರಥನ ತನಯನಾದ ರಾಮನು ಬಂದಿರುವ ಬ್ರಾಹ್ಮಣರನ್ನು ಕಂಡು ರೋಮಾಂಚಗೊಂಡು ನಾನು ಧನ್ಯನಾದೆನೆಂದು ತಿಳಿದನು. ಸಂಭ್ರಮದಿಂದೆದ್ದು ಕಾಲ್ನಡಿಗೆ

CC-0. Jangamwadi Math Collection. Digitized by eGangotri

ಕರಸಂಪುಟಕಂ ಕೃತ್ವಾ ಹರ್ಷಾಽಶ್ರು ಪ್ರತಿಮುಂಚಯನ್ ।
ಜಾನುಭ್ಯಾಮವನಿಂ ಗತ್ವಾ ಇದಂ ವಚನಮಬ್ರವೀತ್ ॥ ೫೯ ॥
ವಿಪ್ರಪ್ರಸಾದಾತ್ಕಮಲಾವರೋಽಹಂ
ವಿಪ್ರಪ್ರಸಾದಾದ್ಧರಣೀಧರೋಽಹಂ ।
ವಿಪ್ರಪ್ರಸಾದಾಜ್ಜಗತೀಪತಿಶ್ಚ
ವಿಪ್ರಪ್ರಸಾದಾನ್ಮಮ ರಾಮನಾಮ ॥ ೬೦ ॥
ಇತ್ಯೇವಮುಕ್ತ್ವಾ ರಾಮೇಣ ವಾಡವಾಸ್ತೇ ಪ್ರಹರ್ಷಿತಾಃ ।
ಜಯಾಶೀರ್ಭಿಃ ಪ್ರಪೂಜ್ಯಾಽಥ ದೀರ್ಘಾಯುರಿತಿ ಚಾಽಬ್ರುವನ್ ॥ ೬೧ ॥
ಆವರ್ಜಿತಾಸ್ತೇ ರಾಮೇಣ ಪಾದ್ಯಾರ್ಘ್ಯವಿಷ್ಟರಾದಿಭಿಃ ।
ಸ್ತುತಿಂ ಚಕಾರ ವಿಪ್ರಾಣಾಂ ದಂಡವತ್ಪ್ರಣಿಪತ್ಯ ಚ ॥ ೬೨ ॥
ಕೃತಾಂಜಲಿಪುಟಃ ಸ್ಥಿತ್ವಾ ಚಕ್ರೇಪಾದಾಽಭಿವಂದನಂ ।
ಆಸನಾನಿ ವಿಚಿತ್ರಾಣಿ ಹೈಮಾನ್ಯಾಭರಣಾನಿ ಚ ॥ ೬೩ ॥
ಸಮರ್ಪಯಾಮಾಸ ತತೋ ರಾಮೋ ದಶರಥಾತ್ಮಜಃ ।
ಅಂಗುಲೀಯಕವಾಸಾಂಸಿ ಉಪವೀತಾನಿ ಕರ್ಣಕಾನ್ ॥ ೬೪ ॥
ಪ್ರದದೌ ವಿಪ್ರಮುಖ್ಯೇಭ್ಯೋ ನಾನಾವರ್ಣಾಶ್ಚ ಧೇನವಃ ।
ಏಕೈಕಶತಸಂಖ್ಯಾಕಾ ಘುಟೋಧ್ನೀಶ್ಚ ಸವತ್ಸಕಾಃ ॥ ೬೫ ॥

---

ಯಿಂದ ಮುಂದೆ ಬಂದು ಕೈಜೋಡಿಸಿಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತ ಮೊಣಕಾಲೂರಿ ನಮಸ್ಕರಿಸಿ ಇಂತೆಂದನು.

೬೦. "ನಾನು ಬ್ರಾಹ್ಮಣರ ಅನುಗ್ರಹದಿಂದ ಕಮಲಾಪತಿಯೂ, ಭೂಮಿಯನ್ನು ಹೊತ್ತವನೂ, ಜಗದೊಡೆಯನೂ, ರಾಮನೆಂದು ಹೆಸರುಳ್ಳವನೂ ಆದೆನು."

೬೧. ರಾಮನು ಹೀಗೆ ನುಡಿಯಲು ಆ ಬ್ರಾಹ್ಮಣರು ಹರ್ಷಗೊಂಡು ಜಯಾಶೀರ್ವಾದದಿಂದ ಅವನನ್ನು ಪೂಜಿಸಿ ದೀರ್ಘಾಯುಷ್ಮಂತನಾಗೆಂದು ಹೇಳಿದರು.

೬೨. ರಾಮನು ಆ ಬ್ರಾಹ್ಮಣರಿಗೆ ಪಾದ್ಯ, ಅರ್ಘ್ಯ, ಆಸನಾದಿಗಳನ್ನಿತ್ತು ಪೂಜಿಸಿ ಸಾಷ್ಟಾಂಗ ಪ್ರಣಾಮಮಾಡಿ ಸ್ತುತಿಸಿದನು.

೬೩–೬೬. ಬಳಿಕ ಕೈಮುಗಿದುಕೊಂಡು ನಾನಾವಿಧವಾದ ಸುವರ್ಣಾಭರಣಗಳನ್ನೂ, ಉಂಗುರ, ವಸ್ತ್ರ, ಯಜ್ಞೋಪವೀತ, ಕುಂಡಲಗಳನ್ನೂ ಕೊಟ್ಟು ಒಬ್ಬೊಬ್ಬ ಬ್ರಾಹ್ಮಣನಿಗೂ ಕರುವು, ವಸ್ತ್ರ, ಘಂಟೆಗಳಿಂದ ಸಹಿತವಾಗಿಯೂ, ಚಿನ್ನದ ಕೊಂಬುಗಳಿಂದ ಅಲಂಕೃತವಾಗಿಯೂ, ಬೆಳ್ಳಿ ಗೊರಸುಗಳುಳ್ಳವುಗಳಾಗಿಯೂ, ತಾಮ್ರದ ಬೆನ್ನಕಟ್ಟುಗಳುಳ್ಳವುಗಳಾಗಿಯೂ ಇರುವ


CC-0. Jangamwadi Math Collection. Digitized by eGangotri

ಸವಸ್ತ್ರಾ ಬದ್ಧಘಂಟಾಶ್ಚ ಹೇಮಶೃಂಗವಿಭೂಷಿತಾಃ ।
ರೂಪ್ಯಖುರಾಸ್ತಾಮ್ರಪೃಷ್ಠ್ಯಃ ಕಾಂಸ್ಯಪಾತ್ರಸಮನ್ವಿತಾಃ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಬ್ರಹ್ಮನಾರದಸಂವಾದೇ ಸತ್ಯಮಂದಿರಸ್ಥಾಪನವರ್ಣನಂ"ನಾಮ ದ್ವಾತ್ರಿಂಶೋಽಧ್ಯಾಯಃ

---

ಮಡಿಕೆ ಕೆಚ್ಚಲಿನ ನೂರು ಗೋವುಗಳನ್ನು ಕಂಚಿನ ಪಾತ್ರೆಗಳೊಡನೆ ದಾನ ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ ಬ್ರಹ್ಮನಾರದ ಸಂವಾದದಲ್ಲಿ "ಸತ್ಯಮಂದಿರಸ್ಥಾಪನವರ್ಣನ"ವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ತ್ರಯಸ್ತ್ರಿಂಶೋಽಧ್ಯಾಯಃ

### ಶ್ರೀರಾಮಚಂದ್ರಸ್ಯ ಪುರಪ್ರತ್ಯಾಗಮನವರ್ಣನಂ

ರಾಮ ಉವಾಚ:—

ಜೀರ್ಣೋಽದ್ಧಾರಂ ಕರಿಷ್ಯಾಮಿ ಶ್ರೀಮಾತುರ್ವಚನಾದಹಂ ।
ಆಜ್ಞಾ ಪ್ರದೀಯತಾಂ ಮಹ್ಯಂ ಯಥಾದಾನಂ ದದಾಮಿ ವಃ ॥ ೧ ॥
ಪಾತ್ರೇ ದಾನಂ ಪ್ರದಾತವ್ಯಂ ಕೃತ್ವಾ ಯಜ್ಞವರಂ ದ್ವಿಜಾಃ ।
ನಾಽಪಾತ್ರೇ ದೀಯತೇ ಕಿಂಚಿದ್ದತ್ತಂ ನ ತು ಸುಖಾವಹಂ ॥ ೨ ॥
ಸುಪಾತ್ರಂ ನೌರಿವ ಸದಾ ತಾರಯೇದುಭಯೋರಪಿ ।
ಲೋಹಪಿಂಡೋಪಮಂ ಜ್ಞೇಯಂ ಕುಪಾತ್ರಂ ಭಂಜನಾತ್ಮಕಂ ॥ ೩ ॥
ಜಾತಿಮಾತ್ರೇಣ ವಿಪ್ರತ್ವಂ ಜಾಯತೇ ನ ಹಿ ಭೋ ದ್ವಿಜಾಃ ।
ಕ್ರಿಯಾ ಬಲವತೀ ಲೋಕೇ ಕ್ರಿಯಾಹೀನೇ ಕುತಃ ಫಲಂ ॥ ೪ ॥
ಪೂಜ್ಯಾಸ್ತಸ್ಮಾತ್ಪೂಜ್ಯತಮಾ ಬ್ರಾಹ್ಮಣಾಃ ಸತ್ಯವಾದಿನಃ ।
ಯಜ್ಞಕಾರ್ಯೇ ಸಮುತ್ಪನ್ನೇ ಕೃಪಾಂ ಕುರ್ವಂತು ಸರ್ವದಾ ॥ ೫ ॥

---

### ಕನ್ನಡದ ಅನುವಾದ

#### ಶ್ರೀರಾಮಚಂದ್ರನ ಪುರಪ್ರತ್ಯಾಗಮನವರ್ಣನ

೧. ರಾಮನು ಹೇಳುತ್ತಾನೆ:—" ದ್ವಿಜರೆ! ನಾನು ಶ್ರೀಮಾತೆಯ ಅಪ್ಪಣೆಯಂತೆ ಈ ಕ್ಷೇತ್ರದ ಜೀರ್ಣೋದ್ಧಾರವನ್ನು ಮಾಡುವೆನು. ನಿಮಗೆ ದಾನ ಕೊಡುವೆನು. ನೀವು ಅನುಮತಿಯನ್ನು ಕೊಡಿರಿ.

೨. ವಿಪ್ರರೆ! ಯಜ್ಞವನ್ನು ಮಾಡಿ ಸತ್ಪಾತ್ರನಲ್ಲಿ ದಾನಮಾಡಬೇಕು. ಅಪಾತ್ರನಿಗೆ ನೀಡಿದ ದಾನವು ಸುಖದಾಯಕವಲ್ಲ.

೩. ಸತ್ಪಾತ್ರನು ನಾವೆಯಂತೆ ಕೊಡುವ ಮತ್ತು ತೆಗೆದುಕೊಳ್ಳುವ ಇಬ್ಬರನ್ನೂ ಉದ್ಧರಿಸುವನು. ಕುಪಾತ್ರನು ಒಡೆದುಹೋಗುವ ಲೋಹದ ಮುದ್ದೆಯಂತಿರುವನು.

೪. ಬ್ರಾಹ್ಮಣರೆ! ವಿಪ್ರಜಾತಿಯಲ್ಲಿ ಜನಿಸಿದ ಮಾತ್ರದಿಂದ ಬ್ರಾಹ್ಮಣನಾಗುವುದಿಲ್ಲ. ಬ್ರಾಹ್ಮಣನಿಗೆ ಕರ್ಮವು ಬಲಿಷ್ಠವಾದುದು. ಅದಿಲ್ಲದಿದ್ದರೆ ಪ್ರಯೋಜನವಿಲ್ಲ.

೫. ಸತ್ಯವನ್ನು ನುಡಿಯುವ ಬ್ರಾಹ್ಮಣರು ಅತ್ಯಂತ ಪೂಜ್ಯರು. ಈಗ ಒದಗಿದ ಯಜ್ಞಕಾರ್ಯದಲ್ಲಿ ನೀವು ದಯೆಯನ್ನಿಡಬೇಕು.

CC-0. Jangamwadi Math Collection. Digitized by eGangotri

ಬ್ರಹ್ಮೋವಾಚ :—
ತತಸ್ತು ಮಿಲಿತಾಃ ಸರ್ವೇ ವಿಮೃಶ್ಯ ಚ ಪರಸ್ಪರಂ
ಕೇಚಿದೂಚುಸ್ತದಾ ರಾಮಂ ವಯಂ ಶಿಲೋಂಛಜೀವಿಕಾಃ ॥ ೬ ॥
ಸಂತೋಷಂ ಪರಮಾಸ್ಥಾಯ ಸ್ಥಿತಾ ಧರ್ಮಪರಾಯಣಾಃ ।
ಪ್ರತಿಗ್ರಹಪ್ರಯೋಗೇಣ ನ ಚಾಽಸ್ಮಾಕಂ ಪ್ರಯೋಜನಂ ॥ ೭ ॥
ದಶಸೂನಾಸಮಶ್ಚಕ್ರೀ ದಶಚಕ್ರಿಸಮೋ ಧ್ವಜಃ ।
ದಶಧ್ವಜಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ ॥ ೮ ॥
ರಾಜಪ್ರತಿಗ್ರಹೋ ಘೋರೋ ರಾಮ ಸತ್ಯಂ ನ ಸಂಶಯಃ ।
ತಸ್ಮಾದ್ವಯಂ ನ ಚೇಚ್ಛಾಮಃ ಪ್ರತಿಗ್ರಹಂ ಭಯಾವಹಂ ॥ ೯ ॥
ಏಕಾಹಿಕಾ ದ್ವಿಜಾಃ ಕೇಚಿತ್ಕೇಚಿತ್ಸ್ವಾಮೃತವೃತ್ತಯಃ ।
ಕುಂಭೀಧಾನ್ಯಾ ದ್ವಿಜಾಃ ಕೇಚಿತ್ಕೇಚಿತ್ಷಟ್ಕರ್ಮತತ್ಪರಾಃ ॥ ೧೦ ॥
ತ್ರಿಮೂರ್ತಿಸ್ಥಾಪಿತಾಃ ಸರ್ವೇ ಪೃಥಗ್ಭಾವಾಃ ಪೃಥಗ್ಗುಣಾಃ ।
ಕೇಚಿದೇವಂ ವದಂತಿ ಸ್ಮ ತ್ರಿಮೂರ್ತ್ಯಾಜ್ಞಾಂ ವಿನಾ ವಯಂ ॥ ೧೧ ॥
ಪ್ರತಿಗ್ರಹಸ್ಯ ಸ್ವೀಕಾರಂ ಕಥಂ ಕುರ್ಯಾಮಹೇ ದ್ವಿಜಾಃ ।
ನ ತಾಂಬೂಲಂ ಸ್ವೀಕೃತಂ ನೋ ಹ್ಯದ್ಮೋ ದಾನೇನ ಭಾಷಿತಂ ॥ ೧೨ ॥

---

೬–೭. ಬ್ರಹ್ಮನು ಹೇಳುತ್ತಾನೆ:—ಬಳಿಕ ಆ ಬ್ರಾಹ್ಮಣರೆಲ್ಲ ಸೇರಿ ಆಲೋಚಿಸಿ, "ರಾಮ! ನಾವು ಕಾಳಾರಿಸಿಕೊಂಡು ಜೀವಿಸುತ್ತ ಸಂತೋಷದಿಂದ ಧರ್ಮಾಸಕ್ತರಾಗಿದ್ದೇವೆ. ನಮಗೆ ದಾನಸ್ವೀಕಾರದಿಂದ ಪ್ರಯೋಜನವಿಲ್ಲ.

೮. ಒಬ್ಬ ಕುಂಬಾರನು ಹತ್ತು ಕಟುಕರಿಗೆ ಸಮಾನನು. ಒಬ್ಬ ಹೆಂಡ ಮಾರುವವನು ಹತ್ತುಮಂದಿ ಕುಂಬಾರರಿಗೆ ಸಮಾನನು. ಒಬ್ಬ ಸೂಳೆಯು ಹತ್ತುಮಂದಿ ಹೆಂಡಮಾರುವವರಿಗೆ ಸಮಾನಳು. ಒಬ್ಬ ರಾಜನು ಹತ್ತುಮಂದಿ ಸೂಳೆಯರಿಗೆ ಸಮಾನನು.

೯. ರಾಮ! ರಾಜನ ಸ್ವತ್ತಿನ ಸ್ವೀಕಾರವು ಅತಿ ಘೋರವಾದುದು, ಸಂಶಯವಿಲ್ಲ. ಆದುದರಿಂದ ನಾವು ಭಯಂಕರವಾದ ಈ ಪ್ರತಿಗ್ರಹವನ್ನು ಬಯಸುವುದಿಲ್ಲ."

೧೦–೧೨. ಆ ಬ್ರಾಹ್ಮಣರಲ್ಲಿ ಕೆಲವರು ಒಂದು ದಿನದ ಆಹಾರವುಳ್ಳವರು. ಕೆಲವರು ಜಲಾಹಾರಿಗಳು. ಕೆಲವರು ಮಡಿಕೆಯಲ್ಲಿ ತುಂಬಿದ ಧಾನ್ಯಮಾತ್ರ ವುಳ್ಳವರು. ಕೆಲವರು ಷಟ್ಕರ್ಮಿಗಳು. ಹೀಗೆ ತ್ರಿಮೂರ್ತಿಗಳಿಂದ ಸ್ಥಾಪಿತರಾದ ಆ ಬ್ರಾಹ್ಮಣರು ಬೇರೆ ಬೇರೆ ಭಾವನೆ ಗುಣಗಳುಳ್ಳವರು. ಅವರಲ್ಲಿ ಕೆಲವರು "ತಾಂಬೂಲವನ್ನೂ, ದಾನವನ್ನೂ ತೆಗೆದುಕೊಳ್ಳದಿದ್ದ ನಾವು ತ್ರಿಮೂರ್ತಿಗಳ ಆಜ್ಞೆಯಿಲ್ಲದೆ ರಾಜನಿಂದ ಪ್ರತಿಗ್ರಹವನ್ನು ಹೇಗೆ ಸ್ವೀಕರಿಸುವೆವು" ಎಂದರು.

CC-0. Jangamwadi Math Collection. Digitized by eGangotri

ವಿಮೃಶ್ಯ ಸ ತದಾ ರಾಮೋ ವಸಿಷ್ಠೇನ ಮಹಾತ್ಮನಾ ।
ಬ್ರಹ್ಮವಿಷ್ಣುಶಿವಾದೀನಾಂ ಸಸ್ಮಾರ ಗುರುಣಾ ಸಹ ॥ ೧೩ ॥
ಸ್ಮೃತಮಾತ್ರಾಸ್ತತೋ ದೇವಾಸ್ತಂ ದೇಶಂ ಸಮುಪಾಗಮನ್ ।
ಸೂರ್ಯಕೋಟಿಪ್ರತೀಕಾಶವಿಮಾನಾವಲಿಸಂವೃತಾಃ ॥ ೧೪ ॥
ರಾಮೇಣ ತೇ ಯಥಾನ್ಯಾಯಂ ಪೂಜಿತಾಃ ಪರಯಾ ಮುದಾ ।
ನಿವೇದಿತಂ ತು ತತ್ಸರ್ವಂ ರಾಮೇಣಾಽತಿಸುಬುದ್ಧಿನಾ ॥ ೧೫ ॥
ಅಧಿದೇವ್ಯಾ ವಚನತೋ ಜೀರ್ಣೋದ್ಧಾರಂ ಕರೋಮ್ಯಹಂ ।
ಧರ್ಮಾಽರಣ್ಯೇ ಹರಿಕ್ಷೇತ್ರೇ ಧರ್ಮಕೂಪಸಮೀಪತಃ ॥ ೧೬ ॥
ತತಸ್ತೇ ವಾಡವಾಃ ಸರ್ವೇ ತ್ರಿಮೂರ್ತೀಃ ಪ್ರಣಿಪತ್ಯ ಚ ।
ಮಹತಾ ಹರ್ಷವೃಂದೇನ ಪೂರ್ಣಾಃ ಪ್ರಾಪ್ತಮನೋರಥಾಃ ॥ ೧೭ ॥
ಅರ್ಘ್ಯಪಾದ್ಯಾದಿವಿಧಿನಾ ಶ್ರದ್ಧಯಾ ತಾನಪೂಜಯನ್ ।
ಕ್ಷಣಂ ವಿಶ್ರಮ್ಯ ತೇ ದೇವಾ ಬ್ರಹ್ಮವಿಷ್ಣುಶಿವಾದಯಃ ॥ ೧೮ ॥
ಊಚೂ ರಾಮಂ ಮಹಾಶಕ್ತಿಂ ವಿನಯಾತ್ಕೃತಸಂಪುಟಂ ॥ ೧೯ ॥

ದೇವಾ ಊಚುಃ:—

ದೇವದ್ರುಹಸ್ತ್ವಯಾ ರಾಮ ಯೇ ಹತಾ ರಾವಣಾದಯಃ ।
ತೇನ ತುಷ್ಟಾ ವಯಂ ಸರ್ವೇ ಭಾನುವಂಶವಿಭೂಷಣ ॥ ೨೦ ॥

---

೧೩–೧೪. ಆಗ ಶ್ರೀರಾಮನು ವಸಿಷ್ಠರೊಡನೆ ಆಲೋಚಿಸಿ ತ್ರಿಮೂರ್ತಿಗಳೆ ಮೊದಲಾದ ದೇವತೆಗಳನ್ನು ಸ್ಮರಿಸಿದನು. ಕೂಡಲೆ ಅವರು ಕೋಟಿಸೂರ್ಯರಂತಿರುವ ವಿಮಾನಗಳಲ್ಲಿ ಕುಳಿತು ಅಲ್ಲಿಗೆ ಬಂದನು.

೧೫–೧೬. ರಾಮನು ಅತಿ ಸಂತೋಷಗೊಂಡು ಶಾಸ್ತ್ರರೀತಿಯಿಂದ ಅವರನ್ನು ಪೂಜಿಸಿ ಸಕಲವನ್ನೂ ತಿಳುಹಿದನು.

೧೭. "ಅಧಿದೇವತೆಯಾದ ಶ್ರೀಮಾತೆಯ ಮಾತಿನಿಂದ ನಾನು ಧರ್ಮಾರಣ್ಯ ಕ್ಷೇತ್ರದ ಧರ್ಮ ಕೂಪದ ಬಳಿ ಜೀರ್ಣೋದ್ಧಾರಮಾಡುವೆನು" ಎಂದು ರಾಮನು ಹೇಳಿದನು.

೧೮–೧೯. ಅನಂತರ ಕೈಗೂಡಿದ ಮನೋರಥವುಳ್ಳ ಆ ಬ್ರಾಹ್ಮಣರೆಲ್ಲ ಸಂತೋಷಗೊಂಡು ತ್ರಿಮೂರ್ತಿಗಳನ್ನು ವಂದಿಸಿ ಅರ್ಘ್ಯಪಾದ್ಯಾದಿಗಳಿಂದ ಶ್ರದ್ಧಾಯುಕ್ತರಾಗಿ ಅವರನ್ನು ಅರ್ಚಿಸಿದರು. ಬ್ರಹ್ಮಾದಿ ದೇವತೆಗಳು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ವಿನಯದಿಂದ ಕೈಜೋಡಿಸಿಕೊಂಡಿರುವ ಅದ್ಭುತ ಶಕ್ತಿಯುಳ್ಳ ರಾಮನನ್ನು ಹೀಗೆಂದರು.

೨೦–೨೧. ದೇವತೆಗಳು ಹೇಳುತ್ತಾರೆ:—ಸೂರ್ಯವಂಶಕ್ಕೆ ಲಲಾಮನಾದ ರಾಮನೆ! ನೀನು ದೇವದ್ರೋಹಿಗಳಾದ ರಾವಣಾದಿಗಳನ್ನು ಕೊಂದುದರಿಂದ

CC-0. Jangamwadi Math Collection. Digitized by eGangotri

ಉದ್ಧರಸ್ವ ಮಹಾಸ್ಥಾನಂ ಮಹತೀಂ ಕೀರ್ತಿಮಾಪ್ನುಹಿ ॥ ೨೧ ॥
ಲಬ್ಧ್ವಾ ಸ ತೇಷಾಮಾಜ್ಞಾಂ ತು ಪ್ರೀತೋ ದಶರಥಾತ್ಮಜಃ ।
ಜೀರ್ಣೋದ್ಧಾರೇಽನಂತಗುಣಂ ಫಲಮಿಚ್ಛನ್ನಿಲಾಪತಿಃ ॥ ೨೨ ॥
ದೇವಾನಾಂ ಸನ್ನಿಧೌ ತೇಷಾಂ ಕಾರ್ಯಾರಂಭಮಥಾಽಕರೋತ್ ।
ಸ್ಥಂಡಿಲಂ ಪೂರ್ವತಃ ಕೃತ್ವಾ ಮಹಾಗಿರಿಸಮಂ ಶುಭಂ ॥ ೨೩ ॥
ತಸ್ಯೋಪರಿ ಬಹಿಃಶಾಲಾ ಗೃಹಶಾಲಾಹ್ಯನೇಕಶಃ ।
ಬ್ರಹ್ಮಶಾಲಾಶ್ಚ ಬಹುಶೋ ನಿರ್ಮಮೇ ಶೋಭನಾಕೃತೀಃ ॥ ೨೪ ॥
ನಿಧಾನ್ಯೈಶ್ಚ ಸಮಾಯುಕ್ತಾ ಗೃಹೋಪಕರಣೈರ್ವೃತಾಃ ।
ಸುವರ್ಣಕೋಟಿಸಂಪೂರ್ಣಾ ರಸವಸ್ತ್ರಾದಿಪೂರಿತಾಃ ॥ ೨೫ ॥
ಧನಧಾನ್ಯಸಮೃದ್ಧಾಶ್ಚ ಸರ್ವಧಾತುಯುತಾಸ್ತಥಾ ।
ಏತತ್ಸರ್ವಂ ಕಾರಯಿತ್ವಾ ಬ್ರಾಹ್ಮಣೇಭ್ಯಸ್ತದಾ ದದೌ ॥ ೨೬ ॥
ಏಕೈಕಶೋ ದಶದಶ ದದೌ ಧೇನೂಃ ಪಯಸ್ವಿನೀಃ ।
ಚತ್ವಾರಿಂಶಚ್ಛತಂ ಪ್ರಾದಾದ್ಗ್ರಾಮಾಣಾಂ ಚತುರಾಧಿಕಂ ॥ ೨೭ ॥
ತ್ರೈವಿಧ್ಯದ್ವಿಜವಿಪ್ರೇಭ್ಯೋ ರಾಮೋ ದಶರಥಾತ್ಮಜಃ ।
ಕಾಜೇಶೇನ ತ್ರಯೇಣೈವ ಸ್ಥಾಪಿತಾ ದ್ವಿಜಸತ್ತಮಾಃ ॥ ೨೮ ॥
ತಸ್ಮಾತ್ತ್ರಯಿಾ ವಿದ್ಯ ಇತಿ ಖ್ಯಾತಿರ್ಲೋಕೇ ಬಭೂವ ಹ ।
ಏವಂವಿಧಂ ದ್ವಿಜೇಭ್ಯಃ ಸ ದತ್ವಾ ದಾನಂ ಮಹಾದ್ಭುತಂ ॥ ೨೯ ॥

---

ನಾವೆಲ್ಲ ಸಂತೋಷಗೊಂಡಿರುವೆವು. ಈ ಮಹಾಕ್ಷೇತ್ರವನ್ನು ಉದ್ಧರಿಸಿ ಕೀರ್ತಿವಂತನಾಗು.

೨೨–೨೬. ಮಹಾರಾಜನಾದ ರಾಮನು ಆ ದೇವತೆಗಳ ಆಜ್ಞೆಯನ್ನು ಪಡೆದು ಜೀರ್ಣೋದ್ಧಾರ ಮಾಡಿ ವಿಪುಲ ಫಲವನ್ನು ಗಳಿಸಲಿಚ್ಛೆಯಿಂದ ದೇವತೆಗಳ ಸನ್ನಿಧಿಯಲ್ಲಿ ಕಾರ್ಯವನ್ನಾರಂಭಿಸಿದನು. ಮೊದಲು ದೊಡ್ಡ ಬೆಟ್ಟದಂತೆ ಮನೋಹರವಾದ ಶುದ್ಧಾಂಗಣವನ್ನು ಏರ್ಪಡಿಸಿ ಅದರಲ್ಲಿ ನಿಧಿಗಳಿಂದಲೂ, ಗೃಹಸಾಮಗ್ರಿಗಳಿಂದಲೂ, ಧನಧಾನ್ಯಗಳಿಂದಲೂ, ಸಪ್ತಧಾತುಗಳಿಂದಲೂ ತುಂಬಿದ ಮನೋಹರವಾದ ಹೊರತೊಟ್ಟಿಗಳನ್ನೂ, ಗೃಹಶಾಲೆಗಳನ್ನೂ, ಬ್ರಹ್ಮಶಾಲೆಗಳನ್ನೂ ನಿರ್ಮಿಸಿ ಅವೆಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಿದನು.

೨೭–೨೯. ಒಬ್ಬ ಬ್ರಾಹ್ಮಣನಿಗೆ ಹತ್ತು ಹತ್ತು ಹಾಲನ್ನು ಕರೆಯುವ ಹಸುಗಳನ್ನು ದಾನಮಾಡಿದನು. ಹಾಗೆಯೇ ರಾಘವನು ತ್ರೈವಿಧ್ಯದ್ವಿಜರಿಗೆ ನಾಲ್ಕು ಸಾವಿರದ ನಾನೂರು ಗ್ರಾಮಗಳನ್ನು ಹಂಚಿದನು. ತ್ರಿಮೂರ್ತಿಗಳು ಈ ಬ್ರಾಹ್ಮಣರನ್ನು ಸ್ಥಾಪಿಸಿದ್ದರಿಂದ ಇವರು ತ್ರೈವಿಧ್ಯರೆಂದು ಲೋಕದಲ್ಲಿ ಪ್ರಖ್ಯಾತರಾದರು. ಈ ರೀತಿ ರಾಮನು ಬ್ರಾಹ್ಮಣರಿಗೆ ದಾನ ಮಾಡಿ ತಾನು

CC-0. Jangamwadi Math Collection. Digitized by eGangotri

ಆತ್ಮಾನಂ ಚಾಽಪಿ ಮೇನೇ ಸ ಕೃತಕೃತ್ಯಂ ನರೇಶ್ವರಃ ।
ಬ್ರಹ್ಮಣಾ ಸ್ಥಾಪಿತಾಃ ಪೂರ್ವಂ ವಿಷ್ಣುನಾ ಶಂಕರೇಣ ಯೇ ॥ ೩೦ ॥
ತೇ ಪೂಜಿತಾ ರಾಘವೇಣ ಜೀರ್ಣೋದ್ಧಾರೇ ಕೃತೇ ಸತಿ ।
ಷಟ್ತ್ರಿಂಶಚ್ಚ ಸಹಸ್ರಾಣಿ ಗೋಭುಜಾ ಯೇ ವಣಿಗ್ವರಾಃ ॥ ೩೧ ॥
ಶುಶ್ರೂಷಾರ್ಥಂ ಪ್ರದತ್ತಾ ವೈ ದೇವೈರ್ಹರಿಹರಾದಿಭಿಃ ।
ಸಂತುಷ್ಟೇನ ತು ಶರ್ವೇಣ ತೇಭ್ಯೋ ದತ್ತಂ ತು ಚೇತನಂ ॥ ೩೨ ॥
ಶ್ವೇತಾಶ್ವಚಾಮರೌ ದತ್ತೌ ಖಡ್ಗಂ ದತ್ತಂ ಸುನಿರ್ಮಲಂ ।
ತದಾ ಪ್ರಬೋಧಿತಾಸ್ತೇ ಚ ದ್ವಿಜಶುಶ್ರೂಷಣಾಯ ವೈ ॥ ೩೩ ॥
ವಿವಾಹಾದೌ ಸದಾ ಭಾವ್ಯಂ ಚಾಮರೈರ್ಮಂಗಲಂ ವರಂ ।
ಖಡ್ಗಂ ಶುಭಂ ತದಾ ಧಾರ್ಯಂ ಮಮ ಚಿಹ್ನಂ ಕರೇ ಸ್ಥಿತಂ ॥ ೩೪ ॥
ಗುರುಪೂಜಾ ಸದಾ ಕಾರ್ಯಾ ಕುಲದೇವ್ಯಾಃ ಪುನಃ ಪುನಃ ।
ವೃದ್ಧ್ಯಾಗಮೇಷು ಪ್ರಾಪ್ತೇಷು ವೃದ್ಧಿದಾಯಕದಕ್ಷಿಣಾ ॥ ೩೫ ॥
ಏಕಾದಶ್ಯಾಂ ಶನೇರ್ವಾರೇ ದಾನಂ ದೇಯಂ ದ್ವಿಜನ್ಮನೇ ।
ಪ್ರದೇಯಂ ಬಾಲವೃದ್ಧೇಭ್ಯೋ ಮಮ ರಾಮಸ್ಯ ಶಾಸನಾತ್ ॥ ೩೬ ॥
ಮಂಡಲೇಷು ಚ ಯೇ ಶುದ್ಧಾ ವಣಿಗ್ವೃತ್ತಿರತಾಃ ಪರಾಃ ।
ಸಪಾದಲಕ್ಷಾಸ್ತೇ ದತ್ತಾ ರಾಮಶಾಸನಪಾಲಕಾಃ ॥ ೩೭ ॥

---

ಧನ್ಯನಾದೆನೆಂದು ತಿಳಿದನು. ಹೀಗೆ ರಾಮನು ಜೀರ್ಣೋದ್ಧಾರ ಮಾಡಿ ತ್ರಿಮೂರ್ತಿಗಳಿಂದ ಸ್ಥಾಪಿತರಾದ ಆ ಬ್ರಾಹ್ಮಣರನ್ನು ಪೂಜಿಸಿದನು. ಈ ಬ್ರಾಹ್ಮಣರ ಸೇವೆಗಾಗಿ ತ್ರಿಮೂರ್ತಿಗಳು ಸ್ಥಾಪಿಸಿದ ಮೂವತ್ತಾರುಸಾವಿರ ಗೋಪಾಲಕರಾದ ವೈಶ್ಯರಿಗೆ ಶಿವನು ಸಂತುಷ್ಟನಾಗಿ ಜ್ಞಾನದಾನ ಮಾಡಿದ್ದನು. ರಾಮನು ಆ ವೈಶ್ಯರಿಗೆ ಬಿಳಿಕುದುರೆ, ಚಾಮರ, ನಿರ್ಮಲವಾದ ಕತ್ತಿಗಳು ಇವುಗಳನ್ನಿತ್ತು "ವೈಶ್ಯರೆ! ನೀವು ಬ್ರಾಹ್ಮಣರ ಸೇವೆಯನ್ನು ಮಾಡಬೇಕು. ವಿವಾಹ ಮೊದಲಾದ ಉತ್ಸವಗಳಲ್ಲಿ ಚಾಮರವನ್ನೂ, ಹಿಡಿಯಲ್ಲಿ ನನ್ನ ಚಿಹ್ನೆಯುಳ್ಳ ಮಂಗಳಕರವಾದ ಕತ್ತಿಯನ್ನೂ ಧರಿಸಬೇಕು. ಯಾವಾಗಲೂ ಗುರುಗಳನ್ನೂ, ದೇವಿಯನ್ನೂ ಆರಾಧಿಸಬೇಕು. ಸಂಪತ್ಸಮೃದ್ಧಿಯಾಗಲು ಏಕಾದಶೀದಿನದಲ್ಲಿಯೂ, ಶನಿವಾರದಲ್ಲಿಯೂ ಬ್ರಾಹ್ಮಣರಿಗೂ, ಬಾಲಕರು ಮತ್ತು ಮುದುಕರಿಗೂ ವೃದ್ಧಿದಕ್ಷಿಣೆಯನ್ನು ನನ್ನ ಅಪ್ಪಣೆಯಂತೆ ಕೊಡಬೇಕು" ಎಂದು ಎಚ್ಚರಿಸಿದನು.

೩೭. ದೇಶಗಳಲ್ಲಿ ಶುದ್ಧರೂ, ವಾಣಿಜ್ಯದಲ್ಲಿ ಆಸಕ್ತರೂ, ಅಪ್ಪಣೆಯನ್ನು ಪಾಲಿಸುವವರೂ ಆಗಿರುವ ಒಂದು ಲಕ್ಷದ ಇಪ್ಪತ್ತೈದುಸಾವಿರ ವರ್ತಕರನ್ನು ರಾಮನು ಅಲ್ಲಿ ಸ್ಥಾಪಿಸಿದನು.

CC-0. Jangamwadi Math Collection. Digitized by eGangotri

ಮಾಂಡಲೀಕಾಸ್ತು ತೇ ಜ್ಞೇಯಾ ರಾಜಾನೋ ಮಂಡಲೇಶ್ವರಾಃ ।
ದ್ವಿಜಶುಶ್ರೂಷಣೇ ದತ್ತಾ ರಾಮೇಣ ವಣಿಜಾಂ ವರಾಃ ॥ ೩೮ ॥
ಚಾಮರದ್ವಿತಯಂ ರಾಮೋ ದತ್ತವಾನ್ಖಡ್ಗಮೇವ ಚ ।
ಕುಲಸ್ಯ ಸ್ವಾಮಿನಂ ಸೂರ್ಯಂ ಪ್ರತಿಷ್ಠಾವಿಧಿಪೂರ್ವಕಂ ॥ ೩೯ ॥
ಬ್ರಹ್ಮಾಣಂ ಸ್ಥಾಪಯಾಮಾಸ ಚತುರ್ವೇದ ಸಮನ್ವಿತಂ ।
ಶ್ರೀಮಾತರಂ ಮಹಾಶಕ್ತಿಂ ಶೂನ್ಯಸ್ವಾಮಿ ಹರಿಂ ತಥಾ ॥ ೪೦ ॥
ವಿಘ್ನೋಪಧ್ವಂಸನಾರ್ಥಾಯ ದಕ್ಷಿಣದ್ವಾರಸಂಸ್ಥಿತಂ ।
ಗಣಂ ಸಂಸ್ಥಾಪಯಾಮಾಸ ತಥಾಽನ್ಯಾಶ್ಚೈವ ದೇವತಾಃ ॥ ೪೧ ॥
ಕಾರಿತಾಸ್ತೇನ ವೀರೇಣ ಪ್ರಾಸಾದಾಃ ಸಪ್ತಭೂಮಿಕಾಃ ।
ಯತ್ಕಿಂಚಿತ್ಕುರುತೇ ಕಾರ್ಯಂ ಶುಭಂ ಮಾಂಗಲ್ಯರೂಪಕಂ ॥ ೪೨ ॥
ಪುತ್ರೇ ಜಾತೇ ಜಾತಕೇ ವಾಽನ್ನಾಶನೇ ಮುಂಡನೇಽಪಿ ವಾ ।
ಲಕ್ಷಹೋಮೇ ಕೋಟಿಹೋಮೇ ತಥಾ ಯಜ್ಞಕ್ರಿಯಾಸು ಚ ॥ ೪೩ ॥
ವಾಸ್ತುಪೂಜಾಗ್ರಹಶಾಂತ್ಯೋಃ ಪ್ರಾಪ್ತೇ ಚೈವ ಮಹೋತ್ಸವೇ ।
ಯತ್ಕಿಂಚಿತ್ಕುರುತೇ ದಾನಂ ದ್ರವ್ಯಂ ವಾ ಧಾನ್ಯಮುತ್ತಮಂ ॥ ೪೪ ॥
ವಸ್ತ್ರಂ ವಾ ಧೇನವೋ ನಾಥ ಹೇಮರೂಪ್ಯಂ ತಥೈವ ಚ ।
ವಿಪ್ರಾಣಾಮಥ ಶೂದ್ರಾಣಾಂ ದೀನಾಽನಾಥಾಂಧಕೇಷು ಚ ॥ ೪೫ ॥
ಪ್ರಥಮಂ ಬಕುಲಾಽರ್ಕಸ್ಯ ಶ್ರೀಮಾತುಶ್ಚೈವ ಮಾನವಃ ।
ಭಾಗಂ ದದ್ಯಾಚ್ಚ ನಿರ್ವಿಘ್ನಕಾರ್ಯಸಿದ್ಧ್ಯೈ ನಿರಂತರಂ ॥ ೪೬ ॥

---

೩೮–೪೧. ಅವರಿಗೆ ಮಾಂಡಲಿಕರೆಂದು ಹೆಸರಾಯಿತು. ಮತ್ತು ರಾಮನು ಶ್ರೇಷ್ಠರಾದ ಆ ವರ್ತಕರನ್ನು ಮಂಡಲೇಶ್ವರರಾದ ರಾಜರನ್ನಾಗಿಸಿ ಎರಡು ಚಾಮರಗಳನ್ನೂ ಕತ್ತಿಯನ್ನೂ ಕೊಟ್ಟು ಬ್ರಾಹ್ಮಣರ ಸೇವೆಗಾಗಿಟ್ಟನು. ತನ್ನ ವಂಶದ ಸ್ವಾಮಿಯಾದ ಸೂರ್ಯನನ್ನೂ, ಚತುರ್ವೇದಗಳಿಂದ ಸಹಿತನಾದ ಬ್ರಹ್ಮನನ್ನೂ, ಶ್ರೀಮಾತೆಯೆಂಬ ಮಹಾ ಶಕ್ತಿಯನ್ನೂ, ವಿಷ್ಣುವನ್ನೂ, ಸ್ಥಾಪಿಸಿದನು. ದಕ್ಷಿಣದ ಬಾಗಿಲಿನಲ್ಲಿ ವಿಘ್ನನಾಶಕ್ಕಾಗಿ ಗಣನಾಥನನ್ನೂ, ಇನ್ನೂ ಇತರ ದೇವತೆಗಳನ್ನೂ ಪ್ರತಿಷ್ಠೆಮಾಡಿದನು.

೪೨–೪೬. ಏಳು ಮಹಡಿಗಳುಳ್ಳ ಅರಮನೆಗಳನ್ನೂ ಕಟ್ಟಿಸಿದನು. ಮಾನವನು ಮತ್ತೆ ಜನರ ಜಾತಕರ್ಮ, ಅನ್ನಪ್ರಾಶನ, ಚೌಲ, ಲಕ್ಷಹೋಮ, ಕೋಟಿಹೋಮ, ಯಜ್ಞ, ವಾಸ್ತುಪೂಜಾ, ನವಗ್ರಹಶಾಂತಿ ಇವೆ ಮೊದಲಾದ ಮಂಗಳೋತ್ಸವಗಳಲ್ಲಿ ಬ್ರಾಹ್ಮಣರು, ಶೂದ್ರರು, ಬಡವರು, ದಿಕ್ಕಿಲ್ಲದವರು, ಕುರುಡರು ಇವರಿಗೆ ದ್ರವ್ಯ, ಧಾನ್ಯ, ವಸ್ತ್ರ, ಗೋವು, ಚಿನ್ನ, ಬೆಳ್ಳಿ ಇವುಗಳನ್ನು ಕೊಡುವಾಗ ಮೊದಲು ಬಕುಲಾರ್ಕನಿಗೂ, ಶ್ರೀಮಾತೆಗೂ ನಿರ್ವಿಘ್ನದಿಂದ ಕಾರ್ಯವು ನೆರವೇರುವುದಕ್ಕಾಗಿ ಭಾಗವನ್ನು ಕೊಡಬೇಕು.

CC-0. Jangamwadi Math Collection. Digitized by eGangotri

ವಚನಂ ಮೇ ಸಮುಲ್ಲಂಘ್ಯ ಕುರುತೇ ಯೋಽನ್ಯಥಾ ನರಃ ।
ತಸ್ಯ ತತ್ಕರ್ಮಣೋ ವಿಘ್ನಂ ಭವಿಷ್ಯತಿ ನ ಸಂಶಯಃ ॥ ೪೭ ॥
ಏವಮುಕ್ತ್ವಾ ತತೋ ರಾಮಃ ಪ್ರಹೃಷ್ಟೇನಾಂತರಾತ್ಮನಾ ।
ದೇವಾನಾಮಥ ವಾಪೀಶ್ಚ ಪ್ರಕಾರಾಂಸ್ತು ಸುಶೋಭನಾನ್ ॥ ೪೮ ॥
ದುರ್ಗೋಪಕರಣೈರ್ಯುಕ್ತಾನ್ಪ್ರತೋಲೀಶ್ಚ ಸುವಿಸ್ತೃತಾಃ ।
ನಿರ್ಮಮೇ ಚೈವ ಕುಂಡಾನಿ ಸರಾಂಸಿ ಸರಸೀಸ್ತಥಾ ॥ ೪೯ ॥
ಧರ್ಮವಾಪೀಶ್ಚ ಕೂಪಾಂಶ್ಚ ತಥಾನ್ಯಾನ್ದೇವನಿರ್ಮಿತಾನ್ ।
ಏತತ್ಸರ್ವಂ ಚ ವಿಸ್ತಾರ್ಯ ಧರ್ಮಾರಣ್ಯೇ ಮನೋರಮೇ ॥ ೫೦ ॥
ದದೌ ತ್ರೈವಿದ್ಯಮುಖ್ಯೇಭ್ಯಃ ಶ್ರದ್ಧಯಾ ಪರಯಾ ಪುನಃ ।
ತಾಮ್ರಪಟ್ಟಸ್ಥಿತಂ ರಾಮಶಾಸನಂ ಲೋಪಯೇತ್ತು ಯಃ ॥ ೫೧ ॥
ಪೂರ್ವಜಾಸ್ತಸ್ಯ ನರಕೇ ಪತಂತ್ಯಗ್ರೇ ನ ಸಂತತಿಃ ।
ವಾಯುಪುತ್ರಂ ಸಮಾಹೂಯ ತತೋ ರಾಮೋಽಬ್ರವೀದ್ವಚಃ ॥ ೫೨ ॥
ವಾಯುಪುತ್ರ ಮಹಾವೀರ ತವ ಪೂಜಾ ಭವಿಷ್ಯತಿ ।
ಅಸ್ಯ ಕ್ಷೇತ್ರಸ್ಯ ರಕ್ಷಾಯೈ ತ್ವಮತ್ರ ಸ್ಥಿತಿಮಾಚರ ॥ ೫೩ ॥
ಆಂಜನೇಯಸ್ತು ತದ್ವಾಕ್ಯಂ ಪ್ರಣಮ್ಯ ಶಿರಸಾ ದಧೌ ।
ಜೀರ್ಣೋದ್ಧಾರಂ ತದಾ ಕೃತ್ವಾ ಕೃತಕೃತ್ಯೋ ಬಭೂವ ಹ ॥ ೫೪ ॥

---

೪೭. ನರನು ನನ್ನ ಈ ಮಾತನ್ನು ಮೀರಿ ಬೇರೆ ವಿಧವಾಗಿ ನಡೆದರೆ ಅವನ ಕಾರ್ಯಕ್ಕೆ ವಿಘ್ನವೊದಗುವುದು.''

೪೮–೫೩. ರಾಮನು ಹೀಗೆಂದು ಹೇಳಿ, ಸಂತುಷ್ಟಮನಸ್ಸಿನಿಂದ ಧರ್ಮಾರಣ್ಯದಲ್ಲಿರುವ ದೇವತೆಗಳ ಕೊಳಗಳನ್ನೂ, ಮನೋಹರವಾದ ದುರ್ಗಗಳಿಂದ ಸಹಿತವಾದ ಆವರಣಗಳನ್ನೂ, ವಿಸ್ತಾರವಾದ ಬೀದಿಗಳನ್ನೂ, ಕುಂಡಗಳನ್ನೂ, ಸರೋವರಗಳನ್ನೂ, ನದಿಗಳನ್ನೂ, ದೇವನಿರ್ಮಿತವಾದ ಇನ್ನೂ ಇತರ ಬಾವಿ ಮೊದಲಾದುವುಗಳನ್ನೂ ವಿಸ್ತಾರಗೊಳಿಸಿ ಅತಿಶ್ರದ್ಧೆಯಿಂದ ಬ್ರಾಹ್ಮಣರಿಗೆ ದಾನಮಾಡಿದನು. ತಾಮ್ರದ ತಗಡಿನಲ್ಲಿ ಬರೆದಿರುವ ಆ ರಾಮನ ಶಾಸನವನ್ನು ಸುಳ್ಳುಮಾಡಿದವನ ಹಿಂದಿನವರು ನರಕದಲ್ಲಿ ಬೀಳುವರು. ಮುಂದೆ ಅವರ ಸಂತತಿ ಬೆಳೆಯುವುದಿಲ್ಲ. ಬಳಿಕ ರಾಮನು ವಾಯುಸುತನಾದ ಆಂಜನೇಯನನ್ನು ಕರೆಸಿ ''ವೀರಾಂಜನೇಯ! ಈ ಕ್ಷೇತ್ರದ ರಕ್ಷಣೆಗಾಗಿ ನೀನು ಇಲ್ಲಿ ನೆಲಸು. ನಿನಗೆ ಪೂಜೆ ಸಲ್ಲುವುದು'' ಎಂದನು.

೫೪–೫೫. ಆಂಜನೇಯನು ರಾಮನನ್ನು ವಂದಿಸಿ ಅವನ ಆಜ್ಞೆಯನ್ನು ಶಿರಸಾವಹಿಸಿದನು. ರಾಮನು ಹೀಗೆ ಜೀರ್ಣೋದ್ಧಾರವನ್ನು ಮಾಡಿ



CC-0. Jangamwadi Math Collection. Digitized by eGangotri

ಶ್ರೀಮಾತರಂ ತದಾಽಭ್ಯರ್ಚ್ಯ ಪ್ರಸನ್ನೇನಾಽಂತರಾತ್ಮನಾ ।
ಶ್ರೀಮಾತರಂ ನಮಸ್ಕೃತ್ಯ ತೀರ್ಥಾನ್ಯನ್ಯಾನಿ ರಾಘವಃ ॥ ೫೫ ॥
ತೇಽಪಿ ದೇವಾಃ ಸ್ವಕಂ ಸ್ಥಾನಂ ಯಯುರ್ಬ್ರಹ್ಮಪುರೋಗಮಾಃ ॥ ೫೬ ॥
ದತ್ವಾಶಿಷಂ ತು ರಾಮಾಯ ವಾಂಛಿತಂ ತೇ ಭವಿಷ್ಯತಿ ।
ರಮ್ಯಂ ಕೃತಂ ತ್ವಯಾ ರಾಮ ವಿಪ್ರಾಣಾಂ ಸ್ಥಾಪನಾದಿಕಂ ॥ ೫೭ ॥
ಅಸ್ಮಾಕಮಪಿ ವಾತ್ಸಲ್ಯಂ ಕೃತಂ ಪುಣ್ಯವತಾ ತ್ವಯಾ ।
ಇತಿ ಸ್ತುವಂತಸ್ತೇ ದೇವಾಃ ಸ್ವಾನಿ ಸ್ಥಾನಾನಿ ಭೇಜಿರೇ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ಶ್ರೀರಾಮಚಂದ್ರಸ್ಯ ಪುರಪ್ರತ್ಯಾಗಮನವರ್ಣನಂ" ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ಪ್ರಸನ್ನಾಂತಃಕರಣದಿಂದ ಶ್ರೀಮಾತೆಯನ್ನು ಅರ್ಚಿಸಿ ಅವಳನ್ನೂ, ಇತರ ತೀರ್ಥಗಳನ್ನೂ ನಮಸ್ಕರಿಸಿದನು.

೫೬–೫೮. ಬ್ರಹ್ಮಾದಿ ದೇವತೆಗಳು ರಾಮನನ್ನು ಆಶೀರ್ವದಿಸಿ "ರಾಮ! ನಿನ್ನ ವಾಂಛಿತಾರ್ಥಗಳು ಫಲಿಸುವುವು. ನೀನು ಬ್ರಾಹ್ಮಣಸ್ಥಾಪನೆ ಮೊದಲಾದ ಸತ್ಕಾರ್ಯವನ್ನು ಮಾಡಿರುವೆ. ಪುಣ್ಯವಂತನಾದ ನೀನು ನಮ್ಮಲ್ಲಿ ಸ್ನೇಹದಿಂದ ರುವೆ" ಎಂದು ಹೊಗಳುತ್ತ ತಂತಮ್ಮ ಸ್ಥಾನಗಳಿಗೆ ತೆರಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ಶ್ರೀರಾಮಚಂದ್ರನ ಪುರಪ್ರತ್ಯಾಗಮನ ವರ್ಣನ"ವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಚತುಸ್ತ್ರಿಂಶೋಽಧ್ಯಾಯಃ

### ಶ್ರೀರಾಮುಕೃತ ಶಾಸನಪಟ್ಟಪ್ರದಾನವರ್ಣನಂ

ವ್ಯಾಸ ಉವಾಚ :—

ಏವಂ ರಾಮೇಣ ಧರ್ಮಜ್ಞ ಜೀರ್ಣೋದ್ಧಾರಃ ಪುರಾ ಕೃತಃ ।
ದ್ವಿಜಾನಾಂ ಚ ಹಿತಾರ್ಥಾಯ ಶ್ರೀಮಾತುರ್ವಚನೇನ ಚ ॥ ೧ ॥

ಯುಧಿಷ್ಠಿರ ಉವಾಚ :—

ಕೀದೃಶಂ ಶಾಸನಂ ಬ್ರಹ್ಮನ್ರಾಮೇಣ ಲಿಖಿತಂ ಪುರಾ ।
ಕಥಯಸ್ವ ಪ್ರಸಾದೇನ ತ್ರೇತಾಯಾಂ ಸತ್ಯಮಂದಿರೇ ॥ ೨ ॥

ವ್ಯಾಸ ಉವಾಚ :—

ಧರ್ಮಾಽರಣ್ಯೇ ವರೇ ದಿವ್ಯೇ ಬಕುಲಾರ್ಕೇ ಸ್ವಧಿಷ್ಠಿತೇ ।
ಶೂನ್ಯಸ್ವಾಮಿನಿ ವಿಪ್ರೇಂದ್ರ ಸ್ಥಿತೇ ನಾರಾಯಣೇ ಪ್ರಭೌ ॥ ೩ ॥
ರಕ್ಷಣಾಧಿಪತೌ ದೇವೇ ಸರ್ವಜ್ಞೇ ಗುಣನಾಯಕೇ ।
ಭವಸಾಗರಮಗ್ನಾನಾಂ ತಾರಿಣೀ ಯತ್ರ ಯೋಗಿನೀ ॥ ೪ ॥
ಶಾಸನಂ ತತ್ರ ರಾಮಸ್ಯ ರಾಘವಸ್ಯ ಚ ನಾಮತಃ ।
ಶೃಣು ತಾಮ್ರಾಶ್ರಯಂ ತತ್ರ ಲಿಖಿತಂ ಧರ್ಮಶಾಸ್ತ್ರತಃ ॥ ೫ ॥

---

### ಕನ್ನಡದ ಅನುವಾದ

#### ಶ್ರೀರಾಮುಕೃತ ಶಾಸನಪಟ್ಟಪ್ರದಾನವರ್ಣನ

೧. ವ್ಯಾಸನು ಹೇಳುತ್ತಾನೆ:—ಯುಧಿಷ್ಠಿರ! ಶ್ರೀರಾಮಚಂದ್ರನು ಶ್ರೀಮಾತೆಯ ಮಾತಿನಂತೆ ಬ್ರಾಹ್ಮಣರ ಹಿತಕ್ಕಾಗಿ ಜೀರ್ಣೋದ್ಧಾರವನ್ನು ಮಾಡಿದನು.

೨. ಯುಧಿಷ್ಠಿರನು ಹೇಳುತ್ತಾನೆ:— ಎಲೈ ವ್ಯಾಸಮುನಿಯೆ! ತ್ರೇತಾಯುಗದಲ್ಲಿ ಸತ್ಯಮಂದಿರದಲ್ಲಿ ಶ್ರೀರಾಮನು ಎಂತಹ ಶಾಸನವನ್ನುಬರೆಯಿಸಿದನು? ಅದನ್ನು ಅನುಗ್ರಹಿಸಿ ನನಗೆ ಹೇಳು.

೩–೫. ವ್ಯಾಸನು ಹೇಳುತ್ತಾನೆ:—ಯುಧಿಷ್ಠಿರ! ಕೇಳು. ಬಕುಲಾರ್ಕನೂ, ಶೂನ್ಯಸ್ವಾಮಿಯಾದ ನಾರಾಯಣನೂ, ರಕ್ಷಾಧಿಕಾರಿಯಾದ ಗಜಾನನನೂ, ಭವಸಾಗರವನ್ನು ದಾಟಿಸುವ ಯೋಗಿನಿಯೂ ಇರುವ ಧರ್ಮಾರಣ್ಯದಲ್ಲಿ ಶ್ರೀರಾಮನು ತನ್ನ ಹೆಸರಿನಿಂದ ಧರ್ಮಶಾಸ್ತ್ರ ರೀತಿಯಾಗಿ ಶಾಸನವನ್ನು ಬರೆಯಿಸಿರುವನು.

CC-0. Jangamwadi Math Collection. Digitized by eGangotri

ಮಹಾಶ್ಚರ್ಯಕರಂ ತಚ್ಚ ಹ್ಯನೇಕಯುಗಸಂಸ್ಥಿತಂ ।
ಸರ್ವೋ ಧಾತುಃ ಕ್ಷಯಂ ಯಾತಿ ಸುವರ್ಣಂ ಕ್ಷಯಮೇತಿ ಚ ॥ ೬ ॥
ಪ್ರತ್ಯಕ್ಷಂ ದೃಶ್ಯತೇ ಪುತ್ರ ದ್ವಿಜಶಾಸನಮಕ್ಷಯಂ ।
ಅವಿನಾಶೋ ಹಿ ತಾಮ್ರಸ್ಯ ಕಾರಣಂ ತತ್ರ ವಿದ್ಯತೇ ॥ ೭ ॥
ವೇದೋಕ್ತಂ ಸಕಲಂ ಯಸ್ಮಾದ್ವಿಷ್ಣುರೇವ ಹಿ ಕಥ್ಯತೇ ।
ಪುರಾಣೇಷು ಚ ವೇದೇಷು ಧರ್ಮಶಾಸ್ತ್ರೇಷು ಭಾರತ ॥ ೮ ॥
ಸರ್ವತ್ರ ಗೀಯತೇ ವಿಷ್ಣುರ್ನಾನಾಭಾವಸಮಾಶ್ರಯಃ ।
ನಾನಾದೇಶೇಷು ಧರ್ಮೇಷು ನಾನಾಧರ್ಮನಿಷೇವಿಭಿಃ ॥ ೯ ॥
ನಾನಾಭೇದೈಸ್ತು ಸರ್ವತ್ರ ವಿಷ್ಣುರೇವೇತಿ ಚಿಂತ್ಯತೇ ।
ಅವತೀರ್ಣಃ ಸ ವೈ ಸಾಕ್ಷಾತ್ಪುರಾಣಪುರುಷೋತ್ತಮಃ ॥ ೧೦ ॥
ದೇವವೈರಿವಿನಾಶಾಯ ಧರ್ಮಸಂರಕ್ಷಣಾಯ ಚ ।
ತೇನೇದಂ ಶಾಸನಂ ದತ್ತಮವಿನಾಶಾತ್ಮಕಂ ಸುತ ॥ ೧೧ ॥
ಯಸ್ಯ ಪ್ರತಾಪಾದ್ದೃಷದಸ್ತಾರಿತಾ ಜಲಮಧ್ಯತಃ ।
ವಾನರೈರ್ವೇಷ್ಟಿತಾ ಲಂಕಾ ಹೇಲಯಾ ರಾಕ್ಷಸಾ ಹತಾಃ ॥ ೧೨ ॥
ಮುನಿಪುತ್ರಂ ಮೃತಂ ರಾಮೋ ಯಮಲೋಕಾದುಪಾನಯತ್ ।
ದುಂದುಭಿರ್ನಿಹತೋ ಯೇನ ಕಬಂಧೋಽಭಿಹತಸ್ತಥಾ ॥ ೧೩ ॥

---

೬–೭. ಸಕಲ ಲೋಹಗಳೂ ಕೆಲವು ದಿನಗಳ ತರುವಾಯ ಹಾಳಾಗುವುವು. ಆದರೆ ರಾಮನ ತಾಮ್ರಶಾಸನವು ಅನೇಕ ಯುಗಗಳಿಂದ ಅಕ್ಷಯವಾಗಿರುವುದು ಆಶ್ಚರ್ಯವನ್ನುಂಟುಮಾಡುವುದು. ಹೀಗೆ ಶಾಸನವು ನಾಶವಾಗದಿರಲು ಕಾರಣವೊಂದಿರುವುದು.

೮. ಮಗು! ಸಕಲ ವೇದಗಳೂ, ಪುರಾಣಗಳೂ, ಧರ್ಮಶಾಸ್ತ್ರಗಳೂ ವಿಷ್ಣುವನ್ನೆ ಪ್ರತಿಪಾದಿಸುವುವು.

೯–೧೧. ನಾನಾ ದೇಶಗಳಲ್ಲಿ ನಾನಾ ಧರ್ಮಿಗಳು ನಾನಾ ರೂಪಿಯಾದ ವಿಷ್ಣುವನ್ನು ನಾನಾ ರೂಪಗಳಿಂದ ಧ್ಯಾನಿಸುವರು. ಅನಾದಿಪುರುಷನಾದ ಅವನು ದೇವತೆಗಳ ಶತ್ರುಗಳಾದ ರಾಕ್ಷಸರ ನಾಶಕ್ಕಾಗಿಯೂ, ಧರ್ಮರಕ್ಷಣೆಗಾಗಿಯೂ ಭೂಲೋಕದಲ್ಲಿ ಶ್ರೀರಾಮನ ರೂಪದಿಂದವತರಿಸಿ ಶಾಶ್ವತವಾದ ಶಾಸನವನ್ನು ಬ್ರಾಹ್ಮಣರಿಗಿತ್ತಿರುವನು.

೧೨–೧೩. ಇವನ ಸಾಮರ್ಥ್ಯದಿಂದಲೆ ಸಮುದ್ರದ ಜಲದಲ್ಲಿ ಕಲ್ಲುಗಳು ತೇಲಿದುವು. ಕಪಿಗಳು ಲಂಕೆಯನ್ನು ಮುತ್ತಿ ಅನಾಯಾಸವಾಗಿ ರಾಕ್ಷಸರನ್ನು ಕೊಂದರು. ಮುನಿಯ ಮೃತನಾದ ಮಗನನ್ನು ಯಮಲೋಕದಿಂದ ರಾಮನು ಹಿಂದಕ್ಕೆ ಕರೆತರಿಸಿರುವನು. ದುಂದುಭಿ ಮತ್ತು ಕಬಂಧನನ್ನು ವಧಿಸಿದ್ದಾನೆ.

CC-0. Jangamwadi Math Collection. Digitized by eGangotri

ನಿಹತಾ ತಾಡಕಾ ಚೈವ ಸಪ್ತತಾಲಾ ವಿಭೇದಿತಾಃ ।
ಖರಶ್ಚ ದೂಷಣಶ್ಚೈವ ತ್ರಿಶಿರಾಶ್ಚ ಮಹಾಽಸುರಃ ॥ ೧೪ ॥
ಚತುರ್ದಶಸಹಸ್ರಾಣಿ ಜವೇನ ನಿಹತಾ ರಣೇ ।
ತೇನೇದಂ ಶಾಸನಂ ದತ್ತಮಕ್ಷಯಂ ನ ಕಥಂ ಭವೇತ್ ॥ ೧೫ ॥
ಸ್ವವಂಶವರ್ಣನಂ ತತ್ರ ಲಿಖಿತ್ವಾ ಸ್ವಯಮೇವ ತು ।
ದೇಶ ಕಾಲಾದಿಕಂ ಸರ್ವಂ ಲಿಲೇಖ ವಿಧಿಪೂರ್ವಕಂ ॥ ೧೬ ॥
ಸ್ವಮುದ್ರಾಚಿಹ್ನಿತಂ ತತ್ರ ತ್ರೈವಿದ್ಯೇಭ್ಯಸ್ತಥಾ ದದೌ ।
ಚತುಶ್ಚತ್ವಾರಿಂಶವರ್ಷೋಽ ರಾಮೋ ದಶರಥಾತ್ಮಜಃ ॥ ೧೭ ॥
ತಸ್ಮಿನ್ಕಾಲೇ ಮಹಾಶ್ಚರ್ಯಂ ಸಂದತ್ತಂ ಕಿಲ ಭಾರತ ।
ತತ್ರ ಸ್ವರ್ಣೋಽಪಮಂ ಚಾಽಪಿ ರೌಪ್ಯೋಽಪಮಮಥಾಽಪಿ ಚ ॥ ೧೮ ॥
ಉವಾಹ ಸಲಿಲಂ ತೀರ್ಥೇಽ ದೇವರ್ಷಿಪಿತೃತೃಪ್ತಿದಂ ।
ಸ್ವವಂಶನಾಯಕಸ್ಯಾಽಗ್ರೇ ಸೂರ್ಯೇಽಣ ಕೃತಮೇವ ತತ್ ॥ ೧೯ ॥
ತದ್ದೃಷ್ಟ್ವಾ ಮಹದಾಶ್ಚರ್ಯಂ ರಾಮೋ ವಿಷ್ಣುಂ ಪ್ರಪೂಜ್ಯ ಚ ।
ರಾಮಲೇಖವಿಚಿತ್ರೈಸ್ತು ಲಿಖಿತಂ ಧರ್ಮಶಾಸನಂ ॥ ೨೦ ॥
ಯದ್ದೃಷ್ಟ್ವಾಽಥ ದ್ವಿಜಾಃ ಸರ್ವೇಽ ಸಂಸಾರಭಯಬಂಧನಂ ।
ಕುರ್ವತೇ ನೈವ ಯಸ್ಮಾಚ್ಚ ತಸ್ಮಾನ್ನಿಖಿಲರಕ್ಷಕಂ ॥ ೨೧ ॥

---

೧೪–೧೫. ತಾಟಕೆಯನ್ನು ಕೊಂದಿದ್ದಾನೆ. ಏಳು ತಾಳೆಮರಗಳನ್ನು ಸೀಳಿದ್ದಾನೆ. ಖರ, ದೂಷಣ, ತ್ರಿಶಿರರನ್ನೂ, ಹದಿನಾಲ್ಕುಸಾವಿರ ರಾಕ್ಷಸರನ್ನೂ ಜನಸ್ಥಾನದ ಯುದ್ಧದಲ್ಲಿ ಕೊಂದಿದ್ದಾನೆ. ಇಂತಹ ಮಹಾನುಭಾವನು ಕೊಟ್ಟ ಶಾಸನವು ಹೇಗೆ ಅಕ್ಷಯವಾಗಲಾರದು ?

೧೬–೧೭. ಶ್ರೀರಾಮನು ತನ್ನ ನಲವತ್ತನಾಲ್ಕನೆಯ ವರ್ಷದಲ್ಲಿ ತಾನೆ ತನ್ನ ವಂಶದ ವರ್ಣನೆಯನ್ನೂ, ದೇಶ ಕಾಲಾದಿಗಳನ್ನೂ ವಿಧಿಯಂತೆ ಬರೆದು ತನ್ನ ಮುದ್ರೆಯನ್ನೊತ್ತಿ ಆ ಶಾಸನವನ್ನು ತ್ರೈವಿದ್ಯಬ್ರಾಹ್ಮಣರಿಗಿತ್ತನು.

೧೮–೨೦. ಆ ಸಮಯದಲ್ಲಿ ಅಲ್ಲಿರುವ ತೀರ್ಥದ ಪಿತೃತೃಪ್ತಿಯನ್ನುಂಟು ಮಾಡುವ ನೀರು ಚಿನ್ನ, ಬೆಳ್ಳಿಯಂತಾಗಿ ಅತ್ಯಂತ ಆಶ್ಚರ್ಯವೆಸಗಿತು. ರಾಮನು ತನ್ನ ವಂಶನಾಯಕನಾದ ಸೂರ್ಯನ ಮುಂದೆ ಅವನಿಂದ ಮಾಡಲ್ಪಟ್ಟ ಮಹದಾಶ್ಚರ್ಯವನ್ನು ಕಂಡು ವಿಷ್ಣುವನ್ನು ಪೂಜಿಸಿ ನಾನಾ ಲೇಖನಗಳಿಂದ ಧರ್ಮಶಾಸನವನ್ನು ಬರೆದನು.

೨೧. ಸಕಲರನ್ನೂ ಪೊರೆಯುವ ಈ ಶಾಸನವನ್ನು ಬ್ರಾಹ್ಮಣರು ಸಂದರ್ಶಿಸಿ ಸಂಸಾರಬಂಧನದ ಭಯವನ್ನು ತ್ಯಜಿಸುವರು.

CC-0. Jangamwadi Math Collection. Digitized by eGangotri

ಯೇ ಪಾಪಿಷ್ಠಾ ದುರಾಚಾರಾ ಮಿತ್ರದ್ರೋಹರತಾಶ್ಚ ಯೇ ।
ತೇಷಾಂ ಪ್ರಬೋಧನಾರ್ಥಾಯ ಪ್ರಸಿದ್ಧಿಮಕರೋತ್ಪರಾ ॥ ೨೨ ॥
ರಾಮಲೇಖವಿಚಿತ್ರೈಸ್ತು ವಿಚಿತ್ರೇ ತಾಮ್ರಪಟ್ಟಿಕೇ ।
ವಾಕ್ಯಾನೀಮಾನಿ ಶ್ರೂಯಂತೇ ಶಾಸನೇ ಕಿಲ ನಾರದ ॥ ೨೩ ॥
ಆಸ್ಫೋಟಯಂತಿ ಪಿತರಃ ಕಥಯಂತಿ ಪಿತಾಮಹಾಃ ।
ಭೂಮಿದೋಽಸ್ಮತ್ಕುಲೇ ಜಾತಃ ಸೋಽಸ್ಮಾನ್ಸಂತಾರಯಿಷ್ಯತಿ ॥ ೨೪ ॥
ಬಹುಭಿರ್ಬಹುಧಾ ಭುಕ್ತಾ ರಾಜಭಿಃ ಪೃಥಿವೀ ತ್ವಿಯಂ ।
ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಲಂ ॥ ೨೫ ॥
ಷಷ್ಠಿರ್ವರ್ಷಸಹಸ್ರಾಣಿ ಸ್ವರ್ಗೇ ವಸತಿ ಭೂಮಿದಃ ।
ಆಚ್ಛೇತ್ತಾ ಚಾಽವಮಂತಾ ಚ ತಾನ್ಯೇವ ನರಕಂ ವ್ರಜೇತ್ ॥ ೨೬ ॥
ಸಂದೇಶೈಸ್ತುದ್ಯಮಾನಸ್ತು ಮುದ್ಗರೈರ್ವಿನಿಹತ್ಯ ಚ ।
ಪಾಶೈಃ ಸುಬಧ್ಯಮಾನಸ್ತು ರೋಽರವೀತಿ ಮಹಾಸ್ವರಂ ॥ ೨೭ ॥
ತಾಡ್ಯಮಾನಃ ಶಿರೇ ದಂಡೈಃ ಸಮಾಲಿಂಗ್ಯ ವಿಭಾವಸುಂ ।
ಕ್ಷುರಿಕಯಾ ಛಿದ್ಯಮಾನೋ ರೋಽರವೀತಿ ಮಹಾಸ್ವನಂ ॥ ೨೮ ॥

---

೨೨. ರಾಮನು ಪಾಪಿಗಳೂ, ದುರ್ನಡತೆಯುಳ್ಳವರೂ, ಸ್ನೇಹಿತರಿಗೆ ದ್ರೋಹಮಾಡುವವರೂ ಆಗಿರುವ ಜನರ ಜ್ಞಾನೋದಯಕ್ಕಾಗಿ ಈ ಶಾಸನವನ್ನು ಪ್ರಸಿದ್ಧಿಗೊಳಿಸಿದನು.

೨೩. ನಾರದ! ರಾಮನ ಲೇಖನದಿಂದ ವಿಚಿತ್ರವಾದ ತಾಮ್ರಶಾಸನದಲ್ಲಿ ಈ ವಾಕ್ಯಗಳು ಬರೆಯಲ್ಪಟ್ಟಿರುವುವು.

೨೪. "ನಮ್ಮ ವಂಶದಲ್ಲಿ ಜನಿಸಿ ಭೂಮಿದಾನಗೈದವನು ನಮ್ಮನ್ನುದ್ಧರಿಸುವನು" ಎಂದು ಪಿತೃಗಳೂ, ಪಿತಾಮಹರೂ ಉದ್ಘೋಷಿಸುವರು.

೨೫. ಈ ಭೂಮಿಯನ್ನು ಅನೇಕ ಮಂದಿ ರಾಜರು ಆಳಿರುವರು. ಯಾವನು ಯಾವಾಗ ಆಳುತ್ತಿದ್ದನೊ, ಅವನಿಗೆ ಆಗ ಈ ಭೂಮಿಯು ಫಲವನ್ನಿತ್ತಿರುವುದು.

೨೬. ಭೂದಾನ ಮಾಡಿದವನು ಅರುವತ್ತುಸಾವಿರವರ್ಷ ಸ್ವರ್ಗದಲ್ಲಿ ವಾಸಿಸುವನು. ಆ ಭೂಮಿಯನ್ನು ಕಿತ್ತುಕೊಂಡವನೂ, ಹಾಗೆ ಕಿತ್ತುಕೊಳ್ಳುವುದಕ್ಕೆ ಅನುಮತಿಯನ್ನಿತ್ತವನೂ ಅಷ್ಟೇ ವರ್ಷಕಾಲ ನರಕದಲ್ಲಿ ವಾಸಮಾಡುವನು.

೨೭–೩೯. ಬ್ರಾಹ್ಮಣರ ಜೀವಿಕೆಯನ್ನು ಹಾಳುಮಾಡಿದವನನ್ನು ನಕರದಲ್ಲಿ ದುಷ್ಟರಾದ ಯಮದೂತರು ಇಕ್ಕಳದಿಂದ ಒತ್ತಿ, ಹಾರೆಯಿಂದ ಬಡಿದು,

CC-0. Jangamwadi Math Collection. Digitized by eGangotri

ಯಮದೂತೈರ್ಮಹಾಘೋರೈರ್ಬ್ರಹ್ಮವೃತ್ತಿವಿಲೋಪಕಃ ।
ಏವಂ ವಿಧೈರ್ಮಹಾದುಷ್ಟೈಃ ಪೀಡ್ಯಂತೇ ತೇ ಮಹಾಗಣೈಃ ॥ ೨೯ ॥
ತತಸ್ತಿರ್ಯಕ್ತ್ವಮಾಪ್ನೋತಿ ಯೋನಿಂ ವಾ ರಾಕ್ಷಸೀಂ ಶುನೀಂ ।
ವ್ಯಾಲೀಂ ಶೃಗಾಲೀಂ ಪೈಶಾಚೀಂ ಮಹಾಭೂತಭಯಂಕರೀಂ ॥ ೩೦ ॥
ಭೂಮೇರಂಗುಲಹರ್ತಾ ಹಿ ಸ ಕಥಂ ಪಾಪಮಾಚರೇತ್ ।
ಭೂಮೇರಂಗುಲದಾತಾ ಚ ಸ ಕಥಂ ಪುಣ್ಯಮಾಚರೇತ್ ॥ ೩೧ ॥
ಅಶ್ವಮೇಧಸಹಸ್ರಾಣಾಂ ರಾಜಸೂಯಶತಸ್ಯ ಚ ।
ಕನ್ಯಾಶತಪ್ರದಾನಸ್ಯ ಫಲಂ ಪ್ರಾಪ್ನೋತಿ ಭೂಮಿದಃ ॥ ೩೨ ॥
ಆಯುರ್ಯಶಃ ಸುಖಂ ಪ್ರಜ್ಞಾ ಧರ್ಮೋ ಧಾನ್ಯಂ ಧನಂ ಜಯಃ ।
ಸಂತಾನಂ ವರ್ಧತೇ ನಿತ್ಯಂ ಭೂಮಿದಃ ಸುಖಮಶ್ನುತೇ ॥ ೩೩ ॥
ಭೂಮೇರಂಗುಲಮೇಕಂ ತು ಯೇ ಹರಂತಿ ಖಲಾ ನರಾಃ ।
ವಂಧ್ಯಾಽಟವೀಷ್ವತೋಽಯಾಸು ಶುಷ್ಕಕೋಟರವಾಸಿನಃ ।
ಕೃಷ್ಣಸರ್ಪಾಃ ಪ್ರಜಾಯಂತೇ ದತ್ತದಾಯಾಽಪಹಾರಕಾಃ ॥ ೩೪ ॥
ತಡಾಗಾನಾಂ ಸಹಸ್ರೇಣ ಅಶ್ವಮೇಧಶತೇನ ವಾ ।
ಗವಾಂ ಕೋಟಿಪ್ರದಾನೇನ ಭೂಮಿಹರ್ತಾ ವಿಶುದ್ಧ್ಯತಿ ॥ ೩೫ ॥

---

ಹಗ್ಗದಿಂದ ಕಟ್ಟಿ, ದೊಣ್ಣೆಯಿಂದ ಹೊಡೆದು, ಬೆಂಕಿಯನ್ನುತಬ್ಬಿಸಿ, ಚೂರಿಯಿಂದ ಕತ್ತರಿಸಿ ಪೀಡಿಸುತ್ತಾರೆ. ಆಗ ಪಾಪಿಗಳು ಘಟ್ಟಿಯಾಗಿ ಕಿರಿಚಿಕೊಳ್ಳುವರು.

೩೦. ಬಳಿಕ ರಾಕ್ಷಸ, ನಾಯಿ, ಸರ್ಪ, ನರಿ, ಪಿಶಾಚ ಯೋನಿಗಳಲ್ಲಿ ಜನಿಸುವನು.

೩೧. ಒಂದು ಅಂಗುಲ ಭೂಮಿಯನ್ನು ಅಪಹರಿಸಿದ ಪಾಪಕ್ಕೂ, ದಾನ ಮಾಡಿದ ಪುಣ್ಯಕ್ಕೂ ಸಮಾನವಾದ ಪಾಪಪುಣ್ಯಗಳಿಲ್ಲ.

೩೨–೩೩. ಭೂದಾನವನ್ನಿತ್ತವನು ಸಹಸ್ರಾಶ್ವಮೇಧಯಾಗ, ನೂರು ರಾಜ ಸೂಯಯಾಗ, ನೂರು ಕನ್ಯಾದಾನ ಇವುಗಳನ್ನು ಮಾಡಿದ ಫಲಗಳನ್ನು ಪಡೆಯುವನು. ಮತ್ತು ಅವನ ಆಯುಸ್ಸು, ಕೀರ್ತಿ; ಸುಖ, ಜ್ಞಾನ, ಧರ್ಮ, ಧಾನ್ಯ, ಹಣ, ಜಯ, ಸಂತತಿ ಇವುಗಳು ಹೆಚ್ಚುವುವು.

೩೪. ಒಂದಂಗುಲ ಭೂಮಿಯನ್ನೂ, ಕೊಟ್ಟ ಸ್ವತ್ತನ್ನೂ ಅಪಹರಿಸುವ ದುಷ್ಟ ಮಾನವರು ನೀರಿಲ್ಲದ ಮರಳು ಕಾಡುಗಳಲ್ಲಿರುವ ಒಣಗಿದ ಪೊಟರು ಗಳಲ್ಲಿ ವಾಸಿಸುವ ಕೃಷ್ಣಸರ್ಪಗಳಾಗಿ ಹುಟ್ಟುವರು.

೩೫. ಭೂಮಿಯನ್ನು ಅಪಹರಿಸಿದವನು ಸಾವಿರ ಕೆರೆಗಳನ್ನು ಕಟ್ಟುವುದ ರಿಂದಲೂ, ನೂರು ಅಶ್ವಮೇಧಯಾಗಗಳನ್ನು ಮಾಡುವುದರಿಂದಲೂ, ಕೋಟಿ ಗೋವುಗಳನ್ನು ದಾನಮಾಡುವುದರಿಂದಲೂ ಶುದ್ಧನಾಗುವನು.

CC-0. Jangamwadi Math Collection. Digitized by eGangotri

ಯಾನೀಹ ದತ್ತಾನಿ ಪುನರ್ಧನಾನಿ
ದಾನಾನಿ ಧರ್ಮಾರ್ಥಯಶಸ್ಕರಾಣಿ ।
ಔದಾರ್ಯತೋ ವಿಪ್ರನಿವೇದಿತಾನಿ
ಕೋನಾಮ ಸಾಧುಃ ಪುನರಾದದೀತ ॥ ೩೬ ॥
ಚಲದಲದಲಲೀಲಾಚಂಚಲೇ ಜೀವಲೋಕೇ
ತೃಣಲವಲಘುಸಾರೇ ಸರ್ವಸಂಸಾರಸೌಖ್ಯೇ ।
ಅಪಹರತಿ ದುರಾಶಃ ಶಾಸನಂ ಬ್ರಾಹ್ಮಣಾನಾಂ
ನರಕಗಹನಗರ್ತಾವರ್ತಪಾತೋತ್ಸುಕೋ ಯಃ ॥ ೩೭ ॥
ಯೇ ಪಾಸ್ಯಂತಿ ಮಹೀಭುಜಃ ಕ್ಷಿತಿಮಿಮಾಂ ಯಾಸ್ಯಂತಿ ಭುಕ್ತ್ವಾಽಖಿಲಾಂ
ನೋ ಯಾತಾ ನ ತು ಯಾತಿ ಯಾಸ್ಯತಿ ನ ವಾ ಕೇನಾಽಪಿ ಸಾರ್ಧಂ ಧರಾ ।
ಯತ್ಕಿಂಚಿದ್ಭುವಿ ತದ್ವಿನಾಶಿ ಸಕಲಂ ಕೀರ್ತಿಃ ಪರಂ ಸ್ಥಾಯಿನೀ
ತ್ವೇವಂ ವೈ ವಸುಧಾಽಪಿ ಯೈರುಪಕೃತಾ ಲೋಪ್ಯಾ ನ ಸತ್ಕೀರ್ತಯಃ ॥
ಏಕೈವ ಭಗಿನೀ ಲೋಕೇ ಸರ್ವೇಷಾಮೇವ ಭೂಭುಜಾಂ ।
ನ ಭೋಜ್ಯಾ ನ ಕರಗ್ರಾಹ್ಯಾ ವಿಪ್ರದತ್ತಾ ವಸುಂಧರಾ ॥ ೩೯ ॥

---

೩೬. ಈ ಪ್ರಪಂಚದಲ್ಲಿ ಯಾವ ಸಜ್ಜನರು ಔದಾರ್ಯದಿಂದ ಬ್ರಾಹ್ಮಣರಿಗೆ ಧರ್ಮ, ಅರ್ಥ, ಕೀರ್ತಿಗಾಗಿ ಕೊಟ್ಟ ದಾನಗಳನ್ನೂ, ದ್ರವ್ಯಗಳನ್ನೂ ಮರಳಿ ತೆಗೆದುಕೊಂಡಾರು ?

೩೭. ಜೀವಿಗಳು ಅಶ್ವತ್ಥದ ಎಲೆಯಂತೆ ಚಂಚಲವಾಗಿರಲು, ಸಂಸಾರದ ಸಮಸ್ತ ಸೌಖ್ಯಗಳೂ ಹುಲ್ಲಿನ ಕಡ್ಡಿಯಂತೆ ನಿಸ್ಸಾರವಾಗಿರಲು ಯಾವ ನರನು ನರಕವಾಸಿಯಾಗುವ ಅಪೇಕ್ಷೆಯಿಂದ ಬ್ರಾಹ್ಮಣರ ಶಾಸನವನ್ನು ಅಪಹರಿಸುತ್ತಾನೆ ?

೩೮. ಈ ಭೂಮಿಯನ್ನು ಆಳುತ್ತಿರುವ ರಾಜರು ಸಕಲ ಭೋಗಗಳನ್ನನುಭವಿಸಿ ಅವಸಾನಗೊಳ್ಳುವರು. ಭೂಮಿಯು ಯಾವ ರಾಜರೊಡನೆಯೂ ಹೋಗಲಿಲ್ಲ. ಹೋಗುತ್ತಿಲ್ಲ. ಹೋಗುವುದೂ ಇಲ್ಲ. ಭೂಮಿಯಲ್ಲಿರುವುದೆಲ್ಲ ನಶ್ವರವಾದುದು. ಇಲ್ಲಿ ಉಪಕಾರಮಾಡಿದವರ ಕೀರ್ತಿಯು ಮಾತ್ರ ಶಾಶ್ವತವಾಗಿರುವುದು.

೩೯. ಸಮಸ್ತ ರಾಜರಿಗೂ ಬ್ರಾಹ್ಮಣರಿಗಿತ್ತ ಭೂಮಿಯು ಸಹೋದರಿಯಂತಿರುವುದು. ಅವಳಂತೆಯೇ ಈ ಭೂಮಿಯು ಸುಖಾನುಭವಕ್ಕೂ ಕಂದಾಯ ತೆಗೆದುಕೊಳ್ಳುವುದಕ್ಕೂ (ವಿವಾಹಕ್ಕೂ) ಉಚಿತವಾದುದಲ್ಲ.

CC-0. Jangamwadi Math Collection. Digitized by eGangotri

ದತ್ವಾ ಭೂಮಿಂ ಭಾವಿನಃ ಪಾರ್ಥಿವೇಶಾ
ನ್ಭೂಯೋ ಭೂಯೋ ಯಾಚತೇ ರಾಮಚಂದ್ರಃ ।
ಸಾಮಾನ್ಯೋಽಯಂ ಧರ್ಮಸೇತುರ್ನೃಪಾಣಾಂ
ಸ್ವೇ ಸ್ವೇ ಕಾಲೇ ಪಾಲನೀಯೋ ಭವದ್ಭಿಃ ॥ ೪೦ ॥
ಅಸ್ಮಿನ್ವಂಶೇ ಕ್ಷಿತೌ ಕೋಽಪಿ ರಾಜಾ ಯದಿ ಭವಿಷ್ಯತಿ ।
ತಸ್ಯಾಽಹಂ ಕರಲಗ್ನೋಽಸ್ಮಿ ಮದ್ದತ್ತಂ ಯದಿ ಪಾಲ್ಯತೇ ॥ ೪೧ ॥
ಲಿಖಿತ್ವಾ ಶಾಸನಂ ರಾಮಶ್ಚಾತುರ್ವೇದ್ಯದ್ವಿಜೋತ್ತಮಾನ್ ।
ಸಂಪೂಜ್ಯ ಪ್ರದದೌ ಧೀಮಾನ್ವಸಿಷ್ಠಸ್ಯ ಚ ಸನ್ನಿಧೌ ॥ ೪೨ ॥
ತೇ ವಾಡವಾ ಗೃಹೀತ್ವಾ ತಂ ಪಟ್ಟಂ ರಾಮಾಜ್ಞಯಾ ಶುಭಂ ।
ತಾಮ್ರಂ ಹೈಮಾಕ್ಷರಯುತಂ ಧರ್ಮ್ಯಂ ಧರ್ಮವಿಭೂಷಣಂ ॥ ೪೩ ॥
ಪೂಜಾರ್ಥಂ ಭಕ್ತಿಕಾಮಾರ್ಥಾಸ್ತದ್ರಕ್ಷಣಮಕುರ್ವತ ।
ಚಂದನೇನ ಚ ದಿವ್ಯೇನ ಪುಷ್ಪೇಣ ಚ ಸುಗಂಧಿನಾ ॥ ೪೪ ॥
ತಥಾ ಸುವರ್ಣಪುಷ್ಪೇಣ ರೂಪ್ಯಪುಷ್ಪೇಣ ವಾ ಪುನಃ ।
ಅಹನ್ಯಹನಿ ಪೂಜಾಂ ತೇ ಕುರ್ವತೇ ವಾಡವಾಃ ಶುಭಾಂ ॥ ೪೫ ॥
ತದಗ್ರೇ ದೀಪಕಂ ಚೈವ ಘೃತೇನ ವಿಮಲೇನ ಹಿ ।
ಸಪ್ತವರ್ತಿಯುತಂ ರಾಜನ್ನರ್ಘ್ಯಂ ಪ್ರಕುರ್ವತೇ ದ್ವಿಜಾಃ ॥ ೪೬ ॥

---

೪೦. ರಾಮಚಂದ್ರನು ಭೂಮಿಯನ್ನು ಬ್ರಾಹ್ಮಣರಿಗೆ ದಾನಮಾಡಿ ಮುಂದೆ ಬರುವ ರಾಜರನ್ನು ಕುರಿತು, "ಈ ಧರ್ಮದ ಕಟ್ಟು ಸಕಲ ರಾಜರಿಗೂ ಸಮಾನ್ಯವಾದುದು. ನೀವೆಲ್ಲರೂ ನಿಮ್ಮ ಕಾಲದಲ್ಲಿ ಇದನ್ನು ಕಾಪಾಡಬೇಕು" ಎಂದು ಪ್ರಾರ್ಥಿಸುತ್ತಾನೆ.

೪೧. ನಮ್ಮ ವಂಶದಲ್ಲಿ ಜನಿಸಿದ ಯಾವ ರಾಜನು ನಾನು ಕೊಟ್ಟುದನ್ನು ನಡಸಿಕೊಂಡುಬರುವನೊ, ನಾನು ಅವನ ದಾಸನು.

೪೨. ರಾಮನು ಹೀಗೆ ಶಾಸನಗಳನ್ನು ಬರೆದು ವಸಿಷ್ಠರ ಮುಂದೆ ಚತುರ್ವಿದ್ಯ ಬ್ರಾಹ್ಮಣರನ್ನು ಪೂಜಿಸಿ ಅವರಿಗೆ ಕೊಟ್ಟನು.

೪೩–೪೫. ಆ ಬ್ರಾಹ್ಮಣರು ರಾಮನ ಅಪ್ಪಣೆಯಂತೆ ಸುವರ್ಣಾಕ್ಷರಗಳುಳ್ಳುದಾಗಿ ಧರ್ಮಕ್ಕೆ ಭೂಷಣಪ್ರಾಯವಾದ ಆ ಶುಭ ತಾಮ್ರಶಾಸನಗಳನ್ನು ತೆಗೆದುಕೊಂಡು ಅದನ್ನು ಭಕ್ತಿ ಮತ್ತು ಕಾಮಗಳ ಅಪೇಕ್ಷೆಯುಳ್ಳವರಾಗಿ ಪೂಜೆಗಾಗಿ ರಕ್ಷಿಸಿದರು. ಮತ್ತು ಪ್ರತಿದಿನವೂ ಗಂಧ, ಪುಷ್ಪ, ಸುವರ್ಣ ಬೆಳ್ಳಿಹೂವುಗಳು ಇವುಗಳಿಂದ ಪೂಜಿಸುತ್ತಾರೆ.

೪೬. ಆ ಶಾಸನಗಳ ಮುಂದೆ ಶುದ್ಧವಾದ ತುಪ್ಪದ ಏಳು ಬತ್ತಿಯ ದೀಪವನ್ನು ಹಚ್ಚಿ ಅರ್ಘ್ಯಪ್ರದಾನಮಾಡುತ್ತಾರೆ.

CC-0. Jangamwadi Math Collection. Digitized by eGangotri

ನೈವೇದ್ಯಂ ಕುರ್ವತೇ ನಿತ್ಯಂ ಭಕ್ತಿಪೂರ್ವಂ ದ್ವಿಜೋತ್ತಮಾಃ ।
ರಾಮ ರಾಮೇತಿ ರಾಮೇತಿ ಮಂತ್ರಮುಪ್ಯುಚ್ಚರಂತಿ ಹಿ ॥ ೪೭ ॥
ಅಶನೇ ಶಯನೇ ಪಾನೇ ಗಮನೇ ಚೋಪವೇಶನೇ ।
ಸುಖೇ ವಾಽಪ್ಯಥ ವಾ ದುಃಖೇ ರಾಮಮಂತ್ರಂ ಸಮುಚ್ಚರೇತ್ ॥ ೪೮ ॥
ನ ತಸ್ಯ ದುಃಖಂ ದೌರ್ಭಾಗ್ಯಂ ನಾಧಿವ್ಯಾಧಿಭಯಂ ಭವೇತ್ ।
ಆಯುಃ ಶ್ರಿಯಂ ಬಲಂ ತಸ್ಯ ವರ್ಧಯಂತಿ ದಿನೇ ದಿನೇ ॥ ೪೯ ॥
ರಾಮೇತಿ ನಾಮ್ನಾ ಮುಚ್ಯೇತ ಪಾಪಾದ್ವೈ ದಾರುಣಾದಪಿ ।
ನರಕಂ ನ ಹಿ ಗಚ್ಛೇತ ಗತಿಂ ಪ್ರಾಪ್ನೋತಿ ಶಾಶ್ವತೀಂ ॥ ೫೦ ॥

ವ್ಯಾಸ ಉವಾಚ :—

ಇತಿ ಕೃತ್ವಾ ತತೋ ರಾಮಃ ಕೃತಕೃತ್ಯಮಮನ್ಯತ ।
ಪ್ರದಕ್ಷಿಣೀಕೃತ್ಯ ತದಾ ಪ್ರಣಮ್ಯ ಚ ದ್ವಿಜಾನ್ಬಹೂನ್ ॥ ೫೧ ॥
ದತ್ತ್ವಾ ದಾನಂ ಭೂರಿತರಂ ಗವಾಽಶ್ವಮಹಿಷೀರಥಂ ।
ತತಃ ಸರ್ವಾನ್ನಿಜಾಂಸ್ತಾಂಶ್ಚ ವಾಕ್ಯಮೇತದುವಾಚ ಹ ॥ ೫೨ ॥
ಅತ್ರೈವ ಸ್ಥೀಯತಾಂ ಸರ್ವೈರ್ಯಾವಚ್ಚಂದ್ರದಿವಾಕರೌ ।
ಯಾವನ್ಮೇರುರ್ಮಹೀಪೃಷ್ಠೇ ಸಾಗರಾಃ ಸಪ್ತ ಏವ ಚ ॥ ೫೩ ॥

---

೪೭. ನೈವೇದ್ಯವನ್ನು ಸಮರ್ಪಿಸಿ ಭಕ್ತಿಪೂರ್ವಕವಾಗಿ ರಾಮಮಂತ್ರವನ್ನು ಉಚ್ಚರಿಸುತ್ತಾರೆ.

೪೮. ಮನುಷ್ಯನು ಊಟ, ಶಯನ, ಪಾನ, ಗಮನಕಾಲಗಳಲ್ಲಿಯೂ, ಕುಳಿತಾಗಲೂ, ಸುಖದುಃಖಗಳಲ್ಲಿಯೂ ರಾಮಮಂತ್ರವನ್ನು ಉಚ್ಚರಿಸಬೇಕು.

೪೯. ಹೀಗೆ ರಾಮಧ್ಯಾನಮಾಡಿದವನಿಗೆ ದುಃಖ, ದಾರಿದ್ರ್ಯ, ಮನೋವ್ಯಥೆ, ಮತ್ತು ರೋಗಗಳ ಭಯವಿರುವುದಿಲ್ಲ. ಅವನಿಗೆ ಪ್ರತಿದಿನವೂ ಆಯುಸ್ಸೂ, ಸಂಪತ್ತೂ, ಶಕ್ತಿಗಳೂ ಹೆಚ್ಚುವುವು.

೫೦. ರಾಮನಾಮೋಚ್ಚಾರಣೆಯಿಂದ ಭಯಂಕರವಾದ ಪಾಪದಿಂದಲೂ ಮುಕ್ತನಾಗಿ ನರಕಗಾಮಿಯಾಗದೆ ಶಾಶ್ವತಮೋಕ್ಷವನ್ನೇ ಪಡೆಯುವನು.

೫೧-೫೨. ವ್ಯಾಸನು ಹೇಳುತ್ತಾನೆ:—ರಾಮನು ಈ ರೀತಿ ಜೀರ್ಣೋದ್ಧಾರ ಮಾಡಿ ನಾನು ಧನ್ಯನಾದೆನೆಂದು ತಿಳಿದನು. ಆ ಬ್ರಾಹ್ಮಣರನ್ನೆಲ್ಲ ಪ್ರದಕ್ಷಿಣ ನಮಸ್ಕಾರಮಾಡಿ ಅವರಿಗೆ ಗೋವು, ಕುದುರೆ, ಎಮ್ಮೆ, ರಥ ಇವುಗಳನ್ನು ಬಹುವಾಗಿ ದಾನಕೊಟ್ಟು ಹೀಗೆಂದನು.

೫೩-೫೮. "ನೀವೆಲ್ಲರೂ ಚಂದ್ರಸೂರ್ಯರು, ಮೇರುಪರ್ವತ, ಸಪ್ತ ಸಮುದ್ರಗಳು ಭೂಮಿಯಲ್ಲಿ ಇರುವವರೆಗೆ ಇಲ್ಲಿಯೇ ವಾಸಮಾಡಬೇಕು. ಅಯ್ಯಾ ದ್ವಿಜರೆ! ನನ್ನ ಅಪ್ಪಣೆಯನ್ನು ರಾಜರಾಗಲಿ, ಮದೋನ್ಮತ್ತರಾದ ವೈಶ್ಯರಾಗಲಿ

CC-0. Jangamwadi Math Collection. Digitized by eGangotri

ತಾವದತ್ರೈವ ಸ್ಥಾತವ್ಯಂ ಭವದ್ಭಿರ್ಹಿ ನ ಸಂಶಯಃ ।
ಯದಾ ಹಿ ಶಾಸನಂ ವಿಪ್ರಾ ನ ಮನ್ಯಂತೇ ನೃಪಾ ಭುವಿ ॥ ೫೪ ॥
ಅಥವಾ ವಣಿಜಃ ಶೂರಾ ಮದಮಾಯಾವಿಮೋಹಿತಾಃ ।
ಮದಾಜ್ಞಾಂ ನ ಪ್ರಕುರ್ವಂತಿ ಮನ್ಯಂತೇ ವಾ ನ ತೇ ಜನಾಃ ॥ ೫೫ ॥
ತದಾ ವೈ ವಾಯುಪುತ್ರಸ್ಯ ಸ್ಮರಣಂ ಕ್ರಿಯತಾಂ ದ್ವಿಜಾಃ ।
ಸ್ಮೃತಮಾತ್ರೋ ಹನೂಮಾನ್ಸ್ವೈ ಸಮಾಗತ್ಯ ಕರಿಷ್ಯತಿ ॥ ೫೬ ॥
ಸಹಸಾ ಭಸ್ಮ ತಾನ್ಸತ್ಯಂ ವಚನಾನ್ಮೇ ನ ಸಂಶಯಃ ।
ಯ ಇದಂ ಶಾಸನಂ ರಮ್ಯಂ ಪಾಲಯಿಷ್ಯತಿ ಭೂಪತಿಃ ॥ ೫೭ ॥
ವಾಯುಪುತ್ರಃ ಸದಾ ತಸ್ಯ ಸೌಖ್ಯಮೃದ್ಧಿಂ ಪ್ರದಾಸ್ಯತಿ ।
ದದಾತಿ ಪುತ್ರಾನ್ಪೌತ್ರಾಂಶ್ಚ ಸಾಧ್ವೀಂ ಪತ್ನೀಂ ಯಶೋ ಜಯಂ ॥ ೫೮ ॥
ಇತ್ಯೇವಂ ಕಥಯಿತ್ವಾ ಚ ಹನುಮಂತಂ ಪ್ರಬೋಧ್ಯ ಚ ।
ನಿವರ್ತಿತೋ ರಾಮದೇವಃ ಸಸೈನ್ಯಃ ಸಪರಿಚ್ಛದಃ ॥ ೫೯ ॥
ವಾದಿತ್ರಾಣಾಂ ಸ್ವನೈರ್ವಿಷ್ವಕ್ಸೂಚ್ಯಮಾನಶುಭಾಗಮಃ ।
ಶ್ವೇತಾತಪತ್ರಯುಕ್ತೋಽಸೌ ಚಾಮರೈರ್ವೀಜಿತೋ ನರೈಃ ।
ಅಯೋಧ್ಯಾಂ ನಗರೀಂ ಪ್ರಾಪ್ಯ ಚಿರಂ ರಾಜ್ಯಂ ಚಕಾರ ಹ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಬ್ರಹ್ಮನಾರದಸಂವಾದೇ ಶ್ರೀರಾಮೇಣ ಬ್ರಾಹ್ಮಣೇಭ್ಯಃ ಶಾಸನಪಟ್ಟಪ್ರದಾನವರ್ಣನಂ" ನಾಮ ಚತುಸ್ತ್ರಿಂಶೋಽಧ್ಯಾಯಃ

---

ನೆರವೇರಿಸದಿದ್ದರೆ ಆಗ ವಾಯುತನಯನಾದ ಆಂಜನೇಯನನ್ನು ಸ್ಮರಿಸಿರಿ. ಸ್ಮರಣಮಾತ್ರದಿಂದಲೇ ಹನುಮಂತನು ಇಲ್ಲಿಗೆ ಬಂದು ನನ್ನ ಮಾತಿನಂತೆ ಅವರನ್ನು ಬೂದಿಮಾಡುವನು. ಈ ನನ್ನ ಶಾಸನವನ್ನು ಕಾಪಾಡುವ ರಾಜನಿಗೆ ಹನುಮಂತನು ಸೌಖ್ಯವನ್ನೂ, ಸಂಪತ್ಸಮೃದ್ಧಿಯನ್ನೂ, ಪುತ್ರಪೌತ್ರರನ್ನೂ, ಪತಿವ್ರತೆಯಾದ ಪತ್ನಿಯನ್ನೂ, ಯಶಸ್ಸನ್ನೂ, ಜಯವನ್ನೂ ಕೊಡುವನು.

೫೯–೬೦. ಹೀಗೆ ಹನುಮಂತನಿಗೂ ತಿಳಿಸಿ ರಾಮನು ಸೈನ್ಯ ಸಾಮಗ್ರಿಗಳೊಡನೆ ವಾದ್ಯಗಳ ಧ್ವನಿಯಿಂದ ತನ್ನ ಶುಭಾಗಮನವನ್ನು ಸೂಚಿಸುತ್ತ ಶ್ವೇತಚ್ಛತ್ರವುಳ್ಳವನಾಗಿ ಚಾಮರಗಳಿಂದ ಬೀಸಿಸಿಕೊಳ್ಳುತ್ತ ಅಯೋಧ್ಯೆಗೆ ಹೋಗಿ ಬಹುಕಾಲ ರಾಜ್ಯಭಾರಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯಮಾಹಾತ್ಮ್ಯವಲ್ಲಿ ಬ್ರಹ್ಮನಾರದ ಸಂವಾದದಲ್ಲಿ "ಶಾಸನಪಟ್ಟಪ್ರದಾನವರ್ಣನ"ವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಪಂಚತ್ರಿಂಶೋಽಧ್ಯಾಯಃ

### ಶ್ರೀರಾಮಚಂದ್ರಕೃತ ಧರ್ಮಾರಣ್ಯತೀರ್ಥಕ್ಷೇತ್ರ ಜೀರ್ಣೋದ್ಧಾರವರ್ಣನಂ

ನಾರದ ಉವಾಚ :—

ಭಗವನ್ದೇವದೇವೇಶ ಸೃಷ್ಟಿಸಂಹಾರಕಾರಕ ।
ಗುಣಾತೀತೋ ಗುಣೈರ್ಯುಕ್ತೋ ಮುಕ್ತೀನಾಂ ಸಾಧನಂ ಪರಂ ॥ ೧ ॥
ಸಂಸ್ಥಾಪ್ಯ ವೇದಭವನಂ ವಿಧಿವದ್ದ್ವಿಜಸತ್ತಮಾನ್ ।
ಕಿಂ ಚಕ್ರೇ ರಘುನಾಥಸ್ತು ಭೂಯೋಽಯೋಧ್ಯಾಂ ಗತಸ್ತದಾ ।
ಸ್ವಸ್ಥಾನೇ ಬ್ರಾಹ್ಮಣಾಸ್ತತ್ರ ಕಾನಿ ಕರ್ಮಾಣಿ ಚಕ್ರಿರೇ ॥ ೨ ॥

ಬ್ರಹ್ಮೋವಾಚ :—

ಇಷ್ಟಾಪೂರ್ತರತಾಃ ಶಾಂತಾಃ ಪ್ರತಿಗ್ರಹಪರಾಙ್ಮುಖಾಃ ॥ ೩ ॥
ರಾಜ್ಯಂ ಚಕ್ರುರ್ವನಸ್ಯಾಽಸ್ಯ ಪುರೋಧಾ ದ್ವಿಜಸತ್ತಮಃ ।
ಉವಾಚ ರಾಮಪುರತಸ್ತೀರ್ಥಮಾಹಾತ್ಮ್ಯಮುತ್ತಮಂ ॥ ೪ ॥
ಪ್ರಯಾಗಸ್ಯ ಚ ಮಾಹಾತ್ಮ್ಯಂ ತ್ರಿವೇಣೀಫಲಮುತ್ತಮಂ ।
ಪ್ರಯಾಗತೀರ್ಥಮಹಿಮಾ ಶುಕ್ಲತೀರ್ಥಸ್ಯ ಚೈವ ಹಿ ॥ ೫ ॥
ಸಿದ್ಧಕ್ಷೇತ್ರಸ್ಯ ಕಾಶ್ಯಾಶ್ಚ ಗಂಗಾಯಾ ಮಹಿಮಾ ತಥಾ ।
ವಸಿಷ್ಠಃ ಕಥಯಾಮಾಸ ತೀರ್ಥಾನ್ಯನ್ಯಾನಿ ನಾರದ ॥ ೬ ॥

---

### ಕನ್ನಡದ ಅನುವಾದ

#### ಶ್ರೀರಾಮಚಂದ್ರ ಕೃತ ಧರ್ಮಾರಣ್ಯತೀರ್ಥಕ್ಷೇತ್ರ ಜೀರ್ಣೋಧ್ಧಾರವರ್ಣನ

೧–೨. ನಾರದನು ಹೇಳುತ್ತಾನೆ:–ದೇವತೆಗಳಿಗೆ ಒಡೆಯನೂ ಪ್ರಪಂಚದ ಸೃಷ್ಟಿ ಮತ್ತು ಸಂಹಾರಗಳನ್ನು ಮಾಡುವವನೂ ಆಗಿರುವ ಓ ಬ್ರಹ್ಮದೇವನೆ! ನಿರ್ಗುಣನೂ ಗುಣಸಹಿತನೂ ಆಗಿರುವ ರಾಘವನು ಮುಕ್ತಿಸಾಧನವಾದ ವೇದ ಭವನದಲ್ಲಿ ದ್ವಿಜಶ್ರೇಷ್ಠರನ್ನು ಸ್ಥಾಪಿಸಿ ಅಯೋಧ್ಯೆಯನ್ನು ಸೇರಿ ಏನನ್ನು ಮಾಡಿದನು? ಬ್ರಾಹ್ಮಣರು ತಮ್ಮ ಸ್ಥಳದಲ್ಲಿಯೇ ನೆಲಸಿದವರಾಗಿ ಯಾವ ಯಾವ ಕರ್ಮಗಳನ್ನು ನೆರವೇರಿಸಿದರು?

೩–೪. ಬ್ರಹ್ಮನು ಹೇಳುತ್ತಾನೆ:—ಅತ್ತ ಬ್ರಾಹ್ಮಣರು ಇಷ್ಟಾಪೂರ್ತಗಳಲ್ಲಿ ನಿರತರೂ, ಶಾಂತರೂ, ದಾನವನ್ನು ತೆಗೆದುಕೊಳ್ಳದವರೂ ಆಗಿ ವನರಾಜ್ಯದಲ್ಲಿ ವಾಸಿಸಿದರು. ಇತ್ತ ಪುರೋಹಿತರಾದ ವಸಿಷ್ಠರು ರಾಮನ ಮುಂದೆ ಉತ್ತಮವಾದ ತೀರ್ಥಮಾಹಾತ್ಮ್ಯೆಯನ್ನು ಹೇಳಿದರು.

೫–೬. ನಾರದ! ವಸಿಷ್ಠರು ಪ್ರಯಾಗ, ತ್ರಿವೇಣೀ, ಶುಕ್ಲತೀರ್ಥ, ಸಿದ್ಧ ಕ್ಷೇತ್ರ, ಕಾಶೀ, ಗಂಗೆ ಇವುಗಳ, ಇನ್ನೂ ಇತರ ತೀರ್ಥಗಳ ಮಾಹಾತ್ಮ್ಯೆಯನ್ನು

CC-0. Jangamwadi Math Collection. Digitized by eGangotri

ಧರ್ಮಾರಣ್ಯೇ ಸುವರ್ಣಾಯಾ ಹರಿಕ್ಷೇತ್ರಸ್ಯ ತಸ್ಯ ಚ ।
ಸ್ನಾನದಾನಾದಿಕಂ ಸರ್ವಂ ವಾರಾಣಸ್ಯಾ ಯವಾಽಧಿಕಂ ॥ ೭ ॥
ಏತಚ್ಛ್ರುತ್ವಾ ರಾಮದೇವಃ ಸ ಚಮತ್ಕೃತಮಾನಸಃ ।
ಧರ್ಮಾರಣ್ಯೇ ಪುನರ್ಯಾತ್ರಾಂ ಕರ್ತುಕಾಮಃ ಸಮುದ್ಯಗಾತ್ ॥ ೮ ॥
ಸೀತಯಾ ಸಹ ಧರ್ಮಜ್ಞೋ ಗುರುಸ್ಸೈನ್ಯಪುರಸ್ಸರಃ ।
ಲಕ್ಷ್ಮಣೇನ ಸಹಭ್ರಾತ್ರಾ ಭರತೇನ ಸಹಾಯವಾನ್ ॥ ೯ ॥
ಶತ್ರುಘ್ನೇನ ಪರಿವೃತೋ ಗತೋ ಮೋಹೇರಕೇ ಪುರೇ ।
ತತ್ರ ಗತ್ವಾ ವಸಿಷ್ಠಂ ತು ಪೃಚ್ಛತೇಽಸೌ ಮಹಾಮನಾಃ ॥ ೧೦ ॥

ರಾಮ ಉವಾಚ :—

ಧರ್ಮಾರಣ್ಯೇ ಮಹಾಕ್ಷೇತ್ರೇ ಕಿಂ ಕರ್ತವ್ಯಂ ದ್ವಿಜೋತ್ತಮ ।
ದಾನಂ ವಾ ನಿಯಮೋ ವಾಽಥ ಸ್ನಾನಂ ವಾ ತಪ ಉತ್ತಮಂ ॥ ೧೧ ॥
ಧ್ಯಾನಂ ವಾಽಥ ಕ್ರತುಂ ವಾಽಥ ಹೋಮಂ ವಾ ಜಪಮುತ್ತಮಂ ।
ದಾನಂ ವಾ ನಿಯಮಂ ವಾಽಥ ಸ್ನಾನಂ ವಾ ತಪ ಉತ್ತಮಂ ॥ ೧೨ ॥
ಯೇನ ವೈ ಕ್ರಿಯಮಾಣೇನ ತೀರ್ಥೇಽಸ್ಮಿನ್ದ್ವಿಜಸತ್ತಮ ।
ಬ್ರಹ್ಮಹತ್ಯಾದಿ ಪಾಪೇಭ್ಯೋ ಮುಚ್ಯತೇ ತದ್ಬ್ರವೀಹಿ ಮೇ ॥ ೧೩ ॥

ವಸಿಷ್ಠ ಉವಾಚ :—

ಯಜ್ಞಂ ಕುರು ಮಹಾಭಾಗ ಧರ್ಮಾರಣ್ಯೇತ್ವನುತ್ತಮಂ ।
ದಿನೇ ದಿನೇ ಕೋಟಿಗುಣಂ ಯಾವದ್ವರ್ಷಶತಂ ಭವೇತ್ ॥ ೧೪ ॥

---

ತಿಳಿಸಿದರು. ಧರ್ಮಾರಣ್ಯದಲ್ಲಿರುವ ಸುವರ್ಣಾನದಿ ಮತ್ತು ಹರಿಕ್ಷೇತ್ರಗಳಲ್ಲಿ ಮಾಡಿದ ಸ್ನಾನ ದಾನಾದಿಗಳು ಕಾಶಿಗಿಂತಲೂ ಸ್ವಲ್ಪ ಅಧಿಕವಾದುವೆಂದರು.

೮. ಇದನ್ನು ಕೇಳಿ ಕುತೂಹಲಗೊಂಡ ರಾಮನು ಮರಳಿ ಧರ್ಮಾರಣ್ಯಕ್ಕೆ ಯಾತ್ರೆಹೊರಟನು.

೯–೧೦. ಅವನು ಸೀತೆ, ಲಕ್ಷ್ಮಣ, ಭರತ, ಶತ್ರುಘ್ನರಿಂದಲೂ, ದೊಡ್ಡ ಸೈನ್ಯದಿಂದಲೂ ಕೂಡಿ ಮೋಹೇರಕಪಟ್ಟಣವನ್ನು ಸೇರಿ ವಸಿಷ್ಠರನ್ನು ಹೀಗೆ ಕೇಳಿದನು.

೧೧–೧೩. ರಾಮನು ಕೇಳುತ್ತಾನೆ:—ದ್ವಿಜವರೇಣ್ಯರೆ! ದಾನ, ವ್ರತ, ಸ್ನಾನ, ಧ್ಯಾನ, ಯಜ್ಞ, ಹೋಮ, ಜಪ ಇವುಗಳಲ್ಲಿ ಯಾವುದನ್ನು ಈ ತೀರ್ಥದಲ್ಲಿ ಮಾಡಿದರೆ ಮಾನವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುವನು?

೧೪. ವಸಿಷ್ಠನು ಹೇಳುತ್ತಾನೆ:—ಮಹಾನುಭಾವನಾದ ರಾಮ! ನೀನು ಧರ್ಮಾರಣ್ಯದಲ್ಲಿ ಉತ್ತಮವಾದ ಯಜ್ಞವನ್ನು ಮಾಡು. ಅದು ಒಂದು ನೂರು ವರ್ಷದವರೆಗೆ ಪ್ರತಿನಿತ್ಯವೂ ಕೋಟಿ ಮಡಿಯಾಗುವುದು.

CC-0. Jangamwadi Math Collection. Digitized by eGangotri

ತಚ್ಛ್ರುತ್ವಾ ಚೈವ ಗುರುತೋ ಯಜ್ಞಾರಂಭಂ ಚಕಾರ ಸಃ ।
ತಸ್ಮಿನ್ನವಸರೇ ಸೀತಾ ರಾಮಂ ವ್ಯಾಜ್ಞಾಪಯನ್ಮುದಾ ॥ ೧೫ ॥
ಸ್ವಾಮಿನ್ಪೂರ್ವಂ ತ್ವಯಾ ವಿಪ್ರಾ ವೃತಾ ಯೇ ವೇದಪಾರಗಾಃ ।
ಬ್ರಹ್ಮವಿಷ್ಣುಮಹೇಶೇನ ನಿರ್ಮಿತಾ ಯೇ ಪುರಾ ದ್ವಿಜಾಃ ॥ ೧೬ ॥
ಕೃತೇ ತ್ರೇತಾಯುಗೇ ಚೈವ ಧರ್ಮಾರಣ್ಯನಿವಾಸಿನಃ ।
ವಿಪ್ರಾಂಸ್ತಾನ್ಸ್ವೈ ವೃಣುಷ್ವ ತ್ವಂ ತೈರೇವ ಸಾಧಕೋಽಧ್ವರಃ ॥ ೧೭ ॥
ತಚ್ಛ್ರುತ್ವಾ ರಾಮದೇವೇನ ಆಹೂತಾ ಬ್ರಾಹ್ಮಣಾಸ್ತದಾ ।
ಸ್ಥಾಪಿತಾಶ್ಚ ಯಥಾಪೂರ್ವಮಸ್ಮಿನ್ಮೋಹೇರಕೇ ಪುರೇ ॥ ೧೮ ॥
ತೈಸ್ತ್ವಷ್ಟಾದಶಸಂಖ್ಯಾಕೈಸ್ತ್ರೈವಿದ್ಯೈರ್ಮೋಹವಾಡವೈಃ ।
ಯಜ್ಞಂ ಚಕಾರ ವಿಧಿವತ್ತೈರೇವಾಯುತಬುದ್ಧಿಭಿಃ ॥ ೧೯ ॥
ಕುಶಿಕಃ ಕೌಶಿಕೋ ವತ್ಸ ಉಪಮನ್ಯುಶ್ಚ ಕಾಶ್ಯಪಃ ।
ಕೃಷ್ಣಾತ್ರೇಯೋ ಭರದ್ವಾಜೋ ಧಾರಿಣಃ ಶೌನಕೋ ವರಃ ॥ ೨೦ ॥
ಮಾಂಡವ್ಯೋ ಭಾರ್ಗವಃ ಪೈಂಗ್ಯೋ ವಾತ್ಸ್ಯೋ ಲೌಗಾಕ್ಷ ಏವ ಚ ।
ಗಾಂಗಾಯನೋಽಥ ಗಾಂಗೇಯಃ ಶುನಕಃ ಶೌನಕಸ್ತಥಾ ॥ ೨೧ ॥

ಬ್ರಹ್ಮೋವಾಚ :—

ಏಭಿರ್ವಿಪ್ರೈಃ ಕ್ರತುಂ ರಾಮಃ ಸಮಾಪ್ಯ ವಿಧಿವನ್ನೃಪಃ ।
ಚಕಾರಾಽವಭೃಥಂ ರಾಮೋ ವಿಪ್ರಾನ್ಸಂಪೂಜ್ಯ ಭಕ್ತಿತಃ ॥ ೨೨ ॥

---

೧೫. ರಾಮನು ಗುರುಗಳಿಂದ ಆ ಮಾತನ್ನು ಕೇಳಿ ಯಜ್ಞವನ್ನು ಆರಂಭಿಸಿದನು. ಆಗ ಸೀತೆಯು ರಾಮನಲ್ಲಿ ಸಂತೋಷದಿಂದ ಹೀಗೆ ವಿಜ್ಞಾಪಿಸಿಕೊಂಡಳು.

೧೬–೧೮. "ನಾಥ! ನೀನು ಹಿಂದೆ ಬ್ರಹ್ಮಾದಿಗಳಿಂದ ನಿರ್ಮಿತರಾದ ಕೃತ ತ್ರೇತಾಯುಗಗಳಿಂದ ಧರ್ಮಾರಣ್ಯವಾಸಿಗಳಾಗಿರುವ ಶ್ರೋತ್ರಿಯರಾದ ಬ್ರಾಹ್ಮಣರನ್ನು ವರಿಸಿರುವೆ. ಅವರನ್ನೆ ಈಗಲೂ ಕರೆಯಿಸಿ ಯಜ್ಞವನ್ನು ನೆರವೇರಿಸು." ಅದನ್ನು ಕೇಳಿ ರಾಮನು ಆ ಬ್ರಾಹ್ಮಣರನ್ನು ಕರೆಯಿಸಿ ಮೊದಲಿನಂತೆ ಮೋಹೇರಕಪಟ್ಟಣದಲ್ಲಿ ಸ್ಥಾಪಿಸಿದನು.

೧೯–೨೧. ಕುಶಿಕ, ಕೌಶಿಕ, ವತ್ಸ, ಉಪಮನ್ಯು, ಕಾಶ್ಯಪ, ಕೃಷ್ಣಾತ್ರೇಯ, ಭರದ್ವಾಜ, ಧಾರಿಣ, ವರ, ಶೌನಕ, ಮಾಂಡವ್ಯ, ಭಾರ್ಗವ, ಪೈಂಗ್ಯ, ವಾತ್ಸ್ಯ, ಲೌಗಾಕ್ಷ, ಗಾಂಗಾಯನ, ಗಾಂಗೇಯ, ಶುನಕ, ಶೌನಕ ಎಂಬ ವಿಶಾಲ ಮನಸ್ಸುಳ್ಳ ಹದಿನೆಂಟು ಮಂದಿ ಮೋಹೇರಕವಾಸಿಗಳಾದ ತ್ರೈವಿದ್ಯ ಬ್ರಾಹ್ಮಣರಿಂದ ಯಜ್ಞಮಾಡಿಸಿದನು.

೨೨. ಬ್ರಹ್ಮನು ಹೇಳುತ್ತಾನೆ:—ಹೀಗೆ ಬ್ರಾಹ್ಮಣರಿಂದ ರಾಮನು

CC-0. Jangamwadi Math Collection. Digitized by eGangotri

ಯಜ್ಞಾಂತೇ ಸೀತಯಾ ರಾಮೋ ವಿಜ್ಞಪ್ತಃ ಸುವಿನೀತಯಾ ।
ಅಸ್ಯಾಽಧ್ವರಸ್ಯ ಸಂಪತ್ತ್ಯೈ ದಕ್ಷಿಣಾಂ ದೇಹಿ ಸುವ್ರತ ॥ ೨೩ ॥
ಮನ್ನಾಮ್ನಾ ಚ ಪುರಂ ತತ್ರ ಸ್ಥಾಪ್ಯತಾಂ ಶೀಘ್ರಮೇವ ಚ ।
ಸೀತಾಯಾ ವಚನಂ ಶ್ರುತ್ವಾ ತಥಾ ಚಕ್ರೇ ನೃಪೋತ್ತಮಃ ॥ ೨೪ ॥
ತೇಷಾಂ ಚ ಬ್ರಾಹ್ಮಣಾನಾಂ ಚ ಸ್ಥಾನಮೇಕಂ ಸುನಿರ್ಭಯಂ ।
ದತ್ತಂ ರಾಮೇಣ ಸೀತಾಯಾಃ ಸಂತೋಷಾಯ ಮಹೀಭೃತಾ ॥ ೨೫ ॥
ಸೀತಾಪುರಮಿತಿಖ್ಯಾತಂ ನಾಮ ಚಕ್ರೇ ತದಾ ಕಿಲ ।
ತಸ್ಯಾಽಧಿದೇವ್ಯೌ ವರ್ತೇತೇ ಶಾಂತಾ ಚೈವ ಸುಮಂಗಲಾ ॥ ೨೬ ॥
ಮೋಹೇರಕಸ್ಯ ಪುರತೋ ಗ್ರಾಮದ್ವಾದಶಕಂ ಪುರಃ ।
ದದೌ ವಿಪ್ರಾಯ ವಿದುಷೇ ಸಮುತ್ಥಾಯ ಪ್ರಹರ್ಷಿತಃ ॥ ೨೭ ॥
ತೀರ್ಥಾಂತರಂ ಜಗಾಮಾಶು ಕಾಶ್ಯಪೀಸರಿತಸ್ತಟೇ ।
ವಾಡವಾಃ ಕೇಽಪಿ ನೀತಾಸ್ತೇ ರಾಮೇಣ ಸಹ ಧರ್ಮವಿತ್ ॥ ೨೮ ॥
ಧರ್ಮಾಲಯೇ ಗತಃ ಸದ್ಯೋ ಯತ್ರ ಮಾಲಾ ಕಮಂಡಲುಃ ।
ಪುರಾ ಧರ್ಮೇಣ ಸುಮಹತ್ಕೃತಂ ಯತ್ರ ತಪೋ ಮುನೇ ॥ ೨೯ ॥

---

ವಿಧಿಯಂತೆ ಯಜ್ಞವನ್ನು ಮುಗಿಸಿ ಭಕ್ತಿಯಿಂದ ಅವರನ್ನು ಪೂಜಿಸಿ ಅವಭೃಥ ಸ್ನಾನಮಾಡಿದನು.

೨೩. ಯಜ್ಞದ ಕೊನೆಯಲ್ಲಿ ವಿನೀತಳಾದ ಸೀತೆಯು ರಾಮನನ್ನು ಕುರಿತು ನಾಥ ! ಈ ಯಜ್ಞವು ಸಾಂಗವಾಗುವುದಕ್ಕಾಗಿ ದಕ್ಷಿಣೆಯನ್ನು ಕೊಡು.

೨೪. ಅಲ್ಲಿ ನನ್ನ ಹೆಸರಿನಿಂದ ಶೀಘ್ರವಾಗಿ ಪಟ್ಟಣವನ್ನು ಸ್ಥಾಪಿಸು ಎಂದು ವಿಜ್ಞಾಪಿಸಿಕೊಳ್ಳಲು ರಾಮನು ಅವಳ ಮಾತಿನಂತೆ ನಡೆದನು.

೨೫. ಸಾರ್ವಭೌಮನಾದ ರಾಮನು ಸೀತೆಯ ಸಂತೋಷಕ್ಕಾಗಿ ಆ ಬ್ರಾಹ್ಮಣರಿಗೊಂದು ನಿರ್ಭಯವಾದ ಸ್ಥಳವನ್ನೇರ್ಪಡಿಸಿದನು.

೨೬. ಅದಕ್ಕೆ ಸೀತಾಪುರವೆಂಬ ಪ್ರಸಿದ್ಧವಾದ ಹೆಸರನ್ನಿಟ್ಟನು. ಸೀತಾ ಪುರಕ್ಕೆ ಶಾಂತಾ ಮತ್ತು ಸುಮಂಗಳೆಯರು ಅಧಿದೇವತೆಗಳಾದರು.

೨೭. ಮೋಹೇರಕದ ಮುಂದಿರುವ ಹನ್ನೆರಡು ಗ್ರಾಮಗಳನ್ನು ವಿದ್ವಾಂಸ ನಾದ ಬ್ರಾಹ್ಮಣನಿಗೆ ಸಂತೋಷದಿಂದೆದ್ದು ದಾನಮಾಡಿದನು.

೨೮-೨೯. ಕೂಡಲೆ ಧರ್ಮಜ್ಞನಾದ ರಾಮನು ಕಾಶ್ಯಪೀನದಿಯ ದಡದಲ್ಲಿ ಮತ್ತೊಂದು ತೀರ್ಥಕ್ಕೆ ಪಯಣ ಬೆಳೆಸಿದನು. ಆಗ ಆತನು ಅಲ್ಲಿಗೆ ಕೆಲವು ಬ್ರಾಹ್ಮಣರನ್ನೂ ಕರೆದುಕೊಂಡುಹೋದನು. ಆತನು ತೀರ್ಥಯಾತ್ರೆಮಾಡುತ್ತ ಹಿಂದೆ ಯಮಧರ್ಮನು ತಪಸ್ಸನ್ನು ಮಾಡಿದುದರಿಂದ ಅವನ ಜಪಸರ ಮತ್ತು ಕಮಂಡಲುಗಳುಳ್ಳ ಧರ್ಮಾಲಯಕ್ಕೆ ಹೋದನು.

CC-0. Jangamwadi Math Collection. Digitized by eGangotri

ತದಾರಭ್ಯ ಸುವಿಖ್ಯಾತಂ ಧರ್ಮಾಲಯಮಿತಿ ಶ್ರುತಂ ।
ದದೌ ದಾಶರಥಿಸ್ತತ್ರ ಮಹಾದಾನಾನಿ ಷೋಡಶ ॥ ೩೦ ॥
ಯೇ ಪಂಚಾಶತ್ತದಾ ಗ್ರಾಮಾಃ ಸೀತಾಪುರಸಮನ್ವಿತಾಃ ।
ಸತ್ಯಮಂದಿರಪರ್ಯಂತಾ ರಘುನಾಥೇನ ವೈ ತದಾ ॥ ೩೧ ॥
ಸೀತಾಯಾ ವಚನಾತ್ತತ್ರ ಗುರುವಾಕ್ಯೇನ ಚೈವ ಹಿ ।
ಆತ್ಮನೋ ವಂಶವೃದ್ಧ್ಯರ್ಥಂ ದ್ವಿಜೇಭ್ಯೋಽದಾದ್ರಘೂತ್ತಮಃ ॥ ೩೨ ॥
ಅಷ್ಟಾದಶಸಹಸ್ರಾಣಾಂ ದ್ವಿಜಾನಾಮುಭವತ್ಕುಲಂ ।
ವಾತ್ಸ್ಯಾಯನ ಉಪಮನ್ಯುರ್ಜಾತೂಕರ್ಣ್ಯೋಽಥಪಿಂಗಲಃ ॥ ೩೩ ॥
ಭಾರದ್ವಾಜಸ್ತಥಾ ವತ್ಸಃ ಕೌಶಿಕಃ ಕುಶ ಏವ ಚ ।
ಶಾಂಡಿಲ್ಯಃ ಕಶ್ಯಪಶ್ಚೈವ ಗೌತಮಶ್ಚಾಂಧನಸ್ತಥಾ ॥ ೩೪ ॥
ಕೃಷ್ಣಾತ್ರೇಯಸ್ತಥಾ ವತ್ಸೋ ವಸಿಷ್ಠೋ ಧಾರಣಸ್ತಥಾ ।
ಭಾಂಡಿಲಶ್ಚೈವ ವಿಜ್ಞೇಯೋ ಯೌವನಾಶ್ವಸ್ತತಃ ಪರಂ ॥ ೩೫ ॥
ಕೃಷ್ಣಾಯನೋಪಮನ್ಯೂ ಚ ಗಾರ್ಗ್ಯಮುದ್ಗಲಮೌಖಕಾಃ ।
ಪುಶಿಃ ಪರಾಶರಶ್ಚೈವ ಕೌಂಡಿನ್ಯಶ್ಚ ತತಃ ಪರಂ ॥ ೩೬ ॥
ಪಂಚಪಂಚಾಶದ್ಗ್ರಾಮಾಣಾಂ ನಾಮಾನ್ಯೇವಂ ಯಥಾಕ್ರಮಂ ।
ಸೀತಾಪುರಂ ಶ್ರೀಕ್ಷೇತ್ರಂ ಚ ಮುಶಲೀ ಮುದ್ಗಲೀ ತಥಾ ॥ ೩೭ ॥
ಜ್ಯೇಷ್ಠಲಾ ಶ್ರೇಯಸ್ಥಾನಂ ಚ ದಂತಾಲೀ ವಟಪತ್ರಕಾ ।
ರಾಜ್ಞಃ ಪುರಂ ಕೃಷ್ಣವಾಟಂ ದೇಹಂ ಲೋಹಂಚನಸ್ಥಲಂ ॥ ೩೮ ॥

---

೩೦. ಪ್ರಸಿದ್ಧವಾದ ಧರ್ಮಾಲಯದಲ್ಲಿ ದಾಶರಥಿಯು ಹದಿನಾರು ಮಹಾದಾನಗಳನ್ನು ಮಾಡಿದನು.

೩೧–೩೨. ಸೀತಾಪುರದಿಂದ ಸತ್ಯಮಂದಿರದವರೆಗೆ ಇರುವ ಐವತ್ತು ಗ್ರಾಮಗಳನ್ನು ಸೀತೆಯ ಮತ್ತು ಗುರುಗಳ ಮಾತಿನಂತೆ ಆತನು ತನ್ನ ವಂಶ ವೃದ್ಧಿಗಾಗಿ ಬ್ರಾಹ್ಮಣರಿಗೆ ದಾನಮಾಡಿದನು.

೩೩–೩೬. ಹದಿನೆಂಟುಸಾವಿರ ಮಂದಿ ಬ್ರಾಹ್ಮಣರಿಗೆ ವಾತ್ಸ್ಯಾಯನ, ಉಪಮನ್ಯು, ಜಾತೂಕರ್ಣ್ಯ, ಪಿಂಗಲ, ಭಾರದ್ವಾಜ, ವತ್ಸ, ಕೌಶಿಕ, ಕುಶ, ಶಾಂಡಿಲ್ಯ, ಕಶ್ಯಪ, ಗೌತಮ, ಛಾಂದನ, ಕೃಷ್ಣಾತ್ರೇಯ, ವಸಿಷ್ಠ, ಧಾರಣ, ಭಾಂಡಿಲ, ಯೌವನಾಶ್ವ, ಕೃಷ್ಣಾಯನ, ಗಾರ್ಗ್ಯ, ಮುದ್ಗಲ, ಮೌಖಕ, ಪುಶಿ, ಪರಾಶರ, ಕೌಂಡಿನ್ಯ ಎಂಬ ಕುಲಗಳಾದುವು.

೩೭–೪೪. ರಾಮನು ಸೀತಾಪುರ, ಶ್ರೀಕ್ಷೇತ್ರ, ಮುಶಲೀ, ಮುದ್ಗಲೀ, ಜ್ಯೇಷ್ಠಲಾ, ಶ್ರೇಯಸ್ಥಾನ, ದಂತಾಲೀ, ವಟಪತ್ರಕಾ, ರಾಜಪುರ, ಕೃಷ್ಣವಾಟ, ದೇಹ, ಲೋಹ, ಚನಸ್ಥಲ, ಕೋಹೇಳ, ಚಂದನಕ್ಷೇತ್ರ, ಥಲ, ಹಸ್ತಿನಾಪುರ,

CC-0. Jangamwadi Math Collection. Digitized by eGangotri

ಕೋಹೇಳಂ ಚಂದನಕ್ಷೇತ್ರಂ ಥಲಂ ಚ ಹಸ್ತಿನಾಪುರಂ ।
ಕರ್ಪಟಂ ಕನ್ನಜಹ್ನವೀ ವನೋಡ ಫಲಫಾವಲೀ ॥ ೩೯ ॥
ಮೋಹೋಥಂ ಶಮೋ ಹೋರಲೀ ಗೋವಿಂದಣಂ ಥಲತ್ಯಜಂ ।
ಚಾರಣಸಿದ್ಧಂ ಸೋದ್ಗೀತ್ರಾ ಭಾಜ್ಯಜಂ ವಟಮಾಲಿಕಾ ॥ ೪೦ ॥
ಗೋಥರಂ ಮಾರಣಜಂ ಚೈವ ಮಾತ್ರಮಧ್ಯಂ ಚ ಮಾತರಂ ।
ಬಲವತೀ ಗಂಧವತೀ ಈಆವಿಲ್ಲೀ ಚ ರಾಜ್ಯಜಂ ॥ ೪೧ ॥
ರೂಪಾವಲೀ ಬಹುಧನಂ ಛತ್ರೀಟಂ ವಂಶಜಂ ತಥಾ ।
ಜಾಯಾಸಂರಣಂ ಗೋತಿಕೀ ಚ ಚಿತ್ರಲೇಖಂ ತಥೈವ ಚ ॥ ೪೨ ॥
ದುಗ್ಧಾವಲೀ ಹಂಸಾವಲೀ ಚ ವೈಹೋಲಂ ಚೈಲ್ಲಜಂ ತಥಾ ।
ನಾಲಾವಲೀ ಆಸಾವಲೀ ಸುಹಾಲೀ ಕಾಮುತಃ ಪರಂ ॥ ೪೩ ॥
ರಾಮೇಣ ಪಂಚಪಂಚಾಶದ್ಗ್ರಾಮಾಣಿ ವಸನಾಯ ಚ ।
ಸ್ವಯಂ ನಿರ್ಮಾಯ ದತ್ತಾನಿ ದ್ವಿಜೇಭ್ಯಸ್ತೇಭ್ಯ ಏವ ಚ ॥ ೪೪ ॥
ತೇಷಾಂ ಶುಶ್ರೂಷಣಾರ್ಥಾಯ ವೈಶ್ಯಾನ್ರಾಮೋ ನ್ಯವೇದಯತ್ ।
ಷಟ್ತ್ರಿಂಶಚ್ಚ ಸಹಸ್ರಾಣಿ ಶೂದ್ರಾಂಸ್ತೇಭ್ಯಶ್ಚತುರ್ಗುಣಾನ್ ॥ ೪೫ ॥
ತೇಭ್ಯೋ ದತ್ತಾನಿ ದಾನಾನಿ ಗವಾಽಶ್ವವಸನಾನಿ ಚ ।
ಹಿರಣ್ಯಂ ರಜತಂ ತಾಮ್ರಂ ಶ್ರದ್ಧಯಾ ಪರಯಾ ಮುದಾ ॥ ೪೬ ॥

ನಾರದ ಉವಾಚ :—

ಅಷ್ಟಾದಶಸಹಸ್ರಾಸ್ತೇ ಬ್ರಾಹ್ಮಣಾ ವೇದಪಾರಗಾಃ ।
ಕಥಂ ತೇ ವ್ಯಭಜನ್ಗ್ರಾಮಾನ್ಗ್ರಾಮೋತ್ಪನ್ನಂ ತಥಾ ವಸು ।
ವಸ್ತ್ರಾದ್ಯಂ ಭೂಷಣಾದ್ಯಂ ಚ ತನ್ಮೇ ಕಥಯ ಸುವ್ರತ ॥ ೪೭ ॥

---

ಕರ್ಪಟ, ಕಂನಜಹ್ನವೀ, ವನೋಡ, ಫನಫಾವಲೀ, ಮೋಹೋಧ, ಶಮೋ ಹೋರಲಿ, ಗೋವಿಂದಣ, ಥಲತ್ಯಜ, ಚಾರಣಸಿದ್ಧ, ಸೋದ್ಗೀತ್ರ, ಭಾಜ್ಯಜ, ವಟಮಾಲಿಕಾ, ಗೋಥರ, ಮಾರಣಜ, ಮಾತ್ರಮಧ್ಯ, ಮಾತರ, ಬಲವತೀ, ಗಂಧವತೀ, ಈಆವಿಲ್ಲೀ, ರಾಜ್ಯಜ, ರೂಪಾವಲೀ, ಬಹುಧನ, ಛತ್ರೀಟ, ವಂಶಜ, ಜಾಯಾಸಂರಣ, ಗೋತಿಕೀ, ಚಿತ್ರಲೇಖ, ದುಗ್ಧಾವಲೀ, ಹಂಸಾವಲೀ, ವೈಹೋಲ, ಚೈಲ್ಲಜ, ನಾಲಾವಲೀ, ಆಸಾವಲೀ, ಸುಹಾಲೀ ಮೊದಲಾದ ಐವತ್ತೈದು ಗ್ರಾಮಗಳನ್ನು ನಿರ್ಮಿಸಿ ವಾಸಕ್ಕಾಗಿ ಆ ಬ್ರಾಹ್ಮಣರಿಗಿತ್ತನು.

೪೫–೪೬. ಅವರ ಸೇವೆಗಾಗಿ ಮೂವತ್ತಾರು ಸಾವಿರ ವೈಶ್ಯರನ್ನೂ, ಅವರ ನಾಲ್ಕರಷ್ಟು ಶೂದ್ರರನ್ನೂ ಸ್ಥಾಪಿಸಿ ಸಂತೋಷಗೊಂಡು ಅವರಿಗೆ ಗೋವು, ಕುದುರೆ, ಬಟ್ಟೆ, ಚಿನ್ನ, ಬೆಳ್ಳಿ, ತಾಮ್ರಗಳನ್ನು ಅತಿ ಶ್ರದ್ಧೆಯಿಂದ ಕೊಟ್ಟನು.

೪೭. ನಾರದನು ಹೇಳುತ್ತಾನೆ:—ವೇದಪಾರಂಗತರಾದ ಆ ಹದಿನೆಂಟು

CC-0. Jangamwadi Math Collection. Digitized by eGangotri

ಬ್ರಹ್ಮೋವಾಚ :–

ಯಜ್ಞಾಂತೇ ದಕ್ಷಿಣಾ ಯಾವತ್ಸರ್ತ್ವಿಗ್ಭಿಃ ಸ್ವೀಕೃತಾ ಸುತ ।
ಮಹಾದಾನಾದಿಕಂ ಸರ್ವಂ ತೇಭ್ಯ ಏವ ಸಮರ್ಪಿತಂ ॥ ೪೮ ॥
ಗ್ರಾಮಾಃ ಸಾಧಾರಣಾ ದತ್ತಾ ಮಹಾಸ್ಥಾನಾನಿ ವೈ ತದಾ ।
ಯೇ ವಸಂತಿ ಚ ಯತ್ರೈವ ತಾನಿ ತೇಷಾಂ ಭವಂತ್ವಿತಿ ॥ ೪೯ ॥
ವಸಿಷ್ಠವಚನಾತ್ತತ್ರ ಗ್ರಾಮಾಸ್ತೇ ವಿಪ್ರಸಾತ್ಕೃತಾಃ ।
ರಘೂದ್ವಹೇನ ಧೀರೇಣ ನೋದ್ವಸಂತಿ ಯಥಾ ದ್ವಿಜಾಃ ॥ ೫೦ ॥
ಧಾನ್ಯಂ ತೇಷಾಂ ಪ್ರದತ್ತಂ ಹಿ ವಿಪ್ರಾಣಾಂ ಚಾಽಮಿತಂ ವಸು ।
ಕೃತಾಂಜಲಿಸ್ತತೋ ರಾಮೋ ಬ್ರಾಹ್ಮಣಾನಿದಮಬ್ರವೀತ್ ॥ ೫೧ ॥
ಯಥಾ ಕೃತಯುಗೇ ವಿಪ್ರಾಸ್ತ್ರೇತಾಯಾಂ ಚ ಯಥಾ ಪುರಾ ।
ತಥಾ ಚಾದ್ಯೈವ ವಸ್ತವ್ಯಂ ಮಮ ರಾಜ್ಯೇ ನ ಸಂಶಯಃ ॥ ೫೨ ॥
ಯತ್ಕಿಂಚಿದ್ಧನಧಾನ್ಯಂ ವಾ ಯಾನಂ ವಾ ವಸನಾನಿ ವಾ ।
ಮಣಯಃ ಕಾಂಚನಾದೀಂಶ್ಚ ಹೇಮಾದೀಂಶ್ಚ ತಥಾ ವಸು ॥ ೫೩ ॥
ತಾಮ್ರಾದ್ಯಂ ರಜತಾದೀಂಶ್ಚ ಪ್ರಾರ್ಥಯಧ್ವಂ ಮಮಾಽಧುನಾ ।
ಅಧುನಾ ವಾ ಭವಿಷ್ಯೇ ವಾಽಭ್ಯರ್ಥನೀಯಂ ಯಥೋಚಿತಂ ॥ ೫೪ ॥

---

ಸಾವಿರ ಮಂದಿ ಬ್ರಾಹ್ಮಣರು ಆ ರಾಮನು ಕೊಟ್ಟ ಗ್ರಾಮಗಳನ್ನೂ, ಅವುಗಳಲ್ಲಿ ಉತ್ಪನ್ನವಾದ ದ್ರವ್ಯವನ್ನೂ, ವಸ್ತ್ರ, ಒಡವೆ ಮೊದಲಾದುವನ್ನೂ ಹೇಗೆ ಹಂಚಿಕೊಂಡರು ? ಅದನ್ನು ನನಗೆ ಹೇಳು.

೪೮. ಬ್ರಹ್ಮನು ಹೇಳುತ್ತಾನೆ:—ಮಗು ! ಯಜ್ಞದ ಕೊನೆಯಲ್ಲಿ ಋತ್ವಿಜರಿಗೆ ಕೊಟ್ಟ ದಕ್ಷಿಣೆಯಷ್ಟು ಮಹಾದಾನಗಳೆಲ್ಲ ಅವರಿಗೆ ಸಮರ್ಪಿಸಲ್ಪಟ್ಟಿತು.

೪೯. ಆಗ ಕೊಟ್ಟ ಸಾಧಾರಣ ಗ್ರಾಮಗಳೂ, ದೊಡ್ಡ ಸ್ಥಳಗಳೂ ಅಲ್ಲಿ ವಾಸಮಾಡುತ್ತಿರುವವರಿಗೇ ಒಪ್ಪಿಸಲಾಯಿತು.

೫೦–೫೧. ವಸಿಷ್ಠರ ಮಾತಿನಂತೆ ಧೀರನಾದ ರಾಮನು ಬ್ರಾಹ್ಮಣರಿಗೆ ಕೊಟ್ಟ ಗ್ರಾಮಗಳನ್ನು ಅವರು ಬಿಟ್ಟು ಹೋಗದಂತೆ ಧನಧಾನ್ಯಗಳನ್ನು ಬಹುವಾಗಿ ಕೊಟ್ಟು ಕೈಮುಗಿದುಕೊಂಡು ಹೀಗೆಂದನು.

೫೨. "ಅಯ್ಯಾ ಬ್ರಾಹ್ಮಣರೆ! ನೀವು ಕೃತ ಮತ್ತು ಈ ತ್ರೇತಾಯುಗಗಳಲ್ಲಿ ವಾಸಿಸಿದಂತೆ ಯಾವಾಗಲೂ ನನ್ನ ರಾಜ್ಯದಲ್ಲಿರಬೇಕು.

೫೩–೫೪. ಧನ, ಧಾನ್ಯ, ವಾಹನ, ವಸ್ತ್ರ, ರತ್ನ, ಚಿನ್ನ, ತಾಮ್ರ, ಬೆಳ್ಳಿ ಮೊದಲಾದುವುಗಳನ್ನು ಈಗ ನನ್ನನ್ನು ಕೇಳಿರಿ. ಅಥವಾ ಮುಂದೆ ಯುಕ್ತ ರೀತಿಯಿಂದಲಾದರೂ ನೀವು ಕೇಳಿಕೊಳ್ಳಬಹುದು.

CC-0. Jangamwadi Math Collection. Digitized by eGangotri

ಪ್ರೇಷಣೀಯಂ ವಾಚಿಕಂ ಮೇ ಸರ್ವದಾ ದ್ವಿಜಸತ್ತಮಾಃ ।
ಯಂ ಯಂ ಕಾಮಂ ಪ್ರಾರ್ಥಯಧ್ವಂ ತಂ ತಂ ದಾಸ್ಯಾಮ್ಯಹಂ ದ್ವಿಜಾಃ ॥
ತತೋ ರಾಮಃ ಸೇವಕಾದೀನಾದರಾತ್ಪ್ರತ್ಯಭಾಷತ ।
ವಿಪ್ರಾಜ್ಞಾ ನೋಲ್ಲಂಘನೀಯಾ ಸೇವನೀಯಾ ಪ್ರಯತ್ನತಃ ॥ ೫೬ ॥
ಯಂ ಯಂ ಕಾಮಂ ಪ್ರಾರ್ಥಯಂತೇ ಕಾರಯಧ್ವಂ ತತಸ್ತತಃ ।
ಏವಂ ನತ್ವಾ ಚ ವಿಪ್ರಾಣಾಂ ಸೇವನಂ ಕುರುತೇ ತು ಯಃ ॥ ೫೭ ॥
ಸ ಶೂದ್ರಃ ಸ್ವರ್ಗಮಾಪ್ನೋತಿ ಧನವಾನ್ಪುತ್ರವಾನ್ಭವೇತ್ ।
ಅನ್ಯಥಾ ನಿರ್ಧನತ್ವಂ ಹಿ ಲಭತೇ ನಾಽತ್ರ ಸಂಶಯಃ ॥ ೫೮ ॥
ಯವನೋ ಮ್ಲೇಚ್ಛಜಾತೀಯೋ ದೈತ್ಯೋ ವಾ ರಾಕ್ಷಸೋಽಪಿ ವಾ ।
ಯೋಽತ್ರ ವಿಘ್ನಂ ಕರೋತ್ಯೇವ ಭಸ್ಮೀಭವತಿ ತತ್ಕ್ಷಣಾತ್ ॥ ೫೯ ॥

ಬ್ರಹ್ಮೋವಾಚ :—

ತತಃ ಪ್ರದಕ್ಷಿಣೀಕೃತ್ಯ ದ್ವಿಜಾನ್ರಾಮೋಽತಿಹರ್ಷಿತಃ ।
ಪ್ರಸ್ಥಾನಾಽಭಿಮುಖೋ ವಿಪ್ರೈರಾಶೀರ್ಭಿರಭಿನಂದಿತಃ ॥ ೬೦ ॥
ಆಸೀಮಾಂತಮನುವ್ರಜ್ಯ ಸ್ನೇಹವ್ಯಾಕುಲಲೋಚನಾಃ ।
ದ್ವಿಜಾಃ ಸರ್ವೇ ವಿನಿರ್ವೃತ್ತಾ ಧರ್ಮಾಽರಣ್ಯೇ ವಿಮೋಹಿತಾಃ ॥ ೬೧ ॥

---

೫೫. ಎಲೈ ಬ್ರಾಹ್ಮಣವರ್ಯರೆ! ಯಾವಾಗಲೂ ನನಗೆ ಸಂದೇಶವನ್ನು ಕಳುಹಿಸುತ್ತಿರಿ. ನೀವು ಅಪೇಕ್ಷಿಸಿದ್ದನ್ನೆಲ್ಲ ನಾನು ಕೊಡುವೆನು."

೫೬. ಬಳಿಕ ರಾಮನು ಸೇವಕರನ್ನು ಕುರಿತು ವಿಶ್ವಾಸದಿಂದ ಹೀಗೆಂದನು. "ನೀವು ಬ್ರಾಹ್ಮಣರ ಅಪ್ಪಣೆಯನ್ನು ಮೀರಬಾರದು. ಅವರನ್ನು ಸೇವಿಸಬೇಕು.

೫೭–೫೮. ಅವರು ಹೇಳಿದ್ದನ್ನೆಲ್ಲ ಮಾಡುತ್ತಿರಿ. ಹೀಗೆ ಶೂದ್ರನು ನಮಸ್ಕರಿಸಿ ಬ್ರಾಹ್ಮಣರ ಸೇವೆಯನ್ನು ಮಾಡಿದರೆ ಸ್ವರ್ಗಲೋಕವನ್ನು ಹೊಂದುವನು. ಧನವನ್ನೂ, ಪುತ್ರರನ್ನೂ ಪಡೆಯುವನು. ಹಾಗೆ ಮಾಡದಿದ್ದರೆ ದರಿದ್ರನಾಗುವನು.

೫೯. ಯವನನಾಗಲಿ, ಮ್ಲೇಚ್ಛನಾಗಲಿ, ದೈತ್ಯನಾಗಲಿ, ರಾಕ್ಷಸನಾಗಲಿ ಇಲ್ಲಿ ತೊಂದರೆಯನ್ನುಂಟುಮಾಡಿದರೆ ಕೂಡಲೆ ಅವನು ಬೂದಿಯಾಗುವನು."

೬೦. ಬ್ರಹ್ಮನು ಹೇಳುತ್ತಾನೆ:—ಬಳಿಕ ರಾಮನು ಬ್ರಾಹ್ಮಣರನ್ನು ಪ್ರದಕ್ಷಿಣೆ ಮಾಡಿ ಹೊರಡಲುದ್ಯುಕ್ತನಾಗಲು ಬ್ರಾಹ್ಮಣರು ಅವನನ್ನು ಆಶೀರ್ವದಿಸಿ ಸಂತೋಷಗೊಳಿಸಿದರು.

೬೧. ಸ್ನೇಹದಿಂದ ವ್ಯಾಕುಲಗೊಂಡು ಎಲ್ಲೆಯವರೆಗೆ ಅವನನ್ನು ಹಿಂಬಾಲಿಸಿ ಧರ್ಮಾರಣ್ಯಕ್ಕೆ ಹಿಂದಿರುಗಿದರು.

CC-0. Jangamwadi Math Collection. Digitized by eGangotri

ಏವಂ ಕೃತ್ವಾ ತತೋ ರಾಮಃ ಪ್ರತಸ್ಥೇ ಸ್ವಾಂ ಪುರೀಂ ಪ್ರತಿ ।
ಕಾಶ್ಯಪಾಶ್ಚೈವ ಗರ್ಗಾಶ್ಚ ಕೃತಕೃತ್ಯಾ ದೃಢವ್ರತಾಃ ॥ ೬೨ ॥
ಗುರ್ವಾಸನಸಮಾವಿಷ್ಟಾಃ ಸಭಾರ್ಯಾ ಸಸುಹೃತ್ಸುತಾಃ ।
ರಾಜಧಾನೀಂ ತದಾ ಪ್ರಾಪ ರಾಮೋಽಯೋಧ್ಯಾಂ ಗುಣಾನ್ವಿತಾಂ ॥ ೬೩ ॥
ದೃಷ್ಟ್ವಾ ಪ್ರಮುದಿತಾ ಸರ್ವೇ ಲೋಕಾಃ ಶ್ರೀರಘುನಂದನಂ ।
ತತೋ ರಾಮಃ ಸ ಧರ್ಮಾತ್ಮಾ ಪ್ರಜಾಪಾಲನತತ್ಪರಃ ॥ ೬೪ ॥
ಸೀತಯಾ ಸಹ ಧರ್ಮಾತ್ಮಾ ರಾಜ್ಯಂ ಕುರ್ವಂಸ್ತದಾ ಸುಧೀಃ ।
ಜಾನಕ್ಯಾಂ ಗರ್ಭಮಾಧತ್ತ ರವಿವಂಶೋದ್ಭವಾಯ ಚ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಶ್ರೀರಾಮಚಂದ್ರ ಕೃತ ಧರ್ಮಾರಣ್ಯತೀರ್ಥಕ್ಷೇತ್ರ ಜೀರ್ಣೋದ್ಧಾರವರ್ಣನಂ" ನಾಮ ಪಂಚತ್ರಿಂಶೋಽಧ್ಯಾಯಃ

---

೬೨-೬೫. ರಾಮನು ಹೀಗೆ ಬ್ರಾಹ್ಮಣರಿಗೆ ಗ್ರಾಮಗಳನ್ನು ದಾನವಿತ್ತು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಕಾಶ್ಯಪರು, ಗರ್ಗರೂ ಧನ್ಯರಾಗಿ ಪತ್ನೀ, ಮಿತ್ರ, ಸುತರೊಡನೆ ಗುರ್ವಾಸನದಲ್ಲಿ ಕುಳಿತರು. ರಾಮನು ಅಯೋಧ್ಯೆಗೆ ಬರಲು ಸಮಸ್ತ ಪ್ರಜೆಗಳೂ ಅವನನ್ನು ಕಂಡು ಸಂತೋಷಗೊಂಡರು. ಬಳಿಕ ಧರ್ಮಾತ್ಮನಾದ ರಾಮನು ಪ್ರಜಾಪಾಲನದಲ್ಲಿ ಆಸಕ್ತನಾಗಿ ರಾಜ್ಯವನ್ನಾಳುತ್ತಿದ್ದನು. ತರುವಾಯ ಜಾನಕಿಯು ಸೂರ್ಯವಂಶದ ವೃದ್ಧಿಗಾಗಿ ಗರ್ಭಧಾರಣೆ ಮಾಡಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಶ್ರೀರಾಮಚಂದ್ರಕೃತ ಧರ್ಮಾರಣ್ಯ ತೀರ್ಥಕ್ಷೇತ್ರ ಜೀರ್ಣೋದ್ಧಾರವರ್ಣನ"ವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಷಟ್ತ್ರಿಂಶೋಽಧ್ಯಾಯಃ

### ಹನುಮತ್ಸಮಾಗಮಃ

ನಾರದ ಉವಾಚ :—

ಅತಃ ಪರಂ ಕಿಮಭವತ್ತನ್ಮೇ ಕಥಯ ಸುವ್ರತ ।
ಪೂರ್ವಂ ಚ ತದಶೇಷೇಣ ಶಂಸ ಮೇ ವದತಾಂ ವರ ॥ ೧ ॥
ಸ್ಥಿರೀಭೂತಂ ಚ ತತ್ಸ್ಥಾನಂ ಕಿಯತ್ಕಾಲಂ ವದಸ್ವ ಮೇ ।
ಕೇನ ವೈ ರಕ್ಷ್ಯಮಾಣಂ ಚ ಕಸ್ಯಾಜ್ಞಾ ವರ್ತತೇ ಪ್ರಭೋ ॥ ೨ ॥

ಬ್ರಹ್ಮೋವಾಚ :—

ತ್ರೇತಾತೋ ದ್ವಾಪರಾಂತಂ ಚ ಯಾವತ್ಕಲಿಸಮಾಗಮಃ ।
ತಾವತ್ಸಂರಕ್ಷಣೇ ಚೈಕೋ ಹನೂಮಾನ್ಪವನಾತ್ಮಜಃ ॥ ೩ ॥
ಸಮರ್ಥೋ ನಾಽನ್ಯಥಾ ಕೋಽಪಿ ವಿನಾ ಹನುಮತಾ ಸುತ ।
ಲಂಕಾ ವಿಧ್ವಂಸಿತಾ ಯೇನ ರಾಕ್ಷಸಾಃ ಪ್ರಬಲಾ ಹತಾಃ ॥ ೪ ॥
ಸ ಏವ ರಕ್ಷತೇ ತತ್ರ ರಾಮಾದೇಶೇನ ಪುತ್ರಕ ।
ದ್ವಿಜಸ್ಯಾಜ್ಞಾ ಪ್ರವರ್ತೇತ ಶ್ರೀಮಾತಾಯಾಸ್ತಥೈವ ಚ ॥ ೫ ॥
ದಿನೇ ದಿನೇ ಪ್ರಹರ್ಷೋಽಭೂಜ್ಜನಾನಾಂ ತತ್ರ ವಾಸಿನಾಂ ।
ಪಠಂತಿ ಸ್ಮ ದ್ವಿಜಾಸ್ತತ್ರ ಋಗ್ಯಜುಃಸಾಮಲಕ್ಷಣಾನ್ ॥ ೬ ॥

---

### ಕನ್ನಡದ ಅನುವಾದ

#### ಹನುಮತ್ಸಮಾಗಮ

೧–೨. ನಾರದನು ಹೇಳುತ್ತಾನೆ:—ಪಿತಾಮಹ! ಅನಂತರ ಅಲ್ಲಿ ಏನು ನಡೆಯಿತು? ಆ ಧರ್ಮಕ್ಷೇತ್ರವು ಎಷ್ಟುಕಾಲದವರೆಗೆ ಸ್ಥಿರವಾಗಿದ್ದಿತು? ಅದನ್ನು ಯಾರು ಕಾಪಾಡುತ್ತಿದ್ದರು? ಯಾರು ಆಳುತ್ತಿದ್ದರು? ಇದನ್ನೆಲ್ಲ ಸಂಪೂರ್ಣವಾಗಿ ನನಗೆ ಹೇಳು.

೩–೪. ಬ್ರಹ್ಮನು ಹೇಳುತ್ತಾನೆ:—ವತ್ಸ! ತ್ರೇತಾಯುಗದಿಂದ ದ್ವಾಪರ ಯುಗದ ಕೊನೆಯವರೆಗೆ (ಕಲಿಯುಗವು ಬರುವತನಕ) ಲಂಕೆಯನ್ನು ಸುಟ್ಟು, ಪ್ರಬಲ ರಾಕ್ಷಸರನ್ನು ಸದೆಬಡಿದ ಆಂಜನೇಯನೊಬ್ಬನೆ ಆ ಧರ್ಮಾರಣ್ಯವನ್ನು ರಕ್ಷಿಸುವುದರಲ್ಲಿ ಶಕ್ತನಾಗಿದ್ದನು.

೫. ಆ ಹನುಮಂತನು ರಾಮನ ಆಜ್ಞೆಯಂತೆ ಆ ಧರ್ಮಾರಣ್ಯವನ್ನು ಕಾಪಾಡುತ್ತಿರುವುದರಿಂದ ಬ್ರಾಹ್ಮಣರ ಮತ್ತು ಶ್ರೀಮಾತೆಯ ಆಣತಿಯು ನಡೆಯುತ್ತಿರುವುದು.

೬–೭. ಅಲ್ಲಿ ವಾಸಿಸುವ ಜನರು ದಿನೇ ದಿನೇ ಸಂತೋಷಗೊಳ್ಳುತ್ತಿರುವರು.

CC-0. Jangamwadi Math Collection. Digitized by eGangotri

ಅಥರ್ವಣಮಪಿ ತತ್ರ ಪಠಂತಿ ಸ್ಮ ದಿವಾನಿಶಂ ।
ವೇದನಿರ್ಘೋಷಜಃ ಶಬ್ದಸ್ತ್ರೈಲೋಕ್ಯೇ ಸಚರಾಚರೇ ॥ ೭ ॥
ಉತ್ಸವಾಸ್ತತ್ರ ಜಾಯಂತೇ ಗ್ರಾಮೇ ಗ್ರಾಮೇ ಪುರೇ ಪುರೇ ।
ನಾನಾಯಜ್ಞಾಃ ಪ್ರವರ್ತಂತೇ ನಾನಾಧರ್ಮಸಮಾಶ್ರಿತಾಃ ॥ ೮ ॥

ಯುಧಿಷ್ಠಿರ ಉವಾಚ :—

ಕದಾಽಪಿ ತಸ್ಯ ಸ್ಥಾನಸ್ಯ ಭಂಗೋ ಜಾತೋಽಥವಾ ನ ವಾ ।
ದೈತ್ಯೈರ್ಜಿತಂ ಕದಾ ಸ್ಥಾನಮಥವಾ ದುಷ್ಟರಾಕ್ಷಸೈಃ ॥ ೯ ॥

ವ್ಯಾಸ ಉವಾಚ :—

ಸಾಧುಪೃಷ್ಟಂ ತ್ವಯಾ ರಾಜನ್ಧರ್ಮಜ್ಞಸ್ತ್ವಂ ಸದಾ ಶುಚಿಃ ।
ಆದೌ ಕಲಿಯುಗೇ ಪ್ರಾಪ್ತೇ ಯದ್ವೃತ್ತಂ ತಚ್ಛೃಣುಷ್ವ ಭೋಃ ॥ ೧೦ ॥
ಲೋಕಾನಾಂ ಚ ಹಿತಾರ್ಥಾಯ ಕಾಮಾಯ ಚ ಸುಖಾಯ ಚ ।
ಯಜ್ಞಂ ಚ ಕಥಯಿಷ್ಯಾಮಿ ತತ್ಸರ್ವಂ ಶೃಣು ಭೂಪತೇ ॥ ೧೧ ॥
ಇದಾನೀಂ ಚ ಕಲೌ ಪ್ರಾಪ್ತ ಆಮೋನಾಮಾ ಬಭೂವ ಹ ।
ಕಾನ್ಯಕುಬ್ಜಾಽಧಿಪಃ ಶ್ರೀಮಾನ್ಧರ್ಮಜ್ಞೋ ನೀತಿತತ್ಪರಃ ॥ ೧೨ ॥
ಶಾಂತೋದಾಂತಃ ಸುಶೀಲಶ್ಚ ಸತ್ಯಧರ್ಮಪರಾಯಣಃ ।
ದ್ವಾಪರಾಂತೇ ನೃಪಶ್ರೇಷ್ಠ ಅನಾಗತೇ ಕಲೌ ಯುಗೇ ॥ ೧೩ ॥

---

ಬ್ರಾಹ್ಮಣರು ಹಗಲು ರಾತ್ರಿಯೂ ನಾಲ್ಕು ವೇದಗಳನ್ನು ಪಾರಾಯಣಮಾಡುತ್ತಿದ್ದರು. ಅವರ ವೇದಘೋಷವು ತ್ರಿಭುವನವನ್ನು ತುಂಬುತ್ತಿದ್ದಿತು.

೮. ಪ್ರತಿಗ್ರಾಮದಲ್ಲಿಯೂ, ಪ್ರತಿಯೊಂದು ಪಟ್ಟಣದಲ್ಲಿಯೂ ಉತ್ಸವಗಳು ನಡೆಯುತ್ತಿದ್ದುವು. ನಾನಾ ಧರ್ಮಾವಲಂಬಿಗಳು ಅನೇಕವಿಧ ಯಜ್ಞಗಳನ್ನು ನೆರವೇರಿಸುತ್ತಿದ್ದರು.

೯. ಯುಧಿಷ್ಠಿರನು ಹೇಳುತ್ತಾನೆ:—ಯಾವಾಗಲಾದರೂ ಆ ಕ್ಷೇತ್ರಕ್ಕೆ ಭಂಗಬಂದಿತೆ? ಅದನ್ನು ದೈತ್ಯರಾಗಲಿ, ದುಷ್ಟರಾಕ್ಷಸರಾಗಲಿ ಗೆದ್ದರೆ?

೧೦. ವ್ಯಾಸನು ಹೇಳುತ್ತಾನೆ:—ಮಹಾರಾಜ! ಯಾವಾಗಲೂ ಶುದ್ಧನಾಗಿ ಧರ್ಮವನ್ನರಿತಿರುವ ನೀನು ಚೆನ್ನಾಗಿ ಕೇಳಿದೆ. ಕಲಿಯುಗವು ಬರಲು ಅಲ್ಲಿ ಏನು ನಡೆಯಿತೆಂಬುದನ್ನು ಹೇಳುತ್ತೇನೆ, ಕೇಳು.

೧೧. ಜನರ ಹಿತಕ್ಕಾಗಿಯೂ, ಇಷ್ಟ ಮತ್ತು ಸುಖಕ್ಕಾಗಿಯೂ ಯಜ್ಞವನ್ನು ಹೇಳುತ್ತೇನೆ ಕೇಳು.

೧೨–೧೫. ಕಲಿಯುಗವು ಪ್ರಾಪ್ತವಾದಾಗ ಕಾನ್ಯಕುಬ್ಜದ ಒಡೆಯನೂ, ಧರ್ಮಜ್ಞನೂ; ನೀತಿನಿರತನೂ, ಶಾಂತಿಯುಳ್ಳವನೂ, ಇಂದ್ರಿಯಜಯವುಳ್ಳವನೂ, ಒಳ್ಳೆಯ ಸ್ವಭಾವದವನೂ, ಸತ್ಯ, ಧರ್ಮಗಳಲ್ಲಿ ಆಸಕ್ತನೂ ಆದ

CC-0. Jangamwadi Math Collection. Digitized by eGangotri

ಭಯಾತ್ಕಲಿವಿಶೇಷೇಣ ಅಧರ್ಮಸ್ಯ ಭಯಾದಿಭಿಃ ।
ಸರ್ವೇ ದೇವಾಃ ಕ್ಷಿತಿಂ ತ್ಯಕ್ತ್ವಾ ನೈಮಿಷಾಽರಣ್ಯಮಾಶ್ರಿತಾಃ ॥ ೧೪ ॥
ರಾಮೋಽಪಿ ಸೇತುಬಂಧಂ ಹಿ ಸಸಹಾಯೋ ಗತೋ ನೃಪ ॥ ೧೫ ॥

ಯುಧಿಷ್ಠಿರ ಉವಾಚ :—

ಕೀದೃಶಂ ಹಿ ಕಲೌ ಪ್ರಾಪ್ತೇ ಭಯಂ ಲೋಕೇ ಸುದುಸ್ತರಂ ।
ಯಸ್ಮಿನ್ಸುರೈಃ ಪರಿತ್ಯಕ್ತಾ ರತ್ನಗರ್ಭಾ ವಸುಂಧರಾ ॥ ೧೬ ॥

ವ್ಯಾಸ ಉವಾಚ :—

ಶೃಣುಷ್ವ ಕಲಿಧರ್ಮಾಂಸ್ತ್ವಂ ಭವಿಷ್ಯಂತಿ ಯಥಾ ನೃಪ ।
ಅಸತ್ಯವಾದಿನೋ ಲೋಕಾಃ ಸಾಧುನಿಂದಾಪರಾಯಣಾಃ ॥ ೧೭ ॥
ದಸ್ಯುಕರ್ಮರತಾಃ ಸರ್ವೇ ಪಿತೃಭಕ್ತಿವಿವರ್ಜಿತಾಃ ।
ಸ್ವಗೋತ್ರದಾರಾಽಭಿರತಾ ಲೌಲ್ಯಧ್ಯಾನಪರಾಯಣಾಃ ॥ ೧೮ ॥
ಬ್ರಹ್ಮವಿದ್ವೇಷಿಣಃ ಸರ್ವೇ ಪರಸ್ಪರವಿರೋಧಿನಃ ।
ಶರಣಾಗತಹಂತಾರೋ ಭವಿಷ್ಯಂತಿ ಕಲೌ ಯುಗೇ ॥ ೧೯ ॥
ವೈಶ್ಯಾಚಾರರತಾ ವಿಪ್ರಾ ವೇದಭ್ರಷ್ಟಾಶ್ಚ ಮಾನಿನಃ ।
ಭವಿಷ್ಯಂತಿ ಕಲೌ ಪ್ರಾಪ್ತೇ ಸಂಧ್ಯಾಲೋಪಕರಾ ದ್ವಿಜಾಃ ॥ ೨೦ ॥
ಶಾಂತೌ ಶೂರಾ ಭಯೇ ದೀನಾಃ ಶ್ರಾದ್ಧತರ್ಪಣವರ್ಜಿತಾಃ ।
ಅಸುರಾಚಾರನಿರತಾ ವಿಷ್ಣುಭಕ್ತಿವಿವರ್ಜಿತಾಃ ॥ ೨೧ ॥

---

ಆಮನೆಂಬವನು ರಾಜನಾದನು. ದ್ವಾಪರಯುಗದ ಕೊನೆಯಲ್ಲಿ ಕಲಿಯುಗದ ಅಧರ್ಮದ ಭಯದಿಂದ ಎಲ್ಲ ದೇವತೆಗಳೂ ಭೂಮಿಯನ್ನು ತ್ಯಜಿಸಿ ನೈಮಿಷಾರಣ್ಯವನ್ನು ಆಶ್ರಯಿಸಿದರು.

೧೬. ಯುಧಿಷ್ಠಿರನು ಕೇಳುತ್ತಾನೆ:—ಎಲೈ ವ್ಯಾಸಮುನಿಯೆ! ದೇವತೆಗಳು ಭೂಮಿಯನ್ನು ತ್ಯಜಿಸುವಷ್ಟು ಕಲಿಯುಗದಲ್ಲುಂಟಾದ ದುಸ್ತರವಾದ ಭಯವಾವುದು ?

೧೭–೧೯. ವ್ಯಾಸನು ಹೇಳುತ್ತಾನೆ:—ಮಹಾರಾಜ! ಕಲಿಯುಗದ ಧರ್ಮವನ್ನು ಕೇಳು. ಕಲಿಯುಗದಲ್ಲಿ ಜನರು ಸುಳ್ಳಾಡುವವರೂ, ಸಜ್ಜನರ ನಿಂದೆಯಲ್ಲಿ ನಿರತರೂ, ಕದಿಯುವವರೂ, ತಂದೆಯಲ್ಲಿ ಭಕ್ತಿಯಿಲ್ಲದವರೂ, ತನ್ನ ಗೋತ್ರದ ಹೆಣ್ಣನ್ನು ವಿವಾಹಮಾಡಿಕೊಳ್ಳುವವರೂ, ಚಪಲರೂ, ವೇದ, ಬ್ರಾಹ್ಮಣದ್ವೇಷಿಗಳೂ, ಅನ್ಯೋನ್ಯ ಶತ್ರುಗಳೂ, ಮರೆಹೊಕ್ಕವರನ್ನು ಕೊಲ್ಲುವವರೂ ಆಗುವರು.

೨೦–೨೩. ಬ್ರಾಹ್ಮಣರು ವೈಶ್ಯಾಚಾರವುಳ್ಳವರೂ, ವೇದಭ್ರಷ್ಟರೂ, ಅಹಂಕಾರಿಗಳೂ, ಸಂಧ್ಯಾವಂದನೆ ಮಾಡದವರೂ, ಶಾಂತಿಯಲ್ಲಿ ಶೌರ್ಯವನ್ನು ತೋರಿಸುವವರೂ, ಭಯ ವಿಷಯದಲ್ಲಿ ದೀನರೂ, ಶ್ರಾದ್ಧತರ್ಪಣ

CC-0. Jangamwadi Math Collection. Digitized by eGangotri

ಪರವಿತ್ತಾಽಭಿಲಾಷಾಶ್ಚ ಉತ್ಕೋಚಗ್ರಹಣೇ ರತಾಃ ।
ಅಸ್ನಾತಭೋಜಿನೋ ವಿಪ್ರಾಃ ಕ್ಷತ್ರಿಯಾ ರಣವರ್ಜಿತಾಃ ॥ ೨೨ ॥
ಭವಿಷ್ಯಂತಿ ಕಲೌ ಪ್ರಾಪ್ತೇ ಮಲಿನಾ ದುಷ್ಟವೃತ್ತಯಃ ।
ಮದ್ಯಪಾನರತಾಃ ಸರ್ವೇಽಪ್ಯಯಾಜ್ಯಾನಾಂ ಹಿ ಯಾಜಕಾಃ ॥ ೨೩ ॥
ಭರ್ತೃದ್ವೇಷಕರಾ ರಾಮಾಃ ಪಿತೃದ್ವೇಷಕರಾಃ ಸುತಾಃ ।
ಭ್ರಾತೃದ್ವೇಷಕರಾಃ ಕ್ಷುದ್ರಾ ಭವಿಷ್ಯಂತಿ ಕಲೌ ಯುಗೇ ॥ ೨೪ ॥
ಗವ್ಯವಿಕ್ರಯಿಣಸ್ತೇ ವೈ ಬ್ರಾಹ್ಮಣಾ ವಿತ್ತತತ್ಪರಾಃ ।
ಗಾವೋ ದುಗ್ಧಂ ನ ದುಹ್ಯಂತೇ ಸಂಪ್ರಾಪ್ತೇ ಹಿ ಕಲೌ ಯುಗೇ ॥ ೨೫ ॥
ಫಲಂತೇ ನೈವ ವೃಕ್ಷಾಶ್ಚ ಕದಾಚಿದಪಿ ಭಾರತ ।
ಕನ್ಯಾವಿಕ್ರಯಕರ್ತಾರೋ ಗೋಜಾವಿಕ್ರಯಕಾರಕಾಃ ॥ ೨೬ ॥
ವಿಷವಿಕ್ರಯಕರ್ತಾರೋ ರಸವಿಕ್ರಯಕಾರಕಾಃ ।
ವೇದವಿಕ್ರಯಕರ್ತಾರೋ ಭವಿಷ್ಯಂತಿ ಕಲೌ ಯುಗೇ ॥ ೨೭ ॥
ನಾರೀ ಗರ್ಭಂ ಸಮಾಧತ್ತೇ ಹಾಯನೈಕಾದಶೇನ ಹಿ ।
ಏಕಾದಶ್ಯುಪವಾಸಸ್ಯ ವಿರತಾಃ ಸರ್ವತೋ ಜನಾಃ ॥ ೨೮ ॥
ನ ತೀರ್ಥಸೇವನರತಾ ಭವಿಷ್ಯಂತಿ ಚ ವಾಡವಾಃ ।
ಬಹ್ವಾಹಾರಾ ಭವಿಷ್ಯಂತಿ ಬಹುನಿದ್ರಾಸಮಾಕುಲಾಃ ॥ ೨೯ ॥

---

ಮಾಡದವರೂ, ರಾಕ್ಷಸರ ಆಚಾರದಲ್ಲಿ ಆಸಕ್ತರೂ, ವಿಷ್ಣುಭಕ್ತಿಯಿಲ್ಲದವರೂ, ಇತರರ ಹಣದಲ್ಲಿ ಆಶೆಯುಳ್ಳವರೂ, ಲಂಚವನ್ನು ತೆಗೆದುಕೊಳ್ಳುವವರೂ, ಸ್ನಾನಮಾಡದೆ ಉಣ್ಣುವವರೂ ಆಗಿರುವರು. ಕ್ಷತ್ರಿಯರು ಯುದ್ಧಮಾಡದವರೂ, ಮಲಿನರೂ, ದುರ್ನಡತೆಯುಳ್ಳವರೂ, ಹೆಂಡವನ್ನು ಕುಡಿಯುವವರೂ ಆಗುವರು. ಎಲ್ಲ ಬ್ರಾಹ್ಮಣರೂ ಯಾಗಕ್ಕನರ್ಹರಾದವರಿಂದ ಯಾಗಮಾಡಿಸುವವರಾಗುವರು.

೨೪. ಹೆಂಡತಿಯರು ಗಂಡನಲ್ಲಿ ದ್ವೇಷವುಳ್ಳವರೂ, ಮಕ್ಕಳು ತಂದೆಯಲ್ಲಿ ದ್ವೇಷವುಳ್ಳವರೂ, ಸಹೋದರ ದ್ವೇಷಿಗಳೂ, ಅಲ್ಪರೂ ಆಗುವರು.

೨೫. ಬ್ರಾಹ್ಮಣರು ಹಣದಾಶೆಯಿಂದ ಗೋರಸವನ್ನು (ಹಾಲು, ತುಪ್ಪ, ಬೆಣ್ಣೆಗಳನ್ನು) ಮಾರುವರು. ಗೋವುಗಳು ಹಾಲನ್ನು ಕರೆಯುವುದಿಲ್ಲ.

೨೬–೨೭. ಮರಗಳು ಫಲಗಳನ್ನು ಕೊಡುವುದಿಲ್ಲ. ಬ್ರಾಹ್ಮಣರು ಕನ್ಯಾ, ಗೋವು, ಆಡು, ವಿಷ, ರಸಪದಾರ್ಥ, ವೇದ ಇವುಗಳನ್ನು ಮಾರುವರು.

೨೮. ಹೆಂಗಸು ಹನ್ನೊಂದನೆ ವರ್ಷದಲ್ಲಿಯೆ ಗರ್ಭಿಣಿಯಾಗುವಳು. ಎಲ್ಲಡೆಯಲ್ಲಿಯೂ ಜನರು ಏಕಾದಶೀ ಉಪವಾಸವನ್ನು ತ್ಯಜಿಸುವರು.

೨೯–೩೧. ಬ್ರಾಹ್ಮಣರು ತೀರ್ಥಕ್ಷೇತ್ರಗಳನ್ನು ಸೇವಿಸುವುದಿಲ್ಲ. ಅವರ

CC-0. Jangamwadi Math Collection. Digitized by eGangotri

ಜಿಹ್ಮವೃತ್ತಿಪರಾಃ ಸರ್ವೇ ವೇದನಿಂದಾಪರಾಯಣಾಃ ।
ಯತಿನಿಂದಾಪರಾಶ್ಚೈವ ಛದ್ಮಾಕಾರಾಃ ಪರಸ್ಪರಂ ॥ ೩೦ ॥
ಸ್ಪರ್ಶದೋಷಭಯಂ ನೈವ ಭವಿಷ್ಯತಿ ಕಲೌ ಯುಗೇ ।
ಕ್ಷತ್ರಿಯಾ ರಾಜ್ಯಹೀನಾಶ್ಚ ಮ್ಲೇಚ್ಛೋ ರಾಜಾ ಭವಿಷ್ಯತಿ ॥ ೩೧ ॥
ವಿಶ್ವಾಸಘಾತಿನಃ ಸರ್ವೇ ಗುರುದ್ರೋಹರತಾಸ್ತಥಾ ।
ಮಿತ್ರದ್ರೋಹರತಾ ರಾಜಂಛಿಶ್ನೋದರಪರಾಯಣಾಃ ॥ ೩೨ ॥
ಏಕವರ್ಣಾ ಭವಿಷ್ಯಂತಿ ವರ್ಣಾಶ್ಚತ್ವಾರ ಏವ ಚ ।
ಕಲೌ ಪ್ರಾಪ್ತೇ ಮಹಾರಾಜ ನಾಽನ್ಯಥಾ ವಚನಂ ಮಮ ॥ ೩೩ ॥
ಏತಚ್ಛ್ರುತ್ವಾ ಗುರೋರೇವ ಕಾನ್ಯಕುಬ್ಜಾಽಧಿಪೋ ಬಲೀ ।
ರಾಜ್ಯಂ ಪ್ರಕುರುತೇ ತತ್ರ ಆಮೋನಾಮಾ ಹಿ ಭೂತಲೇ ॥ ೩೪ ॥
ಸಾರ್ವಭೌಮತ್ವಮಾಪನ್ನಃ ಪ್ರಜಾಪಾಲನತತ್ಪರಃ ।
ಪ್ರಜಾನಾಂ ಕಲಿನಾ ತತ್ರ ಪಾಪೇ ಬುದ್ಧಿರಜಾಯತ ॥ ೩೫ ॥
ವೈಷ್ಣವಂ ಧರ್ಮಮುತ್ಸೃಜ್ಯ ಬೌದ್ಧಧರ್ಮಮುಪಾಗತಾಃ ।
ಪ್ರಜಾಸ್ತಮನುವರ್ತಿನ್ಯಃ ಕ್ಷಪಣೈಃ ಪ್ರತಿಬೋಧಿತಾಃ ॥ ೩೬ ॥

---

ಅಧಿಕಾಹಾರವುಳ್ಳವರೂ, ಅತಿ ನಿದ್ರೆಯುಳ್ಳವರೂ, ವಕ್ರವಾದ ನಡತೆಯುಳ್ಳವರೂ, ವೇದಗಳ ನಿಂದೆಯಲ್ಲಿಯೂ, ಸನ್ನ್ಯಾಸಿಗಳ ನಿಂದೆಯಲ್ಲಿಯೂ ಆಸಕ್ತರೂ, ಅನ್ಯೋನ್ಯವಾಗಿ ಮೋಸಮಾಡುವವರೂ ಅಸ್ಪೃಶ್ಯತಾದೋಷದ ಭಯವಿಲ್ಲದವರೂ ಆಗುವರು. ಕ್ಷತ್ರಿಯರು ರಾಜ್ಯವನ್ನು ಕಳೆದುಕೊಳ್ಳುವರು. ಮ್ಲೇಚ್ಛನು ರಾಜನಾಗುವನು.

೩೨. ಮಹಾರಾಜ! ಎಲ್ಲರೂ ವಿಶ್ವಾಸಘಾತುಕರೂ, ಗುರುಗಳಿಗೂ, ಮಿತ್ರರಿಗೂ ದ್ರೋಹಮಾಡುವುದರಲ್ಲಿ ಆಸಕ್ತರೂ, ಕಾಮ ಮತ್ತು ತಿನ್ನುವುದರಲ್ಲಿ ನಿರತರೂ ಆಗುವರು.

೩೩. ಬ್ರಾಹ್ಮಣಾದಿ ನಾಲ್ಕು ವರ್ಣಗಳೂ ಒಂದೇ ವರ್ಣವಾಗುವುದು. ಈ ನನ್ನ ಮಾತು ಸತ್ಯವಾದುದು.''

೩೪–೩೫. ಬಲಿಷ್ಠನಾದ ಕಾನ್ಯಕುಬ್ಜದ ಆಮನೆಂಬ ದೊರೆಯು ಈ ಮಾತನ್ನು ಗುರುವಿನಿಂದ ಕೇಳಿ ಸಾರ್ವಭೌಮನಾಗಿ ರಾಜ್ಯವಾಳುತ್ತಿದ್ದನು. ಆಗ ಕಲಿದೋಷದಿಂದ ಪ್ರಜೆಗಳಿಗೆ ಪಾಪಬುದ್ಧಿಯುಂಟಾಯಿತು.

೩೬. ಅವನ ಪ್ರಜೆಗಳು ಬೌದ್ಧಸನ್ಯಾಸಿಗಳ ಉಪದೇಶದಿಂದ ವೈಷ್ಣವ ಧರ್ಮವನ್ನು ತ್ಯಜಿಸಿ ಬೌದ್ಧ ಧರ್ಮಾವಲಂಬಿಗಳಾದರು.



CC-0. Jangamwadi Math Collection. Digitized by eGangotri

ತಸ್ಯ ರಾಜ್ಞೋ ಮಹಾದೇವೀ ಮಾಮಾನಾಮ್ನ್ಯತಿವಿಶ್ರುತಾ ।
ಗರ್ಭಂ ದಧಾರ ಸಾ ರಾಜ್ಞೋ ಸರ್ವಲಕ್ಷಣಸಂಯುತಾ ॥ ೩೭ ॥
ಸಂಪೂರ್ಣೇ ದಶಮೇ ಮಾಸಿ ಜಾತಾ ತಸ್ಯಾಃ ಸುರೂಪಿಣೀ ।
ದುಹಿತಾ ಸಮಯೇ ರಾಜ್ಞ್ಯಾಃ ಪೂರ್ಣಚಂದ್ರನಿಭಾನನಾ ॥ ೩೮ ॥
ರತ್ನಗಂಗೇತಿ ನಾಮ್ನಾ ಸಾ ಮಣಿಮಾಣಿಕ್ಯಭೂಷಿತಾ ।
ಏಕದಾ ದೈವಯೋಗೇನ ದೇಶಾಂತರಾದುಪಾಗತಃ ॥ ೩೯ ॥
ನಾಮ್ನಾ ಚೈವೇಂದ್ರಸೂರಿರ್ವೈ ದೇಶೇಽಸ್ಮಿನ್ಕಾನ್ಯಕುಬ್ಜಕೇ ।
ಷೋಡಶಾಬ್ದಾ ಚ ಸಾ ಕನ್ಯಾ ನೋಪನೀತಾ ನೃಪಾತ್ಮಜಾ ॥ ೪೦ ॥
ದಾಸ್ಯಾಽಂತರೇಣ ಮಿಲಿತಾ ಇಂದ್ರಸೂರಿಶ್ಚ ಜೀವಿಕಃ ।
ಶಾಬರೀಂ ಮಂತ್ರವಿದ್ಯಾಂ ಚ ಕಥಯಾಮಾಸ ಭಾರತ ॥ ೪೧ ॥
ಏಕಚಿತ್ತಾಽಭವತ್ಸಾ ತು ಶೂಲಿಕರ್ಮವಿಮೋಹಿತಾ ।
ತತಃ ಸಾ ಮೋಹಮಾಪನ್ನಾ ತತ್ತದ್ವಾಕ್ಯಪರಾಯಣಾ ॥ ೪೨ ॥
ಕ್ಷಪಣೈರ್ಬೋಧಿತಾ ವತ್ಸ ಜೈನಧರ್ಮಪರಾಯಣಾ ।
ಬ್ರಹ್ಮಾವರ್ತಾಽಧಿಪತಯೇ ಕುಂಭೀಪಾಲಾಯ ಧೀಮತೇ ॥ ೪೩ ॥
ರತ್ನಗಂಗಾಂ ಮಹಾದೇವೀಂ ದದೌ ತಾಮತಿವಿಕ್ರಮಾ ।
ಮೋಹೇರಕಂ ದದೌ ತಸ್ಮೈ ವಿವಾಹೇ ದೈವಮೋಹಿತಃ ॥ ೪೪ ॥

---

೩೭. ಮಾಮಾ ಎಂಬ ಸಮಸ್ತ ಲಕ್ಷಣಸಂಪನ್ನೆಯಾದ ಆ ರಾಜನ ರಾಣಿಯು ಗರ್ಭಿಣಿಯಾದಳು.

೩೮. ಹತ್ತನೆಯ ತಿಂಗಳು ತುಂಬಲು ಅವಳಲ್ಲಿ ಸುಂದರಿಯಾದ ಕನ್ಯೆಯು ಜನಿಸಿದಳು.

೩೯–೪೦. ರತ್ನಗಳಿಂದ ಅಲಂಕೃತಳಾದ ಆವಳಿಗೆ ರತ್ನಗಂಗೆಯೆಂದು ಹೆಸರಾಯಿತು. ಒಂದಾನೊಂದು ದಿನ ಅದೃಷ್ಟವಶದಿಂದ ಇಂದ್ರಸೂರಿಯೆಂಬವನು ದೇಶಾಂತರದಿಂದ ಕಾನ್ಯಕುಬ್ಜದೇಶಕ್ಕೆ ಬಂದನು. ಆಗ ರತ್ನಗಂಗೆಗೆ ಹದಿನಾರು ವರ್ಷ ವಯಸ್ಸಾಗಿತ್ತು. ವಿವಾಹವಾಗಿರಲಿಲ್ಲ.

೪೧. ಸೇವೆಯಿಂದ ಜೀವಿಸುವುದಕ್ಕಾಗಿ ಅಲ್ಲಿಗೆ ಬಂದ ಇಂದ್ರಸೂರಿಯು ಮಾಯಾಮಂತ್ರ ವಿದ್ಯೆಯನ್ನು ಆ ರತ್ನಗಂಗೆಗೆ ಹೇಳಿದನು.

೪೨. ಮಾಟದಿಂದ ಮೋಹಗೊಂಡು ಅವಳು ಅವನ ಮಾತನ್ನು ಕೇಳುವುದರಲ್ಲಿ ಆಸಕ್ತಳಾದಳು.

೪೩–೪೪. ಮಗು! ಬೌದ್ಧಸನ್ಯಾಸಿಗಳಿಂದ ಉಪದೇಶಪಡೆದು ಜೈನಧರ್ಮದಲ್ಲಿ ಶ್ರದ್ಧೆಗೊಂಡ ಆ ರತ್ನಗಂಗೆಯನ್ನು ತಂದೆಯು ಬ್ರಹ್ಮಾವರ್ತದರಸನಾದ ಕುಂಭೀಪಾಲನಿಗೆ ವಿವಾಹಮಾಡಿಕೊಟ್ಟನು. ಮದುವೆ ಕಾಲದಲ್ಲಿ

CC-0. Jangamwadi Math Collection. Digitized by eGangotri

ಧರ್ಮಾರಣ್ಯಂ ಸಮಾಗತ್ಯ ರಾಜಧಾನೀ ಕೃತಾ ತದಾ ।
ದೇವಾಂಶ್ಚ ಸ್ಥಾಪಯಾಮಾಸ ಜೈನಧರ್ಮಪ್ರಣೇತೃಕಾನ್ ॥ ೪೫ ॥
ಸರ್ವೇ ವರ್ಣಾಸ್ತಥಾಭೂತಾ ಜೈನಧರ್ಮಸಮಾಶ್ರಿತಾಃ ।
ಬ್ರಾಹ್ಮಣಾ ನೈವ ಪೂಜ್ಯಂತೇ ನ ಚ ಶಾಂತಿಕಪೌಷ್ಟಿಕಂ ॥ ೪೬ ॥
ನ ದದಾತಿ ತದಾ ದಾನಮೇವಂ ಕಾಲಃ ಪ್ರವರ್ತತೇ ।
ಲಬ್ಧಶಾಸನಕಾ ವಿಪ್ರಾ ಲುಪ್ತಸ್ವಾಮ್ಯಾ ಅಹರ್ನಿಶಂ ॥ ೪೭ ॥
ಸಮಾಕುಲಿತಚಿತ್ತಾಸ್ತೇ ನೃಪಮಾಮಂ ಸಮಾಯಯುಃ ।
ಕಾನ್ಯಕುಬ್ಜಸ್ಥಿತಂ ಶೂರಂ ಪಾಖಂಡೈಃ ಪರಿವೇಷ್ಟಿತಂ ॥ ೪೮ ॥
ಕಾನ್ಯಕುಬ್ಜಪುರಂ ಪ್ರಾಪ್ಯ ಕತಿಭಿರ್ವಾಸರೈರ್ನೃಪ ।
ಗಂಗೋಪಕಂಠೇ ನ್ಯವಸನ್ ಸಂಭ್ರಾಂತಾಸ್ತೇ ಮೋಢವಾಡವಾಃ ॥ ೪೯ ॥
ಚಾರೈಶ್ಚ ಕಥಿತಾಸ್ತೇ ಚ ನೃಪಸ್ಯಾಽಗ್ರೇ ಸಮಾಗತಾಃ ।
ಪ್ರಾತರಾಕಾರಿತಾ ವಿಪ್ರಾ ಆಗತಾ ನೃಪಸಂಸದಿ ॥ ೫೦ ॥
ಪ್ರತ್ಯುತ್ಥಾನಾಽಭಿವಾದಾದೀನ್ನ ಚಕ್ರೇ ಸಾದರಂ ನೃಪಃ ।
ತಿಷ್ಠತೋ ಬ್ರಾಹ್ಮಣಾನ್ಸರ್ವಾನ್ಪರ್ಯಪೃಚ್ಛದಸೌ ತತಃ ॥ ೫೧ ॥

---

ದೈವದಿಂದ ಭ್ರಾಂತಿಗೊಂಡ ಮಹಾಪರಾಕ್ರಮಿಯಾದ ಆ ಆಮನು ಕುಂಭೀಪಾಲನಿಗೆ ಮೋಹೇರಕಪುರವನ್ನೂ ಕೊಟ್ಟನು.

೪೫. ಆ ಕುಂಭೀಪಾಲನು ಧರ್ಮಾರಣ್ಯಕ್ಕೆ ಬಂದು ಅದನ್ನು ರಾಜಧಾನಿಯನ್ನಾಗಿಸಿಕೊಂಡು ಜೈನಧರ್ಮಪ್ರವರ್ತಕರಾದ ದೇವತೆಗಳನ್ನು ಸ್ಥಾಪಿಸಿದನು.

೪೬. ಎಲ್ಲಾ ಜಾತಿಯವರೂ ಜೈನಧರ್ಮವನ್ನು ಅವಲಂಬಿಸಿದರು. ಬ್ರಾಹ್ಮಣರ ಪೂಜೆಯೂ, ಶಾಂತಿ ಪೌಷ್ಟಿಕಕರ್ಮಗಳೂ ನಿಂತುಹೋದುವು.

೪೭. ಆಗ ಯಾರೂ ದಾನಕೊಡುತ್ತಿರಲಿಲ್ಲ. ರಾಮನಿಂದ ಶಾಸನವನ್ನು ಪಡೆದ ಬ್ರಾಹ್ಮಣರು ದಿನೇದಿನೇ ತಮ್ಮ ಸ್ವತ್ತಿನ ಸ್ವಾಮಿತ್ವವನ್ನು ಕಳೆದುಕೊಂಡರು.

೪೮. ಅವರು ವ್ಯಥೆಗೊಂಡ ಮನಸ್ಸುಳ್ಳವರಾಗಿ ಪಾಷಂಡಿಗಳ ಪರಿವಾರವುಳ್ಳ ಶೂರನಾದ ಕಾನ್ಯಕುಬ್ಜದ ಆ ಆಮದೊರೆಯನ್ನು ನೋಡಲು ಬಂದರು.

೪೯. ಆ ಮೋಹೇರಕಪುರದ ಬ್ರಾಹ್ಮಣರು ಕೆಲವು ದಿನಗಳಗಲ್ಲಿ ಕಾನ್ಯಕುಬ್ಜವನ್ನು ಸೇರಿ ಬಳಲಿದವರಾಗಿ ಗಂಗೆಯ ಹತ್ತಿರ ವಾಸಮಾಡಿದರು.

೫೦. ಅವರು ಬಂದಿರುವ ವಿಷಯವನ್ನು ಸೇವಕರು ದೊರೆಗೆ ತಿಳಿಸಲು ಅವನು ಬೆಳಗ್ಗೆ ಅವರನ್ನು ತನ್ನ ಸಭೆಗೆ ಕರೆಯಿಸಿದನು.

೫೧. ಆಮನು ಏಳುವುದು, ನಮಸ್ಕರಿಸುವುದೇ ಮೊದಲಾದುವುಗಳಿಂದ ಬ್ರಾಹ್ಮಣರನ್ನು ಗೌರವಿಸದೆ ನಿಂತಿರುವ ಅವರನ್ನು ಹೀಗೆ ಕೇಳಿದನು.

CC-0. Jangamwadi Math Collection. Digitized by eGangotri

ಕಿಮರ್ಥಮಾಗತಾ ವಿಪ್ರಾಃ ಕಿಂಸ್ವಿತ್ಕಾರ್ಯಂ ಬ್ರುವಂತು ತತ್ ॥ ೫೨ ॥

ವಿಪ್ರಾ ಊಚುಃ:—

ಧರ್ಮಾರಣ್ಯಾದಿಹಾಯಾತಾಸ್ತ್ವತ್ಸವಿಧಂ ನರಾಧಿಪ ।
ರಾಜಂಸ್ತವ ಸುತಾಯಾಸ್ತು ಭರ್ತಾ ಕುಮಾರಪಾಲಕಃ ॥ ೫೩ ॥
ತೇನ ಪ್ರಲುಪ್ತಂ ವಿಪ್ರಾಣಾಂ ಶಾಸನಂ ಸುಹದದ್ಭುತಂ ।
ವರ್ತತಾ ಜೈನಧರ್ಮೇಣ ಪ್ರೇರಿತೇನೇಂದ್ರಸೂರಿಣಾ ॥ ೫೪ ॥

ರಾಜೋವಾಚ:—

ಕೇನ ವೈ ಸ್ಥಾಪಿತಾ ಯೂಯಮಸ್ಮಿನ್ಮೋಹೇರಕೇ ಪುರೇ ।
ಏತದ್ಧಿ ವಾಡವಾಃ ಸರ್ವಂ ಬ್ರೂತ ವೃತ್ತಂ ಯಥಾ ತಥಂ ॥ ೫೫ ॥

ವಿಪ್ರಾ ಊಚುಃ:—

ಕಾಜೇಶೈಃ ಸ್ಥಾಪಿತಾಃ ಪೂರ್ವಂ ಧರ್ಮರಾಜೇನ ಧೀಮತಾ ।
ಕೃತಾ ಚಾತ್ರ ಶುಭೇ ಸ್ಥಾನೇ ರಾಮೇಣ ಚ ತತಃ ಪುರೀ ॥ ೫೬ ॥
ಶಾಸನಂ ರಾಮಚಂದ್ರಸ್ಯ ದೃಷ್ಟ್ವಾನ್ಯೈಶ್ಚೈವ ರಾಜಭಿಃ ।
ಪಾಲಿತಂ ಧರ್ಮತೋ ಹ್ಯತ್ರ ಶಾಸನಂ ನೃಪಸತ್ತಮ ॥ ೫೭ ॥
ಇದಾನೀಂ ತವ ಜಾಮಾತಾ ವಿಪ್ರಾನ್ಪಾಲಯತೇ ನ ಹಿ ।
ತಚ್ಛ್ರುತ್ವಾ ವಿಪ್ರವಾಕ್ಯಂ ತು ರಾಜಾ ವಿಪ್ರಾನಥಾಬ್ರವೀತ್ ॥ ೫೮ ॥

---

೫೨. "ಎಲೈ ಬ್ರಾಹ್ಮಣರೆ! ಯಾವ ಕೆಲಸಕ್ಕಾಗಿ ಇಲ್ಲಿಗೆ ಬಂದಿದ್ದೀರಿ? ಅದನ್ನು ಹೇಳಿರಿ."

೫೩–೫೪. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನಾವು ಧರ್ಮಾರಣ್ಯದಿಂದ ನಿನ್ನೆಡೆಗೆ ಬಂದಿದ್ದೇವೆ. ನಿನ್ನ ಅಳಿಯನಾದ ಕುಂಭೀಪಾಲನು ಜೈನನಾದ ಇಂದ್ರಸೂರಿಯ ಪ್ರೇರಣೆಯಿಂದ ಬ್ರಾಹ್ಮಣರ ಅದ್ಭುತವಾದ ಶಾಸನಗಳನ್ನು ಹಾಳುಮಾಡಿದ್ದಾನೆ.

೫೫. ರಾಜನು ಹೇಳುತ್ತಾನೆ:—ದ್ವಿಜರೆ! ನಿಮ್ಮನ್ನು ಈ ಮೋಹೇರಕಪುರದಲ್ಲಿ ಯಾರು ಸ್ಥಾಪಿಸಿದರು? ಇದನ್ನು ಯಥಾರ್ಥವಾಗಿ ತಿಳಿಸಿರಿ.

೫೬. ಬ್ರಾಹ್ಮಣರು ಹೇಳುತ್ತಾರೆ:—ಬ್ರಹ್ಮ, ವಿಷ್ಣು, ಮಹೇಶ್ವರರೂ, ಯಮನೂ ನಮ್ಮನ್ನು ಇಲ್ಲಿ ಸ್ಥಾಪಿಸಿರುತ್ತಾರೆ. ಈ ಶುಭಸ್ಥಾನದಲ್ಲಿ ರಾಮನು ನಗರವನ್ನು ನಿರ್ಮಿಸಿರುವನು.

೫೭. ಇತರ ರಾಜರು ಶ್ರೀರಾಮನ ಶಾಸನವನ್ನು ನೋಡಿ ಅದನ್ನು ಧರ್ಮದಿಂದ ಕಾಪಾಡಿರುತ್ತಾರೆ.

೫೮. ಈಗ ನಿನ್ನ ಅಳಿಯನಾದ ಕುಂಭೀಪಾಲನು ಬ್ರಾಹ್ಮಣರನ್ನು ಪೊರೆಯುವುದಿಲ್ಲ." ಅದನ್ನು ಕೇಳಿ ರಾಜನು ಆ ಬ್ರಾಹ್ಮಣರನ್ನು ಕುರಿತು ಹೀಗೆಂದನು.

CC-0. Jangamwadi Math Collection. Digitized by eGangotri

ಯಾಂತು ಶೀಘ್ರಂ ಹಿ ಭೋ ವಿಪ್ರಾಃ ಕಥಯಂತು ಮಮಾಜ್ಞಯಾ ।
ರಾಜ್ಞೀ ಕುಮಾರಪಾಲಾಯ ದೇಹಿ ತ್ವಂ ಬ್ರಾಹ್ಮಣಾಲಯಂ ॥ ೫೯ ॥
ಶ್ರುತ್ವಾ ವಾಕ್ಯಂ ತತೋ ವಿಪ್ರಾಃ ಪರಂ ಹರ್ಷಮುಪಾಗತಾಃ ।
ಜಗ್ಮುಸ್ತತೋಽತಿಮುದಿತಾ ವಾಕ್ಯಂ ತತ್ರ ನಿವೇದಿತಂ ॥ ೬೦ ॥
ಶ್ವಶುರಸ್ಯ ವಚಃ ಶ್ರುತ್ವಾ ರಾಜಾ ವಚನಮಬ್ರವೀತ್ ।

ಕುಮಾರಪಾಲ ಉವಾಚ :—

ರಾಮಸ್ಯ ಶಾಸನಂ ವಿಪ್ರಾಃ ಪಾಲಯಿಷ್ಯಾಮ್ಯಹಂ ನ ಹಿ ॥ ೬೧ ॥
ತ್ಯಜಾಮಿ ಬ್ರಾಹ್ಮಣಾನ್ಯಜ್ಞೇ ಪಶುಹಿಂಸಾಪರಾಯಣಾನ್ ।
ತಸ್ಮಾದ್ಧಿ ಹಿಂಸಕಾನಾಂ ತು ನ ಮೇ ಭಕ್ತಿರ್ಭವೇದ್ದ್ವಿಜಾಃ ॥ ೬೨ ॥

ಬ್ರಾಹ್ಮಣಾ ಊಚುಃ :—

ಕಥಂ ಪಾಖಂಡಧರ್ಮೇಣ ಲುಪ್ತಶಾಸನಕೋ ಭವಾನ್ ।
ಪಾಲಯಸ್ವ ನೃಪಶ್ರೇಷ್ಠ ಮಾಸ್ಮ ಪಾಪೇ ಮನಃ ಕೃಥಾಃ ॥ ೬೩ ॥

ರಾಜೋವಾಚ :—

ಅಹಿಂಸಾ ಪರಮೋಧರ್ಮ ಅಹಿಂಸಾ ಚ ಪರಂ ತಪಃ ।
ಅಹಿಂಸಾ ಪರಮಂ ಜ್ಞಾನಮಹಿಂಸಾ ಪರಮಂ ಫಲಂ ॥ ೬೪ ॥
ತೃಣೇಷು ಚೈವ ವೃಕ್ಷೇಷು ಪತಂಗೇಷು ನರೇಷು ಚ ।
ಕೀಟೇಷು ಮತ್ಕುಣಾದ್ಯೇಷು ಅಜಾಽಶ್ವೇಷು ಗಜೇಷು ಚ ॥ ೬೫ ॥

---

೫೯. ದ್ವಿಜರೆ! ನೀವು ಬೇಗನೆ ಹೋಗಿ ಕುಮಾರಪಾಲನಿಗೆ ಬ್ರಾಹ್ಮಣರ ಆಲಯಗಳನ್ನು ಮರಳಿ ಕೊಡುವಂತೆ ನಾನು ಅಪ್ಪಣೆಮಾಡಿರುವುದಾಗಿ ತಿಳಿಸಿರಿ.

೬೦. ಬ್ರಾಹ್ಮಣರು ಆಮರಾಜನ ಮಾತನ್ನು ಕೇಳಿ ಅತಿ ಹರ್ಷಗೊಂಡು ಧರ್ಮಾರಣ್ಯಕ್ಕೆ ತೆರಳಿ ರಾಜನ ಅಪ್ಪಣೆಯನ್ನು ಕುಮಾರಪಾಲನಿಗೆ ತಿಳಿಸಿದರು.

೬೧. ಮಾವನ ಮಾತನ್ನು ಕೇಳಿ ಕುಮಾರಪಾಲನು ಇಂತೆಂದನು. ಕುಮಾರಪಾಲನು ಹೇಳುತ್ತಾನೆ:—ವಿಪ್ರರೆ! ನಾನು ರಾಮನ ಆಜ್ಞೆಯನ್ನು ನಡಸುವುದಿಲ್ಲ.

೬೨. ಯಜ್ಞದಲ್ಲಿ ಪಶುಹಿಂಸೆಮಾಡುವ ಬ್ರಾಹ್ಮಣರಲ್ಲಿ ನನಗೆ ಭಕ್ತಿಯಿಲ್ಲ. ಆದ್ದರಿಂದ ಅವರನ್ನು ನಾನು ತ್ಯಜಿಸುವೆನು.

೬೩. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನೀನು ಪಾಖಂಡ ಧರ್ಮವನ್ನವಲಂಬಿಸಿ ರಾಮನ ಶಾಸನವನ್ನು ಹೇಗೆ ಹಾಳುಮಾಡುವೆ? ಕಾಪಾಡು. ಪಾಪದಲ್ಲಿ ಮನಸ್ಸನ್ನಿಡಬೇಡ.

೬೪. ರಾಜನು ಹೇಳುತ್ತಾನೆ:—ಪ್ರಾಣಿಹಿಂಸೆ ಮಾಡದಿರುವುದೇ ಉತ್ತಮ ವಾದ ಧರ್ಮವೂ, ತಪಸ್ಸೂ, ಜ್ಞಾನವೂ, ಫಲವೂ ಆಗಿರುವುದು.

೬೫–೬೭. ವಿಪ್ರರೆ! ಹುಲ್ಲು, ಮರ, ಪತಂಗ, ಮನುಷ್ಯ, ಕೀಟ, ತಗಣೆ,

CC-0. Jangamwadi Math Collection. Digitized by eGangotri

ಲೂತಾಸು ಚೈವ ಸರ್ಪೇಷು ಮಹಿಷ್ಯಾದಿಷು ವೈ ತಥಾ ।
ಜಂತವಃ ಸದೃಶಾ ವಿಪ್ರಾಃ ಸೂಕ್ಷ್ಮೇಷು ಚ ಮಹತ್ಸು ಚ ॥ ೬೬ ॥
ಕಥಂ ಯೂಯಂ ಪ್ರವರ್ತಧ್ವೇ ವಿಪ್ರಾ ಹಿಂಸಾಪರಾಯಣಾಃ ।
ತಚ್ಛ್ರುತ್ವಾ ವಜ್ರತುಲ್ಯಂ ಹಿ ವಚನಂ ಚ ದ್ವಿಜೋತ್ತಮಾಃ ॥ ೬೭ ॥
ಪ್ರತ್ಯೂಚುರ್ವಾಡವಾಃ ಸರ್ವೇ ಕ್ರೋಧರಕ್ತೇಕ್ಷಣಾ ದೃಶಾ ॥ ೬೮ ॥

ಬ್ರಾಹ್ಮಣಾ ಊಚುಃ :—

ಅಹಿಂಸಾ ಪರಮೋ ಧರ್ಮಃ ಸತ್ಯಮೇತತ್ತ್ವಯೋದಿತಂ ।
ಪರಂ ತಥಾಽಪಿ ಧರ್ಮೋಽಸ್ತಿ ಶೃಣುಷ್ವೈಕಾಗ್ರಮಾನಸಃ ॥ ೬೯ ॥
ಯಾ ವೇದವಿಹಿತಾ ಹಿಂಸಾ ಸಾ ನ ಹಿಂಸೇತಿ ನಿರ್ಣಯಃ ।
ಶಸ್ತ್ರೇಣಾಽಹನ್ಯತೇ ಯತ್ರ ಪೀಡಾ ಜಂತುಷು ಜಾಯತೇ ॥ ೭೦ ॥
ಸ ಏವಾಽಧರ್ಮ ಏವಾಽಸ್ತಿ ಲೋಕೇ ಧರ್ಮವಿದಾಂ ವರ ।
ವೇದಮಂತ್ರೈರ್ವಿಹನ್ಯಂತೇ ವಿನಾ ಶಸ್ತ್ರೇಣ ಜಂತವಃ ॥ ೭೧ ॥
ಜಂತುಪೀಡಾಕರಾ ನೈವ ಸಾ ಹಿಂಸಾ ಸುಖದಾಯಿನೀ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥ ೭೨ ॥

---

ಆಡು, ಕುದುರೆ, ಆನೆ, ಜೇಡರಹುಳು, ಸರ್ಪ, ಎಮ್ಮೆ ಮೊದಲಾದ ಸಣ್ಣ ಮತ್ತು ದೊಡ್ಡ ಪ್ರಾಣಿಗಳಲ್ಲಿ ಪ್ರಾಣವು ಒಂದೇರೀತಿಯಾಗಿರುವುದು.

೬೭–೬೮. ನೀವು ಇಂತಹ ಪ್ರಾಣಿಗಳನ್ನು ಹಿಂಸೆ ಮಾಡುವುದರಲ್ಲಿ ಹೇಗೆ ತೊಡಗಿರುವಿರಿ? ಎಂದನು. ಬ್ರಾಹ್ಮಣರು ವಜ್ರಾಯುಧಕ್ಕೆ ಸಮಾನವಾದ ಆ ಮಾತನ್ನು ಕೇಳಿ ಸಿಟ್ಟಿನಿಂದ ಕೆಂಪೇರಿದ ಕಣ್ಣುಳ್ಳವರಾಗಿ ಹೀಗೆಂದರು.

೬೯. ಬ್ರಾಹ್ಮಣರು ಹೇಳುತ್ತಾರೆ:—"ಅರಸ! ಅಹಿಂಸೆಯು ಉತ್ತಮವಾದ ಧರ್ಮವೆಂದು ನೀನು ಹೇಳಿರುವುದು ನಿಜ. ಆದರೆ ಅದಕ್ಕಿಂತ ಉತ್ತಮವಾದ ಧರ್ಮವೊಂದಿದೆ. ಒಮ್ಮನದಿಂದ ಕೇಳು.

೭೦. ವೇದದಲ್ಲಿ ಹೇಳಲ್ಪಟ್ಟ ಹಿಂಸೆಯು ಹಿಂಸೆಯಲ್ಲವೆಂದು ನಿಶ್ಚಿತವಾಗಿದೆ. ಆಯುಧದಿಂದ ಜಂತುಗಳನ್ನು ಕೊಲ್ಲುವುದರಿಂದ ಅವುಗಳಿಗೆ ಬಾಧೆಯಾಗುವುದು.

೭೧–೭೨. ಧರ್ಮಜ್ಞನಾದ ದೊರೆಯೆ! ಶಸ್ತ್ರವಧೆಯೇ ಅಧರ್ಮವೆನ್ನಿಸಿಕೊಳ್ಳುವುದು. ಶಸ್ತ್ರಗಳಿಲ್ಲದೆ ವೇದ ಮಂತ್ರಗಳಿಂದ ಜಂತುಗಳನ್ನು ಕೊಂದರೆ ಅದು ಪ್ರಾಣಿಗಳಿಗೆ ಪೀಡೆಯನ್ನುಂಟುಮಾಡುವ ಹಿಂಸೆಯಾಗದೆ ಸುಖದಾಯಕವಾಗುವುದು. ಪರೋಪಕಾರವು ಪುಣ್ಯಕ್ಕೂ, ಪರಪೀಡೆಯು ಪಾಪಕ್ಕೂ ಕಾರಣವಾಗುವುದು.

CC-0. Jangamwadi Math Collection. Digitized by eGangotri

ವೇದೋದಿತಾಂ ವಿಧಾಯಾಪಿ ಹಿಂಸಾಂ ಪಾಪೈರ್ನ ಲಿಪ್ಯತೇ ।
ವಿಪ್ರಾಣಾಂ ವಚನಂ ಶ್ರುತ್ವಾ ಪುನರ್ವಚನಮಬ್ರವೀತ್ ॥ ೭೩ ॥

ರಾಜೋವಾಚ :—

ಬ್ರಹ್ಮಾದೀನಾಂ ಪರಂ ಕ್ಷೇತ್ರಂ ಧರ್ಮಾರಣ್ಯಮನುತ್ತಮಂ ।
ಬ್ರಹ್ಮವಿಷ್ಣುಮಹೇಶಾದ್ಯಾ ನೇದಾನೀಮತ್ರ ಸಂತಿ ತೇ ॥ ೭೪ ॥
ನ ಧರ್ಮೋ ವಿದ್ಯತೇ ವಾಽತ್ರ ಉಕ್ತೋ ರಾಮಃ ಸ ಮಾನುಷಃ ।
ಕ್ವ ವಾಽಪಿ ಲಂಬಪುಚ್ಛೋಽಸೌ ಯೋ ಮುಕ್ತೋ ರಕ್ಷಣಾಯ ವಃ ॥
ಶಾಸನಂ ಚೇನ್ನ ದೃಷ್ಟಂ ವೋ ನೈವ ತತ್ಪಾಲಯಾಮ್ಯಹಂ ।
ದ್ವಿಜಾಃ ಕೋಪಸಮಾವಿಷ್ಟಾ ದದುಃ ಪ್ರತ್ಯುತ್ತರಂ ತದಾ ॥ ೭೬ ॥

ದ್ವಿಜಾ ಊಚುಃ :—

ರೇ ಮೂಢ ತ್ವಂ ಕಥಂ ವೇತ್ಥಂ ಭಾಷಸೇ ಮದಲೋಲುಪಃ ।
ಸ ದೈತ್ಯಾನಾಂ ವಿನಾಶಾಯ ಧರ್ಮಸಂರಕ್ಷಣಾಯ ಚ ॥ ೭೭ ॥
ರಾಮಶ್ಚತುರ್ಭುಜಃ ಸಾಕ್ಷಾನ್ಮಾನುಷತ್ವಂ ಗತೋ ಭುವಿ ।
ಅಗತೀನಾಂ ಚ ಗತಿದಃ ಸ ವೈ ಧರ್ಮಪರಾಯಣಃ ।
ದಯಾಲುಶ್ಚ ಕೃಪಾಲುಶ್ಚ ಜಂತೂನಾಂ ಪರಿಪಾಲಕಃ ॥ ೭೮ ॥

ರಾಜೋವಾಚ :—

ಕುತೋಽದ್ಯ ವರ್ತತೇ ರಾಮಃ ಕುತೋ ವೈ ವಾಯುನಂದನಃ ।
ಭ್ರಷ್ಟಾಽಭ್ರಮಿವ ತೇ ಸರ್ವೇ ಕ್ವ ರಾಮೋ ಹನುಮಾನಿತಿ ॥ ೭೯ ॥

---

೭೩. ನರನು ವೇದೋಕ್ತವಾದ ಹಿಂಸೆಯನ್ನು ಮಾಡಿದರೂ ಪಾಪಿಯಾಗುವುದಿಲ್ಲ.” ದೊರೆಯು ಬ್ರಾಹ್ಮಣರ ಈ ಮಾತನ್ನು ಕೇಳಿ ಮರಳಿ ಇಂತೆಂದನು.

೭೪–೭೫. ರಾಜನು ಹೇಳುತ್ತಾನೆ:—ಧರ್ಮಾರಣ್ಯವು ಬ್ರಹ್ಮಾದಿ ದೇವತೆಗಳ ಕ್ಷೇತ್ರವು. ಅವರು ಈಗ ಇಲ್ಲಿಲ್ಲ. ಧರ್ಮವು ಇಲ್ಲ. ರಾಮನೊಬ್ಬ ಮನುಷ್ಯನು. ನಿಮ್ಮ ರಕ್ಷಣೆಗಾಗಿ ನೇಮಿಸಲ್ಪಟ್ಟ ಆ ದೀರ್ಘಬಾಲದ ಕಪಿಯೆಲ್ಲಿ?

೭೬. ನಿಮ್ಮ ಶಾಸನವನ್ನು ನಾನು ಕಾಣಲಿಲ್ಲ. ಅದನ್ನು ನಾನು ಕಾಪಾಡುವುದಿಲ್ಲ. ಎನ್ನಲು ಬ್ರಾಹ್ಮಣರು ಕೋಪಗೊಂಡು ಪ್ರತ್ಯುತ್ತರ ಕೊಟ್ಟರು.

೭೭–೭೮. ಬ್ರಾಹ್ಮಣರು ಹೇಳುತ್ತಾರೆ:— ಎಲಾ ಮೂಢ! ಮದಾಂಧನಾಗಿ ಏಕೆ ಹೀಗೆ ಮಾಡುತ್ತಿರುವೆ? ಶ್ರೀಮನ್ನಾರಾಯಣನು ದೈತ್ಯರ ನಾಶಕ್ಕಾಗಿಯೂ, ಧರ್ಮಸಂರಕ್ಷಣೆಗಾಗಿಯೂ ಭೂಮಿಯಲ್ಲಿ ಮನುಷ್ಯನಾಗಿ ಅವತರಿಸಿರುವನು. ಗತಿಯಿಲ್ಲದವರಿಗೆ ಗತಿದಾಯಕನೂ, ಧರ್ಮನಿರತನೂ, ದಯಾಳುವೂ ಆದ ಅವನು ಪ್ರಾಣಿಗಳನ್ನು ರಕ್ಷಿಸುತ್ತಿದ್ದನು.

೭೯. ರಾಜನು ಹೇಳುತ್ತಾನೆ:—ಈಗ ರಾಮನೆಲ್ಲಿ? ವಾಯುಸುತನಾದ ಆಂಜನೇಯನೆಲ್ಲಿ? ಅವರಿಬ್ಬರೂ ತುಂಡುಮೋಡದಂತೆ ಎಲ್ಲಿಯೋ ಹಾಳಾದರು.

CC-0. Jangamwadi Math Collection. Digitized by eGangotri

ಪರಂ ತು ರಾಮೋ ಹನುಮಾನ್ಯದಿ ವರ್ತೇತ ಸರ್ವತಃ ।
ಇದಾನೀಂ ವಿಪ್ರಸಾಹಾಯ್ಯ ಆಗಮಿಷ್ಯತಿ ಮೇ ಮತಿಃ ॥ ೮೦ ॥
ದರ್ಶಯಧ್ವಂ ಹನೂಮಂತಂ ರಾಮಂ ವಾ ಲಕ್ಷ್ಮಣಂ ತಥಾ ।
ಯದ್ಯಸ್ತಿ ಪ್ರತ್ಯಯಃ ಕಶ್ಚಿತ್ಸ ನೋ ವಿಪ್ರಾಃ ಪ್ರದರ್ಶ್ಯತಾಂ ॥ ೮೧ ॥
ಉಕ್ತಂ ತೈ ರಾಮದೇವೇನ ದೂತಂ ಕೃತ್ವಾಂಜನೀಸುತಂ ।
ಚತುಶ್ಚತ್ವಾರಿಂಶದಧಿಕಂ ದತ್ತಂ ಗ್ರಾಮಶತಂ ನೃಪ ॥ ೮೨ ॥
ಪುನರಾಗತ್ಯ ಸ್ಥಾನೇಽಸ್ಮಿನ್ದತ್ತಾ ಗ್ರಾಮಾಸ್ತ್ರಯೋದಶ ।
ಕಾಶ್ಯಪ್ಯಾಂ ಚೈವ ಗಂಗಾಯಾಂ ಮಹಾದಾನಾನಿ ಷೋಡಶ ॥ ೮೩ ॥
ದತ್ತಾನಿ ವಿಪ್ರಮುಖ್ಯೇಭ್ಯೋ ದತ್ತಾ ಗ್ರಾಮಾಃ ಸುಶೋಭನಾಃ ।
ಪುನಃ ಸಂಕಲ್ಪಿತಾ ವೀರ ಷಟ್ಪಂಚಾಶಕಸಂಖ್ಯಯಾ ॥ ೮೪ ॥
ಷಟ್ತ್ರಿಂಶಚ್ಚ ಸಹಸ್ರಾಣಿ ಗೋಭುಜಾ ಜಜ್ಞಿರೇ ವರಾಃ ।
ಸಪಾದಲಕ್ಷಾ ವಣಿಜೋ ದತ್ತಾ ಮಾಂಡಲಿಕಾಽಭಿಧಾಃ ॥ ೮೫ ॥
ತೇನೋಕ್ತಂ ವಾಡವಾಃ ಸರ್ವೇ ದರ್ಶಯಧ್ವಂ ಹಿ ಮಾರುತಿಂ ।
ಯಸ್ಯಾಽಭಿಜ್ಞಾನಮಾತ್ರೇಣ ಸ್ಥಿತಿಂ ಪೂರ್ವಾಂ ದದಾಮ್ಯಹಂ ॥ ೮೬ ॥
ವಿಪ್ರವಾಕ್ಯಂ ಕರಿಷ್ಯಾಮಿ ಪ್ರತ್ಯಯೋ ದರ್ಶ್ಯತೇ ಯದಿ ।
ತತಃ ಸರ್ವೇ ಭವಿಷ್ಯಂತಿ ವೇದಧರ್ಮಪರಾಯಣಾಃ ॥ ೮೭ ॥

---

೮೦. ರಾಮನೂ ಹನುಮಂತನೂ ಇದ್ದಿದ್ದರೆ ಅವರು ಈಗ ಬ್ರಾಹ್ಮಣರ ಸಹಾಯಕ್ಕಾಗಿ ಬರುತ್ತಿದ್ದರೆಂದು ತಿಳಿಯುವೆನು.

೮೧. ಬ್ರಾಹ್ಮಣರೆ! ನಿಮಗೆ ನಂಬಿಕೆಯಿದ್ದರೆ ಹನೂಮಂತನನ್ನಾಗಲಿ, ರಾಮನನ್ನಾಗಲಿ ನನಗೆ ತೋರಿಸಿರಿ ಎಂದನು.

೮೨. ಆಗ ಬ್ರಾಹ್ಮಣರು ಮಹಾರಾಜ! ರಾಮದೇವನು ಆಂಜನೇಯನನ್ನು ದೂತನನ್ನಾಗಿ ಮಾಡಿ ನೂರನಲವತ್ತನಾಲ್ಕು ಗ್ರಾಮಗಳನ್ನಿತ್ತನು.

೮೩. ಮತ್ತೆ ಬಂದು ಈ ಕ್ಷೇತ್ರದಲ್ಲಿ ಹದಿಮೂರು ಗ್ರಾಮಗಳನ್ನಿತ್ತನು. ಕಾಶ್ಯಪೀನದಿಯಲ್ಲಿಯೂ, ಗಂಗೆಯಲ್ಲಿಯೂ ಷೋಡಶಮಹಾದಾನವನ್ನು ಮಾಡಿದನು.

೮೪-೮೫. ಬ್ರಾಹ್ಮಣರಿಗೆ ಐವತ್ತಾರು ಗ್ರಾಮಗಳನ್ನು ಏರ್ಪಡಿಸಿದನು. ಇಲ್ಲಿ ಮೂವತ್ತಾರುಸಾವಿರ ಉತ್ತಮವೈಶ್ಯರು ಹುಟ್ಟಿದರು. ಒಟ್ಟಿಗೆ ಲಕ್ಷದ ಇಪ್ಪತ್ತೈದು ಸಾವಿರ ಮಂದಿಯಾದ ಅವರು ಮಾಂಡಲಿಕರೆಂಬ ವೈಶ್ಯರಾದರು ಎಂದರು.

೮೬-೮೮. ರಾಜನು ಬ್ರಾಹ್ಮಣರನ್ನು ಕುರಿತು, "ಅಯ್ಯಾ ದ್ವಿಜರೆ! ನೀವು ಹನುಮಂತನನ್ನು ನನಗೆ ತೋರಿಸಿರಿ. ಅವನನ್ನು ನೋಡಿದಕೂಡಲೆ ನಿಮ್ಮ ಹಿಂದಿನ ವೃತ್ತಿಯನ್ನು ಕೊಡುವೆನು. ನಂಬಿಕೆಯನ್ನು ತೋರಿಸಿದರೆ ನಿಮ್ಮ ಮಾತನ್ನು ನಡೆಯಿಸುವೆನು. ಅನಂತರ ನೀವು ವೇದಧರ್ಮಾಸಕ್ತರಾಗಬಹುದು.

CC-0. Jangamwadi Math Collection. Digitized by eGangotri

ಅನ್ಯಥಾ ಜೈನಧರ್ಮೇಣ ವರ್ತಯಧ್ವಂ ಹಿ ಸರ್ವಶಃ ।
ನೃಪವಾಕ್ಯಂ ತು ತೇ ಶ್ರುತ್ವಾ ಸ್ವೇ ಸ್ವೇ ಸ್ಥಾನೇ ಸಮಾಗತಾಃ ॥ ೮೮ ॥
ವಾಡವಾಃ ಖಿನ್ನಮನಸಃ ಕ್ರೋಧೇನಾಽಂಧೀಕೃತಾ ಭುವಿ ।
ನಿಶ್ವಾಸಾನ್ಮುಂಚಮಾನಾಸ್ತೇ ಹಾಹೇತಿ ಪ್ರವದಂತಿ ಚ ॥ ೮೯ ॥
ದಂತಾನ್ಪ್ರಘರ್ಷಯನ್ಸರ್ವಾನ್ನ್ಯಪೀಡಂಶ್ಚ ಕರೈಃ ಕರಾನ್ ।
ಪರಸ್ಪರಂ ಭಾಷಮಾಣಾಃ ಕಥಂ ಕುರ್ಮೋ ವಯಂತ್ವಿತಃ ॥ ೯೦ ॥
ಮಿಲಿತ್ವಾ ವಾಡವಾಃ ಸರ್ವೇ ಚಕ್ರುಸ್ತೇ ಮಂತ್ರಮುತ್ತಮಂ ।
ರಾಮವಾಕ್ಯಂ ಹೃದಿ ಧ್ಯಾತ್ವಾ ಧ್ಯಾತ್ವಾ ಚೈವಾಽಂಜನಾಸುತಂ ॥ ೯೧ ॥
ದ್ವಿಜಮೇಲಾಪಕಂ ಚಕ್ರುರ್ಬಾಲಾ ವೃದ್ಧತಮಾ ಅಪಿ ।
ತೇಷಾಂ ವೃದ್ಧತಮೋ ವಿಪ್ರೋ ವಾಕ್ಯಮೂಚೇ ಶುಭಂ ತದಾ ॥ ೯೨ ॥
ಚತುಃಷಷ್ಟಿಶ್ಚ ಗೋತ್ರಾಣಾಮಸ್ಮಾಕಂ ಯೇ ದ್ವಿಸಪ್ತತಿಃ ।
ಸ್ವಸ್ವ ಗೋತ್ರಸ್ಯಾಽವಟಂಕಾ ಏಕಗ್ರಾಮಾಽಭಿಭಾಷಿಣಃ ॥ ೯೩ ॥
ಪ್ರಯಾತು ಸ್ವಸ್ವವರ್ಗಸ್ಯ ಏಕೋ ಹ್ಯೇಕೋ ದ್ವಿಜಃ ಸುಧೀಃ ।
ರಾಮೇಶ್ವರಂ ಸೇತುಬಂಧಂ ಹನೂಮಾಂಸ್ತತ್ರ ವಿದ್ಯತೇ ॥ ೯೪ ॥
ಸರ್ವೇ ಪ್ರಯಾಂತು ತತ್ರೈವ ರಾಮಪಾರ್ಶ್ವೇ ನಿರಾಮಯಾಃ ।
ನಿರಾಹಾರಾ ಜಿತಕ್ರೋಧಾ ಮಾಯಯಾ ವರ್ಜಿತಾಃ ಪುನಃ ॥ ೯೫ ॥

---

ಹಾಗಿಲ್ಲದಿದ್ದರೆ ಜೈನಧರ್ಮವನ್ನು ಆಶ್ರಯಿಸಿರಿ. ರಾಜನ ಮಾತನ್ನು ಕೇಳಿ ಬ್ರಾಹ್ಮಣರು ತಮ್ಮ ತಮ್ಮ ಸ್ಥಳಗಳಿಗೆ ಬಂದರು.

೮೯-೯೦. ವ್ಯಥೆಗೊಂಡ ಮನಸ್ಸುಳ್ಳವರೂ, ಕೋಪಗೊಂಡವರೂ, ನಿಟ್ಟುಸಿರು ಬಿಡುವವರೂ, ಹಾ ಹಾಕಾರ ಮಾಡಿ ಪ್ರಲಪಿಸುವವರೂ ಆದ ಬ್ರಾಹ್ಮಣರು ಹಲ್ಲುಗಳನ್ನು ಕಡಿಯುತ್ತಲೂ, ಕೈಗಳನ್ನು ಹಿಸಿಕಿಕೊಳ್ಳುತ್ತಲೂ ಇನ್ನುಮುಂದೆ ನಾವು ಏನುಮಾಡೋಣ ಎಂದು ಮಾತನಾಡಿಕೊಳ್ಳುತ್ತಲೂ ಇದ್ದರು.

೯೧-೯೨. ಆ ಬ್ರಾಹ್ಮಣರೆಲ್ಲ ಸೇರಿ ಆಲೋಚಿಸಿದರು: ರಾಮನನ್ನೂ ಹನುಮಂತನನ್ನೂ ಧ್ಯಾನಿಸುತ್ತ ಬ್ರಾಹ್ಮಣರ ಸಭೆಯನ್ನು ಸೇರಿಸಿದರು. ಆಗ ಅವರಲ್ಲಿ ಮುದುಕನಾದ ಒಬ್ಬ ಬ್ರಾಹ್ಮಣನು ಹೀಗೆಂದನು.

೯೩-೯೫. ಅರುವತ್ತನಾಲ್ಕು ಗೋತ್ರಗಳಲ್ಲಿ ಜನಿಸಿದ ಎಪ್ಪತ್ತೆರಡು ಗೋತ್ರಾವಟಂಕವುಳ್ಳವರಾಗಿ ಒಂದೇ ಗ್ರಾಮದಲ್ಲಿ ವಾಸಿಸುತ್ತ ಒಂದೇ ಮಾತನ್ನಾಡುತ್ತಿರುವ ನಮ್ಮಲ್ಲಿ ಒಂದೊಂದು ಗುಂಪಿಗೆ ಒಬ್ಬೊಬ್ಬನಂತೆ ಎಲ್ಲರೂ ಸೇರಿ ಆಹಾರವನ್ನೂ, ಕೋಪವನ್ನೂ, ಕಪಟವನ್ನೂ ತ್ಯಜಿಸಿ ರಾಮನೂ ಹನುಮಂತನೂ ಇರುವ ರಾಮೇಶ್ವರಕ್ಷೇತ್ರಕ್ಕೆ ಹೋಗಬೇಕು.



CC-0. Jangamwadi Math Collection. Digitized by eGangotri

ಏಕಾಗ್ರಮಾನಸಾಃ ಸರ್ವೇ ಸ್ತುತ್ವಾ ಧ್ಯಾತ್ವಾ ಜಪಂತು ತಂ ।
ತತೋ ದಾಶರಥೀ ರಾಮೋ ದಯಾಂ ಕೃತ್ವಾ ದ್ವಿಜನ್ಮಸು ॥ ೯೬ ॥
ಶಾಸನಂ ಚ ಪ್ರದಾಸ್ಯತಿ ಅಚಲಂ ಚ ಯುಗೇ ಯುಗೇ ।
ಮಹತಾ ತಪಸಾ ತುಷ್ಟಃ ಪ್ರದಾಸ್ಯತಿ ಸಮೀಹಿತಂ ॥ ೯೭ ॥
ಯಸ್ಯ ವರ್ಗಸ್ಯ ಯೋ ವಿಪ್ರೋ ನ ಪ್ರಯಾಸ್ಯತಿ ತತ್ರ ವೈ ।
ಸ ಚ ವರ್ಗಾತ್ಪರಿತ್ಯಾಜ್ಯಃ ಸ್ಥಾನಧರ್ಮಾನ್ನ ಸಂಶಯಃ ॥ ೯೮ ॥
ವರ್ಣಿಗ್ವೃತ್ತೇ ನ ಸಂಬಂಧೇ ನ ವಿವಾಹೇ ಕದಾಚನ ।
ಗ್ರಾಮವೃತ್ತೇ ನ ಸಂಬಂಧಃ ಸರ್ವಸ್ಥಾನೇ ಬಹಿಷ್ಕೃತಾಃ ॥ ೯೯ ॥
ಸಭಾವಾಕ್ಯಂ ಚ ತಚ್ಛ್ರುತ್ವಾ ತನ್ಮಧ್ಯೇ ವಾಡವಃ ಶುಚಿಃ ।
ವಾಗ್ಮೀ ದಕ್ಷಃ ಸುಶಬ್ದಶ್ಚ ತ್ರಿರವೈಃ ಶ್ರಾವಯನ್ದ್ವಿಜಾನ್ ॥ ೧೦೦ ॥
ಪ್ರತಿವಾಕ್ಯಂ ದತ್ತತಾಲಂ ತಿಷ್ಠನ್ನೇತದ್ವಚೋಽಬ್ರವೀತ್ ।
ಅಸತ್ಯವಾದಿನಾಂ ಯಚ್ಚ ಪಾತಕಂ ಪರಿನಿಂದಕೇ ।
ಪರದಾರಾಽಭಿಗಮನೇ ಪರದ್ರೋಹರತೇ ನರೇ ॥ ೧೦೧ ॥
ಮದ್ಯಪೇಷು ಚ ಯತ್ಪಾಪಂ ಯತ್ಪಾಪಂ ಹೇಮಹಾರಿಷು ।
ತತ್ಪಾಪಂ ಚ ಭವೇತ್ತಸ್ಯ ಗಮನೇ ಯಃ ಪರಾಙ್ಮುಖಃ ।
ಅಥ ಕಿಂ ಬಹುನೋಕ್ತೇನ ಯಾಂತು ಸತ್ಯಂ ದ್ವಿಜೋತ್ತಮಾಃ ॥ ೧೦೨ ॥

---

೯೬–೯೭. ಎಲ್ಲರೂ ಒಮ್ಮನದಿಂದ ಶ್ರೀರಾಮನನ್ನು ಸ್ತೋತ್ರಗೈದು ಧ್ಯಾನಿಸಿ ಜಪಮಾಡಿದರೆ ಅವನು ಬ್ರಾಹ್ಮಣರಲ್ಲಿ ದಯೆಮಾಡಿ ಪ್ರತಿಯುಗದಲ್ಲಿಯೂ ನಿಶ್ಚಲವಾದ ಶಾಸನವನ್ನು ಕೊಡುವನು. ತಪಸ್ಸಿನಿಂದ ಸಂತುಷ್ಟನಾಗಿ ಇಷ್ಟಾರ್ಥವನ್ನೀಯುವನು.

೯೮. ಯಾವ ಗುಂಪಿನ ಯಾವ ಬ್ರಾಹ್ಮಣನು ಅಲ್ಲಿಗೆ ಹೋಗುವುದಿಲ್ಲವೊ, ಅವನನ್ನು ಸಂಘದಿಂದಲೂ ಸ್ಥಾನಧರ್ಮದಿಂದಲೂ ಬಹಿಷ್ಕರಿಸಬೇಕು.

೯೯. ಅವನು ವರ್ತಕವೃತ್ತಿಯಿಂದಲೂ, ವಿವಾಹಸಂಬಂಧದಿಂದಲೂ, ಗ್ರಾಮವೃತ್ತಿಯಿಂದಲೂ, ಎಲ್ಲೆಡೆಯಲ್ಲಿಯೂ ಬಹಿಷ್ಕೃತನಾಗುವನು.

೧೦೦–೧೦೨. ಸಭೆಯ ಆ ಮಾತನ್ನು ಕೇಳಿ ಸಭೆಯ ಮಧ್ಯದಿಂದ ಶುದ್ಧನಾದ ಒಬ್ಬ ಬ್ರಾಹ್ಮಣನೆದ್ದು ಬ್ರಾಹ್ಮಣರಿಗೆಲ್ಲ ಕೇಳಿಸುವಂತೆ ಪ್ರತಿಮಾತಿನಲ್ಲಿಯೂ ಚಪ್ಪಾಳೆಯನ್ನು ಹಾಕುತ್ತ ಮೂರಾವೃತ್ತಿ ಹೀಗೆಂದನು. ರಾಮೇಶ್ವರಕ್ಕೆ ಹೋಗಲೊಪ್ಪದಿರುವವನು ಸುಳ್ಳಾಡುವುದರಿಂದಲೂ, ನಿಂದಿಸುವುದರಿಂದಲೂ, ಪರಸ್ತ್ರೀಗಮನದಿಂದಲೂ, ಪರರಿಗೆ ದ್ರೋಹಮಾಡುವುದರಿಂದಲೂ, ಮದ್ಯಪಾನದಿಂದಲೂ, ಸುವರ್ಣವನ್ನು ಕದಿಯುವುದರಿಂದಲೂ ಉಂಟಾಗುವ ಪಾಪವನ್ನು ಹೊಂದುವನು. ಹೆಚ್ಚುಹೇಳಿ ಪ್ರಯೋಜನವೇನು ? ಬ್ರಾಹ್ಮಣರೆಲ್ಲರೂ ನಿಶ್ಚಯವಾಗಿಯೂ ಅಲ್ಲಿಗೆ ತೆರಳಲಿ.

CC-0. Jangamwadi Math Collection. Digitized by eGangotri

ತಚ್ಛ್ರುತ್ವಾ ದಾರುಣಂ ವಾಕ್ಯಂ ಗಮನಾಯ ಮನೋ ದಧೇ ।
ಗಚ್ಛತಸ್ತಾನ್ದ್ವಿಜಾನ್ಛ್ರುತ್ವಾ ರಾಜಾ ಕುಮಾರಪಾಲಕಃ ॥ ೧೦೩ ॥
ಸಮಾಹೂಯ ಕೃಷೇಃ ಕರ್ಮ ಭಿಕ್ಷಾಟನಮಥಾಽಪಿ ವಾ ।
ನಾನಾಗೋತ್ರೇಭ್ಯೋ ಬ್ರಾಹ್ಮಣೇಭ್ಯಃ ಪ್ರಾಪಯಿಷ್ಯೇ ನ ಸಂಶಯಃ ॥
ತಚ್ಛ್ರುತ್ವಾ ವ್ಯಥಿತಾಃ ಸರ್ವೇ ಕಿಂ ಭವಿಷ್ಯತ್ಯತಃ ಪರಂ ।
ತಥಾ ತ್ರೀಣಿ ಸಹಸ್ರಾಣಿ ಪ್ರಬಂಧಂ ಚಕ್ರಿರೇ ತದಾ ॥ ೧೦೪ ॥
ಗಮಿಷ್ಯಾಮೋ ವಯಂ ಸರ್ವೇ ರಾಮಂ ಪ್ರತಿ ನ ಸಂಶಯಃ ।
ಹಸ್ತಾಕ್ಷರಪ್ರದಾನಂ ವೈ ಅನ್ಯೋನ್ಯಂ ತು ಕೃತಂ ದ್ವಿಜೈಃ ॥ ೧೦೬ ॥
ಕೃತಾಂಜಲಿ ಪುಟಾ ವಿಪ್ರಾ ವಾಕ್ಯಮೇತದಥಾಽಬ್ರುವನ್ ।
ನಶ್ಯತೇಽತ್ರ ತ್ರಯೀವಿದ್ಯಾ ತ್ರಯೀಮೂರ್ತಿಃ ಪ್ರಕುಪ್ಯತಿ ॥ ೧೦೭ ॥
ತಸ್ಮಾತ್ತತ್ರೈವ ಗಂತವ್ಯಮಷ್ಟಾದಶಸಹಸ್ರಕೈಃ ।
ತತಃ ಸ ವಣಿಜಃ ಸರ್ವಾನ್ಸಮಾಹೂಯ ಚ ಗೋಭುಜಾನ್ ॥ ೧೦೮ ॥
ವಾಕ್ಯಮೂಚೇ ನೃಪಶ್ರೇಷ್ಠೋ ವಾರಯಧ್ವಂ ದ್ವಿಜಾನಿತಿ ॥ ೧೦೯ ॥
ವ್ಯಾಸ ಉವಾಚ:—
ನ ಜೈನಧರ್ಮೇ ಯೇ ಲಿಪ್ತಾ ಗೋಭುಜಾ ವಣಿಗುತ್ತಮಾಃ ।
ವೃತ್ತಿಭಂಗಭಯಾತ್ತತ್ರ ಮೌನಮೇವ ಸಮಾಚರನ್ ॥ ೧೧೦ ॥

---

೧೦೩–೧೦೪. ಆ ಬ್ರಾಹ್ಮಣನ ದಾರುಣಭಾಷಣವನ್ನು ಕೇಳಿ ಎಲ್ಲರೂ ಪ್ರಯಾಣಮಾಡಲು ನಿಶ್ಚಯಿಸಿದರು. ಕುಮಾರಪಾಲಕನು ಬ್ರಾಹ್ಮಣರು ಹೋಗುತ್ತಾರೆಂಬುದನ್ನು ಕೇಳಿ ಅವರನ್ನು ಕರೆಯಿಸಿ, "ನಿಮ್ಮೆಲ್ಲರನ್ನೂ ವ್ಯವಸಾಯ ಮಾಡುವಂತೆಯೂ, ಭಿಕ್ಷೆಬೇಡುವಂತೆಯೂ ಮಾಡುವೆನು" ಎಂದನು.

೧೦೫–೧೦೬. ಅದನ್ನು ಕೇಳಿ ಬ್ರಾಹ್ಮಣರೆಲ್ಲರೂ ಮುಂದೇನಾಗುವುದೊ ಎಂದು ಆಲೋಚಿಸುತ್ತ ನಾವೆಲ್ಲರೂ ರಾಮನಿದ್ದೆಡೆಗೆ ಹೋಗುವೆವು ಎಂದು ನಿಶ್ಚಯಿಸಿ ಮೂರುಸಾವಿರ ಪ್ರಬಂಧಗಳನ್ನು ಬರೆದು ಎಲ್ಲರೂ ತಮ್ಮ ಹಸ್ತಾಕ್ಷರವನ್ನು ಗುರುತಿಸಿದರು.

೧೦೭–೧೦೯. ಕೈಮುಗಿದುಕೊಂಡು, "ಇಲ್ಲಿ ವೇದವಿದ್ಯೆಯು ಹಾಳಾಗುವುದು. ವೇದದೇವತೆಗೆ ಕೋಪಬರುವುದು. ಆದುದರಿಂದ ನಾವು ಹದಿನೆಂಟು ಸಾವಿರ ಜನರೂ ರಾಮೇಶ್ವರಕ್ಕೆ ಹೋಗುವೆವು" ಎಂದರು. ಬಳಿಕ ಆ ಕುಮಾರಪಾಲನು ಗೋಪಾಲಕರಾದ ವೈಶ್ಯರನ್ನು ಕರೆಯಿಸಿ, "ಈ ದ್ವಿಜರನ್ನು ತಡೆಯಿರಿ" ಎಂದನು.

೧೧೦. ವ್ಯಾಸನು ಹೇಳುತ್ತಾನೆ:—ಜೈನಧರ್ಮವನ್ನವಲಂಬಿಸದ ವೈಶ್ಯೋತ್ತಮರು ತಮ್ಮ ಜೀವಿಕೆಯು ತಪ್ಪುವುದೆಂಬ ಹೆದರಿಕೆಯಿಂದ ಮೌನಗೊಂಡರು.

CC-0. Jangamwadi Math Collection. Digitized by eGangotri

ವಾರಯಾಮ ಕಥಂ ವಿಪ್ರಾನ್ವಹ್ನಿರೂಪಾನ್ದಹಂತಿ ತೇ ।
ಶಾಪಾಗ್ನಿನಾ ನರಪತೇ ದ್ವಿಜಾ ಮೃತ್ಯುಪರಾಯಣಾಃ ॥ ೧೧೧ ॥
ಅಂಡಾಲಯೇಷು ಯೇ ಜಾತಾಃ ಶೂದ್ರಾ ಆಹೂಯ ತಾನ್ನೃಪಃ ।
ನಿವಾರ್ಯತಾಮಿತಿ ಪ್ರಾಹ ವಾಡವಾ ಗಮನೋದ್ಯತಾಃ ॥ ೧೧೨ ॥
ತೇಷಾಂ ಮಧ್ಯೇ ಕತಿಪಯಾ ಜೈನಧರ್ಮಸಮಾಶ್ರಿತಾಃ ।
ಗತಾ ವಾಡವಪುಂಜೇಷು ರಾಜಾದೇಶಾನ್ನಿವಾರಣೇ ॥ ೧೧೩ ॥

ಕೇಚಿಚ್ಛೂದ್ರಾ ಊಚುಃ :—

ಕ್ವ ರಾಮೋ ಲಕ್ಷ್ಮಣೋಪೇತಃ ಕ್ವ ಚ ವಾಯುಸುತೋ ಬಲೀ ।
ವರ್ತಮಾನೇನ ಕಾಲೇನ ವಕ್ತವ್ಯಂ ದ್ವಿಜಸತ್ತಮಾಃ ॥ ೧೧೪ ॥
ವ್ಯಾಘ್ರಸಿಂಹಾಕುಲೇ ದುರ್ಗೇ ವನೇ ವನಗಜಾಶ್ರಿತೇ ।
ಪರಿತ್ಯಜ್ಯ ಪ್ರಿಯಾನ್ಪ್ರಾಣಾನ್ಪುತ್ರಾನ್ದಾರಾನ್ನಿಕೇತನಾನ್ ॥ ೧೧೫ ॥
ಕಿಮರ್ಥಂ ಗಮ್ಯತೇ ವಿಪ್ರಾ ರಾಜ್ಯೇ ವೈ ದುಷ್ಟಶಾಸನೇ ।
ತಚ್ಛ್ರುತ್ವಾ ವಾಡವಾಃ ಕೇಚಿದ್ವಾಕ್ಯೇನ ಮನಸಾಽಸ್ಮರನ್ ॥ ೧೧೬ ॥
ಪಂಚದಶಸಹಸ್ರಾಸ್ತೇ ವಾಡವಾ ನೃಪಸತ್ತಮಾತ್ ।
ಭಯಾಲ್ಲೋಭಾಚ್ಚ ದಾನಾಚ್ಚ ತತ್ಸರ್ವಂ ಭವತಾಮಿತಿ ॥ ೧೧೭ ॥

---

೧೧೧. ಅವರು, "ಮಹಾರಾಜ! ಸಾಯುವುದಕ್ಕೂ ಸಿದ್ಧರಾದ ಬ್ರಾಹ್ಮಣರನ್ನು ತಡದರೆ ಬೆಂಕಿಯಂತಿರುವ ಅವರು ಶಾಪಾಗ್ನಿಯಿಂದ ನಮ್ಮನ್ನು ಸುಟ್ಟುಬಿಡುವರು" ಎಂದರು.

೧೧೨. ತರುವಾಯ ರಾಜನು ಅಂಡಾಲಯಗಳಲ್ಲಿ ಹುಟ್ಟಿದ ಶೂದ್ರರನ್ನು ಕರೆಯಿಸಿ ಹೋಗುತ್ತಿರುವ ಬ್ರಾಹ್ಮಣರನ್ನು ತಡೆಯಿರಿ ಎಂದನು.

೧೧೩. ಅವರಲ್ಲಿ ಜೈನಧರ್ಮವನ್ನವಲಂಬಿಸಿದ ಕೆಲವರು ರಾಜನ ಅಪ್ಪಣೆಯಂತೆ ಬ್ರಾಹ್ಮಣರನ್ನು ತಡೆಯುವುದಕ್ಕಾಗಿ ಅವರ ಗುಂಪಿಗೆ ಹೋದರು.

೧೧೪. ಕೆಲಮಂದಿ ಶೂದ್ರರು ಹೇಳುತ್ತಾರೆ:—ದ್ವಿಜೋತ್ತಮರೆ! ಈ ಕಾಲದಲ್ಲಿ ಲಕ್ಷ್ಮಣಸಹಿತನಾದ ರಾಮನೂ, ವಾಯುಪುತ್ರನಾದ ಆಂಜನೇಯನೂ ಎಲ್ಲಿದ್ದಾರೆ?

೧೧೫–೧೧೬. ಪ್ರಿಯವಾದ ಪ್ರಾಣವನ್ನೂ, ಪುತ್ರರನ್ನೂ, ಮಕ್ಕಳನ್ನೂ, ಮನೆಗಳನ್ನೂ ತ್ಯಜಿಸಿ ದುಷ್ಟರು ಆಳುತ್ತಿರುವ ವ್ಯಾಘ್ರ, ಸಿಂಹ, ಆನೆಗಳಿಂದ ಭಯಂಕರವಾದ ದುರ್ಗಮವಾಗಿರುವ ಕಾಡಿಗೆ ಏಕೆ ಹೋಗುತ್ತಿದ್ದೀರಿ? ಎಂದು ಶೂದ್ರರು ಕೇಳಲು ಆ ಮಾತನ್ನು ಕೇಳಿ ಕೆಲವು ಬ್ರಾಹ್ಮಣರು ಮನಸ್ಸಿನಲ್ಲಿ ಆಲೋಚಿಸಿದರು.

೧೧೭. ಆ ಹದಿನೆಂಟುಸಾವಿರ ಬ್ರಾಹ್ಮಣರಲ್ಲಿ ಹದಿನೈದು ಸಾವಿರ

CC-0. Jangamwadi Math Collection. Digitized by eGangotri

ವೃತ್ತ್ಯೋಪಕಲ್ಪನೇನೈವ ಕರಿಷ್ಯಾಮಃ ಕದಾಚನ ।
ಕೃಷಿಕರ್ಮ ಕರಿಷ್ಯಾಮೋ ಭಿಕ್ಷಾಽಟನಮಥಾಽಪಿ ವಾ ॥ ೧೧೮ ॥
ತತಶ್ಚ ತೇ ಪಂಚದಶಸಹಸ್ರಾ ದ್ವಿಜಸತ್ತಮಾಃ ।
ದಾರುಣಂ ವಾಕ್ಯಮೂಚುಸ್ತ್ರೀನ್ಯಾಂತು ಚಾಽನ್ಯೇ ಯಥೋಚಿತಂ ॥ ೧೧೯ ॥
ಶಾಸನಂ ಭವತಾಮುಸ್ತು ರಾಮದತ್ತಂ ನ ಸಂಶಯಃ ।
ತ್ರಯೀವಿದ್ಯಾಸ್ತು ವಿಖ್ಯಾತಾಃ ಸರ್ವೇ ವಾಡವಪುಂಗವಾಃ ॥ ೧೨೦ ॥
ಸಹಸ್ರಾಣಿ ಚ ತ್ರೀಣ್ಯೇವ ತ್ರೈವಿದ್ಯಾ ಅಭವನ್ಧ್ರುವಂ ॥ ೧೨೧ ॥

ರಾಜೋವಾಚ :—

ಚತುರ್ಥಾಂಶೇನ ರಾಜ್ಯಂ ಚ ಕಿಂಚಿದ್ದತ್ತಾ ವಸುಂಧರಾ ।
ತಸ್ಮಾಚ್ಚತುರ್ವಿಧೇತ್ಯೇವಂ ಜ್ಞಾತಿಬಂಧಮತಃ ಪರಂ ॥ ೧೨೨ ॥
ಚ್ಯವನೋ ದಾಸ್ಯತೇ ಕನ್ಯಾಂ ಯೂಯಂ ಕನ್ಯಾಮವಾಪ್ನುತ ।
ನ ವೃತ್ತಿರ್ನ ಚ ಸಂಬಂಧೋ ಭವತಾಂ ಸ್ಯಾತ್ಕದಾಽಪಿ ವಾ ॥ ೧೨೩ ॥
ಇತಿ ತಸ್ಯ ವಚಃ ಶ್ರುತ್ವಾ ತ್ರಯೀವಿದ್ಯಾಶ್ಚ ವಾಡವಾಃ ।
ಸ್ವೇ ಸ್ವೇ ಸ್ಥಾನೇ ಗತಾಃ ಸರ್ವೇ ಸಂಕೇತಾದನಿವೃತ್ಯ ಚ ॥ ೧೨೪-೧ ॥
ಪಂಚದಶಸಹಸ್ರಾಣಿ ತತಸ್ತು ದ್ವಿಜಪುಂಗವಾಃ ।
ಯಥಾಗತಂ ಗತಾಃ ಸರ್ವೇ ಚಾತುರ್ವಿದ್ಯಾ ದ್ವಿಜೋತ್ತಮಾಃ ॥ ೧೨೫ ॥

---

ಬ್ರಾಹ್ಮಣರು ರಾಜನಿಂದ ಭಯಗೊಂಡು ಅವನು ಕೊಡುವ ದಾನಕ್ಕೆ ಆಶೆಪಟ್ಟು ಆ ಶೂದ್ರರ ಮಾತನ್ನು ಒಪ್ಪಿ ಪ್ರಯಾಣವನ್ನು ನಿಲ್ಲಿಸಿದರು.

೧೧೮–೧೨೧. ಅನಂತರ ಅವರು, "ನಾವು ಕೃಷಿಯನ್ನಾಗಲಿ ಭಿಕ್ಷಾಟನೆಯನ್ನಾಗಲಿ ಮಾಡಿ ಜೀವಿಸುವೆವು." ಎಂದು ನಿಶ್ಚಯಿಸಿ ಉಳಿದ ಮೂರು ಸಾವಿರ ಜನರನ್ನು ಕುರಿತು "ನೀವು ನಿಮಗೆ ಇಷ್ಟಬಂದಂತೆ ತೆರಳಿರಿ. ರಾಮನ ಶಾಸನವು ನಿಮಗೆ ಉಳಿಯಲಿ" ಎಂದು ಕಠಿನವಾಗಿ ಹೇಳಿದರು. ಆಗ ಮೂರು ಸಾವಿರ ತ್ರೈವಿದ್ಯಬ್ರಾಹ್ಮಣರು ಮಾತ್ರ ಬೇರೆಯಾದರು.

೧೨೨–೧೨೩. ರಾಜನು ಹೇಳುತ್ತಾನೆ:—ದ್ವಿಜರೆ! ನಿಮಗೆ ನಾಲ್ಕನೆ ಒಂದಂಶ ರಾಜ್ಯವನ್ನು ಕೊಟ್ಟದ್ದೇನೆ. ಆದುದರಿಂದ ನೀವು ಚತುರ್ವಿಧರೆನ್ನಿಸಿಕೊಳ್ಳುವಿರಿ. ಇನ್ನು ಮುಂದೆ ನಿಮಗೆ ಚ್ಯವನನು ಕೊಡುವ ಕನ್ಯೆಯಿಂದ ನಿಮ್ಮ ಬಂಧುವರ್ಗವು ಬೆಳೆಯುವುದು. ಇನ್ನು ಯಾವ ವೃತ್ತಿಯೂ, ಸಂಬಂಧವೂ ನಿಮಗಿರುವುದಿಲ್ಲ.

೧೨೪–೧೨೫. ಅವನ ಈ ಮಾತನ್ನು ಕೇಳಿ ಹದಿನೈದುಸಾವಿರ ತ್ರೈವಿದ್ಯ ಬ್ರಾಹ್ಮಣರು ಸಂಕೇತವನ್ನು ಮೀರದೆ ತಮ್ಮ ತಮ್ಮ ಸ್ಥಾನಕ್ಕೆ ಹೋದರು.

CC-0. Jangamwadi Math Collection. Digitized by eGangotri

ತದ್ದಿನೇ ಅತಿವಾಹ್ಯಾಥ ಚಿಂತಾವಿಷ್ಟೇನ ಚೇತಸಾ ।
ವಾರ್ಯಮಾಣಾಃ ಸ್ವಪುತ್ರೈಸ್ತೇ ದಾರೈಶ್ಚ ವಿನಯಾನ್ವಿತೈಃ ॥ ೧೨೬ ॥
ಏಕಾಗ್ರಮಾನಸಾಃ ಸರ್ವೇ ನ ನಿದ್ರಾಮುಪಲೇಭಿರೇ ।
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಮಾಯಾಂ ತ್ಯಕ್ತ್ವಾ ಹಿ ಲೌಕಿಕೀಂ ॥
ಪರಿತ್ಯಜ್ಯ ಪ್ರಿಯಾನ್ಪುತ್ರಾನ್ದಾರಾನ್ಸ್ವನಿಲಯಾನಪಿ ।
ಗ್ರಾಮೋಪಾಂತೇಷು ಮಿಲಿತಾಃ ಸರ್ವೇ ವಾಡವಪುಂಗವಾಃ ॥ ೧೨೮ ॥
ಸಹಸ್ರಾಣಿ ತದಾ ತ್ರೀಣಿ ಕೃತನಿತ್ಯಾಹ್ನಿಕಕ್ರಿಯಾಃ ।
ವಿಪ್ರೇಭ್ಯೋ ದಕ್ಷಿಣಾಂ ದತ್ತ್ವಾ ಸಂಪೂಜ್ಯ ಕುಲಮಾತರಂ ॥ ೧೨೯ ॥
ವಿಘ್ನಸಂಘವಿನಾಶಾಯ ದಕ್ಷಿಣದ್ವಾರಸಂಸ್ಥಿತಃ ।
ಸಿಂದೂರಪುಷ್ಪಮಾಲಾಭಿಃ ಪೂಜಿತೋ ಗಣನಾಯಕಃ ॥ ೧೩೦ ॥
ಪೂಜಿತೋ ಬಕುಲಸ್ವಾಮೀ ಸೂರ್ಯಃ ಸರ್ವಾರ್ಥಸಾಧಕಃ ।
ಆದರಾಚ್ಚ ಮಹಾಶಕ್ತಿಃ ಶ್ರೀಮಾತಾ ಪೂಜಿತಾ ತಥಾ ॥ ೧೩೧ ॥
ಶಾಂತಾಂ ಚೈವ ನಮಸ್ಕೃತ್ಯ ಜ್ಞಾನಜಾಂ ಗೋತ್ರಮಾತರಂ ।
ಗಮನೇ ನೋದ್ಯಮಾನಾಸ್ತೇ ಪರಂ ಹರ್ಷಮುಪಾಯಯುಃ ॥ ೧೩೨ ॥
ಚಾತುರ್ವಿದ್ಯಾ ದ್ವಿಜಾಶ್ಚೈವ ಪುನರಾಮಂತ್ರ್ಯ ತಾನ್ಪ್ರತಿ ।
ಪಪ್ರಚ್ಛುಶ್ಚ ಮುಹುಃ ಸರ್ವಂ ಸಮಾಗಮನಕಾರಣಂ ॥ ೧೩೩ ॥

---

೧೨೬–೧೨೮. ತಮ್ಮ ಮಕ್ಕಳಿಂದಲೂ, ಪತ್ನಿಯರಿಂದಲೂ ವಿನಯದಿಂದ ತಡೆಯಲ್ಪಟ್ಟು ಒಮ್ಮನಸ್ಸಿನ ಆ ಮೂರುಸಾವಿರ ಮಂದಿ ಬ್ರಾಹ್ಮಣರು ಚಿಂತೆಯಿಂದ ನಿದ್ರೆಮಾಡದೆ ಆ ದಿನವನ್ನೆಲ್ಲ ಕಳೆದು ಬ್ರಾಹ್ಮಮುಹೂರ್ತದಲ್ಲೆದ್ದು ಲೌಕಿಕಮಾಯಾಬಂಧನವನ್ನು ತ್ಯಜಿಸಿ ಪ್ರಿಯಪುತ್ರರನ್ನೂ, ಹೆಂಡತಿಯರನ್ನೂ, ಮನೆಯನ್ನೂ ಬಿಟ್ಟು ಗ್ರಾಮದ ಸಮೀಪದಲ್ಲಿ ಒಟ್ಟಿಗೆ ಸೇರಿದರು.

೧೨೯–೧೩೦. ಅವರು ಆಹ್ನಿಕಗಳನ್ನು ಪೂರೈಸಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಕುಲಮಾತೆಯನ್ನೂ ವಿಘ್ನನಿವಾರಣೆಗಾಗಿ ದಕ್ಷಿಣದ ಬಾಗಿಲಿನಲ್ಲಿರುವ ಗಣನಾಥನನ್ನೂ ಸಿಂದೂರ, ಹೂಮಾಲೆಗಳಿಂದ ಪೂಜಿಸಿದರು.

೧೩೧–೧೩೨. ಬಕುಲಸ್ವಾಮಿಯನ್ನೂ, ಶ್ರೀಮಾತೆಯನ್ನೂ ಅರ್ಚಿಸಿದ ತರುವಾಯ ಗೋತ್ರಮಾತೆಯಾದ ಶಾಂತೆಯನ್ನೂ, ಜ್ಞಾನಜೆಯನ್ನೂ ನಮಸ್ಕರಿಸಿ ಪ್ರಯಾಣೋದ್ಯುಕ್ತರಾಗಿ ಅತ್ಯಂತ ಸಂತೋಷವನ್ನು ಹೊಂದಿದರು.

೧೩೩. ಇತರ ಬ್ರಾಹ್ಮಣರು ಅವರನ್ನು ಒಟ್ಟಿಗೆ ಸೇರಲು ಕಾರಣವನ್ನು ಕೇಳಿದರು.

CC-0. Jangamwadi Math Collection. Digitized by eGangotri

ವಿಪ್ರಾ ಊಚುಃ:—
ಸ ಗಂತವ್ಯಂ ಭವದ್ಭಿರ್ನೈರ್ಗತ್ವಾ ವಾಽಽಯಾಂತು ಸತ್ವರಾಃ ॥ ೧೩೪ ॥
ಯಥಾ ರಾಮಪ್ರದತ್ತಂ ಹಿ ಉಪಕಲ್ಪಯಸೇಽಚಿರಾತ್ ।
ಶ್ರುತ್ವಾ ಪುನರಥೋಚುಸ್ತೇ ಚಾತುರ್ವಿದ್ಯಾ ದ್ವಿಜೋತ್ತಮಾಃ ॥ ೧೩೫ ॥
ನ ಸ್ಥಾನೇನ ದ್ವಿಜೈರ್ವಾಽಪಿ ನ ಚ ವೃತ್ತ್ಯಾಂ ಕಥಂಚನ ।
ವಯಂ ನೈವಾಗಮಿಷ್ಯಾಮಃ ಕಥನೀಯಂ ನ ವೈ ಪುನಃ ॥ ೧೩೬ ॥
ರಘೂದ್ವಹೇನ ದತ್ತಾ ವೈ ವೃತ್ತಿರ್ನೋ ದ್ವಿಜಸತ್ತಮಾಃ ।
ತಾಂ ವೃತ್ತಿಂ ಪ್ರತಿಯಾಸ್ಯಾಮೋ ಜಪಹೋಮಾರ್ಚನಾದಿಭಿಃ ॥ ೧೩೭ ॥
ತೇ ಪಂಚದಶಸಾಹಸ್ರಾಃ ಪುನಸ್ತಾನೂಚುರಾದರಾತ್ ।
ಅಸ್ಮಾಭಿರತ್ರ ಸ್ಥಾತವ್ಯಮಗ್ನಿಸೇವಾರ್ಥತತ್ಪರೈಃ ॥ ೧೩೮ ॥
ಯುಷ್ಮಾಭಿಸ್ತತ್ರ ಗಂತವ್ಯಂ ಸರ್ವೇಷಾಂ ಕಾರ್ಯಸಿದ್ಧಯೇ ।
ಅನ್ಯೋನ್ಯಂ ಸರ್ವಸಾಹಾಯಾ ವೃತ್ತಿಂ ಯಾಮ ನ ಸಂಶಯಃ ॥ ೧೩೯ ॥
ತ್ಯಕ್ತ್ವಾಸ್ವಕೀಯವಚನಾ ವೃತ್ತಿಹೀನಾ ಭವಿಷ್ಯಥ ।
ತತಸ್ತನ್ಮಧ್ಯತಃ ಕಶ್ಚಿಚ್ಚಾತುರ್ವಿದ್ಯ ಉವಾಚ ಹ ॥ ೧೪೦ ॥
ಚಾತುರ್ವಿದ್ಯ ಉವಾಚ:—
ಪೂರ್ವಂ ಹಿ ವೃತ್ತಿಮಸ್ಮಾಕಂ ರಾಮೋ ವೈ ದತ್ತವಾನ್ದ್ವಿಜಾಃ ।
ಚಾತುರ್ವಿದ್ಯಾ ಮಹಾಸತ್ವಾಃ ಸ್ವಧರ್ಮಪ್ರತಿಪಾಲಕಾಃ ॥ ೧೪೧ ॥

---

೧೩೪–೧೩೫. ಬ್ರಾಹ್ಮಣರು ಹೇಳುತ್ತಾರೆ:—"ನೀವು ಇಲ್ಲಿಂದ ಹೋಗಬಾರದು. ಹೋದರೂ ರಾಮನು ಕೊಟ್ಟ ವೃತ್ತಿಯನ್ನು ಸಂಪಾದಿಸಿಕೊಂಡು ಜಾಗ್ರತೆಯಾಗಿ ಬನ್ನಿರಿ" ಆ ಬ್ರಾಹ್ಮಣರು ಅವರ ಮಾತನ್ನು ಕೇಳಿ ಹೀಗೆಂದರು.

೧೩೬. "ನಮಗೆ ಈ ಸ್ಥಳವೂ, ಈ ಬ್ರಾಹ್ಮಣರೂ, ಈ ವೃತ್ತಿಯೂ ಬೇಡ. ನಾವು ಹಿಂತಿರುಗಿ ಬರುವುದೂ ಇಲ್ಲ. ನೀವೂ ಹಾಗೆ ಹೇಳಬೇಡಿರಿ.

೧೩೭. ದ್ವಿಜೋತ್ತಮರೆ! ರಾಮನು ವೃತ್ತಿಯನ್ನಿತ್ತಿರುವನು. ಜಪಹೋಮಾದಿಗಳನ್ನು ಮಾಡುತ್ತ ನಾವು ಆ ವೃತ್ತಿಯನ್ನು ಪಡೆಯುವೆವು."

೧೩೮–೧೪೦. ಆ ಹದಿನೈದುಸಾವಿರ ಬ್ರಾಹ್ಮಣರು ಮತ್ತೆ ಅವರನ್ನು ಕುರಿತು, "ನಾವು ಇಲ್ಲಿ ಜಪಹೋಮಾದಿಗಳನ್ನು ಮಾಡುತ್ತ ಇರುವೆವು. ನೀವು ರಾಮನೆಡೆಗೆ ಎಲ್ಲರ ಕಾರ್ಯಸಿದ್ಧಿಗಾಗಿ ತೆರಳಿರಿ. ಹೀಗೆ ಪರಸ್ಪರ ಸಹಾಯಕರಾಗಿ ವೃತ್ತಿಯನ್ನು ನಿಜವಾಗಿ ಪಡೆಯುವೆವು. ಈ ಮಾತನ್ನು ನೀವು ಮೀರಿದರೆ ವೃತ್ತಿಹೀನರಾಗುತ್ತೀರಿ" ಎಂದರು. ಆಗ ಆ ಬ್ರಾಹ್ಮಣರ ಮಧ್ಯದಲ್ಲಿರುವ ಚಾತುರ್ವಿದ್ಯನೊಬ್ಬನು ಹೀಗೆಂದನು.

೧೪೧–೧೪೩. "ಮಹಾಸತ್ವರೂ, ಸ್ವಧರ್ಮವನ್ನು ಕಾಪಾಡುವವರೂ,

CC-0. Jangamwadi Math Collection. Digitized by eGangotri

ಯಾಜನಾಽಧ್ಯಯನಾಯುಕ್ತಾಃ ಕಾಜೇಶೇನ ವಿನಿರ್ಮಿತಾಃ ।
ದಾನಂ ದತ್ತ್ವಾ ತು ರಾಮೇಣ ಉಕ್ತಂ ಹಿ ಭವತಾಂ ಪುನಃ ॥ ೧೪೨ ॥
ಸ್ಥಾನಂ ತ್ಯಕ್ತ್ವಾ ನ ಗಂತವ್ಯಮಿತ್ಥಂ ಹಿ ನಿಯಮಃ ಕೃತಃ ।
ಆಪತ್ಕಾಲೇ ತು ಸ್ಮರ್ತವ್ಯೋ ವಾಯುಪುತ್ರೋ ಮಹಾಬಲಃ ॥ ೧೪೩ ॥
ಇತಿ ರಾಮೇಣ ಪೂರ್ವಂ ಹಿ ಸ್ವೇ ಸ್ಥಾನೇ ಸ್ಥಾಪಿತಾಸ್ತದಾ ।
ರಾಮವಾಕ್ಯಮನ್ಯಥಾ ತತ್ಕೃತ್ವಾ ಗಚ್ಛೇತ್ಕಥಂ ಪುನಃ ॥ ೧೪೪ ॥
ತಸ್ಮಾದ್ಯುಷ್ಮಾನ್ವಯಂ ಬ್ರೂಮೋ ಗಚ್ಛತಃ ಕಾರ್ಯಸಿದ್ಧಯೇ ।
ಭವತಾಂ ಕಾರ್ಯಸಿದ್ಧ್ಯರ್ಥಂ ವಯಂ ಹೋಮಾರ್ಚನಾದಿಭಿಃ ॥ ೧೪೫ ॥
ಝಟಿತಿ ಕಾರ್ಯಸಿದ್ಧಿಃ ಸ್ಯಾತ್ಸತ್ಯಂ ಸತ್ಯಂ ನ ಸಂಶಯಃ ।
ಇತಿ ವಾಕ್ಯಂ ತತಃ ಶ್ರುತ್ವಾ ತೇ ದ್ವಿಜಾಗಮನಂ ಪ್ರತಿ ॥ ೧೪೬ ॥
ಪ್ರಸ್ಥಾನಂ ಚ ವಿಧಾಯಾದೌ ಗಮನಾಯ ಮನೋ ದಧುಃ ।
ತ್ರಿಸಾಹಸ್ರಾಸ್ತದಾ ತಸ್ಮಾತ್ಪ್ರಸ್ಥಿತಾ ದ್ವಿಜಸತ್ತಮಾಃ ॥ ೧೪೭ ॥
ದೇಶಾದ್ದೇಶಾಂತರಂ ಗತ್ವಾ ವನಾಚ್ಚೈವ ವನಾಂತರಂ ।
ತೀರ್ಥೇ ತೀರ್ಥೇ ಕೃತಶ್ರಾದ್ಧಾಃ ಸುಸಂತರ್ಪಿತಪೂರ್ವಜಾಃ ॥ ೧೪೮ ॥
ಧ್ಯಾಯಂತೋ ರಾಮರಾಮೇತಿ ಹನುಮಂತೇತಿ ವೈ ಪುನಃ ।
ಏಕಾಽಶನಾಃ ಸದಾಚಾರಾ ದ್ವಿಜಾ ಜಗ್ಮುಃ ಶನೈಃ ಶನೈಃ ॥ ೧೪೯ ॥

---

ಯಾಜನ ಮತ್ತು ಅಧ್ಯಯನದಲ್ಲಿ ನಿರತರೂ, ಬ್ರಹ್ಮಾದಿಗಳಿಂದ ನಿರ್ಮಿತರೂ ಆಗಿರುವ ಚಾತುರ್ವಿದ್ಯರೆ! ಹಿಂದೆ ರಾಮನು ವೃತ್ತಿಯನ್ನು ಕೊಟ್ಟು ಹೀಗೆಂದಿರುವನು.

೧೪೩. "ಈ ಸ್ಥಾನವನ್ನು ಬಿಟ್ಟುಹೋಗಬಾರದು. ಆಪತ್ಕಾಲವು ಒದಗಿದಾಗ ಮಹಾಬಲಿಷ್ಠನಾದ ಹನುಮಂತನನ್ನು ಸ್ಮರಿಸಿರಿ."

೧೪೪. ರಾಮನು ಹೀಗೆ ಹೇಳಿ ಆಯಾಸ್ಥಾನದಲ್ಲಿ ಸ್ಥಾಪಿಸಲ್ಪಟ್ಟ ನೀವು ಅವನ ಮಾತನ್ನು ಮೀರಿ ಇಲ್ಲಿಂದ ಹೇಗೆ ಹೋಗುತ್ತೀರಿ?

೧೪೫–೧೪೭. ಆದ್ದರಿಂದ ನಿಮ್ಮ ಕಾರ್ಯಸಿದ್ಧಿಗಾಗಿ ನಾವಿಲ್ಲಿದ್ದು ಹೋಮ, ಪೂಜೆ ಮೊದಲಾದುವುಗಳನ್ನು ನೆರವೇರಿಸುವೆವು. ಅದರಿಂದ ಕಾರ್ಯವು ಕೂಡಲೆ ಕೈಗೂಡುವುದು. ಇದು ನಿಶ್ಚಯ" ಎಂದನು. ಈ ಮಾತನ್ನು ಆ ಮೂರುಸಾವಿರ ಬ್ರಾಹ್ಮಣರು ಕೇಳಿ ಪ್ರಸ್ಥಾನ ವಿಧಿಯನ್ನು ನೆರವೇರಿಸಿ ಅಲ್ಲಿಂದಹೊರಟರು.

೧೪೮–೧೪೯. ಆ ಬ್ರಾಹ್ಮಣರು ಒಂದೇ ಭೋಜನವುಳ್ಳವರಾಗಿಯೂ, ಸದಾಚಾರಸಂಪನ್ನರಾಗಿಯೂ ದೇಶದಿಂದ ದೇಶಕ್ಕೂ, ಕಾಡಿನಿಂದ ಕಾಡಿಗೂ ಪ್ರಯಾಣಮಾಡಿ ಪ್ರತಿಯೊಂದು ತೀರ್ಥದಲ್ಲಿಯೂ ಶ್ರಾದ್ಧದಿಂದ ಪಿತೃಗಳನ್ನು ಸಂತೋಷಗೊಳಿಸುತ್ತಲೂ, ರಾಮಾಂಜನೇಯರನ್ನು ನೆನೆಯುತ್ತಲೂ ಮುಂದಕ್ಕೆ ಮೆಲ್ಲಗೆ ಸಾಗಿದರು.

CC-0. Jangamwadi Math Collection. Digitized by eGangotri

ತ್ಯಕ್ತಪ್ರತಿಗ್ರಹಾಃ ಶಾಂತಾಃ ಸತ್ಯವ್ರತಪರಾಯಣಾಃ ।
ತೇ ಗತಾ ದೂರಮಧ್ವಾನಂ ಹನುಮದ್ದರ್ಶನಾರ್ಥಿನಃ ॥ ೧೫೦ ॥
ಸಂಧ್ಯಾಮುಪಾಸತೇ ನಿತ್ಯಂ ತ್ರಿಕಾಲಂ ಚೈಕಮಾನಸಾಃ ।
ಏವಂ ತು ಗಚ್ಛತಾಂ ತೇಷಾಂ ಶಕುನಾ ಅಭವನ್ಶುಭಾಃ ॥ ೧೫೧ ॥
ಏವಂ ತು ಗಚ್ಛತಾಂ ತೇಷಾಂ ಪಾಥೇಯಂ ತ್ರುಟಿತಂ ತದಾ ।
ಶ್ರಾಂತಾ ಗ್ಲಾನಿಂ ಗತಾಃ ಸರ್ವೇ ಪದಂ ಪರಮಮಾಸ್ಥಿತಾಃ ॥ ೧೫೨ ॥
ಕ್ರಮಿತ್ವಾ ಕಿಯತೀಂ ಭೂಮಿಂ ಪದಂ ಗಂತುಂ ನ ತು ಕ್ಷಮಾಃ ।
ಮನಸಾ ನಿಶ್ಚಯಂ ಕೃತ್ವಾ ದೃಢೀಕೃತ್ಯ ಸ್ವಮಾನಸಂ ॥ ೧೫೩ ॥
ಹನೂಮಂತಮದೃಷ್ಟ್ವೈವ ನ ಯಾಸ್ಯಾಮೋ ವಯಂ ಗೃಹಾನ್ ।
ತ್ರೈವಿದ್ಯಾಸ್ತು ಗತಾಸ್ತತ್ರ ಯತ್ರ ರಾಮೇಶ್ವರೋ ಹರಿಃ ॥ ೧೫೪ ॥
ದೃಢವ್ರತಾಃ ಸತ್ಯಪರಾಃ ಕಂದಮೂಲಫಲಾಽಶನಾಃ ।
ಧ್ಯಾಯಂತೋ ರಾಮರಾಮೇತಿ ಹನೂಮಂತೇತಿ ವೈ ಪುನಃ ॥ ೧೫೫ ॥
ಗೃಹೀತ್ವಾ ನಿಯಮಂ ತೇಽಪಿ ತ್ಯಕ್ತ್ವಾ ಚಾಽನ್ನಂ ತಥೋದಕಂ ।
ತೃಷಾರ್ತಾಶ್ಚ ಕ್ಷುಧಾರ್ತಾಶ್ಚ ಯಯುರ್ವ್ರತಪರಾಯಣಾಃ ॥ ೧೫೬ ॥
ಏವಂ ತು ಕ್ಲಿಶ್ಯಮಾನಾನಾಂ ದ್ವಿಜಾನಾಂ ಭಕ್ತಿಭಾಜನಃ ।
ಉದ್ವಿಗ್ನಮಾನಸೋ ರಾಮೋ ಹನೂಮಂತಮಥಾಽಬ್ರವೀತ್ ॥ ೧೫೭ ॥

---

೧೫೦. ಅವರು ಪ್ರತಿಗ್ರಹವನ್ನು ತ್ಯಜಿಸಿ ಶಾಂತರೂ, ಸತ್ಯವ್ರತನಿರತರೂ ಆಗಿ ಹನುಮಂತನನ್ನು ನೋಡಲೋಸುಗ ಬಹುದೂರ ನಡೆದರು.

೧೫೧. ಚಿತ್ತೈಕಾಗ್ರ್ಯದಿಂದ ನಿತ್ಯವೂ ತ್ರಿಕಾಲಸಂಧ್ಯೆಯನ್ನುಪಾಸಿಸುತ್ತ ಮುಂದೆ ಸಾಗುತ್ತಿರುವ ಅವರಿಗೆ ಶುಭಶಕುನಗಳಾದುವು.

೧೫೨–೧೫೬. ಮುಂದೆ ಅವರು ಹೋಗುತ್ತಿರಲು ಅವರ ಬುತ್ತಿಯು ಮುಗಿಯಿತು. ಅವರು ಅತ್ಯಂತವಾಗಿ ಬಳಲಿದರು. ಎಷ್ಟುದಾರಿ ನಡೆದರೂ ಉದ್ದಿಷ್ಟ ಸ್ಥಾನವನ್ನು ಸೇರಲು ಅವರು ಸಮರ್ಥರಾಗಲಿಲ್ಲ. ಆದರೂ ಆ ತ್ರೈವಿದ್ಯರು ಹನುಮಂತನ ದರ್ಶನವನ್ನುಮಾಡದೆ ತಮ್ಮ ಸ್ಥಳಕ್ಕೆ ಹಿಂದಿರುಗುವುದಿಲ್ಲವೆಂದು ಮನಸ್ಸನ್ನು ದೃಢಮಾಡಿಕೊಂಡು ಅನ್ನೋದಕಗಳನ್ನು ಬಿಟ್ಟು ಗೆಡ್ಡೆ, ಗೆಣಸು, ಹಣ್ಣು ಇವುಗಳನ್ನು ಮೆಲ್ಲುತ್ತ, ರಾಮಾಂಜನೇಯರನ್ನು ಧ್ಯಾನಿಸುತ್ತ ವ್ರತನಿಷ್ಠರಾಗಿ, ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ರಾಮೇಶ್ವರಕ್ಕೆ ಹೋದರು.

೧೫೭. ಹೀಗೆ ವ್ಯಥೆಪಡುತ್ತಿರುವ ಬ್ರಾಹ್ಮಣರ ಭಕ್ತಿಗೆ ಮೆಚ್ಚಿದ ಶ್ರೀರಾಮನು ವ್ಯಾಕುಲಗೊಂಡು ಹನುಮಂತನನ್ನು ಕುರಿತು ಹೀಗೆಂದನು.

CC-0. Jangamwadi Math Collection. Digitized by eGangotri

ಶೀಘ್ರಂ ಗಚ್ಛ ದ್ವಿಜಾರ್ಥೇ ತ್ವಂ ಪವನಾತ್ಮಜ ಧರ್ಮವಿತ್ ।
ಕ್ಲಿಶ್ಯಂತೇ ವಾಡವಾಃ ಸರ್ವೇ ಧರ್ಮಾರಣ್ಯನಿವಾಸಿನಃ ॥ ೧೫೮ ॥
ದಹ್ಯತೇ ಮಾನಸಂ ಮೇಽದ್ಯ ನಾಽನ್ಯಥಾ ಶಾಂತಿರಸ್ತಿ ಮೇ ।
ವಿಪ್ರಾಣಾಂ ದುಃಖಕರ್ತಾ ಚ ಶಾಸ್ತವ್ಯೋ ನಾಽತ್ರ ಸಂಶಯಃ ॥ ೧೫೯ ॥
ಯೇನ ವೈ ದುಃಖಿತಾ ವಿಪ್ರಾಸ್ತೇನಾಽಹಂ ದುಃಖಿತಃ ಕಪೇ ।
ಯಾಹಿ ಶೀಘ್ರಂ ಹಿ ಮಾಂ ತ್ಯಕ್ತ್ವಾ ವಿಪ್ರಾಣಾಂ ಪರಿಪಾಲನೇ ॥ ೧೬೦ ॥
ರಾಮಸ್ಯ ವಚನಂ ಶ್ರುತ್ವಾ ನಮಸ್ಕೃತ್ಯ ಚ ರಾಘವಂ ।
ಕೃಪಯಾ ಪರಯಾವಿಷ್ಟಃ ಪ್ರಾದುರಾಸೀದ್ಧರೀಶ್ವರಃ ॥ ೧೬೧ ॥
ವೃದ್ಧಬ್ರಾಹ್ಮಣರೂಪೇಣ ಪರೀಕ್ಷಾರ್ಥಂ ದ್ವಿಜನ್ಮನಾಂ ।
ಉವಾಚ ಪರಯಾ ಭಕ್ತ್ಯಾ ಬ್ರಾಹ್ಮಣಾಂಛ್ರಮದುರ್ಬಲಾನ್ ॥ ೧೬೨ ॥
ಕೃತಾಂಜಲಿಪುಟೋ ಭೂತ್ವಾ ಕರಾನ್ಮುಕ್ತ್ವಾ ಕಮಂಡಲುಂ ।
ಸರ್ವಾನ್ಪ್ರತ್ಯಭಿವಾದ್ಯಾಥ ವಚನಂ ಚೇದಮಬ್ರವೀತ್ ॥ ೧೬೩ ॥
ಕುತಃ ಸ್ಥಾನಾದಿಹ ಪ್ರಾಪ್ತಾ ಗಂತುಕಾಮಾಶ್ಚ ವೈ ಕುತಃ ।
ಕಿಮರ್ಥಂ ವೈ ಭವದ್ಭಿಶ್ಚ ಗಮ್ಯತೇ ದಾರುಣಂ ವನಂ ॥ ೧೬೪ ॥

---

೧೫೮–೧೫೯. "ವಾಯುತನಯ! ಧರ್ಮಾರಣ್ಯನಿವಾಸಿಗಳಾದ ದ್ವಿಜರು ಕಷ್ಟಪಡುತ್ತಿದ್ದಾರೆ. ಅವರಿಗಾಗಿ ಕೂಡಲೆ ಹೊರಡು. ನನ್ನ ಮನಸ್ಸು ದಹಿಸುತ್ತಿದೆ. ಬ್ರಾಹ್ಮಣರನ್ನು ಪೀಡಿಸುತ್ತಿರುವ ಆ ನೀಚನನ್ನು ದಂಡಿಸದಿದ್ದರೆ ನನ್ನ ಮನಸ್ಸು ಶಾಂತವಾಗುವುದಿಲ್ಲ.

೧೬೦. ಬ್ರಾಹ್ಮಣರನ್ನು ಪೀಡಿಸುತ್ತಿರುವವನಿಂದಲೆ ನಾನು ದುಃಖಗೊಂಡಿದ್ದೇನೆ. ಆದ್ದರಿಂದ ನನ್ನನ್ನಗಲಿ ಬ್ರಾಹ್ಮಣರ ರಕ್ಷಣೆಗಾಗಿ ಬೇಗನೆ ಹೊರಡು."

೧೬೧–೧೬೩. ಹನುಮಂತನು ರಾಮನ ಮಾತನ್ನು ಕೇಳಿ ಅವನನ್ನು ವಂದಿಸಿ ಅತ್ಯಂತದಯೆಗೊಂಡು ಬ್ರಾಹ್ಮಣರನ್ನು ಪರೀಕ್ಷಿಸುವುದಕ್ಕಾಗಿ ವೃದ್ಧ ಬ್ರಾಹ್ಮಣರೂಪವನ್ನು ಧರಿಸಿ ಕೈಯಲ್ಲಿರುವ ಕಮಂಡಲುವನ್ನು ಕೆಳಗಿಟ್ಟು ಎಲ್ಲ ಬ್ರಾಹ್ಮಣರನ್ನೂ ವಂದಿಸಿ ಕೈಮುಗಿದುಕೊಂಡು ಅತಿ ಭಕ್ತಿಯುಕ್ತನಾಗಿ ಬಹಳವಾದ ಬಳಲಿಕೆಯಿಂದ ಅಶಕ್ತರಾಗಿಹೋಗಿದ್ದ ಅವರನ್ನು ಕುರಿತು ಹೀಗೆಂದನು.

೧೬೪. "ಎಲೈ ವಿಪ್ರರೆ! ನೀವು ಎಲ್ಲಿಂದ ಬಂದಿರಿ? ಎಲ್ಲಿಗೆ ಹೋಗುತ್ತೀರಿ? ಈ ಗೊಂಡಾರಣ್ಯವನ್ನು ಏಕೆ ಪ್ರವೇಶಿಸುತ್ತಿದ್ದೀರಿ?

CC-0. Jangamwadi Math Collection. Digitized by eGangotri

ವಿಪ್ರಾ ಊಚುಃ :—

ಧರ್ಮಾರಣ್ಯಾತ್ಸಮಾಯಾತಾ ನಿಜದುಃಖಂ ನಿವೇದಿತುಂ ।
ರಾಮಸ್ಯ ದರ್ಶನಾರ್ಥಂ ಹಿ ಗಂತುಕಾಮಾ ವಯಂ ದ್ವಿಜಾಃ ॥ ೧೬೫ ॥
ಸೇತುಬಂಧಂ ಮಹಾತೀರ್ಥಂ ಸರ್ವಕಾಮಪ್ರದಾಯಕಂ ।
ನಿಯಮಸ್ಥಾ ಕ್ಷೀಣದೇಹಾ ರಾಮಂ ದ್ರಷ್ಟುಂ ಸಮುತ್ಸುಕಾಃ ॥ ೧೬೬ ॥
ಯತ್ರ ರಾಮೇಶ್ವರೋ ದೇವಃ ಸಾಕ್ಷಾದ್ವಾಯುಸುತಃ ಕಪಿಃ ।
ತಚ್ಛ್ರುತ್ವಾ ಸ ದ್ವಿಜಃ ಪ್ರಾಹ ಕ್ವ ರಾಮಃ ಕ್ವ ಚ ವಾಯುಜಃ ॥ ೧೬೭ ॥
ಕ್ವ ಸೇತುಬಂಧರಾಮೇಶೋ ದೂರಾದ್ದೂರತರೋ ದ್ವಿಜಾಃ ।
ವ್ಯಾಘ್ರಸಿಂಹಾಕುಲಂ ಚೋಗ್ರಂ ವನಂ ಘೋರತರಂ ಮಹತ್ ॥ ೧೬೮ ॥
ಗತ್ವಾ ಯಸ್ಮಾನ್ನ ವರ್ತಂತೇ ತದುಗ್ರಮನುಜೀವಿನಃ ।
ನಿವರ್ತಧ್ವಂ ಮಹಾಭಾಗಾ ಯದಿ ಕಾರ್ಯಂ ಹಿ ಮದ್ದ್ವಿಜಃ ॥ ೧೬೯ ॥
ಅಥವಾ ಗಮ್ಯತಾಂ ವಿಪ್ರಾಶ್ಚಿರಂ ಜೀವ ಸುಖೀಭವ ।
ವೃದ್ಧಸ್ಯ ವಾಕ್ಯಂ ತಚ್ಛ್ರುತ್ವಾ ವಾಡವಾಶ್ಚೈಕಮಾನಸಾಃ ॥ ೧೭೦ ॥
ವಿಪ್ರ ಗಚ್ಛಾಮಹೇ ಸರ್ವೇ ರಾಮಪಾರ್ಶ್ವಮಸಂಶಯಃ ।
ಮ್ರಿಯೇತ ಯದಿ ಮಾರ್ಗೇಽಸ್ಮಿನ್ರಾಮಲೋಕಮವಾಪ್ನುಯಾತ್ ॥
ಜೀವನ್ವೃತ್ತಿಮವಾಪ್ನೋತಿ ರಾಮಾದೇವ ನ ಸಂಶಯಃ ।
ಅನ್ಯಥಾ ಶರಣಂ ನಾಸ್ತಿ ಅಸ್ಮಾಕಂ ರಾಘವಂ ವಿನಾ ॥ ೧೭೧ ॥

---

೧೬೫–೧೬೭. ಬ್ರಾಹ್ಮಣರು ಹೇಳುತ್ತಾರೆ:—"ವ್ರತಾನುಷ್ಠಾನದಿಂದ ಕೃಶದೇಹರಾದ ನಾವು ಧರ್ಮಾರಣ್ಯದಿಂದ ಬಂದಿದ್ದೇವೆ. ಶ್ರೀರಾಮನೂ, ಹನುಮಂತನೂ ಇರುವ ರಾಮೇಶ್ವರಕ್ಕೆ ಹೋಗಿ ಸಕಲೇಷ್ಟಾರ್ಥಗಳನ್ನೀಯುವ ಆ ಸೇತುಬಂಧಮಹಾತೀರ್ಥದಲ್ಲಿ ಶ್ರೀರಾಮನನ್ನು ಸಂದರ್ಶಿಸಿ ನಮ್ಮ ದುಃಖವನ್ನು ನಿವೇದಿಸಲುತ್ಸುಕರಾಗಿದ್ದೇವೆ." ಅದನ್ನು ಕೇಳಿ ಆ ವೃದ್ಧಬ್ರಾಹ್ಮಣನು ಇಂತೆಂದನು. "ಬ್ರಾಹ್ಮಣರೆ! ರಾಮನೆಲ್ಲಿ? ಹನುಮಂತನೆಲ್ಲಿ?

೧೬೮–೧೭೧. ಅತ್ಯಂತ ದೂರದಲ್ಲಿರುವ ರಾಮೇಶ್ವರವೆಲ್ಲಿ? ಈ ಅರಣ್ಯವು ವ್ಯಾಘ್ರ ಸಿಂಹಗಳಿಂದ ಭಯಂಕರವಾಗಿದೆ. ಇದರಲ್ಲಿ ಪ್ರಯಾಣಮಾಡುವವರು ಹಿಂದಿರುಗುವುದಿಲ್ಲ. ನನ್ನ ಮಾತು ನಿಮಗೆ ಪಥ್ಯವಾದರೆ ಹಿಂದಿರುಗಿರಿ. ಅಥವಾ ಮುಂದಕ್ಕೆಸಾಗಿ ಚಿರಂಜೀವಿಗಳಾಗಿ ಸುಖದಿಂದ ಬಾಳಿರಿ." ಮುದಿಬ್ರಾಹ್ಮಣನ ಆ ಮಾತನ್ನು ಕೇಳಿ ಒಮ್ಮನಸ್ಸುಳ್ಳ ಬ್ರಾಹ್ಮಣರು, "ಎಲೈ ಬ್ರಾಹ್ಮಣನೆ! ನಾವು ನಿಶ್ಚಯವಾಗಿಯೂ ರಾಮನ ಬಳಿಯನ್ನು ಸೇರುವೆವು. ಒಂದುವೇಳೆ ಈ ದಾರಿಯಲ್ಲಿ ಮಡಿದರೂ ರಾಮನ ಲೋಕವು ಲಭಿಸುವುದು. ಬದುಕಿದ್ದರೆ ರಾಮನಿಂದಲೇ ವೃತ್ತಿಯನ್ನು ಪಡೆಯುವೆವು. ರಾಮನನ್ನು ಬಿಟ್ಟರೆ ನಮಗೆ ಬೇರೆ ರಕ್ಷಕರಿಲ್ಲ."

CC-0. Jangamwadi Math Collection. Digitized by eGangotri

ಇತ್ಯುಕ್ತ್ವಾ ನಿರ್ಗತಾಃ ಸರ್ವೇ ರಾಮದರ್ಶನತತ್ಪರಾಃ ।
ದಿನಾಂತಮತಿವಾಹ್ಯಾಥ ಪ್ರಭಾತೇ ವಿಮಲೇ ಪುನಃ ॥ ೧೭೩ ॥
ಹನುಮಾನ್ಬ್ರಹ್ಮರೂಪೀ ಸ ವೃದ್ಧಃ ಪೂರ್ವಗುಣಾನ್ವಿತಃ ।
ಕಮಂಡಲುಧರೋ ಧೀಮಾನಭಿವಾದನತತ್ಪರಃ ॥ ೧೭೪ ॥
ಕುತ್ರಸ್ಥಾನಾದಿಹ ಪ್ರಾಪ್ತಾಃ ಸರ್ವೇ ಯೂಯಂ ಹಿ ವಾಡವಾಃ ।
ಕುತ್ರಾಸ್ತಿ ವಾ ಮಹಾಲಾಭೋ ವಿವಾಹೋತ್ಸವ ಏವ ವಾ ॥ ೧೭೫ ॥
ಇತಿ ತಸ್ಯ ವಚಃ ಶ್ರುತ್ವಾ ವಾಡವಾ ವಿಸ್ಮಯಂ ಗತಾಃ ।
ಪ್ರಣಾಮಪೂರ್ವಾಂ ವಿಜ್ಞಪ್ತಿಂ ಕಥಯಾಮಾಸುರಾದೃತಾಃ ॥ ೧೭೬ ॥
ಅಸ್ಮಾಕಂ ತು ಪುರಾವೃತ್ತಂ ಮಹದಾಶ್ಚರ್ಯಕಾರಕಂ ।
ಭೂಮಿದೇವ ಶೃಣುಷ್ವ ತ್ವಂ ದಯಾಲುರ್ದೃಶ್ಯಸೇ ಯತಃ ॥ ೧೭೭ ॥
ಆದೌ ಸೃಷ್ಟಿಸಮಾರಂಭೇ ಸ್ಥಾಪಿತಾ ಕೇಶವೇನ ಚ ।
ಶಿವೇನ ಬ್ರಹ್ಮಣಾ ಚೈವ ತ್ರಿಮೂರ್ತಿಸ್ಥಾಪಿತಾ ವಯಂ ॥ ೧೭೮ ॥
ಶ್ರೀರಾಮೇಣ ತತಃ ಪಶ್ಚಾಜ್ಜೀರ್ಣೋದ್ಧಾರೇಣ ಸ್ಥಾಪಿತಾಃ ।
ಗ್ರಾಮಾಣಾಂ ವೇತನಂ ದತ್ತಂ ಹರಿರಾಜೇನ ಚಾದರಾತ್ ॥ ೧೭೯ ॥
ಚತುಶ್ಚತ್ವಾರಿಂಶದಧಿಕಚತುಃಶತಮಿತಾತ್ಮನಾಂ ।
ಗ್ರಾಮಾಸ್ತ್ರಯೋದಶಾರ್ಚಾರ್ಥಂ ಸೀತಾಪುರಸಮನ್ವಿತಾಃ ॥ ೧೮೦ ॥

---

೧೭೩–೧೭೫. ಹೀಗೆಂದು ಎಲ್ಲರೂ ರಾಮನನ್ನು ನೋಡಲು ಉತ್ಸುಕರಾಗಿ ಹೊರಟರು. ಸಾಯಂಕಾಲ ಕಳೆದು ಬೆಳಗಾಗಲು ಮರಳಿ ಆಂಜನೇಯನು ಹಿಂದಿನಂತೆಯೇ ವೃದ್ಧಬ್ರಾಹ್ಮಣನಾಗಿ ಕಮಂಡಲುವನ್ನು ಹಿಡಿದುಕೊಂಡು ಬ್ರಾಹ್ಮಣರಿಗೆ ವಂದಿಸಿ, "ದ್ವಿಜರೆ! ನೀವೆಲ್ಲ ಎಲ್ಲಿಂದ ಇಲ್ಲಿಗೆ ಬಂದಿರಿ? ಎಲ್ಲಿ ಯಾದರೂ ದೊಡ್ಡ ಲಾಭವಾಗಲಿ, ಮದುವೆಯಾಗಲಿ ಆಗುವುದೊ?" ಎಂದು ಕೇಳಿದನು.

೧೭೬. ಬ್ರಾಹ್ಮಣರು ಅವನ ಮಾತನ್ನು ಕೇಳಿ ಆಶ್ಚರ್ಯಗೊಂಡು ನಮಸ್ಕಾರಮಾಡಿ ಪ್ರೀತಿಯಿಂದ ವಿಜ್ಞಾಪಿಸಿದರು.

೧೭೭. "ವಿಪ್ರ! ನೀನು ದಯಾಳುವಾಗಿ ಕಾಣುತ್ತೀಯೆ. ನಮ್ಮ ಹಿಂದಿನ ಆಶ್ಚರ್ಯಕರವಾದ ವೃತ್ತಾಂತವನ್ನು ಕೇಳು.

೧೭೮. ಮೊದಲು ಸೃಷ್ಟಿಯ ಆರಂಭದಲ್ಲಿ ತ್ರಿಮೂರ್ತಿಗಳು ನಮ್ಮನ್ನು ಧರ್ಮಾರಣ್ಯದಲ್ಲಿ ಸ್ಥಾಪಿಸಿದರು.

೧೭೯–೧೮೦. ಬಳಿಕ ಶ್ರೀರಾಮನು ಜೀರ್ಣೋದ್ಧಾರಮಾಡಿ ಹನುಮಂತನನ್ನು ಸ್ಥಾಪಿಸಿ ನಾನೂರನಲವತ್ತನಾಲ್ಕುಜನ ಬ್ರಾಹ್ಮಣರಿಗೆ ಪೂಜೆಗಾಗಿ ಸೀತಾಪುರದೊಡನೆ ಹದಿಮೂರು ಗ್ರಾಮಗಳನ್ನು ದಾನಗೈದಿರುವನು.

CC-0. Jangamwadi Math Collection. Digitized by eGangotri

ಷಟ್ತ್ರಿಂಶಚ್ಚ ಸಹಸ್ರಾಣಿ ವಣಿಜೋ ದ್ವಿಜಪಾಲನೇ ।
ಗೋಭೂಜಸಂಜ್ಞಾಸ್ತೇ ಶೂದ್ರಾಸ್ತೇಭ್ಯಃ ಸಪಾದಲಕ್ಷಕಾಃ ॥ ೧೮೧ ॥
ತೇ ಚ ಜಾತಾಸ್ತ್ರಿಧಾ ತಾತ ಗೋಭೂಜಾಡಾಲಜಾಸ್ತಥಾ ।
ಮಾಂಡಲೀಯಾಸ್ತಥಾ ಚೈತೇ ತ್ರಿವಿಧಾಶ್ಚ ಮನೋರಮಾಃ ॥ ೧೮೨ ॥
ವೃತ್ತ್ಯರ್ಥಂ ತೇನ ದತ್ತಾ ವೈ ಹ್ಯನರ್ಘ್ಯಾ ರತ್ನಕೋಟಯಃ ।
ತದಾ ತೇ ಮೋಢ (೧೮,೦೦೦) ಗೋಭೂಜಾ (೧೮,೦೦೦) ।
ಮಾಂಡಲೀಯಾ (೧,೨೫,೦೦೦) ಅಡಾಲಜಾಃ (೧೮,೦೦೦) ॥ ೧೮೩ ॥
ಅಧುನಾ ವಾಡವಶ್ರೇಷ್ಠ ಆಮೋ ನಾಮ ಮಹೀಪತಿಃ ।
ಶಾಸನಂ ರಾಮಚಂದ್ರಸ್ಯ ನ ಮಾನಯತಿ ದುರ್ಮತಿಃ ॥ ೧೮೪ ॥
ಜಾಮಾತಾ ತಸ್ಯ ದುಷ್ಟೋ ವೈ ನಾಮ್ನಾ ಕುಮಾರಪಾಲಕಃ ।
ಪಾಷಂಡೈರ್ವೇಷ್ಟಿತೋ ನಿತ್ಯಂ ಕಲಿಧರ್ಮೇಣ ಸಂಮತಃ ॥ ೧೮೫ ॥
ಇಂದ್ರಸೂತ್ರೇಣ ಜೈನೇನ ಪ್ರೇರಿತೋ ಬೌದ್ಧಧರ್ಮಿಣಾ ।
ಶಾಸನಂ ತೇನ ಲುಪ್ತಂ ಹಿ ರಾಮದತ್ತಂ ನ ಸಂಶಯಃ ॥ ೧೮೬ ॥
ವಾಣಿಜಸ್ತಾದೃಶಾಃ ಕೇಽಪಿ ತನ್ಮನಸ್ಕಾ ಬಭೂವಿರೇ ।
ನಿಷೇಧಯಂತಿ ರಾಮಂ ತೇ ಹನುಮಂತಂ ಮಹಾಮತಿಂ ॥ ೧೮೭ ॥
ಪ್ರತ್ಯಯಂ ತು ವಿನಾ ವಿಪ್ರಾ ನ ದಾಸ್ಯಾಮೀತಿ ನಿಶ್ಚಿತಂ ।
ತಂ ಜ್ಞಾತ್ವಾ ತು ಇಮೇ ವಿಪ್ರಾ ರಾಮಂ ಶರಣಮಾಯಯುಃ ॥ ೧೮೮ ॥

---

೧೮೧. ಈ ಬ್ರಾಹ್ಮಣರ ರಕ್ಷಣೆಗಾಗಿ ಗೋಭುಜರೆಂಬ ಮೂವತ್ತಾರುಸಾವಿರ ವೈಶ್ಯರನ್ನೂ, ಒಂದು ಲಕ್ಷದ ಇಪ್ಪತ್ತೈದುಸಾವಿರ ಶೂದ್ರರನ್ನೂ ಇಟ್ಟಿರುವನು.

೧೮೨-೧೮೩. ಅವರು ಗೋಭುಜ ಮಾಂಡಲೀಯ ಅಡಾಲಜರೆಂದು ಮೂರು ವಿಧರಾದರು. ಇವರ ಜೀವನಕ್ಕಾಗಿ ಅಮೂಲ್ಯವಾದ ಕೋಟ್ಯಂತರ ರತ್ನಗಳನ್ನು ಕೊಟ್ಟಿರುವನು.

೧೮೪. ಈಗ ದುರ್ಬುದ್ಧಿಯುಳ್ಳ ಆಮನೆಂಬ ರಾಜನು ರಾಮಚಂದ್ರನ ಶಾಸನವನ್ನು ನಡಸುವುದಿಲ್ಲ.

೧೮೫-೧೮೬. ಈ ಆಮನ ಅಳಿಯನಾದ ಕುಮಾರಪಾಲಕನೆಂಬ ದುರುಳನು ಪಾಷಂಡರಿಂದಲೂ ಕಲಿಧರ್ಮದಿಂದಲೂ ಆಕ್ರಮಿಸಲ್ಪಟ್ಟು ಜೈನಧರ್ಮಿಯಾದ ಇಂದ್ರಸೂತ್ರನಿಂದ ಪ್ರೇರಿತನಾಗಿ ರಾಮನ ಶಾಸನವನ್ನು ಹಾಳುಮಾಡಿದ್ದಾನೆ.

೧೮೭. ಕೆಲವು ವರ್ತಕರು ಆ ಕುಮಾರಪಾಲಕನಂತೆ ಮನಸ್ಸುಳ್ಳವರಾಗಿ ರಾಮ ಮತ್ತು ಹನುಮಂತನನ್ನು ನಿಷೇಧಿಸುತ್ತಾರೆ.

೧೮೮. ಆ ಆಮನು, "ಬ್ರಾಹ್ಮಣರೆ! ನಂಬಿಕೆಯಿಲ್ಲದೆ ನಿಮಗೆ ವೃತ್ತಿ

CC-0. Jangamwadi Math Collection. Digitized by eGangotri

ಹನೂಮಂತಂ ಮಹಾವೀರಂ ರಾಮಶಾಸನಪಾಲಕಂ ।
ತಸ್ಮಾದ್ಗಚ್ಛಾಮಹೇ ಸರ್ವೇ ರಾಮಂ ಪ್ರತಿ ಮಹಾಮತೇ ॥ ೧೮೯ ॥
ಆಂಜನೇಯೋ ಯದಾಽಸ್ಮಾಕಂ ನ ದಾಸ್ಯತಿ ಸಮೀಹಿತಂ ।
ಅನಾಹಾರವ್ರತೇನೈವ ಪ್ರಾಣಾಂಸ್ತ್ಯಕ್ಷ್ಯಾಮಹೇ ವಯಂ ॥ ೧೯೦ ॥
ಅಸ್ಮಾಭಿಸ್ತೇ ವಿಶೇಷೇಣ ಕಥಿತಂ ಪರಿಪೃಚ್ಛತೇ ।
ಸ್ನೇಹಭಾವಂ ವಿಚಿಂತ್ಯಾಶು ನಿಜವೃತ್ತಿಂ ಪ್ರಕಾಶಯ ॥ ೧೯೧ ॥

ಹನುಮಾನುವಾಚ :—

ಪ್ರಾಪ್ತೇ ಕಲಿಯುಗೇ ವಿಪ್ರಾಃ ಕ್ವ ದೇವದರ್ಶನಂ ಭವೇತ್ ।
ನಿವರ್ತಧ್ವಂ ಹಿ ವಿಪ್ರೇಂದ್ರಾ ಯದೀಚ್ಛಥ ಸುಖಂ ಮಹತ್ ॥ ೧೯೨ ॥
ವ್ಯಾಘ್ರಸಿಂಹಾಕುಲೇ ಶೂನ್ಯೇ ವನೇ ವನಗಜಾಶ್ರಿತೇ ।
ಬಹುದಾವ ಸಮಾವಿಷ್ಟೇ ಪ್ರವೇಷ್ಟುಂ ನೈವ ಶಕ್ಯತೇ ॥ ೧೯೩ ॥

ವಿಪ್ರಾ ಊಚುಃ :—

ಅತೀತೇ ದಿವಸೇ ವಿಪ್ರ ಏಕಃ ಕಥಿತವಾನಿದಂ ।
ಅದ್ಯೈವ ತ್ವಂ ಸಮಾಗಮ್ಯ ಏವಮೇವ ಪ್ರಭಾಷಸೇ ॥ ೧೯೪ ॥
ಕಸ್ತ್ವಂ ವಾಡವರೂಪೇಣ ರಾಮೋ ವಾಽಪ್ಯಥ ವಾಯುಜಃ ।
ಸತ್ಯಂ ಕಥಯ ನಃ ಸ್ವಾಮಿನ್ ದಯಾಂ ಕೃತ್ವಾ ಮಹಾದ್ವಿಜ ॥ ೧೯೫ ॥

---

ಯನ್ನು ಕೊಡಲಾರೆನು" ಎಂದನು. ಇದರಿಂದ ಬ್ರಾಹ್ಮಣರು ರಾಮನನ್ನು ಮರೆ ಹೊಕ್ಕಿರುವರು.

೧೮೯. ಪ್ರಾಜ್ಞನೆ! ರಾಮನ ಶಾಸನವನ್ನು ಪಾಲಿಸುವ ವೀರಾಂಜನೇಯನನ್ನೂ ರಾಮನನ್ನೂ ನೋಡಲು ಈಗ ಹೋಗುತ್ತಿದ್ದೇವೆ.

೧೯೦. ಆಂಜನೇಯನು ನಮ್ಮ ಅಭೀಷ್ಟವನ್ನು ನೆರವೇರಿಸದಿದ್ದರೆ ನಾವು ಉಪವಾಸದಿಂದ ಪ್ರಾಣವನ್ನು ಬಿಡುವೆವು.

೧೯೧. ನಾವು ಕೇಳುತ್ತಿರುವ ನಿನಗೆ ನಮ್ಮ ವಿಷಯವನ್ನು ವಿಶೇಷವಾಗಿ ಹೇಳಿದ್ದೇವೆ. ನಮ್ಮಲ್ಲಿ ಪ್ರೀತಿಯಿಟ್ಟು ನಿನ್ನ ವಿಷಯವನ್ನು ತಿಳಿಸು.

೧೯೨–೧೯೩. ಹನುಮಂತನು ಹೇಳುತ್ತಾನೆ :—ಎಲೈ ವಿಪ್ರರೆ! ಕಲಿಯುಗದಲ್ಲಿ ದೇವತೆಗಳ ದರ್ಶನವಾಗುವುದೆಂತು? ನಿಮಗೆ ಸುಖವಾಗಿ ಬಾಳಬೇಕೆಂದು ಅಪೇಕ್ಷೆಯಿದ್ದರೆ ಹಿಂದಿರುಗಿರಿ. ಹುಲಿ, ಸಿಂಹ, ಆನೆಗಳಿಂದಲೂ, ಕಾಳ್ಕಿಚ್ಚಿನಿಂದಲೂ ಆವರಿಸಲ್ಪಟ್ಟ ಶೂನ್ಯಾರಣ್ಯವನ್ನು ಪ್ರವೇಶಿಸಲು ಸಾಧ್ಯವಿಲ್ಲ."

೧೯೪. ವಿಪ್ರರು ಹೇಳುತ್ತಾರೆ:— ದ್ವಿಜನೆ! ಒಬ್ಬನು ನಿನ್ನೆಯೂ ಈಗ ಹೇಳಿದಂತೆಯೇ ಹೇಳಿದನು.

೧೯೫. ನೀನಾರು? ಬ್ರಾಹ್ಮಣರೂಪಿಯಾದ ರಾಮನೊ? ಅಥವಾ ಹನುಮಂತನೊ? ನಮ್ಮಲ್ಲಿ ದಯೆಯಿಟ್ಟು ನಿಜವಾದ ವಿಷಯವನ್ನು ಹೇಳು.

CC-0. Jangamwadi Math Collection. Digitized by eGangotri

ಹನುಮಾನ್ಕಥಯಾಮಾಸ ಗೋಪಿತಂ ಯದ್ದ್ವಿಜಾಗ್ರತಃ ।
ಹನುಮಾನಿತ್ಯಹಂ ವಿಪ್ರಾ ಬುಧ್ಯಧ್ವಂ ನಿಶ್ಚಿತಾ ಹಿ ಮಾಂ ॥ ೧೯೬ ॥
ಸ್ವರೂಪಂ ಪ್ರಕಟೀಕೃತ್ಯ ಲಾಂಗೂಲಂ ದರ್ಶಯನ್ಮಹತ್ ॥ ೧೯೭ ॥
ಹನುಮಾನುವಾಚ :—
ಅಯಮಂಭೋನಿಧಿಃ ಸಾಕ್ಷಾತ್ಸೇತುಬಂಧೋ ಮನೋರಮಃ ।
ಅಯಂ ರಾಮೇಶ್ವರೋ ದೇವೋ ಗರ್ಭವಾಸವಿನಾಶಕೃತ್ ॥ ೧೯೮ ॥
ಇಯಂ ತು ನಗರೀ ಶ್ರೇಷ್ಠಾ ಲಂಕಾನಾಮೇತಿ ವಿಶ್ರುತಾ ।
ಯತ್ರ ಸೀತಾ ಮಯಾ ಪ್ರಾಪ್ತಾ ರಾಮಶೋಕಾಽಪಹಾರಿಣೀ ॥ ೧೯೯ ॥
ತರ್ಜನ್ಯಗ್ರೇ ದ್ವಿಜಶ್ರೇಷ್ಠಾ ಅಗಮ್ಯಾ ಮಾಂ ವಿನಾ ಪರೈಃ ।
ಸಾ ಸುವರ್ಣಮಯೀ ಭಾತಿ ಯಸ್ಯಾಂ ರಾಜ್ಯೇ ವಿಭೀಷಣಃ ॥ ೨೦೦ ॥
ಸ್ಥಾಪಿತೋ ರಾಮದೇವೇನ ಸೇಯಂ ಲಂಕಾಮಹಾಪುರೀ ।
ನಿಯಮಸ್ಥೈಃ ಸಾಧುವೃಂದೈಸ್ತೀರ್ಥಯಾತ್ರಾಪ್ರಸಂಗತಃ ॥ ೨೦೧ ॥
ಆನೀಯ ಗಂಗಾಸಲಿಲಂ ರಾಮೇಶಮಭಿಷಿಚ್ಯ ಚ ।
ಕ್ಷಿಪ್ತಾ ಏತೇ ಮಹಾಭಾರಾ ದೃಶ್ಯಂತೇ ಸಾಗರಾಂತರೇ ॥ ೨೦೨ ॥
ನಿಷ್ಪಾಪಾಸ್ತೇನ ಸಂಜಾತಾಃ ಸಾಧವಸ್ತೇ ದೃಢವ್ರತಾಃ ।
ನೂನಂ ಪುಣ್ಯೋದಯೇ ವೃದ್ಧಿಃ ಪಾಪೇ ಹಾನಿಶ್ಚ ಜಾಯತೇ ॥ ೨೦೩ ॥

---

೧೯೬–೧೯೭. ಹನುಮಂತನು ತಾನು ಮರೆಮಾಚಿದ ಹನುಮಂತನೆಂಬುದನ್ನು ಬ್ರಾಹ್ಮಣರಿಗೆ ತಿಳಿಸಿ ಉದ್ದವಾದ ತನ್ನ ಬಾಲವುಳ್ಳ ಆಕೃತಿಯನ್ನು ತೋರಿಸಿದನು.

೧೯೮–೧೯೯. ಹನುಮಂತನು ಹೇಳುತ್ತಾನೆ:—ಇದು ಪ್ರತ್ಯಕ್ಷವಾದ ಸಮುದ್ರವು. ಇದು ರಮ್ಯವಾದ ಸೇತುವು. ಇವನು ಪುನರ್ಜನ್ಮವನ್ನು ಪರಿಹರಿಸುವ ರಾಮೇಶ್ವರಸ್ವಾಮಿಯು. ಇದು ರಾಮನ ದುಃಖವನ್ನು ನಿವಾರಿಸುವ ಸೀತೆಯನ್ನು ನಾನು ಕಂಡ ಲಂಕೆಯೆಂಬ ಪ್ರಸಿದ್ಧನಗರಿಯು.

೨೦೦–೨೦೩. ಎಲೈ ದ್ವಿಜೋತ್ತಮರೆ! ನಾನು ತರ್ಜನೀಬೆರಳಿನ ಕೊನೆಯಿಂದ ತೋರಿಸುತ್ತಿರುವುದು ಸುವರ್ಣಮಯವಾದ ಲಂಕಾಪಟ್ಟಣವು. ನನ್ನ ಹೊರತು ಬೇರೆಯವರು ಇದನ್ನು ಪ್ರವೇಶಿಸಲಾರರು. ಇದರಲ್ಲಿ ರಾಮದೇವನು ವಿಭೀಷಣನನ್ನು ಸ್ಥಾಪಿಸಿರುವನು. ವ್ರತಾನುಷ್ಠಾನಮಾಡುವ ಸಾಧುಗಳು ತೀರ್ಥಯಾತ್ರೆಯನ್ನು ಮಾಡುವಾಗ ಗಂಗೆಯ ನೀರನ್ನು ತಂದು ರಾಮೇಶ್ವರನಿಗೆ ಅಭಿಷೇಕಮಾಡಿ ಸಮುದ್ರದಲ್ಲಿ ಚೆಲ್ಲಿದರು. ಅದೇ ಈಗ ಇಷ್ಟು ವೃದ್ಧಿಗೊಂಡಿರುವುದು. ಅದರಿಂದ ಸಾಧುಗಳು ಪಾಪರಹಿತರಾದರು. ಪುಣ್ಯವು ಹೆಚ್ಚಿದಾಗ ವೃದ್ಧಿಯೂ, ಪಾಪಾಭಿವೃದ್ಧಿಯಲ್ಲಿ ಕೇಡೂ ಸಂಭವಿಸುವುದು.

CC-0. Jangamwadi Math Collection. Digitized by eGangotri

ಸ್ಥಾನಭ್ರಷ್ಟಾಃ ಕೃತಾಃ ಪೂರ್ವಂ ಚಾತುರ್ವಿದ್ಯಾ ದ್ವಿಜಾತಯಃ ।
ಜೀರ್ಣೋದ್ಧಾರೇಣ ರಾಮೇಣ ಸ್ಥಾಪಿತಾಃ ಪುನರೇವ ಹಿ ।
ಪೂರ್ವಜನ್ಮನಿ ಭೋ ವಿಪ್ರಾ ಹರಿಪೂಜಾ ಕೃತಾ ಮಯಾ ॥ ೨೦೪ ॥
ಸಾಂಪ್ರತಂ ನಿಶ್ಚಲಾ ಭಕ್ತಿರ್ಭವತ್ಸೇವಾ ಹಿ ದೃಶ್ಯತೇ ।
ತೇನ ಪುಣ್ಯಪ್ರಭಾವೇಣ ತುಷ್ಟೋ ದಾಸ್ಯಾಮಿ ವೋ ವರಂ ॥ ೨೦೫ ॥
ಧನ್ಯೋಽಹಂ ಕೃತಕೃತ್ಯೋಽಹಂ ಸುಭಾಗ್ಯೋಽಹಂ ಧರಾತಲೇ ।
ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ॥ ೨೦೬ ॥
ಯದಹಂ ಬ್ರಾಹ್ಮಣಾನಾಂ ಚ ಪ್ರಾಪ್ತವಾಂಶ್ಚರಣಾಂತಿಕಂ ॥ ೨೦೭ ॥

ವ್ಯಾಸ ಉವಾಚ :—

ದೃಷ್ಟ್ವೈವ ಹನುಮಂತಂ ತು ಪುಲಕಾಂಕಿತವಿಗ್ರಹಾಃ ।
ಸಗದ್ಗದಂ ಯಥೋಚುಸ್ತೇ ವಾಕ್ಯಂ ವಾಕ್ಯವಿಶಾರದಾಃ ॥ ೨೦೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ಹನುಮತ್ಸಮಾಗಮೋ"ನಾಮ ಷಟ್ತ್ರಿಂಶೋಽಧ್ಯಾಯಃ

---

೨೦೪. ಹಿಂದೆ ಚಾತುರ್ವಿದ್ಯಬ್ರಾಹ್ಮಣರು ಸ್ಥಾನವಿಲ್ಲದವರಾಗಿದ್ದರು. ಆಗ ರಾಮನು ಜೀರ್ಣೋದ್ಧಾರಮಾಡಿ ಆ ಬ್ರಾಹ್ಮಣರನ್ನು ತಿರುಗಿ ಸ್ಥಾಪಿಸಿ ದನು. ವಿಪ್ರರೆ! ನಾನು ಹಿಂದಿನ ಜನ್ಮದಲ್ಲಿ ಹರಿಪೂಜೆಯನ್ನು ಮಾಡಿರುವೆನು. ಅದರಿಂದ ಈಗ ದೃಢವಾದ ಭಕ್ತಿಯೂ, ನಿಮ್ಮ ಸೇವೆಯೂ ದೊರಕಿರುವುದು. ಆ ಪುಣ್ಯದ ಪ್ರಭಾವದಿಂದ ಸಂತೋಷಗೊಂಡು ನಿಮಗೆ ವರವನ್ನು ಕೊಡುವೆನು.

೨೦೫–೨೦೭. ನಾನು ಬ್ರಾಹ್ಮಣರ ಚರಣಸನ್ನಿಧಿಯನ್ನು ಹೊಂದಿರುವುದ ರಿಂದ ಭೂಮಿಯಲ್ಲಿ ಧನ್ಯನು. ಪುಣ್ಯವಂತನು. ಇಂದು ನನ್ನ ಜನ್ಮವು ಸಫಲ ವಾಯಿತು. ಜೀವನವು ಉತ್ತಮವಾಯಿತು.

೨೦೮. ಆ ಬ್ರಾಹ್ಮಣರು ಹನುಮಂತನನ್ನು ಕಂಡು ರೋಮಾಂಚ ಗೊಂಡವರಾಗಿ ಗದ್ಗದಧ್ವನಿಸಹಿತವಾಗಿ ಹೇಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ಹನುಮತ್ಸಮಾಗಮ"ವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಸಪ್ತತ್ರಿಂಶೋಽಧ್ಯಾಯಃ

### ಬ್ರಾಹ್ಮಣಾನಾಂ ಪ್ರತ್ಯಾಗಮನವರ್ಣನಂ

ವ್ಯಾಸ ಉವಾಚ:—

ತತಸ್ತೇ ಬ್ರಾಹ್ಮಣಾಃ ಸರ್ವೇ ಪ್ರತ್ಯೂಚುಃ ಪವನಾತ್ಮಜಂ ।
ಅಧುನಾ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ॥ ೧ ॥
ಅದ್ಯ ನೋ ಮೋಢಲೋಕಾನಾಂ ಧನ್ಯೋ ಧರ್ಮಶ್ಚ ವೈ ಗೃಹಾಃ ।
ಧನ್ಯಾ ಚ ಸಕಲಾ ಪೃಥ್ವೀ ಯಜ್ಞಧರ್ಮಾ ಹ್ಯನೇಕಶಃ ॥ ೨ ॥
ನಮಃ ಶ್ರೀರಾಮಭಕ್ತಾಯ ಅಕ್ಷವಿಧ್ವಂಸನಾಯ ಚ ।
ನಮೋ ರಕ್ಷಃಪುರೀದಾಹಕಾರಿಣೇ ವಜ್ರಧಾರಿಣೇ ॥ ೩ ॥
ಜಾನಕೀಹೃದಯತ್ರಾಣಕಾರಿಣೇ ಕರುಣಾತ್ಮನೇ ।
ಸೀತಾವಿರಹತಪ್ತಸ್ಯ ಶ್ರೀರಾಮಸ್ಯ ಪ್ರಿಯಾಯ ಚ ॥ ೪ ॥
ನಮೋಽಸ್ತು ತೇ ಮಹಾವೀರ ರಕ್ಷಾಽಸ್ಮಾನ್ಮಜ್ಜತಃ ಕ್ಷಿತೌ ।
ನಮೋ ಬ್ರಾಹ್ಮಣದೇವಾಯ ವಾಯುಪುತ್ರಾಯ ತೇ ನಮಃ ॥ ೫ ॥
ನಮೋಽಸ್ತು ರಾಮಭಕ್ತಾಯ ಗೋಬ್ರಾಹ್ಮಣಹಿತಾಯ ಚ ।
ನಮೋಽಸ್ತು ರುದ್ರರೂಪಾಯ ಕೃಷ್ಣವಕ್ತ್ರಾಯ ತೇ ನಮಃ ॥ ೬ ॥

---

### ಕನ್ನಡದ ಅನುವಾದ

#### ಬ್ರಾಹ್ಮಣಪ್ರತ್ಯಾಗಮನವರ್ಣನ

೧–೨. ವ್ಯಾಸನು ಹೇಳುತ್ತಾನೆ:—ಬಳಿಕ ಬ್ರಾಹ್ಮಣರು ಹನುಮಂತನನ್ನು ಕುರಿತು ಹೀಗೆಂದರು. ಈಗ ನಮ್ಮ ಜನ್ಮವು ಸಫಲವಾಯಿತು. ಬದುಕು ಒಳ್ಳೆಯದಾಯಿತು. ಮೋಢಬ್ರಾಹ್ಮಣರ ಧರ್ಮವೂ, ಮನೆಗಳೂ ಧನ್ಯವಾದುವು. ಸಮಸ್ತಭೂಮಿಯೂ, ಯಜ್ಞಧರ್ಮಗಳೂ ಧನ್ಯವಾದುವು.

೩. ಶ್ರೀರಾಮನ ಭಕ್ತನೂ, ಅಕ್ಷಕುಮಾರನನ್ನು ಕೊಂದವನೂ, ಲಂಕಾಪಟ್ಟಣವನ್ನು ಸುಟ್ಟವನೂ, ವಜ್ರವನ್ನು ಧರಿಸಿದವನೂ ಆದ ಓ ಆಂಜನೇಯ! ನಿನಗೆ ನಮಸ್ಕಾರವು.

೪–೫. ಸೀತೆಯ ಹೃದಯಕ್ಕೆ ಬಲವಿತ್ತು ಕಾಪಾಡಿದವನೂ, ಕರುಣಾಳುವೂ, ಸೀತಾವಿಯೋಗದಿಂದ ದುಃಖಗೊಂಡ ರಾಮನಿಗೆ ಪ್ರಿಯನೂ ಆದ ಆಂಜನೇಯ! ನಮಸ್ಕಾರವು. ಮಹಾವೀರನೂ, ಬ್ರಾಹ್ಮಣದೇವನೂ ಆದ ನಿನಗೆ ನಮಸ್ಕಾರವು. ಭೂಮಿಯಲ್ಲಿ ಮುಳುಗುತ್ತಿರುವ ನಮ್ಮನ್ನು ಕಾಪಾಡು.

೬. ರಾಮಭಕ್ತನೂ, ಗೋಬ್ರಾಹ್ಮಣರಿಗೆ ಹಿತವನ್ನುಂಟುಮಾಡುವವನೂ, ಭಯಂಕರರೂಪನೂ, ಕೃಷ್ಣಮುಖನೂ ಆದ ನಿನಗೆ ನಮಸ್ಕಾರವು.

CC-0. Jangamwadi Math Collection. Digitized by eGangotri

ಅಂಜನಾಸೂನವೇ ನಿತ್ಯಂ ಸರ್ವವ್ಯಾಧಿಹರಾಯ ಚ ।
ನಾಗಯಜ್ಞೋಪವೀತಾಯ ಪ್ರಬಲಾಯ ನಮೋಽಸ್ತು ತೇ ॥ ೭ ॥
ಸ್ವಯಂ ಸಮುದ್ರತೀರ್ಣಾಯ ಸೇತುಬಂಧನಕಾರಿಣೇ ॥ ೮ ॥

ವ್ಯಾಸ ಉವಾಚ :—

ಸ್ತೋತ್ರೇಣೈವಾಽಮುನಾ ತುಷ್ಟೋ ವಾಯುಪುತ್ರೋಽಬ್ರವೀದ್ವಚಃ ।
ಶೃಣುಧ್ವಂ ಹಿ ವರಂ ವಿಪ್ರಾ ಯದ್ವೋ ಮನಸಿ ರೋಚತೇ ॥ ೯ ॥

ವಿಪ್ರಾ ಊಚುಃ :—

ಯದಿ ತುಷ್ಟೋಽಸಿ ದೇವೇಶ ರಾಮಾಜ್ಞಾಪಾಲಕಪ್ರಭೋ ।
ಸ್ವರೂಪಂ ದರ್ಶಯಸ್ವಾಽದ್ಯ ಲಂಕಾಯಾಂ ಯತ್ಕೃತಂ ಹರೇ ॥ ೧೦ ॥
ತಥಾ ವಿಧ್ವಂಸಯಾಽದ್ಯ ತ್ವಂ ರಾಜಾನಂ ಪಾಪಕಾರಿಣಂ ।
ದುಷ್ಟಂ ಕುಮಾರಪಾಲಂ ಹಿ ಆಮಂ ಚೈವ ನ ಸಂಶಯಃ ॥ ೧೧ ॥
ವೃತ್ತಿಲೋಭಫಲಂ ಸದ್ಯಃ ಪ್ರಾಪ್ನುಯಾತ್ತ್ವಂ ತಥಾ ಕುರು ।
ಪ್ರತೀತ್ಯರ್ಥಂ ಮಹಾಬಾಹೋ ಕಿಂ ವಿಲಂಬಂ ವದಸ್ವ ನಃ ॥ ೧೨ ॥
ತ್ವಯಿ ಚಿತ್ತೇನ ದತ್ತೇನ ಸ ರಾಜಾ ಪುಣ್ಯಭಾಗ್ಭವೇತ್ ।
ಪ್ರತ್ಯಯೇ ದರ್ಶಿತೇ ವೀರ ಶಾಸನಂ ಪಾಲಯಿಷ್ಯತಿ ॥ ೧೩ ॥

---

೭–೮. ಅಂಜನೆಯ ಪುತ್ರನೂ, ಸಕಲರೋಗಗಳನ್ನು ಪರಿಹರಿಸುವವನೂ, ಸರ್ಪವೇ ಜನಿವಾರವಾಗುಳ್ಳವನೂ, ಸಮರ್ಥನೂ, ಸಮುದ್ರವನ್ನು ದಾಟಿದವನೂ, ಸೇತುವನ್ನು ಕಟ್ಟಲು ಕಾರಣನೂ ಆದ ನಿನಗೆ ನಮಸ್ಕಾರವು.

೯. ಈ ಸ್ತೋತ್ರದಿಂದ ಸಂತೋಷಗೊಂಡ ಹನುಮಂತನು "ವಿಪ್ರರೆ! ನಿಮ್ಮ ಅಭೀಷ್ಟವನ್ನು ಕೇಳಿಕೊಳ್ಳಿರಿ" ಎಂದನು.

೧೦. ಬ್ರಾಹ್ಮಣರು ಹೇಳುತ್ತಾರೆ:—ರಾಮನ ಅಪ್ಪಣೆಯನ್ನು ನಡಸಿದ ಎಲೈ ಹನುಮಂತನೆ! ನೀನು ಸಂತೋಷಗೊಂಡಿದ್ದರೆ ಲಂಕೆಯಲ್ಲಿ ನೀನು ತೋರಿಸಿದ ಸ್ವರೂಪವನ್ನು ನಮಗೆ ತೋರಿಸು.

೧೧. ಹಾಗೆಯೇ ಪಾಪಿಯಾದ ಕುಮಾರಪಾಲನನ್ನೂ, ಆಮರಾಜನನ್ನೂ ಧ್ವಂಸಮಾಡು.

೧೨. ಆ ಕುಮಾರಪಾಲನು ನಮ್ಮ ವೃತ್ತಿಯನ್ನು ಹಾಳುಮಾಡಿದುದಕ್ಕೆ ತಕ್ಕ ಫಲವನ್ನು ಹೊಂದಲಿ. ಅವನನ್ನು ನಂಬಿಸುವುದಕ್ಕೆ ಏಕೆ ವಿಳಂಬಮಾಡುತ್ತೀಯೆ?

೧೩. ನೀನು ಕೊಟ್ಟ ಮನಸ್ಸಿನಿಂದ ಆ ರಾಜನು ಪುಣ್ಯವಂತನಾದಾನು. ನಂಬಿಕೆಯನ್ನು ತೋರಿಸಿದರೆ ರಾಮನ ಶಾಸನವನ್ನು ಅವನು ಕಾಪಾಡುವನು.

CC-0. Jangamwadi Math Collection. Digitized by eGangotri

ತ್ರಯೀಧರ್ಮಾಃ ಪೃಥಿವ್ಯಾಂ ತು ವಿಸ್ತಾರಂ ಪ್ರಾಪಯಿಷ್ಯತಿ ।
ಧರ್ಮಧೀರ ಮಹಾವೀರ ಸ್ವರೂಪಂ ದರ್ಶಯಸ್ವ ನಃ ॥ ೧೪ ॥
ಹನುಮಾನುವಾಚ :—
ಮತ್ಸ್ವರೂಪಂ ಮಹಾಕಾಯಂ ನ ಚಕ್ಷುರ್ವಿಷಯಂ ಕಲೌ ।
ತೇಜೋರಾಶಿಮಯಂ ದಿವ್ಯಮಿತಿ ಜಾನಂತು ವಾಡವಾಃ ॥ ೧೫ ॥
ತಥಾಽಪಿ ಪರಯಾ ಭಕ್ತ್ಯಾ ಪ್ರಸನ್ನೋಽಹಂ ಸ್ತವಾದಿಭಿಃ ।
ವಸನಾಂತರಿತಂ ರೂಪಂ ದರ್ಶಯಿಷ್ಯಾಮಿ ಪಶ್ಯತ ॥ ೧೬ ॥
ಏವಮುಕ್ತಾಸ್ತದಾ ವಿಪ್ರಾಃ ಸರ್ವಕಾರ್ಯಸಮುತ್ಸುಕಾಃ ।
ಮಹಾರೂಪಂ ಮಹಾಕಾಯಂ ಮಹಾಪುಚ್ಛಸಮಾಕುಲಂ ॥ ೧೭ ॥
ದೃಷ್ಟ್ವಾ ದಿವ್ಯಸ್ವರೂಪಂ ತಂ ಹನುಮಂತಂ ಜಹರ್ಷಿರೇ ।
ಕಥಂಚಿದ್ಧೈರ್ಯಮಾಲಂಬ್ಯ ವಿಪ್ರಾಃ ಪ್ರೋಚುಃ ಶನೈಃ ಶನೈಃ ॥ ೧೮ ॥
ಯಥೋಕ್ತಂ ತು ಪುರಾಣೇಷು ತತ್ತಥೈವ ಹಿ ದೃಶ್ಯತೇ ।
ಉವಾಚ ಸ ಹಿ ತಾನ್ಸರ್ವಾಂಶ್ಚಕ್ಷುಃ ಪ್ರಚ್ಛಾದ್ಯ ಸಂಸ್ಥಿತಾನ್ ॥ ೧೯ ॥
ಫಲಾನೀಮಾನಿ ಗೃಹ್ಣೀಧ್ವಂ ಭಕ್ಷಣಾರ್ಥಮೃಷೀಶ್ವರಾಃ ।
ಏಭಿಸ್ತು ಭಕ್ಷಿತೈರ್ವಿಪ್ರಾ ಹ್ಯತಿತೃಪ್ತಿರ್ಭವಿಷ್ಯತಿ ॥ ೨೦ ॥
ಧರ್ಮಾರಣ್ಯಂ ವಿನಾ ಚಾಽದ್ಯ ಕ್ಷುಧಾ ವಃ ಶಾಮ್ಯತಿ ಧ್ರುವಂ ॥ ೨೧ ॥

---

೧೪. ವೇದಧರ್ಮವು ಭೂಮಿಯಲ್ಲಿ ವಿಸ್ತಾರಗೊಳ್ಳುವುದು. ವೀರನಾದ ಆಂಜನೇಯನೆ! ನಿನ್ನ ಸ್ವರೂಪವನ್ನು ನಮಗೆ ತೋರಿಸು.

೧೫. ಹನುಮಂತನು ಹೇಳುತ್ತಾನೆ:—ಬ್ರಾಹ್ಮಣರೆ! ನನ್ನ ತೇಜಸ್ಸ್ವರೂಪವಾದ ದಿವ್ಯ ಮಹಾಕಾಯವನ್ನು ಈ ಕಲಿಯುಗದಲ್ಲಿ ನೋಡಲಾಗುವುದಿಲ್ಲ.

೧೬. ಆದರೂ ನೀವು ಭಕ್ತಿಯಿಂದ ಮಾಡಿದ ಸ್ತೋತ್ರಾದಿಗಳಿಂದ ಪ್ರಸನ್ನನಾದ ನಾನು ಬಟ್ಟೆಯಿಂದ ಮುಚ್ಚಿದ ಸ್ವರೂಪವನ್ನು ತೋರಿಸುವೆನು, ನೋಡಿರಿ.

೧೭—೧೮. ಹೀಗೆ ಆಂಜನೇಯನು ನುಡಿಯಲು ಸಕಲಕಾರ್ಯಗಳಲ್ಲಿಯೂ ಉತ್ಸುಕರಾದ ಬ್ರಾಹ್ಮಣರು ಉದ್ದವಾದ ಬಾಲವುಳ್ಳ ಅವನ ದಿವ್ಯಾಕೃತಿಯನ್ನೀಕ್ಷಿಸಿ ಸಂತೋಷಗೊಂಡು ಅತಿಕಷ್ಟದಿಂದ ಧೈರ್ಯವನ್ನು ತಾಳಿ ಮೆಲ್ಲಗೆ ಹೀಗೆಂದರು.

೧೯—೨೧. "ಪುರಾಣಗಳಲ್ಲಿ ಕೇಳಿದಂತೆಯೆ ಇರುವ ನಿನ್ನ ದಿವ್ಯಾಕೃತಿಯನ್ನು ನೋಡುತ್ತಿದ್ದೇವೆ." ಆಂಜನೇಯನು ಕಣ್ಣನ್ನು ಮುಚ್ಚಿಕೊಂಡು ನಿಂತಿರುವ ಅವರನ್ನು ಕುರಿತು, "ಮುನೀಶ್ವರರೆ! ಈ ಹಣ್ಣುಗಳನ್ನು ತಿನ್ನುವುದಕ್ಕಾಗಿ ತೆಗೆದುಕೊಳ್ಳಿರಿ. ಇವುಗಳನ್ನು ತಿಂದರೆ ಅತ್ಯಂತ ತೃಪ್ತಿಯಾಗುವುದು. ಧರ್ಮಾರಣ್ಯಕ್ಕೆ ಹೋಗದಿದ್ದರೂ ನಿಮ್ಮ ಹಸಿವು ಅಡಗುವುದು" ಎಂದನು

CC-0. Jangamwadi Math Collection. Digitized by eGangotri

ವ್ಯಾಸ ಉವಾಚ :—

ಕ್ಷುಧಾಕ್ರಾಂತೈಸ್ತದಾವಿಪ್ರೈಃ ಕೃತಂ ವೈ ಫಲಭಕ್ಷಣಂ ।
ಅಮೃತಪ್ರಾಶನಮಿವ ತೃಪ್ತಿಸ್ತೇಷಾಮಜಾಯತ ॥ ೨೨ ॥
ನ ತೃಷಾ ನೈವ ಕ್ಷುಚ್ಚೈವ ವಿಪ್ರಾಃ ಸಂಕ್ಲಿಷ್ಟಮಾನಸಾಃ ।
ಅಭವನ್ಸಹಸಾ ರಾಜನ್ವಿಸ್ಮಯಾವಿಷ್ಟಚೇತಸಃ ॥ ೨೩ ॥
ತತಃ ಪ್ರಾಹಾಂಜನಾಪುತ್ರಃ ಸಂಪ್ರಾಪ್ತೇ ಹಿ ಕಲೌ ದ್ವಿಜಾಃ ।
ನಾಗಮಿಷ್ಯಾಮ್ಯಹಂ ತತ್ರ ಮುಕ್ತ್ವಾ ರಾಮೇಶ್ವರಂ ಶಿವಂ ॥ ೨೪ ॥
ಅಭಿಜ್ಞಾನಂ ಮಯಾ ದತ್ತಂ ಗೃಹೀತ್ವಾ ತತ್ರ ಗಚ್ಛತ ।
ತಥ್ಯಮೇತತ್ಪ್ರತೀಯೇತ ತಸ್ಯ ರಾಜ್ಞೋ ನ ಸಂಶಯಃ ॥ ೨೫ ॥
ಇತ್ಯುಕ್ತ್ವಾ ಬಾಹುಮುದ್ಧೃತ್ಯ ಭುಜಯೋರುಭಯೋರಪಿ ।
ಪೃಥಗ್ರೋಮಾಣಿ ಸಂಗೃಹ್ಯ ಚಕಾರ ಪುಟಿಕಾದ್ವಯಂ ॥ ೨೬ ॥
ಭೂರ್ಜಪತ್ರೇಣ ಸಂವೇಷ್ಟ್ಯ ತೇದಾದ್ವಿಪ್ರಕಕ್ಷಯೋಃ ।
ವಾಮೇ ತು ವಾಮಕಕ್ಷೋತ್ಥಾಂ ದಕ್ಷಿಣೋತ್ಥಾಂ ತು ದಕ್ಷಿಣೇ ॥ ೨೭ ॥
ಕಾಮದಾಂ ರಾಮಭಕ್ತಸ್ಯ ಅನ್ಯೇಷಾಂ ಕ್ಷಯಕಾರಿಣೀಂ ।
ಉವಾಚ ಚ ಯದಾ ರಾಜಾ ಬ್ರೂತೇ ಚಿಹ್ನಂ ಪ್ರದೀಯತಾಂ ॥ ೨೮ ॥

---

೨೨. ವ್ಯಾಸನು ಹೇಳುತ್ತಾನೆ:—ಆಗ ಹಸಿವುಗೊಂಡ ಬ್ರಾಹ್ಮಣರು ಆ ಹಣ್ಣುಗಳನ್ನು ತಿಂದರು. ಅವರಿಗೆ ಅಮೃತವನ್ನು ಕುಡಿದಷ್ಟು ತೃಪ್ತಿಯಾಯಿತು.

೨೩. ಹಸಿವೂ ಬಾಯಾರಿಕೆಯೂ ಆಗಲಿಲ್ಲ. ಕೂಡಲೆ ಬ್ರಾಹ್ಮಣರು ಆಶ್ಚರ್ಯಗೊಂಡರು.

೨೪–೨೫. ತರುವಾಯ ಆಂಜನೇಯನು, "ದ್ವಿಜರೆ! ಕಲಿಯುಗದಲ್ಲಿ ನಾನು ರಾಮೇಶ್ವರನಾದ ಮಹೇಶ್ವರನನ್ನು ಬಿಟ್ಟು ಅಲ್ಲಿಗೆ ಬರುವುದಿಲ್ಲ. ನಾನೊಂದು ಅಭಿಜ್ಞಾನವನ್ನು ಕೊಡುವೆನು. ಅದನ್ನು ತೆಗೆದುಕೊಂಡು ಅಲ್ಲಿಗೆ ಹೋಗಿರಿ. ಆ ರಾಜನು ಸತ್ಯವಾಗಿಯೂ ಇದನ್ನು ನಂಬುತ್ತಾನೆ."

೨೬–೨೭. ಹೀಗೆಂದು ಹನುಮಂತನು ತೋಳನ್ನು ಎತ್ತಿ ಎರಡುಭುಜಗಳ ರೋಮಗಳನ್ನು ತೆಗೆದು ಪ್ರತ್ಯೇಕವಾಗಿ ಎರಡು ಸುರುಳಿ ಸುತ್ತಿದನು. ಭೂರ್ಜ ಪತ್ರೆಯಿಂದ ಅವೆರಡನ್ನೂ ಸುತ್ತಿ ಬ್ರಾಹ್ಮಣರ ಎಡಕಂಕುಳಲ್ಲಿ ತನ್ನ ಎಡ ಕಂಕುಳಿನ ಕೂದಲಿನ ಸುರುಳಿಯನ್ನೂ, ಬಲಕಂಕುಳಲ್ಲಿ ಬಲಕಂಕುಳಿನ ಕೂದಲಿನ ಸುರಳಿಯನ್ನೂ ಇಟ್ಟನು.

೨೮. ರಾಜನು ಕೇಳಿದಾಗ ರಾಮಭಕ್ತನಿಗೆ ಇಷ್ಟಾರ್ಥವನ್ನೀಯುವುದೂ, ರಾಮನ ಶತ್ರುಗಳನ್ನು ನಾಶಗೊಳಿಸುವುದೂ ಆಗಿರುವ ಈ ಗುರುತನ್ನು ಅವನಿಗೆ ಕೊಡಿರಿ.

CC-0. Jangamwadi Math Collection. Digitized by eGangotri

ತದಾ ಪ್ರದೀಯತಾಂ ಶೀಘ್ರಂ ವಾಮಕಕ್ಷೋದ್ಭವಾ ಪುಟೀ ।
ಅಥವಾ ತಸ್ಯ ರಾಜ್ಞಸ್ತು ದ್ವಾರೇ ತು ಪುಟಿಕಾಂ ಕ್ಷಿಪ ॥ ೨೯ ॥
ಜ್ವಾಲಯತಿ ಚ ತತ್ಸೈನ್ಯಂ ಗೃಹಂ ಕೋಶಂ ತಥೈವ ಚ ।
ಮಹಿಷ್ಯಃ ಪುತ್ರಕಾಃ ಸರ್ವಂ ಜ್ವಲಮಾನಂ ಭವಿಷ್ಯತಿ ॥ ೩೦ ॥
ಯದಾ ತು ವೃತ್ತಿಂ ಗ್ರಾಮಾಂಶ್ಚ ವಣಿಜಾನಾಂ ಬಲಿಂ ತಥಾ ।
ಪೂರ್ವಂ ಸ್ಥಿತಂ ತು ಯತ್ಕಿಂಚಿತ್ತತ್ತದ್ದಾಸ್ಯತಿ ವಾಡವಾಃ ॥ ೩೧ ॥
ಲಿಖಿತ್ವಾ ನಿಶ್ಚಯಂ ಕೃತ್ವಾಽಪ್ಯಥ ದದ್ಯಾತ್ಸ ಪೂರ್ವವತ್ ।
ಕರಸಂಪುಟಿಕಂ ಕೃತ್ವಾ ಪ್ರಣಮೇಚ್ಚ ಯದಾ ನೃಪಃ ॥ ೩೨ ॥
ಸಂಪ್ರಾಪ್ಯ ಚ ಪುರಾವೃತ್ತಿಂ ರಾಮದತ್ತಾಂ ದ್ವಿಜೋತ್ತಮಾಃ ।
ತತೋ ದಕ್ಷಿಣಕಕ್ಷಾಸ್ಥ ಕೇಶಾನಾಂ ಪುಟಿಕಾ ತ್ವಿಯಂ ॥ ೩೩ ॥
ಪ್ರಕ್ಷಿಪ್ಯತಾಂ ತದಾ ಸೈನ್ಯಂ ಪುರಾವಚ್ಚ ಭವಿಷ್ಯತಿ ।
ಗೃಹಾಣಿ ಚ ತಥಾ ಕೋಶಃ ಪುತ್ರಪೌತ್ರಾದಯಸ್ತಥಾ ॥ ೩೪ ॥
ವಹ್ನಿನಾ ಮುಚ್ಯಮಾನಾಸ್ತೇ ದೃಶ್ಯಂತೇ ತತ್ಕ್ಷಣಾದಿತಿ ।
ಶ್ರುತ್ವಾಽಮೃತಮಯಂ ವಾಕ್ಯಂ ಹನುಮಂತೋದಿತಂ ಪರಂ ॥ ೩೫ ॥
ಅಲಭಂತ ಮುದಂ ವಿಪ್ರಾ ನನೃತುಃ ಪ್ರಜಗುರ್ಭೃಶಂ ।
ಜಯಂ ಚೋದ್ಯೈರಯನ್ಕೇಽಪಿ ಪ್ರಹಸಂತಿ ಪರಸ್ಪರಂ ॥ ೩೬ ॥
ಪುಲಕಾಂಕಿತ ಸರ್ವಾಂಗಾಃ ಸ್ತುವಂತಿ ಚ ಮುಹುರ್ಮುಹುಃ ।
ಪುಚ್ಛಂ ತಸ್ಯ ಚ ಸಂಗೃಹ್ಯ ಚುಚುಂಬುಃ ಕೇಚಿದುತ್ಸುಕಾಃ ॥ ೩೭ ॥

---

೨೯–೩೨. ಎಡ ಕಂಕುಳಿನ ಕೂದಲನ್ನು ಕೈಯಲ್ಲಿ ಕೊಡಿರಿ ಅಥವಾ ಅವನ ಬಾಗಿಲಿನಲ್ಲಿ ಎಸೆಯಿರಿ. ಆಗ ಅದು ಅವನ ಸೈನ್ಯವನ್ನೂ, ಮನೆಯನ್ನೂ, ಬೊಕ್ಕಸವನ್ನೂ, ರಾಣಿಯರನ್ನೂ, ಮಕ್ಕಳನ್ನೂ ದಹಿಸುವುದು. ಅವನು ಹಿಂದಿನ ವೃತ್ತಿಯನ್ನೂ, ಗ್ರಾಮಗಳನ್ನೂ, ವರ್ತಕರ ಕಾಣಿಕೆಯನ್ನೂ ಮೊದಲಿನಂತೆ ಬರೆದುಕೊಟ್ಟು ಕೈಜೋಡಿಸಿ ನಮಸ್ಕಾರ ಮಾಡುವನು.

೩೩–೩೭. ಎಲೈ ದ್ವಿಜೋತ್ತಮರೆ! ರಾಮನಿತ್ತ ಹಿಂದಿನ ವೃತ್ತಿಯನ್ನು ತಿರುಗಿ ಪಡೆದು ಈ ಬಲಕಂಕುಳಿನ ಕೂದಲನ್ನು ಎಸೆಯಿರಿ. ಆಗ ಅವನ ಸೈನ್ಯವೂ, ಮನೆಗಳೂ, ಬೊಕ್ಕಸವೂ, ಪುತ್ರಪೌತ್ರಾದಿಗಳೂ ಬೆಂಕಿಯಿಂದ ಕೂಡಲೆ ಬಿಡಲ್ಪಟ್ಟು ಮೊದಲಿನಂತೆ ಕಾಣಿಸುವುವು" ಎಂದನು. ಬ್ರಾಹ್ಮಣರು ಹನುಮಂತನ ಅಮೃತರೂಪವಾದ ಈ ಮಾತನ್ನು ಕೇಳಿ ಸಂತೋಷಗೊಂಡು ಕುಣಿದರು, ಅತ್ಯಂತವಾಗಿ ಹಾಡಿದರು. ಜಯಕಾರಮಾಡಿದರು. ಕೆಲವರು ಪರಸ್ಪರವಾಗಿ ನಕ್ಕರು. ರೋಮಾಂಚಗೊಂಡು ಬಹುವಾಗಿ ಅವನನ್ನು ಸ್ತುತಿಸಿದರು. ಕೆಲವರು ಔತ್ಸುಕ್ಯದಿಂದ ಅವನ ಬಾಲವನ್ನು ಹಿಡಿದುಕೊಂಡು ಮುದ್ದಿಟ್ಟರು.

CC-0. Jangamwadi Math Collection. Digitized by eGangotri

ಬ್ರೂತೇಽನ್ಯೋ ಮಮ ಯತ್ನೇನ ಕಾರ್ಯಂ ನಿಯತಮೇವ ಹಿ ।
ಅನ್ಯೋ ಬ್ರೂತೇ ಮಹಾಭಾಗ ಮಯೇದಂ ಕೃತಮಿತ್ಯುತ ॥ ೩೮ ॥
ತತಃ ಪ್ರೋವಾಚ ಹನುಮಾಂಸ್ತ್ರಿರಾತ್ರಂ ಸ್ಥೀಯತಾಮಿಹ ।
ರಾಮತೀರ್ಥಸ್ಯ ಚ ಫಲಂ ಯಥಾ ಪ್ರಾಪ್ಸ್ಯಥ ವಾಡವಾಃ ॥ ೩೯ ॥
ತಥೇತ್ಯುಕ್ತ್ವಾಽಥ ತೇ ವಿಪ್ರಾ ಬ್ರಹ್ಮಯಜ್ಞಂ ಪ್ರಚಕ್ರಿರೇ ।
ಬ್ರಹ್ಮಘೋಷೇಣ ಮಹತಾ ತದ್ವನಂ ಬಧಿರಂ ಕೃತಂ ॥ ೪೦ ॥
ಸ್ಥಿತ್ವಾ ತ್ರಿರಾತ್ರಂ ತೇ ವಿಪ್ರಾ ಗಮನೇ ಕೃತಬುದ್ಧಯಃ ।
ರಾತ್ರೌ ಹನುಮತೋಽಗ್ರೇ ತ ಇದಮೂಚುಃ ಸುಭಕ್ತಿತಃ ॥ ೪೧ ॥

ಬ್ರಾಹ್ಮಣಾ ಊಚುಃ:—

ವಯಂ ಪ್ರಾತರ್ಗಮಿಷ್ಯಾಮೋ ಧರ್ಮಾರಣ್ಯಂ ಸುನಿರ್ಮಲಂ ।
ನ ವಿಸ್ಮಾರ್ಯಾ ವಯಂ ತಾತ ಕ್ಷಮ್ಯತಾಂ ಕ್ಷಮ್ಯತಾಮಿತಿ ॥ ೪೨ ॥
ತತೋ ವಾಯುಸುತೋ ರಾಜನ್ಪರ್ವತಾನ್ಮಹತೀಂ ಶಿಲಾಂ ।
ಬೃಹತೀಂ ಚ ಚತುಃಶಾಲಾಂ ದಶಯೋಜನಮಾಯತೀಂ ॥ ೪೩ ॥
ಅಸ್ತೀರ್ಯ ಪ್ರಾಹ ತಾನ್ವಿಪ್ರಾಂಛಿಲಾಯಾಂ ದ್ವಿಜಸತ್ತಮಾಃ ।
ರಕ್ಷ್ಯಮಾಣಾ ಮಯಾ ವಿಪ್ರಾಃ ಶಯಿಧ್ವಂ ವಿಗತಜ್ವರಾಃ ॥ ೪೪ ॥
ಇತಿ ಶ್ರುತ್ವಾ ತತಃ ಸರ್ವೇ ನಿದ್ರಾಮಾಪುಃ ಸುಖಪ್ರದಾಂ ।
ಏವಂ ತೇ ಕೃತಕೃತ್ಯಾಸ್ತು ಭೂತ್ವಾ ಸುಪ್ತಾ ನಿಶಾಮುಖೇ ॥ ೪೫ ॥

---

೩೮. ಒಬ್ಬನು "ಇದು ನನ್ನ ಪ್ರಯತ್ನದಿಂದಾಯಿತು" ಎಂದನು. ಮತ್ತೊಬ್ಬನು "ಇದನ್ನು ನಾನು ಮಾಡಿದೆ"ನೆಂದನು.

೩೯. ಅನಂತರ ಹನುಮಂತನು "ಬ್ರಾಹ್ಮಣರೆ! ನೀವು ಮೂರುರಾತ್ರಿ ಇಲ್ಲಿರಿ. ಅದರಿಂದ ನಿಮಗೆ ರಾಮತೀರ್ಥದ ಫಲವು ಲಭಿಸುವುದು" ಎಂದನು.

೪೦. ಬ್ರಾಹ್ಮಣರು ಅವನ ಮಾತನ್ನೊಪ್ಪಿ ಬ್ರಹ್ಮಯಜ್ಞವನ್ನು ಆರಂಭಿಸಿದರು. ಅವರ ವೇದಘೋಷದಿಂದ ಆ ವನವು ಕಿವುಡಾಯಿತು.

೪೧. ಮೂರುರಾತ್ರಿ ಅವರಲ್ಲಿದ್ದು ಹೊರಡಲುದ್ಯುಕ್ತರಾಗಿ ರಾತ್ರಿಯಲ್ಲಿ ಹನುಮಂತನನ್ನು ಕಂಡು ಭಕ್ತಿಯಿಂದ ಹೀಗೆಂದರು.

೪೨. ಬ್ರಾಹ್ಮಣರು ಹೇಳುತ್ತಾರೆ:—ತಾತ! ನಾವು ನಿರ್ಮಲವಾದ ಧರ್ಮಾರಣ್ಯಕ್ಕೆ ಹಿಂದಿರುಗುವೆವು. ನಮ್ಮನ್ನು ಮರೆಯಬೇಡ. ಕ್ಷಮಿಸು.

೪೩–೪೪. ಬಳಿಕ ಆಂಜನೇಯನು ಪರ್ವತದಿಂದ ಹತ್ತುಯೋಜನ ವಿಶಾಲವಾದ ದೊಡ್ಡ ಶಿಲೆಯನ್ನು ತಂದುಹಾಸಿ "ಬ್ರಾಹ್ಮಣರೆ! ನಾನು ರಕ್ಷಿಸುತ್ತೇನೆ. ನೀವು ವ್ಯಥೆಯಿಲ್ಲದೆ ಇದರಲ್ಲಿ ಮಲಗಿರಿ" ಎಂದನು.

೪೫. ಇದನ್ನು ಕೇಳಿ ಆ ದ್ವಿಜರೆಲ್ಲರೂ ಕೃತಕೃತ್ಯರಾಗಿ ಆ ಶಿಲೆಯಲ್ಲಿ ರಾತ್ರಿ ಮಲಗಿ ಸುಖನಿದ್ರೆಗೈದರು.

CC-0. Jangamwadi Math Collection. Digitized by eGangotri

ಕೃಪಾಲುಃ ಸ ಚ ರುದ್ರಾತ್ಮಾ ರಾಮಶಾಸನಪಾಲಕಃ ।
ರಕ್ಷಣಾರ್ಥಂ ಹಿ ವಿಪ್ರಾಣಾಮತಿಷ್ಠಚ್ಚ ಧರಾತಲೇ ॥ ೪೬ ॥
ವ್ಯಾಸ ಉವಾಚ :—
ಅರ್ಧರಾತ್ರೇ ತು ಸಂಪ್ರಾಪ್ತೇ ಸರ್ವೇ ನಿದ್ರಾಮುಪಾಗತಾಃ ।
ತಾತಂ ಸಂಪ್ರಾರ್ಥಯಾಮಾಸ ಕೃತಾನುಗ್ರಹಕೋ ಭವಾನ್ ॥ ೪೭ ॥
ಸಮೀರಣ ದ್ವಿಜಾನೇತಾನ್ಸ್ವಾನಂ ಸ್ವಂ ಪ್ರಾಪಯಸ್ವ ಭೋಃ ।
ತತೋ ನಿದ್ರಾಭಿಭೂತಾಂಸ್ತಾನ್ವಾಯುಪುತ್ರಪ್ರಣೋದಿತಃ ॥ ೪೮ ॥
ಸಮುದ್ಧೃತ್ಯ ಶಿಲಾಂ ತಾಂ ತು ಪಿತಾ ಪುತ್ರೇಣ ಭಾರತ ।
ವಿಶಿಷ್ಟೋ ಯಾಪಯಾಮಾಸ ಸ್ವಸ್ಥಾನಂ ದ್ವಿಜಸತ್ತಮಾನ್ ॥ ೪೯ ॥
ಷಡ್ಭಿರ್ಮಾಸೈಶ್ಚ ಯಃ ಪಂಥಾ ಅತಿಕ್ರಾಂತೋ ದ್ವಿಜಾತಿಭಿಃ ।
ತ್ರಿಭಿರೇವ ಮುಹೂರ್ತೈಸ್ತು ಧರ್ಮಾರಣ್ಯಮವಾಪ್ತವಾನ್ ॥ ೫೦ ॥
ಭ್ರಮಮಾಣಾಂ ಶಿಲಾಂ ಜ್ಞಾತ್ವಾ ವಿಪ್ರ ಏಕೋ ದ್ವಿಜಾಽಗ್ರತಃ ।
ವಾತ್ಸ್ಯಗೋತ್ರಸಮುತ್ಪನ್ನೋ ಲೋಕಾನ್ಸಂಗೀತವಾನ್ಕಲಂ ॥ ೫೧ ॥
ಗೀತಾನಿ ಗಾಯನೋಕ್ತಾನಿ ಶ್ರುತ್ವಾ ವಿಸ್ಮಯಮಾಯಯುಃ ।
ಪ್ರಭಾತೇ ಸುಪ್ರಸನ್ನೇ ತು ಉದತಿಷ್ಠನ್ಪರಸ್ಪರಂ ॥ ೫೨ ॥
ಊಚುಸ್ತೇ ವಿಸ್ಮಿತಾಃ ಸರ್ವೇ ಸ್ವಪ್ನೋಽಯಂ ವಾಽಥ ವಿಭ್ರಮಃ ।
ಸ ಸಂಭ್ರಮಾಃ ಸಮುತ್ಥಾಯ ದದೃಶುಃ ಸತ್ಯಮಂದಿರಂ ॥ ೫೩ ॥

---

೪೬. ದಯಾಳುವೂ, ಭಯಂಕರರೂಪನೂ, ರಾಮನ ಶಾಸನವನ್ನು ಕಾಪಾಡುವವನೂ ಆದ ಆಂಜನೇಯನು ತಾನು ವಿಪ್ರರ ರಕ್ಷಣೆಗಾಗಿ ಭೂಮಿಯಲ್ಲಿ ನಿಂತನು.

೪೭–೪೯. ವ್ಯಾಸನು ಹೇಳುತ್ತಾನೆ:—ಆ ಬ್ರಾಹ್ಮಣರೆಲ್ಲರೂ ನಿದ್ರಿಸಿರಲು ಆಂಜನೇಯನು ಅರ್ಧರಾತ್ರಿಯಲ್ಲಿ ತಂದೆಯಾದ ವಾಯುವನ್ನು ಕುರಿತು "ನೀನು ದಯೆಮಾಡಿ ಈ ಬ್ರಾಹ್ಮಣರನ್ನು ಅವರ ಸ್ಥಳಕ್ಕೆ ಸೇರಿಸು" ಎಂದು ಪ್ರಾರ್ಥಿಸಲು ವಾಯುದೇವನು ಮಗನು ಹೇಳಿದಂತೆ ಆ ಶಿಲೆಯನ್ನು ಎತ್ತಿ ಎಲ್ಲ ಬ್ರಾಹ್ಮಣರನ್ನೂ ಅವರ ಸ್ಥಾನಕ್ಕೆ ಸಾಗಿಸಿದನು.

೫೦. ಆ ಬ್ರಾಹ್ಮಣರು ತಾವು ಆರುತಿಂಗಳಿಂದ ನಡೆದ ದಾರಿಯನ್ನು ಮೂರು ಮುಹೂರ್ತಗಳಲ್ಲಿ ದಾಟಿ ಧರ್ಮಾರಣ್ಯವನ್ನು ಸೇರಿದರು.

೫೧. ವಾತ್ಸ್ಯಗೋತ್ರದಲ್ಲಿ ಹುಟ್ಟಿದ ಒಬ್ಬ ಬ್ರಾಹ್ಮಣನು ಶಿಲೆಯು ತಿರುಗುವುದನ್ನು ತಿಳಿದು ಬ್ರಾಹ್ಮಣರ ಮುಂದೆ ಇಂಪಾಗಿ ಹಾಡಿದನು.

೫೨–೫೩. ಆ ಹಾಡನ್ನು ಕೇಳಿ ಎಲ್ಲರೂ ಅತ್ಯಂತ ಆಶ್ಚರ್ಯಗೊಂಡರು. ಬೆಳಗ್ಗೆ ಎದ್ದು ಸತ್ಯಮಂದಿರವನ್ನು ಕಂಡು ಆಶ್ಚರ್ಯದಿಂದ ಇದು ಸ್ವಪ್ನವೊ? ಅಥವಾ ಭ್ರಾಂತಿಯೊ? ಎಂದು ಪರಸ್ಪರ ಮಾತಾಡಿಕೊಂಡರು.

CC-0. Jangamwadi Math Collection. Digitized by eGangotri

ಅಂತರ್ಬುದ್ಧ್ಯಾ ಸಮಾಲೋಕ್ಯ ಪ್ರಭಾವೋ ವಾಯುಜಸ್ಯ ಚ ।
ಶ್ರುತ್ವಾ ವೇದಧ್ವನಿಂ ವಿಪ್ರಾಃ ಪರಂ ಹರ್ಷಮುಪಾಗತಾಃ ॥ ೫೪ ॥
ಗ್ರಾಮೀಣಾಶ್ಚ ತತೋ ಲೋಕಾ ದೃಷ್ಟ್ವಾ ತು ಮಹತೀಂ ಶಿಲಾಂ ।
ಅದ್ಭುತಂ ಮೇನಿರೇ ಸರ್ವೇ ಕಿಮಿದಂ ಕಿಮಿದಂ ತ್ವಿತಿ ॥ ೫೫ ॥
ಗೃಹೇ ಗೃಹೇ ಹಿ ತೇ ಲೋಕಾಃ ಪ್ರವದಂತಿ ತಥಾದ್ಭುತಂ ।
ಬ್ರಾಹ್ಮಣೈಃ ಪೂರ್ಯಮಾಣಾ ಸಾ ಶಿಲಾ ಚ ಮಹತೀ ಶುಭಾ ॥ ೫೬ ॥
ಅಶುಭಾ ವಾ ಶುಭಾ ವಾಽಪಿ ನ ಜಾನೀಮೋ ವಯಂ ಕಿಲ ।
ಸಂವದಂತೇ ತತೋ ಲೋಕಾಃ ಪರಸ್ಪರಮಿದಂ ವಚಃ ॥ ೫೭ ॥

ವ್ಯಾಸ ಉವಾಚ :—

ತತೋ ದ್ವಿಜಾನಾಂ ತೇ ಪುತ್ರಾಃ ಪೌತ್ರಾಶ್ಚೈವ ಸಮಾಗತಾಃ ।
ಊಚುಸ್ತೇ ದಿಷ್ಟ್ಯಾ ಭೋ ವಿಪ್ರಾ ಆಗತಾಃ ಪಥಿಕಾ ದ್ವಿಜಾಃ ॥ ೫೮ ॥
ತೇ ತು ಸಂತುಷ್ಟಮನಸಾ ಸನ್ಮುಖಾಃ ಪ್ರಯಯುರ್ಮುದಾ ।
ಪ್ರತ್ಯುತ್ಥಾನಾಽಭಿವಾದಾಭ್ಯಾಂ ಪರಿರಂಭಣಕಂ ತಥಾ ॥ ೫೯ ॥
ಆಘ್ರಾಣಕಾದೀಂಶ್ಚ ಕೃತ್ವಾ ಯಥಾಯೋಗ್ಯಂ ಪ್ರಪೂಜ್ಯ ಚ ।
ಸರ್ವಂ ವಿಸ್ತಾರ್ಯ ಕಥಿತಂ ಶೀಘ್ರಮಾಗಮನಾತ್ಮನಃ ॥ ೬೦ ॥
ತತಃ ಸಂಪೂಜ್ಯ ತಾನ್ಸರ್ವಾನ್ಗಂಧತಾಂಬೂಲಕುಂಕುಮೈಃ ।
ಶಾಂತಿಪಾಠಂ ಪಠಂತಸ್ತೇ ಹೃಷ್ಟಾ ನಿಜಗೃಹಾನ್ಯಯುಃ ॥ ೬೧ ॥

---

೫೪–೫೫. ಬಳಿಕ ಜ್ಞಾನದೃಷ್ಟಿಯಿಂದ ಹನೂಮಂತನ ಪ್ರಭಾವದಿಂದ ಆಗಿರುವ ಆ ಕಾರ್ಯವನ್ನರಿತು ಅಲ್ಲಿ ಬ್ರಾಹ್ಮಣರ ವೇದಘೋಷವನ್ನು ಕೇಳಿ ಬಹಳ ಸಂತೋಷಗೊಂಡರು. ಗ್ರಾಮದವರು ಆ ದೊಡ್ಡ ಶಿಲೆಯನ್ನು ಕಂಡು ಇದೇನೆಂದು ಅಚ್ಚರಿಗೊಂಡರು.

೫೬–೫೭. "ಬ್ರಾಹ್ಮಣರಿಂದ ತುಂಬಿದ ಈ ದೊಡ್ಡ ಶಿಲೆಯು ಒಳ್ಳೆಯದ ನ್ನುಂಟುಮಾಡುವುದೊ ಅಥವಾ ಕೆಟ್ಟದನ್ನುಂಟುಮಾಡುವುದೊ ನಾವರಿಯೆವು" ಎಂದು ಪ್ರತಿ ಮನೆಯಲ್ಲಿಯೂ ಜನರು ಪರಸ್ಪರ ಮಾತಾಡಿಕೊಳ್ಳುತ್ತಿದ್ದರು.

೫೮–೬೧. ವ್ಯಾಸನು ಹೇಳುತ್ತಾನೆ:—ಬಳಿಕ ಆ ಬ್ರಾಹ್ಮಣರ ಮಕ್ಕಳೂ, ಮೊಮ್ಮಕ್ಕಳೂ ಬಂದು ಬಂದು, "ಬಹುದೂರ ಪ್ರಯಾಣಮಾಡಿದ ನೀವು ಅದೃಷ್ಟ ವಶದಿಂದ ಬಂದಿರಲ್ಲ!" ಎಂದು ಸಂತೋಷದಿಂದ ಪ್ರತ್ಯುತ್ಥಾನ, ನಮಸ್ಕಾರ, ಆಲಿಂಗನ, ಮಸ್ತಕಾಘ್ರಾಣ ಮೊದಲಾದುವುಗಳನ್ನು ಮಾಡಿ ವಿಧಿಯಂತೆ ಗಂಧಾದಿಗಳಿಂದ ಪೂಜಿಸಿ ವಿಸ್ತಾರವಾಗಿ ಹೇಳಿದ ಅವರ ಆಗಮನ ಕ್ರಮವನ್ನು ಕೇಳಿ ಶಾಂತಿಪಾಠವನ್ನು ಪಠಿಸುತ್ತ ಸಂತೋಷದಿಂದ ತಮ್ಮ ಮನೆಗಳಿಗೆ ಹೊರಟುಹೋದರು.

CC-0. Jangamwadi Math Collection. Digitized by eGangotri

ಆನಂದಾಯಾ ಮಹಾಪೀಠೇ ಪ್ರಾತಃ ಪಾಂಥಾಃ ಸಮುತ್ಥಿತಾಃ ।
ದದೃಶುಸ್ತೇ ಮಹಾಸ್ಥಾನಂ ಸೋತ್ಕಂಠಾ ಹರ್ಷಪೂರಿತಾಃ ॥ ೬೨ ॥
ಆಶ್ಚರ್ಯಗಂ ಪರಮಂ ಪ್ರಾಪುಃ ಕಿಮೇತತ್ಸ್ಥಾನಮುತ್ತಮಂ ।
ಅಯಂ ತು ದಕ್ಷಿಣದ್ವಾರೇ ಶಾಂತಿಪಾಠೋಽತ್ರ ಪಠ್ಯತೇ ॥ ೬೩ ॥
ಗೃಹಾ ರಮ್ಯಾಃ ಪ್ರದೃಶ್ಯಂತೇ ಶಚೀಪತಿಗೃಹೋಪಮಾಃ ।
ಪ್ರಾಸಾದಾಃ ಕುಲಮಾತೄಣಾಂ ದೃಶ್ಯಂತೇ ಚಾಽಗ್ನಿಶೋಭನಾಃ ॥ ೬೪ ॥
ಏವಂ ಬ್ರುವತ್ಸು ವಿಪ್ರೇಷು ಮಹಾಶಕ್ತಿ ಪ್ರಪೂಜನೇ ।
ಆಗತೋ ಬ್ರಾಹ್ಮಣೋಽಪಶ್ಯತ್ತತ್ರ ವಿಪ್ರಕದಂಬಕಂ ॥ ೬೫ ॥
ಹರ್ಷಿತೋ ಭಾವಿತಸ್ತತ್ರ ಯತ್ರ ವಿಪ್ರಾಃ ಸಭಾಸದಃ ।
ಉವಾಚ ದಿಷ್ಟ್ಯಾ ಭೋ ವಿಪ್ರಾ ಹ್ಯಾಗತಾಃ ಪಥಿಕಾ ದ್ವಿಜಾಃ ॥ ೬೬ ॥
ಪ್ರತ್ಯುತ್ತಸ್ಥುಸ್ತತೋ ವಿಪ್ರಾಃ ಪೂಜಾಂಗೃಹ್ಯ ಸಮಾಗತಾಃ ।
ಪ್ರತ್ಯುತ್ಥಾನಾಽಭಿವಾದೌ ಚಾಽಕುರ್ವಂಸ್ತೇ ಚ ಪರಸ್ಪರಂ ॥ ೬೭ ॥
ತೇ ತೇ ಸಂಪೂಜ್ಯ ವೇಗಾತ್ತು ಯಥಾಯೋಗ್ಯಂ ಯಥಾವಿಧಿ ।
ಹರೀಶ್ವರಸ್ಯ ಯದ್ವೃತ್ತಂ ವಿಪ್ರಾಗ್ರೇ ಸಂಪ್ರಕಾಶಿತಂ ॥ ೬೮ ॥
ಪಥಿಕಾನಾಂ ವಚಃ ಶ್ರುತ್ವಾ ಹರ್ಷಪೂರ್ಣಾ ದ್ವಿಜೋತ್ತಮಾಃ ।
ಶಾಂತಿಪಾಠಂ ಪಠಂತಸ್ತೇ ಹೃಷ್ಟಾ ನಿಜಗೃಹಾನ್ಯಯುಃ ॥ ೬೯ ॥

---

೬೨. ಬೆಳಗ್ಗೆ ಆ ಬ್ರಾಹ್ಮಣರು ಎದ್ದು ಆನಂದಾಪೀಠದಲ್ಲಿರುವ ಆ ಮಹಾಸ್ಥಾನವನ್ನು ಕಂಡು ಅತ್ಯಂತ ಸಂತೋಷಗೊಂಡರು.

೬೩. ಆಶ್ಚರ್ಯಗೊಂಡು "ಈ ಸ್ಥಳವಾವುದು? ಇದರ ಬಲಗಡೆಯಲ್ಲಿ ಶಾಂತಿಪಾಠವು ಪಠಿಸಲ್ಪಡುತ್ತಿದೆ.

೬೪. ಇಂದ್ರನ ಮನೆಯಂತಿರುವ ರಮ್ಯಭವನಗಳೂ, ಅಗ್ನಿಯಂತೆ ಬಹು ಮನೋಹರವಾಗಿ ಬೆಳಗುವ ಕುಲಮಾತೆಯರ ಪ್ರಾಸಾದಗಳೂ ಕಾಣುತ್ತಿವೆ."

೬೫. ಹೀಗೆ ಅವರು ಮಾತನಾಡಿಕೊಳ್ಳುತ್ತಿರಲು ಮಹಾಶಕ್ತಿಪೂಜೆಗೆ ಬಂದ ಬ್ರಾಹ್ಮಣರು ಅವರ ಗುಂಪನ್ನು ಕಂಡರು.

೬೬. ಅವರು ಅಲ್ಲಿ ಸಭೆಯಲ್ಲಿ ಕುಳಿತಿರುವ ಬ್ರಾಹ್ಮಣರನ್ನು ಕಂಡು "ಬಹು ದೂರ ಪ್ರಯಾಣಮಾಡಿದ ನೀವು ಅದೃಷ್ಟವಶದಿಂದ ಬಂದಿರಿ" ಎಂದರು.

೬೭–೬೮. ಆ ಬ್ರಾಹ್ಮಣರು ಮಹಾಶಕ್ತಿ ಪೂಜಕರನ್ನು ಪರಸ್ಪರ ಪ್ರತ್ಯುತ್ಥಾನಾದಿಗಳಿಂದ ಸನ್ಮಾನಿಸಿ ಅವರಿಂದ ಪೂಜೆಯನ್ನು ಪರಿಗ್ರಹಿಸಿ ತಾವೂ ವಿಧಿಯಂತೆ ಅವರನ್ನು ಪೂಜಿಸಿ ಆಂಜನೇಯನ ವೃತ್ತಾಂತವನ್ನು ತಿಳಿಸಿದರು.

೬೯. ಅವರು ಪಥಿಕರಾದ ಈ ಬ್ರಾಹ್ಮಣರ ಮಾತನ್ನು ಕೇಳಿ ಸಂತೋಷಗೊಂಡು ಶಾಂತಿಪಾಠವನ್ನು ಪಠಿಸುತ್ತ ಮನೆಗೆ ತೆರಳಿದರು.



CC-0. Jangamwadi Math Collection. Digitized by eGangotri

ವಿಮೃಶ್ಯ ಮಿಲಿತಾಃ ಪ್ರಾತರ್ಜ್ಯೋತಿರ್ವಿದ್ಭಿಃ ಪ್ರತಿಷ್ಠಿತಾಃ ।
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಕಾನ್ಯಕುಬ್ಜಂ ಗತಾ ದ್ವಿಜಾಃ ॥ ೭೦ ॥
ದೋಲಾಭಿರ್ವಾಹಿತಾಃ ಕೇಚಿತ್ಕೇಚಿದಶ್ವೈ ರಥೈಸ್ತಥಾ ।
ಕೇಚಿತ್ತು ಶಿಬಿಕಾರೂಢಾ ನಾನಾವಾಹನಗಾಶ್ಚ ತೇ ॥ ೭೧ ॥
ತತ್ಪುರಂ ತು ಸಮಾಸಾದ್ಯ ಗಂಗಾಯಾಃ ಶೋಭನೇ ತಟೇ ।
ಅಕುರ್ವನ್ವಸತಿಂ ಧೀರಾಃ ಸ್ನಾನದಾನಾದಿ ಕರ್ಮ ಚ ॥ ೭೨ ॥
ಚರೇಣ ಕೇನಚಿದ್ದೃಷ್ಟಾಃ ಕಥಿತಾ ನೃಪಸನ್ನಿಧೌ ।
ಅಶ್ವಾಶ್ಚ ಬಹುಶೋ ದೋಲಾ ರಥಾಶ್ಚ ಬಹುಶೋ ವೃಷಾಃ ॥ ೭೩ ॥
ವಿಪ್ರಾಣಾಮಿಹ ದೃಶ್ಯಂತೇ ಧರ್ಮಾರಣ್ಯನಿವಾಸಿನಾಂ ।
ನೂನಂ ತೇ ಚ ಸಮಾಯಾತಾ ನೃಪೇಣೋಕ್ತಂ ಮಮಾಗ್ರತಃ ॥ ೭೪ ॥
ಅಭಿಜ್ಞಾಪಯ ಮೇ ಪೂರ್ವಂ ಪ್ರೇಷಿತಾಃ ಕಪಿಸನ್ನಿಧೌ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ಬ್ರಾಹ್ಮಣಾನಾಂ ಪ್ರತ್ಯಾಗಮನವರ್ಣನಂ" ನಾಮ ಸಪ್ತತ್ರಿಂಶೋಽಧ್ಯಾಯಃ

---

೭೦. ತರುವಾಯ ಆ ಪಥಿಕಬ್ರಾಹ್ಮಣರು ಒಟ್ಟುಸೇರಿ ಜೋಯಿಸರೊಡನೆ ಆಲೋಚಿಸಿ ಬ್ರಾಹ್ಮಮುಹೂರ್ತದಲ್ಲಿ ಕಾನ್ಯಕುಬ್ಜಕ್ಕೆ ಹೊರಟರು.

೭೧. ಅವರಲ್ಲಿ ಕೆಲವರು ಮೇನವನ್ನೂ, ಕೆಲವರು ಕುದುರೆಗಳನ್ನೂ, ಕೆಲವರು ರಥಗಳನ್ನೂ, ಕೆಲವರು ಪಲ್ಲಕ್ಕಿಯನ್ನೂ ಏರಿ ನಾನಾ ವಾಹನಗಳಿಂದ ಪ್ರಯಾಣಮಾಡಿದರು.

೭೨. ಆ ಕಾನ್ಯಕುಬ್ಜವನ್ನು ಸೇರಿ ಗಂಗೆಯ ರಮ್ಯವಾದ ತೀರದಲ್ಲಿ ವಸತಿಯನ್ನು ಕಲ್ಪಿಸಿಕೊಂಡು ಸ್ನಾನದಾನಾದಿಕರ್ಮಗಳನ್ನು ಪೂರೈಸಿದರು.

೭೩–೭೫. ಆಗ ಒಬ್ಬ ದೂತನು ಇವರನ್ನು ಕಂಡು ರಾಜನ ಹತ್ತಿರ ಹೋಗಿ, "ಧರ್ಮಾರಣ್ಯವಾಸಿಗಳಾದ ಬ್ರಾಹ್ಮಣರ ಕುದುರೆಗಳೂ, ಮೇನಗಳೂ, ರಥಗಳೂ, ಎತ್ತುಗಳೂ ಬಹಳವಾಗಿ ಕಾಣುತ್ತಿವೆ" ಎಂದನು. ರಾಜನು ಹಿಂದೆ ಆಂಜನೇಯನ ಬಳಿಗೆ ಕಳುಹಿಸಿದ ಬ್ರಾಹ್ಮಣರು ಬಂದಿರಬೇಕೆಂದು ಹೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ಬ್ರಾಹ್ಮಣಪ್ರತ್ಯಾಗಮನ"ವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥಾಽಷ್ಟತ್ರಿಂಶೋಽಧ್ಯಾಯಃ

### ಬ್ರಾಹ್ಮಣಾನಾಂ ಶಾಸನವೃತ್ತಿಪ್ರಾಪ್ತಿವರ್ಣನಂ

ವ್ಯಾಸ ಉವಾಚ :—

ತತಃ ಪ್ರಭಾತೇ ವಿಮಲೇ ಕೃತಪೂರ್ವಾಹ್ನಿಕಕ್ರಿಯಾಃ ।
ಶುಭ್ರವಸ್ತ್ರಪರೀಧಾನಾಃ ಫಲಹಸ್ತಾಃ ಪೃಥಕ್ಪೃಥಕ್ ॥ ೧ ॥
ರತ್ನಾಂಗದಾಢ್ಯದೋರ್ದಂಡಾ ಅಂಗುಲೀಯಕಭೂಷಿತಾಃ ।
ಕರ್ಣಾಭರಣಸಂಯುಕ್ತಾಃ ಸಮಾಜಗ್ಮುಃ ಪ್ರಹರ್ಷಿತಾಃ ॥ ೨ ॥
ರಾಜದ್ವಾರಂ ತು ಸಂಪ್ರಾಪ್ಯ ಸಂತಸ್ಥುರ್ಬ್ರಹ್ಮವಾದಿನಃ ।
ತಾನ್ದೃಷ್ಟ್ವಾ ರಾಜಪುತ್ರಸ್ತು ಈಷತ್ಪ್ರಹಸಿತೋ ಬಲೀ ॥ ೩ ॥
ರಾಮಂ ಚ ಹನುಮಂತಂ ಚ ಗತ್ವಾ ವಿಪ್ರಾಃ ಸಮಾಗತಾಃ ।
ಶ್ರೂಯತಾಂ ಮಂತ್ರಿಣಃ ಸರ್ವೇ ದೃಶ್ಯಂತೋ ದ್ವಿಜಸತ್ತಮಾನ್ ॥ ೪ ॥
ಏತದುಕ್ತ್ವಾ ತು ವಚನಂ ತೂಷ್ಣೀಂ ಭೂತ್ವಾ ಸ್ಥಿತೋ ನೃಪಃ ।
ತತೋ ದ್ವಿತ್ರಾ ದ್ವಿಜಾಃ ಸರ್ವೇ ಉಪವಿಷ್ಟಾಃ ಕ್ರಮಾತ್ತತಃ ॥ ೫ ॥
ಕ್ಷೇಮಂ ಪಪ್ರಚ್ಛುರ್ನೃಪತಿಂ ಹಸ್ತಿರಥಪದಾತಿಷು ।
ತತಃ ಪ್ರೋವಾಚ ನೃಪತಿರ್ವಿಪ್ರಾನ್ಪ್ರತಿ ಮಹಾಮನಾಃ ॥ ೬ ॥
ಅರ್ಹಂತಸ್ಯ ಪ್ರಸಾದೇನ ಸರ್ವತ್ರ ಕುಶಲಂ ಮಮ ।
ಸಾ ಜಿಹ್ವಾ ಯಾ ಜಿನಂ ಸ್ತೌತಿ ತೌ ಕರೌ ಯೌ ಜಿನಾರ್ಚನೌ ॥ ೭ ॥

---

### ಕನ್ನಡದ ಅನುವಾದ

#### ಬ್ರಾಹ್ಮಣ ಶಾಸನವೃತ್ತಿಪ್ರಾಪ್ತಿವರ್ಣನ

೧–೫. ವ್ಯಾಸನು ಹೇಳುತ್ತಾನೆ:—ಬಳಿಕ ಬೆಳಗ್ಗೆ ಆ ಬ್ರಾಹ್ಮಣರು ಪ್ರಾತಸ್ಸಂಧ್ಯೋಪಾಸನೆಮಾಡಿ ಮಂಗಳವಸ್ತ್ರಗಳನ್ನುಟ್ಟು ಫಲಗಳನ್ನು ಕೈಯಲ್ಲಿ ಹಿಡಿದು ರತ್ನದ ನಾಗಮುರಿಗೆ, ಉಂಗುರ, ಕರ್ಣಕುಂಡಲ ಇವುಗಳಿಂದ ಭೂಷಿತರಾಗಿ ಸಂತೋಷದಿಂದ ರಾಜದ್ವಾರಕ್ಕೆ ಬಂದು ನಿಂತರು. ಅವರನ್ನು ನೋಡಿ ರಾಜನು ಸ್ವಲ್ಪ ನಕ್ಕು, "ಮಂತ್ರಿಗಳೆ! ಕೇಳಿರಿ. ಬ್ರಾಹ್ಮಣರು ರಾಮಾಂಜನೇಯರ ಬಳಿಗೆ ಹೋಗಿಬಂದಿದ್ದಾರೆ ನೋಡಿರಿ" ಎಂದು ಹೇಳಿ ಸುಮ್ಮನಾದನು. ಅನಂತರ ಬ್ರಾಹ್ಮಣರು ಇಬ್ಬಿಬ್ಬರೂ ಮೂವರು ಮೂವರೂ ಒಟ್ಟಾಗಿ ಕ್ರಮವಾಗಿ ಕುಳಿತುಕೊಂಡರು.

೬. ರಾಜನನ್ನು "ನೃಪ! ಆನೆ, ರಥ, ಕಾಲಾಳುಗಳೊಡನೆ ನೀನು ಕ್ಷೇಮವೆ?" ಎಂದು ಕೇಳಲು, ಅವನು ಬ್ರಾಹ್ಮಣರನ್ನು ಕುರಿತು ಇಂತೆಂದನು.

೭–೧೦. "ಅರ್ಹಂತನ ಅನುಗ್ರಹದಿಂದ ನಾನು ಎಲ್ಲ ವಿಷಯದಲ್ಲಿಯೂ ಕ್ಷೇಮವಾಗಿರುವೆನು. ಜಿನನನ್ನು ಸ್ತುತಿಸುವ ನಾಲಿಗೆಯೇ ನಾಲಿಗೆಯು.

CC-0. Jangamwadi Math Collection. Digitized by eGangotri

ಸಾ ದೃಷ್ಟಿರ್ಯಾ ಜಿನೇ ಲೀನಾ ತನ್ಮನೋ ಯಜ್ಜಿನೇ ರತಂ ।
ದಯಾ ಸರ್ವತ್ರ ಕರ್ತವ್ಯಾ ಜೀವಾತ್ಮಾ ಪೂಜ್ಯತೇ ಸದಾ ॥ ೮ ॥
ಯೋಗಶಾಲಾ ಹಿ ಗಂತವ್ಯಾ ಕರ್ತವ್ಯಂ ಗುರುವಂದನಂ ।
ನಚಕಾರಂ ಮಹಾಮಂತ್ರಂ ಜಪಿತವ್ಯಮಹರ್ನಿಶಂ ॥ ೯ ॥
ಪಂಚೂಷಣಂ ಹಿ ಕರ್ತವ್ಯಂ ದಾತವ್ಯಂ ಶ್ರಮಣೇ ಸದಾ ।
ಶ್ರುತ್ವಾ ವಾಕ್ಯಂ ತಪೋ ವಿಪ್ರಾಸ್ತಸ್ಯ ದಂತಾನಪೀಡಯನ್ ॥ ೧೦ ॥
ವಿಮುಚ್ಯ ದೀರ್ಘನಿಃಶ್ವಾಸಮೂಚುಸ್ತೇ ನೃಪತಿಂ ಪ್ರತಿ ।
ರಾಮೇಣ ಕಥಿತಂ ರಾಜನ್ಧೀಮತಾ ಚ ಹನೂಮತಾ ॥ ೧೧ ॥
ದೀಯತಾಂ ವಿಪ್ರವೃತ್ತಿಂ ಚ ಧರ್ಮಿಷ್ಠೋಽಸಿ ಧರಾತಲೇ ।
ಜ್ಞಾಯತೇ ತವ ದತ್ತಾ ಸ್ಯಾನ್ಮದ್ದತ್ತಾ ನೈವ ನೈವ ಚ ॥ ೧೨ ॥
ರಕ್ಷಸ್ವ ರಾಮವಾಕ್ಯಂ ತ್ವಂ ಯತ್ಕೃತ್ವಾ ತ್ವಂ ಸುಖೀಭವ ॥ ೧೩ ॥

ರಾಜೋವಾಚ :—

ಯತ್ರ ರಾಮಹನೂಮಂತೌ ಯಾಂತು ಸರ್ವೇಽಪಿ ತತ್ರ ವೈ ।
ರಾಮೋ ದಾಸ್ಯತಿ ಸರ್ವಸ್ವಂ ಕಿಂ ಪ್ರಾಪ್ತಾ ಇಹ ವೈ ದ್ವಿಜಾಃ ॥ ೧೪ ॥
ನ ದಾಸ್ಯಾಮಿ ನ ದಾಸ್ಯಾಮಿ ಏಕಾಂ ಚೈವ ವರಾಟಿಕಾಂ ।
ನ ಗ್ರಾಮಂ ನೈವ ವೃತ್ತಿಂ ಚ ಗಚ್ಛಧ್ವಂ ಯತ್ರ ರೋಚತೇ ॥ ೧೫ ॥

---

ಅವನನ್ನು ಪೂಜಿಸುವ ಕೈಗಳೇ ಕೈಗಳು. ಅವನನ್ನು ಕಾಣುವ ಕಣ್ಣೇ ಕಣ್ಣು. ಅವನಲ್ಲಿ ಆಸಕ್ತವಾದ ಮನಸ್ಸೇ ಮನಸ್ಸು. ಸಕಲಪ್ರಾಣಿಗಳಲ್ಲಿಯೂ ದಯೆಯಿಡಬೇಕು. ಜೀವನನ್ನು ಯಾವಾಗಲೂ ಪೂಜಿಸಬೇಕು. ಯೋಗಶಾಲೆಗೆ ಹೋಗಿ ಗುರುಗಳನ್ನು ವಂದಿಸಬೇಕು. ಪ್ರತಿದಿನವೂ ನಚಕಾರ ಮಹಾಮಂತ್ರವನ್ನು ಜಪಿಸಬೇಕು. ಪಂಚೂಷಣವನ್ನು ಮಾಡಬೇಕು. ಶ್ರಮಣರಿಗೆ ಯಾವಾಗಲೂ ದಾನಮಾಡಬೇಕು" ಎಂದನು. ಬ್ರಾಹ್ಮಣರು ಅವನ ಮಾತನ್ನು ಕೇಳಿ ಹಲ್ಲುಗಳನ್ನು ಕಟಕಟನೆ ಕಡಿದರು.

೧೧–೧೩. ನಿಟ್ಟುಸಿರುಬಿಟ್ಟು ಅವರು ರಾಜನನ್ನು ಕುರಿತು, "ಮಹಾರಾಜ! 'ಬ್ರಾಹ್ಮಣರ ವೃತ್ತಿಯನ್ನು ಮರಳಿ ಕೊಡು. ನೀನು ಧರ್ಮಿಷ್ಠನಾಗಿದ್ದೀಯೆ. ಭೂಮಿಯಲ್ಲಿ ನೀನು ದಾನಮಾಡಿದ್ದೆಂದೇ ಅದು ಪ್ರಸಿದ್ಧಿಗೊಳ್ಳಲಿ. ನಾನು ಕೊಟ್ಟುದೆಂಬ ಪ್ರಸಿದ್ಧಿಬೇಡ' ಎಂದು ರಾಮಾಂಜನೇಯರು ಹೇಳಿದ್ದಾರೆ. ಆ ರಾಮನ ಮಾತನ್ನು ನಡಸಿ ಸುಖದಿಂದ ಬಾಳು" ಎಂದರು.

೧೪–೧೫. ರಾಜನು ಹೇಳುತ್ತಾನೆ:–ಅಯ್ಯಾ ದ್ವಿಜರೇ! ರಾಮಾಂಜನೇಯರಿರುವೆಡೆಗೇನೆ ನೀವು ತೆರಳಿರಿ. ನಿಮಗೆ ರಾಮನು ಎಲ್ಲವನ್ನೂ ಕೊಡುವನು. ಇಲ್ಲಿಗೆ ಏಕೆ ಬಂದಿರಿ? ನಿಮಗೆ ಗ್ರಾಮವನ್ನಾಗಲಿ, ವೃತ್ತಿಯನ್ನಾಗಲಿ, ಒಂದು ಕವಡೆಯನ್ನಾಗಲಿ ನಾನು ಕೊಡಲಾರೆ. ನಿಮಗೆ ಇಷ್ಟಬಂದಕಡೆಗೆ ಹೋಗಿರಿ.

CC-0. Jangamwadi Math Collection. Digitized by eGangotri

ತಚ್ಛ್ರುತ್ವಾ ದಾರುಣಂ ವಾಕ್ಯಂ ದ್ವಿಜಾಃ ಕೋಪಾಕುಲಾಸ್ತದಾ ।
ಸಹಸ್ವ ರಾಮಕೋಪಂ ಹಿ ಸಾಂಪ್ರತಂ ಚ ಹನೂಮತಃ ॥ ೧೬ ॥
ಇತ್ಯುಕ್ತ್ವಾ ಹನುಮದ್ದತ್ತಾ ವಾಮಕಕ್ಷೋದ್ಭವಾ ಪುಟೀ ।
ಪ್ರಕ್ಷಿಪ್ತಾ ಚಾಽಸ್ಯ ನಿಲಯೇ ವ್ಯಾವೃತ್ತಾ ದ್ವಿಜಸತ್ತಮಾಃ ॥ ೧೭ ॥
ಗತೇ ತದಾ ವಿಪ್ರಸಂಘೇ ಜ್ವಾಲಾಮಾಲಾಕುಲಂ ತ್ವಭೂತ್ ।
ಅಗ್ನಿಜ್ವಾಲಾಕುಲಂ ಸರ್ವಂ ಸಂಜಾತಂ ಚೈವ ತತ್ರ ಹಿ ॥ ೧೮ ॥
ದಹ್ಯಂತೇ ರಾಜವಸ್ತೂನಿ ಛತ್ರಾಣಿ ಚಾಮರಾಣಿ ಚ ।
ಕೋಶಾಗಾರಾಣಿ ಸರ್ವಾಣಿ ಆಯುಧಾಗಾರಮೇವ ಚ ॥ ೧೯ ॥
ಮಹಿಷ್ಯೋ ರಾಜಪುತ್ರಾಶ್ಚ ಗಜಾ ಅಶ್ವಾ ಹ್ಯನೇಕಶಃ ।
ವಿಮಾನಾನಿ ಚ ದಹ್ಯಂತೇ ದಹ್ಯಂತೇ ವಾಹನಾನಿ ಚ ॥ ೨೦ ॥
ಶಿಬಿಕಾಶ್ಚ ವಿಚಿತ್ರಾ ವೈ ರಥಾಶ್ಚೈವ ಸಹಸ್ರಶಃ ।
ಸರ್ವತ್ರ ದಹ್ಯಮಾನಂ ಚ ದೃಷ್ಟ್ವಾ ರಾಜಾಽಪಿ ವಿವ್ಯಥೇ ॥ ೨೧ ॥
ನ ಕೋಽಪಿ ತ್ರಾತಾ ತಸ್ಯಾಽಸ್ತಿ ಮಾನವಾ ಭಯವಿಕ್ಲವಾಃ ।
ನ ಮಂತ್ರಯಂತ್ರೈರ್ವಹ್ನಿಃ ಸ ಸಾಧ್ಯತೇ ನ ಚ ಮೂಲಿಕೈಃ ॥ ೨೨ ॥
ಕೌಟಿಲ್ಯಕೋಟಿನಾಶೀ ಚ ಯತ್ರ ರಾಮಃ ಪ್ರಕುಪ್ಯತೇ ।
ತತ್ರ ಸರ್ವೇ ಪ್ರಣಶ್ಯಂತಿ ಕಿಂ ತತ್ಕುಮಾರಪಾಲಕಃ ॥ ೨೩ ॥

---

೧೬–೧೭. ದಾರುಣವಾದ ಆ ಮಾತನ್ನು ಕೇಳಿ ಬ್ರಾಹ್ಮಣರು ಕುಪಿತರಾಗಿ "ದೊರೆಯೆ! ಈಗ ರಾಮಾಂಜನೇಯರ ಕೋಪವನ್ನು ಸಹಿಸು" ಎಂದು ಹನುಮಂತನಿತ್ತ ಎಡಕಂಕುಳಿನ ಕೂದಲನ್ನು ಅವನ ಮನೆಯಲ್ಲಿ ಎಸೆದು ಹಿಂದಿರುಗಿದರು.

೧೮. ಬ್ರಾಹ್ಮಣರು ಹೊರಟುಹೋಗಲು ಅಲ್ಲಿರುವ ಸಮಸ್ತವಸ್ತುಗಳೂ ಬೆಂಕಿಯ ಜ್ವಾಲೆಯಿಂದ ಉರಿದುವು.

೧೯–೨೨. ರಾಜನ ಛತ್ರಚಾಮರ, ಬೊಕ್ಕಸ, ಆಯುಧಶಾಲೆ, ರಾಣಿಯರು, ಕುಮಾರರು, ಆನೆ, ಕುದುರೆ, ವಿಮಾನ, ಪಲ್ಲಕಿ, ರಥ ಇವುಗಳೇ ಮೊದಲಾದ ಸಕಲವಸ್ತುಗಳೂ ಬೂದಿಯಾದುವು. ರಾಜನು ಸುಡುತ್ತಿರುವ ಅವುಗಳನ್ನು ಕಂಡು ಬಹಳ ವ್ಯಥೆಗೊಂಡನು. ಅವನನ್ನು ಯಾರೂ ಕಾಪಾಡುವವರಿರಲಿಲ್ಲ. ಅಲ್ಲಿದ್ದವರೆಲ್ಲರೂ ಭಯಗೊಂಡರು. ಮಂತ್ರ, ಯಂತ್ರ, ಮೂಲಿಕೆಗಳಿಂದ ಬೆಂಕಿಯನ್ನು ಆರಿಸಲಾಗಲಿಲ್ಲ.

೨೩. ಅನೇಕಕೋಟಿ ಕಪಟಗಳನ್ನು ನಾಶಮಾಡುವ ರಾಮನು ಕೋಪಗೊಂಡಲ್ಲಿ ಎಲ್ಲವೂ ಹಾಳಾಗುವುವೆಂದಮೇಲೆ ಕುಮಾರಪಾಲಕನ ವಿಷಯವನ್ನೇನು ಹೇಳಬೇಕು!

CC-0. Jangamwadi Math Collection. Digitized by eGangotri

ಸರ್ವಂ ತಜ್ಜ್ವಲಿತಂ ದೃಷ್ಟ್ವಾ ನಗ್ನಕ್ಷಪಣಕಾಸ್ತದಾ ।
ಧೃತ್ವಾ ಕರೇಣ ಪಾತ್ರಾಣಿ ನೀತ್ವಾ ದಂಡಾಂಛುಭಾನಪಿ ॥ ೨೪ ॥
ರಕ್ತಕಂಬಲಿಕಾಂ ಗೃಹ್ಯ ವೇಪಮಾನಾ ಮುಹುರ್ಮುಹುಃ ।
ಅನುಪಾನಹಿಕಾಶ್ಚೈವ ನಷ್ಟಾಃ ಸರ್ವೇ ದಿಶೋ ದಶ ॥ ೨೫ ॥
ಕೋಲಾಹಲಂ ಪ್ರಕುರ್ವಾಣಾಃ ಪಲಾಯಧ್ವಮಿತಿ ಬ್ರುವನ್ ।
ದಾಹಿತಾ ವಿಪ್ರಮುಖ್ಯೈಶ್ಚ ವಯಂ ಸರ್ವೇ ನ ಸಂಶಯಃ ॥ ೨೬ ॥
ಕೇಚಿಚ್ಚ ಭಗ್ನಪಾತ್ರಾಸ್ತೇ ಭಗ್ನದಂಡಾಸ್ತಥಾಪರೇ ।
ಪ್ರಣಷ್ಟಾಶ್ಚ ವಿವಸ್ತ್ರಾಸ್ತೇ ವೀತರಾಗ ಇತಿ ಬ್ರುವನ್ ॥ ೨೭ ॥
ಅರ್ಹಂತಮೇವ ಕೇಚಿಚ್ಚ ಪಲಾಯನಪರಾಯಣಾಃ ।
ತತೋ ವಾಯುಃ ಸಮಭವದ್ವಹ್ನಿಮಾಂದೋಲಯನ್ನಿವ ॥ ೨೮ ॥
ಪ್ರೇಷಿತೋ ವೈ ಹನುಮತಾ ವಿಪ್ರಾಣಾಂ ಪ್ರಿಯಕಾಮ್ಯಯಾ ।
ಧಾವನ್ಸ ನೃಪತಿಃ ಪಶ್ಚಾದಿತಶ್ಚೇತಶ್ಚ ವೈ ತದಾ ॥ ೨೯ ॥
ಪದಾತಿರೇಕಃ ಪ್ರರುದನ್ಕ್ವ ವಿಪ್ರಾ ಇತಿ ಜಲ್ಪಕಃ ।
ಲೋಕಾಚ್ಛ್ರುತ್ವಾ ತತೋ ರಾಜಾ ಗತಸ್ತತ್ರ ಯತೋ ದ್ವಿಜಾಃ ॥ ೩೦ ॥
ಗತ್ವಾ ತು ಸಹಸಾ ರಾಜನ್ಗೃಹೀತ್ವಾ ಚರಣೌ ತದಾ ।
ವಿಪ್ರಾಣಾಂ ನೃಪತಿರ್ಭೂಮೌ ಮೂರ್ಛಿತೋ ನ್ಯಪತತ್ತದಾ ॥ ೩೧ ॥

---

೨೪–೨೬. ಆಗ ಎಲ್ಲವೂ ಉರಿದು ಹೋಗುತ್ತಿರುವುದನ್ನು ಕಂಡು ದಿಗಂಬರ ಜೈನಸನ್ಯಾಸಿಗಳು ತಮ್ಮ ಪಾತ್ರೆಗಳನ್ನೂ, ದಂಡಗಳನ್ನೂ, ಕೆಂಪು ಕಂಬಳಿಗಳನ್ನೂ ತೆಗೆದುಕೊಂಡು ನಡುಗುತ್ತ ಪಾದರಕ್ಷೆಗಳಿಲ್ಲದೆ, "ಬ್ರಾಹ್ಮಣರು ನಮ್ಮನ್ನು ಸುಡುತ್ತಿದ್ದಾರೆ ಓಡಿರಿ." ಎಂದು ಕೂಗುತ್ತ ಹತ್ತುದಿಕ್ಕುಗಳಿಗೂ ಪಲಾಯನಮಾಡಿದರು.

೨೭–೩೧. ಕೆಲವರ ಪಾತ್ರೆಗಳು ಒಡೆದುವು. ಇನ್ನು ಕೆಲವರ ದಂಡಗಳು ಮುರಿದುವು. ಮತ್ತೆ ಕೆಲವರು ವಸ್ತ್ರಗಳನ್ನು ಕಳೆದುಕೊಂಡು, 'ಅರ್ಹಂತ!' ಎಂದು ಕೂಗುತ್ತ ಓಡತೊಡಗಿದರು. ಬಳಿಕ ಬ್ರಾಹ್ಮಣರಿಗೆ ಹಿತವನ್ನುಂಟು ಮಾಡುವ ಇಚ್ಛೆಯಿಂದ ಹನುಮಂತನು ಕಳುಹಿಸಿದ ಗಾಳಿಯು ಬೆಂಕಿಯನ್ನು ಉಜ್ವಲಗೊಳಿಸಲು ಅದು ಎತ್ತೆತ್ತಲೂ ಹರಡತೊಡಗಿತು. ಆ ರಾಜನು ಪಾದಚಾರಿಯಾಗಿ ಒಬ್ಬನೆ ಅಳುತ್ತಲೂ, ಬ್ರಾಹ್ಮಣರೆಲ್ಲಿ ಎಂದು ಕೇಳುತ್ತಲೂ ಇಲ್ಲಿ ಅಲ್ಲಿ ಓಡಾಡಿದನು. ಅನಂತರ ಜನರಿಂದ ಬ್ರಾಹ್ಮಣರಿರುವ ಸ್ಥಳವನ್ನು ತಿಳಿದು ಅಲ್ಲಿಗೆ ಕೂಡಲೆ ಹೋಗಿ ಅವರ ಕಾಲುಗಳನ್ನು ಹಿಡಿದು ಮೂರ್ಛೆಗೊಂಡು ನೆಲದಮೇಲೆ ಬಿದ್ದನು.

CC-0. Jangamwadi Math Collection. Digitized by eGangotri

ಉವಾಚ ವಚನಂ ರಾಜಾ ವಿಪ್ರಾನ್ವಿನಯತತ್ಪರಃ ।
ಜಪನ್ದಾಶರಥಿಂ ರಾಮಂ ರಾಮರಾಮೇತಿ ವೈ ಪುನಃ ॥ ೩೨ ॥
ತಸ್ಯ ದಾಸಸ್ಯ ದಾಸೋಽಹಂ ರಾಮಸ್ಯ ಚ ದ್ವಿಜಸ್ಯ ಚ ।
ಅಜ್ಞಾನತಿಮಿರಾಂಧೇನ ಜಾತೋಽಸ್ಮ್ಯಂಧೋ ಹಿ ಸಂಪ್ರತಿ ॥ ೩೩ ॥
ಅಂಜನಂ ಚ ಮಯಾ ಲಬ್ಧಂ ರಾಮನಾಮಮಹೌಷಧಂ ।
ರಾಮಂ ಮುಕ್ತ್ವಾ ಹಿ ಯೇ ಮರ್ತ್ಯಾ ಹ್ಯನ್ಯಂ ದೇವಮುಪಾಸತೇ ।
ದಹ್ಯಂತೇ ತೇಽಗ್ನಿನಾ ಸ್ವಾಮಿನ್ಯಥಾಽಹಂ ಮೂಢಚೇತನಃ ॥ ೩೪ ॥
ಹರಿರ್ಭಾಗೀರಥೀ ವಿಪ್ರಾ ವಿಪ್ರಾ ಭಾಗೀರಥೀ ಹರಿಃ ।
ಭಾಗೀರಥೀ ಹರಿರ್ವಿಪ್ರಾಃ ಸಾರಮೇಕಂ ಜಗತ್ತ್ರಯೇ ॥ ೩೫ ॥
ಸ್ವರ್ಗಸ್ಯ ಚೈವ ಸೋಪಾನಂ ವಿಪ್ರಾ ಭಾಗೀರಥೀ ಹರಿಃ ।
ರಾಮನಾಮ ಮಹಾರಜ್ಜ್ವಾ ವೈಕುಂಠೇ ಯೇನ ನೀಯತೇ ॥ ೩೬ ॥
ಇತ್ಯೇವಂ ಪ್ರಣಮನ್ರಾಜಾ ಪ್ರಾಂಜಲಿರ್ವಾಕ್ಯಮಬ್ರವೀತ್ ।
ವಹ್ನಿಃ ಪ್ರಶಾಮ್ಯತಾಂ ವಿಪ್ರಾಃ ಶಾಸನಂ ವೋ ದದಾಮ್ಯಹಂ ॥ ೩೭ ॥
ದಾಸೋಽಸ್ಮಿ ಸಾಂಪ್ರತಂ ವಿಪ್ರಾ ನಮೇ ವಾಗನ್ಯಥಾ ಭವೇತ್ ।
ಯತ್ಪಾಪಂ ಬ್ರಹ್ಮಹತ್ಯಾಯಾಃ ಪರದಾರಾಽಭಿಗಾಮಿನಾಂ ॥ ೩೮ ॥

---

೩೨. ಅವನು ರಾಮಮಂತ್ರವನ್ನು ಜಪಿಸುತ್ತ ವಿನಯದಿಂದ ಬ್ರಾಹ್ಮಣರನ್ನು ಕುರಿತು ಹೀಗೆಂದನು.

೩೩. "ನಾನು ರಾಮದಾಸರಾದ ಆ ನಿಮ್ಮೆಲ್ಲರ ದಾಸನು. ಈಗ ಅಜ್ಞಾನವೆಂಬ ಕತ್ತಲೆಯಿಂದ ಕುರುಡನಾಗಿದ್ದೇನೆ.

೩೪. ನಾನು ರಾಮನಾಮವೆಂಬ ಅಂಜನವನ್ನು ಪಡೆದಿರುವೆನು. ಜನರು ರಾಮನನ್ನು ತ್ಯಜಿಸಿ ಬೇರೆ ದೇವರನ್ನು ಸೇವಿಸಿದರೆ ಮೂಢನಾದ ನನ್ನಂತೆಯೇ ಬೆಂಕಿಯಿಂದ ಬೂದಿಯಾಗುವರು.

೩೫. ವಿಷ್ಣು, ಭಾಗೀರಥೀ, ಬ್ರಾಹ್ಮಣರು ಇವರು ಮೂವರೂ ಮೂರು ಲೋಕದ ಸಾರವಾದ ವಸ್ತುಗಳು.

೩೬. ಬ್ರಾಹ್ಮಣರು, ಗಂಗೆ, ವಿಷ್ಣು ಈ ಮೂವರೂ ಸ್ವರ್ಗದ ಮೆಟ್ಟಲುಗಳು. ರಾಮನಾಮವೆಂಬ ಹಗ್ಗವು ಭಕ್ತನನ್ನು ವೈಕುಂಠಕ್ಕೆ ಒಯ್ಯುವುದು."

೩೭. ಹೀಗೆ ಹೇಳಿ, ಆ ರಾಜನು ಕೈಮುಗಿದುಕೊಂಡು ನಮಸ್ಕರಿಸುತ್ತ, "ವಿಪ್ರರೆ! ಬೆಂಕಿಯನ್ನು ಆರಿಸಿರಿ. ನಿಮಗೆ ಶಾಸನವನ್ನು ಕೊಡುವೆನು.

೩೮–೪೯. ಈಗ ನಾನು ನಿಮ್ಮ ದಾಸನಾಗಿರುವೆನು. ನಾನು ಆಡಿದ ಮಾತನ್ನು ಮೀರುವುದಿಲ್ಲ. ಹಾಗೆ ಮೀರಿದರೆ ಬ್ರಹ್ಮಹತ್ಯೆ, ಪರಪತ್ನೀಗಮನ,

CC-0. Jangamwadi Math Collection. Digitized by eGangotri

ಯತ್ಪಾಪಂ ಮದ್ಯಪಾನಾಂ ಚ ಸುವರ್ಣಸ್ತೇಯಿನಾಂ ತಥಾ ।
ಯತ್ಪಾಪಂ ಗುರುಘಾತಾನಾಂ ತತ್ಪಾಪಂ ವಾ ಭವೇನ್ಮಮ ॥ ೩೯ ॥
ಯಂ ಯಂ ಚಿಂತಯತೇ ಕಾಮಂ ತಂ ತಂ ದಾಸ್ಯಾಮ್ಯಹಂ ಪುನಃ ।
ವಿಪ್ರಭಕ್ತಿಃ ಸದಾ ಕಾರ್ಯಾ ರಾಮಭಕ್ತಿಸ್ತಥೈವ ಚ ॥ ೪೦ ॥
ಅನ್ಯಥಾ ಕರಣೀಯಂ ಮೇ ನ ಕದಾಚಿದ್ದ್ವಿಜೋತ್ತಮಾಃ ॥ ೪೧ ॥

ವ್ಯಾಸ ಉವಾಚ:—

ತಸ್ಮಿನ್ನವಸರೇ ವಿಪ್ರಾ ಜಾತಾ ಭೂಪ ದಯಾಲವಃ ।
ಅನ್ಯಾ ಯಾ ಪುಟಿಕಾ ಚಾಸೀತ್ಸಾ ದತ್ತಾ ತಾಪಶಾಂತಯೇ ॥ ೪೨ ॥
ಜೀವಿತಂ ಚೈವ ತತ್ಸೈನ್ಯಂ ಜಾತಂ ಕ್ಷಿಪ್ತೇಷು ರೋಮಸು ।
ದಿಶಃ ಪ್ರಸನ್ನಾಃ ಸಂಜಾತಾಃ ಶಾಂತಾ ದಿಗ್ಜನಿತಸ್ವನಾಃ ॥ ೪೩ ॥
ಪ್ರಜಾಃ ಸ್ವಸ್ಥಾಽಭವತ್ತತ್ರ ಹರ್ಷನಿರ್ಭರಮಾನಸಾಃ ।
ಅವತಸ್ಥೇ ಯಥಾಪೂರ್ವಂ ಪುತ್ರಪೌತ್ರಾದಿಕಂ ತಥಾ ॥ ೪೪ ॥
ವಿಪ್ರಾಜ್ಞಾಕಾರಿಣೋ ಲೋಕಾಃ ಸಂಜಾತಾಶ್ಚ ಯಥಾ ಪುರಾ ।
ವಿಷ್ಣುಧರ್ಮಂ ಪರಿತ್ಯಜ್ಯ ನಾಽನ್ಯಂ ಜಾನಂತಿ ತೇ ನೃಪಂ ॥ ೪೫ ॥
ನವೀನಂ ಶಾಸನಂ ಕೃತ್ವಾ ಪೂರ್ವವದ್ವಿಧಿಪೂರ್ವಕಂ ।
ನಿಷ್ಕಾಸಿತಾಸ್ತು ಪಾಷಂಡಾಃ ಕೃತಶಾಸ್ತ್ರಪ್ರಯೋಜಕಾಃ ॥ ೪೬ ॥

---

ಮದ್ಯಪಾನ, ಚಿನ್ನವನ್ನು ಕದಿಯುವುದು, ಗುರುಗಳನ್ನು ಕೊಲ್ಲುವುದು ಇವುಗಳನ್ನು ಮಾಡಿದವರಿಗೆ ಸಂಭವಿಸುವ ಪಾಪವು ನನಗೆ ಬರಲಿ.

೪೦–೪೧. ನಿಮ್ಮ ಅಭೀಷ್ಟವನ್ನೆಲ್ಲ ನಾನು ನಡಸಿಕೊಡುವೆನು. ಬ್ರಾಹ್ಮಣರಲ್ಲಿಯೂ, ರಾಮನಲ್ಲಿಯೂ ಭಕ್ತಿಯನ್ನಿಡುವೆನು. ಯಾವಾಗಲೂ ಇದನ್ನು ಮೀರುವುದಿಲ್ಲ."

೪೨. ವ್ಯಾಸನು ಹೇಳುತ್ತಾನೆ:—ಆ ಸಮಯದಲ್ಲಿ ಬ್ರಾಹ್ಮಣರೂ ದಯಾಳುಗಳಾಗಿ ತಾಪದ ಶಾಂತಿಗೋಸ್ಕರ ಬಲಕಂಕುಳಿನ ಕೂದಲನ್ನು ಎಸೆದರು.

೪೩. ಆ ರೋಮಗಳನ್ನು ಎಸೆಯಲು ಸೈನ್ಯವು ಬದುಕಿತು. ದಿಕ್ಕುಗಳು ಪ್ರಸನ್ನವಾದುವು. ದಿಕ್ಕುಗಳಲ್ಲುಂಟಾದ ಧ್ವನಿಯು ಶಾಂತವಾಯಿತು.

೪೪. ಪ್ರಜೆಗಳು ಮೊದಲಿನಂತೆ ಸ್ವಸ್ಥರಾಗಿ ಸಂತೋಷಗೊಂಡರು. ಮಕ್ಕಳು ಮೊಮ್ಮಕ್ಕಳು ಮೊದಲಿನಂತೆ ಸುಖಗೊಂಡರು.

೪೫. ಜನರು ಮೊದಲಿನಂತೆ ಬ್ರಾಹ್ಮಣರ ಆಜ್ಞೆಯನ್ನು ನೆರವೇರಿಸುವವರಾದರು. ಅವರಿಗೆ ವಿಷ್ಣುಧರ್ಮವನ್ನು ಬಿಟ್ಟು ಬೇರೆ ಧರ್ಮದ ಅರಿವಿರಲಿಲ್ಲ.

೪೬. ಹಿಂದಿನಂತೆಯೇ ದೊರೆಯು ಹೊಸ ಶಾಸನವನ್ನು ಮಾಡಿ ಪಾಷಂಡ ಶಾಸ್ತ್ರಕರ್ತರನ್ನು ತನ್ನ ರಾಜ್ಯದಿಂದ ಹೊರಹೊರಡಿಸಿದನು.

CC-0. Jangamwadi Math Collection. Digitized by eGangotri

ವೇದಬಾಹ್ಯಾಃ ಪ್ರಣಷ್ಟಾಸ್ತೇ ಉತ್ತಮಾಽಧಮಮಧ್ಯಮಾಃ ।
ಷಟ್ತ್ರಿಂಶಚ್ಚ ಸಹಸ್ರಾಣಿ ಯೇಽಭೂವನ್ನೋಽಭುಜಾಃ ಪುರಾ ॥ ೪೭ ॥
ತೇಷಾಂ ಮಧ್ಯಾತ್ತು ಸಂಜಾತಾ ಅಡವೀಜಾ ವಣಿಗ್ಜನಾಃ ।
ಶುಶ್ರೂಷಾರ್ಥಂ ಬ್ರಾಹ್ಮಣಾನಾಂ ರಾಜ್ಞಾ ಸರ್ವೇ ನಿರೂಪಿತಾಃ ॥ ೪೮ ॥
ಸದಾಚಾರಾಃ ಸುನಿಪುಣಾ ದೇವಬ್ರಾಹ್ಮಣಪೂಜಕಾಃ ।
ತ್ಯಕ್ತ್ವಾ ಪಾಖಂಡಮಾರ್ಗಂ ತು ವಿಷ್ಣುಭಕ್ತಿಪರಾಸ್ತು ತೇ ॥ ೪೯ ॥
ಜಾಹ್ನವೀತೀರಮಾಸಾದ್ಯ ತ್ರೈವಿದ್ಯೇಭ್ಯೋ ದದೌ ನೃಪಃ ।
ಶಾಸನಂ ತು ಯಥಾ ದತ್ತಂ ತೇಷಾಂ ವೈ ಭಕ್ತಿಪೂರ್ವಕಂ ॥ ೫೦ ॥
ಸ್ಥಾನಧರ್ಮಾತ್ಪ್ರಚಲಿತಾ ವಾಡವಾಸ್ತೇ ಸಮಾಗತಾಃ ।
ನೃಪೋ ವಿಜ್ಞಾಪಿತೋ ವಿಪ್ರೈಸ್ತೈರೇವಂ ಕ್ಲೇಶಕಾರಿಭಿಃ ॥ ೫೧ ॥
ಯೇತ್ಯಕ್ತವಾಚೋ ವಿಪ್ರೇಂದ್ರಾಸ್ತಾನ್ನಿಃಸಾರಯ ಭೂಪತೇ ।
ಪರಸ್ಪರಂ ವಿವಾದಾಸ್ತು ಸಂಜಾತಾ ದತ್ತವೃತ್ತಯೇ ॥ ೫೨ ॥
ನ್ಯಾಯಪ್ರದರ್ಶನಾರ್ಥಂ ಚ ಕಾರಿತಾಸ್ತು ಸಭಾಸದಃ ।
ಹಸ್ತಾಕ್ಷರೇಷು ದೃಷ್ಟೇಷು ಪೃಥಕ್ಪೃಥಕ್ಪ್ರತಿಪಾದಿತಂ ॥ ೫೩ ॥
ಏತಚ್ಛ್ರುತ್ವಾ ತತೋ ರಾಜಾ ತುಲದಾನಂ ಚಕಾರ ಹ ।
ದೀಯಮಾನೇ ತದಾ ದಾನೇ ಚಾತುರ್ವಿದ್ಯಾ ಬಭಾಷಿರೇ ॥ ೫೪ ॥

---

೪೭–೪೮. ವೇದಬಾಹ್ಯರಾದ ಉತ್ತಮ ಮಧ್ಯಮ ಅಧಮ ಜನರು ಹಾಳಾದರು. ಹಿಂದೆ ಇದ್ದ ಮೂವತ್ತಾರುಸಾವಿರಮಂದಿ ವೀರವೈಶ್ಯರ ಮಧ್ಯದಲ್ಲಿ ಅಡವೀಜರೆಂಬ ವೈಶ್ಯರನ್ನು ಬ್ರಾಹ್ಮಣರ ಸೇವೆಗಾಗಿ ನೇಮಿಸಿದನು.

೪೯. ಆ ವೈಶ್ಯರು ಸದಾಚಾರಸಂಪನ್ನರೂ, ದೇವಬ್ರಾಹ್ಮಣರನ್ನು ಪೂಜಿಸುವವರೂ, ಆಗಿ ಪಾಷಂಡಮಾರ್ಗವನ್ನು ತ್ಯಜಿಸಿ ವಿಷ್ಣುಭಕ್ತಿನಿರತರಾದರು.

೫೦. ತರುವಾಯ ರಾಜನು ಗಂಗೆಯ ದಡವನ್ನು ಸೇರಿ ಅಲ್ಲಿ ತ್ರೈವಿದ್ಯ ಬ್ರಾಹ್ಮಣರಿಗೆ ಶಾಸನವನ್ನು ಭಕ್ತಿಯಿಂದ ಕೊಟ್ಟನು.

೫೧–೫೨. ಕ್ಷೇತ್ರವನ್ನೂ, ಬ್ರಾಹ್ಮಣಧರ್ಮವನ್ನೂ ತ್ಯಜಿಸಿದ ಬ್ರಾಹ್ಮಣರು ಬಂದು ರಾಜನನ್ನು ಕುರಿತು, "ಮಹಾರಾಜ! ನಿನ್ನ ಮಾತನ್ನು ಮೀರಿದ ಬ್ರಾಹ್ಮಣರನ್ನು ಹೊರಡಿಸು" ಎಂದು ವಿಜ್ಞಾಪಿಸಿಕೊಂಡರು. ವೃತ್ತಿಗಾಗಿ ಆ ಎರಡು ಗುಂಪಿನ ಬ್ರಾಹ್ಮಣರಿಗೆ ಪರಸ್ಪರ ಜಗಳವಾಯಿತು.

೫೩. ನ್ಯಾಯನಿರ್ಣಯಕ್ಕಾಗಿ ನೇಮಿಸಿದ ಸದಸ್ಯರು ಹಸ್ತಾಕ್ಷರಗಳನ್ನು ನೋಡಿ ಬೇರೆಬೇರೆಯಾಗಿ ಪ್ರತಿಪಾದಿಸಿದರು.

೫೪–೫೭. ಇದನ್ನು ಕೇಳಿ ರಾಜನು ತುಲಾದಾನವನ್ನು ಕೊಡಲು ಚಾತುರ್ವಿದ್ಯಬ್ರಾಹ್ಮಣರು, "ಜಾತಿಬಾಹ್ಯರಾದ ನಾವು ಹೇಗೆ ಪ್ರತಿಗ್ರಹವನ್ನು



CC-0. Jangamwadi Math Collection. Digitized by eGangotri

ಅಸ್ಮಾಭಿರ್ಹಾರಿತಾ ಜಾತಿಃ ಕಥಂ ಕುರ್ಮಃ ಪ್ರತಿಗ್ರಹಂ ।
ನಿವಾರಿತಾಸ್ತು ತೇ ಸರ್ವೇ ಸ್ಥಾನಾನ್ಮೋಹೇರಕಾ ದ್ವಿಜಾಃ ॥ ೫೫ ॥
ದಶಪಂಚಸಹಸ್ರಾಣಿ ವೇದವೇದಾಂಗಪಾರಗಾಃ ।
ತತಸ್ತೇನ ತದಾ ರಾಜನ್ರಾಜ್ಞಾ ರಾಮಾನುವರ್ತಿನಾ ॥ ೫೬ ॥
ಆಹೂತಾ ವಾಡವಾಂಸ್ತಾಸ್ತು ಜ್ಞಾತಿಭೇದಂ ಚಕಾರ ಸಃ ।
ತ್ರಯೀವಿದ್ಯಾ ವಾಡವಾ ಯೇ ಸೇತುಬಂಧಂ ಪ್ರತಿ ಪ್ರಭುಂ ॥ ೫೭ ॥
ಗತಾಸ್ತೇ ವೃತ್ತಿಭಾಜಃಸ್ಯುರ್ನಾನ್ಯೇ ವೃತ್ಯಭಿಭಾಗಿನಃ ।
ತತ್ರ ನೈವ ಗತಾ ಯೇ ವೈ ಚಾತುರ್ವಿದ್ಯತ್ವಮಾಗತಾಃ ॥ ೫೮ ॥
ವಣಿಗ್ಭಿರ್ನಚ ಸಂಬಂಧೋ ನ ವಿವಾಹಶ್ಚ ತೈಃ ಸಹ ।
ಗ್ರಾಮವೃತ್ತೌ ನ ಸಂಬಂಧೋ ಜ್ಞಾತಿಭೇದೇ ಕೃತೇ ಸತಿ ॥ ೫೯ ॥
ದ್ವಿಜಭಕ್ತಿಪರಾಃ ಶೂದ್ರಾಃ ಯೇ ಪಾಖಂಡೈರ್ನ ಲೋಪಿತಾಃ ।
ಜೈನಧರ್ಮಾತ್ಪರಾವೃತ್ತಾಸ್ತೇ ಗೋಭೂಜಾಸ್ತಥೋತ್ತಮಾಃ ॥ ೬೦ ॥
ಯೇ ಚ ಪಾಖಂಡನಿರತಾ ರಾಮಶಾಸನಲೋಪಕಾಃ ।
ಸರ್ವೇ ವಿಪ್ರಾಸ್ತಥಾ ಶೂದ್ರಾ ಪ್ರತಿಬಂಧೇನ ಯೋಜಿತಾಃ ॥ ೬೧ ॥
ಸತ್ಯಪ್ರತಿಜ್ಞಾಂ ಕುರ್ವಾಣಾಸ್ತತ್ರಸ್ಥಾಃ ಸುಖಿನೋಽಭವನ್ ।
ಚಾತುರ್ವಿದ್ಯಾ ಬಹಿರ್ಗ್ರಾಮೇ ರಾಜ್ಞಾ ತೇನ ನಿವಾಸಿತಾಃ ॥ ೬೨ ॥
ಯಥಾ ರಾಮೋ ನ ಕುಪ್ಯೇತ ತಥಾ ಕಾರ್ಯಂ ಮಯಾ ಧ್ರುವಂ ।
ಪರಾಙ್ಮುಖಾ ಯೇ ರಾಮಸ್ಯ ಸನ್ಮುಖಾನುಗತಾಃ ಕಿಲ ॥ ೬೩ ॥

---

ಮಾಡುವುದು " ಎಂದರು. ಬಳಿಕ ರಾಮಭಕ್ತನಾದ ಆ ರಾಜನು ಆ ಹದಿನೈದು ಸಾವಿರ ಮೋಹೇರಕ ಬ್ರಾಹ್ಮಣರನ್ನು ಆ ಸ್ಥಳದಿಂದ ಹೊರಡಿಸಿದನು.

೫೭-೫೯. ಅವರಿಂದ ರಾಮೇಶ್ವರಕ್ಕೆ ಹೋಗಿ ಬಂದ ತ್ರೈವಿದ್ಯಬ್ರಾಹ್ಮಣರಿಗೆ ಸಂಬಂಧವನ್ನು ತೊಡೆದುಹಾಕಿ ಆ ಮೂರುಸಾವಿರ ತ್ರೈವಿದ್ಯಬ್ರಾಹ್ಮಣರಿಗೆಮಾತ್ರ ವೃತ್ತಿಯನ್ನು ಕೊಟ್ಟನು. ಜ್ಞಾತಿಭೇದವಾದ ಮೇಲೆ ರಾಮೇಶ್ವರಕ್ಕೆ ಹೋಗದ ಬ್ರಾಹ್ಮಣರಿಗೆ ವರ್ತಕರ ಸಂಬಂಧವೂ, ಅವರೊಡನೆ ವಿವಾಹವೂ, ಗ್ರಾಮವೃತ್ತಿ ಸಂಬಂಧವೂ ಇರಲಿಲ್ಲ.

೬೦. ದ್ವಿಜರಲ್ಲಿ ಭಕ್ತಿಯುಳ್ಳ ಶೂದ್ರರೂ, ಜೈನಧರ್ಮವನ್ನವಲಂಬಿಸದವರೂ, ಪಾಷಂಡಿಗಳಲ್ಲದವರೂ ಆದ ವೈಶ್ಯರೂ ಉತ್ತಮರಾದರು.

೬೧. ಪಾಷಂಡಿಗಳಾಗಿ ರಾಮಶಾಸನವನ್ನು ಹಾಳುಮಾಡಿದ ಬ್ರಾಹ್ಮಣರೂ, ಶೂದ್ರರೂ ಸ್ಥಾನಭ್ರಷ್ಟರಾದರು.

೬೨-೬೪. ಅಲ್ಲಿರುವ ತ್ರೈವಿದ್ಯಬ್ರಾಹ್ಮಣರು ಸತ್ಯಪ್ರತಿಜ್ಞೆಮಾಡಿದುದರಿಂದ ಸುಖಿಗಳಾದರು. ರಾಮನು ಕುಪಿತನಾಗದಂತೆ ನಾನು ಕರ್ತವ್ಯನಿರತನಾಗ

CC-0. Jangamwadi Math Collection. Digitized by eGangotri

ಚಾತುರ್ವಿದ್ಯಾಸ್ತೇ ವಿಜ್ಞೇಯಾ ವೃತ್ತಿಬಾಹ್ಯಾಃ ಕೃತಾಸ್ತದಾ ।
ಕೃತಕೃತ್ಯಸ್ತದಾ ಜಾತೋ ರಾಜಾ ಕುಮಾರಪಾಲಕಃ ॥ ೬೪ ॥
ವಿಪ್ರಾಣಾಂ ಪುರತಃ ಪ್ರಾಹ ಪ್ರಶ್ರಯೇಣ ವಚಸ್ತದಾ ।
ಗ್ರಾಮವೃತ್ತಿರ್ನಮೇ ಲುಪ್ತಾ ಏತದ್ವೈ ದೇವನಿರ್ಮಿತಂ ॥ ೬೫ ॥
ಸ್ವಯಂ ಕೃತಾಽಪರಾಧಾನಾಂ ದೋಷೋ ಕಸ್ಯ ನ ದೀಯತೇ ।
ಯಥಾ ವನೇ ಕಾಷ್ಠವರ್ಷಾದ್ವಹ್ನಿಃ ಸ್ಯಾದ್ದೈವಯೋಗತಃ ॥ ೬೬ ॥
ಭವದ್ಭಿಸ್ತು ಪಣಃ ಪ್ರೋಕ್ತೋಹ್ಯಭಿಜ್ಞಾನಸ್ಯ ಹೇತವೇ ।
ರಾಮಸ್ಯ ಶಾಸನಂ ಕೃತ್ವಾ ವಾಯುಪುತ್ರಸ್ಯ ಹೇತವೇ ॥ ೬೭ ॥
ವ್ಯಾವೃತ್ತಾ ನಾಡವಾ ಯೂಯಂ ಸ ದೋಷಃ ಕಸ್ಯ ದೀಯತೇ ।
ಅವಸಾನೇ ಹರಿಂ ಸ್ಮೃತ್ವಾ ಮಹಾಪಾಪಯುತೋಽಪಿ ವಾ ॥ ೬೮ ॥
ವಿಷ್ಣುಲೋಕಂ ವ್ರಜತ್ಯಾಶು ಸಂಶಯಸ್ತು ಕಥಂ ಭವೇತ್ ।
ಮಹತ್ಪುಣ್ಯೋದಯೇ ನೄಣಾಂ ಬುದ್ಧಿಃ ಶ್ರೇಯಸಿ ಜಾಯತೇ ॥ ೬೯ ॥
ಪಾಪಸ್ಯೋದಯಕಾಲೇ ಚ ವಿಪರೀತಾ ಹಿ ಸಾ ಭವೇತ್ ।
ಸಕೃತ್ಪಾಲಯತೇ ಯಸ್ತು ಧರ್ಮೇಣೈತಜ್ಜಗತ್ತ್ರಯಂ ॥ ೭೦ ॥
ಯೋಂತರಾತ್ಮಾ ಚ ಭೂತಾನಾಂ ಸಂಶಯಸ್ತತ್ರ ನೋ ಹಿತಃ ।
ಇಂದ್ರಾದಯೋಽಮರಾಃ ಸರ್ವೇ ಸನಕಾದ್ಯಾಸ್ತಪೋಧನಾಃ ॥ ೭೧ ॥

---

ಬೇಕೆಂದು ರಾಜನು ಚಾತುರ್ವಿದ್ಯಬ್ರಾಹ್ಮಣರನ್ನು ಗ್ರಾಮದ ಹೊರಗೆ ವಾಸಿಸುವಂತೆ ಕಟ್ಟುಮಾಡಿದನು. ರಾಮಭಕ್ತರಲ್ಲದ ಚಾತುರ್ವಿದ್ಯಬ್ರಾಹ್ಮಣರು ವೃತ್ತಿಹೀನರಾದರು. ಆಗ ಕುಮಾರಪಾಲಕನು ಕೃತಕೃತ್ಯನಾದನು.

೬೫. ಆಗ ರಾಜನು ಚಾತುರ್ವಿದ್ಯಬ್ರಾಹ್ಮಣರ ಮುಂದೆ ನಿಂತು ವಿನಯದಿಂದ ಹೀಗೆಂದನು: "ರಾಮನು ನಿರ್ಮಿಸಿದ ಗ್ರಾಮವೃತ್ತಿಯನ್ನು ನಾನು ಹಾಳುಮಾಡಲಿಲ್ಲ.

೬೬. ತಾವಾಗಿಯೇ ಅಪರಾಧಮಾಡಿದ ಯಾರಿಗೆತಾನೆ ಕೆಡಕಾಗುವುದಿಲ್ಲ. ಕಾಡಿನಲ್ಲಿ ಕಟ್ಟಿಗೆಯು ಹೆಚ್ಚಿದರೆ ದೈವವಶದಿಂದಲೇ ಬೆಂಕಿಯು ಉದ್ಭವಿಸುವುದು.

೬೭. ರಾಮನ ಶಾಸನವನ್ನು ಊರ್ಜಿತಗೊಳಿಸಬೇಕಾದರೆ ಆ ರಾಮಾಂಜನೇಯರ ಅಭಿಜ್ಞಾನವನ್ನು ತಂದುಕೊಡಿರಿ ಎಂದೆನು.

೬೮–೭೪. ನೀವು ಹಾಗೆಮಾಡಲಿಲ್ಲ. ಆದರ ಕೇಡು ಬೇರೆ ಯಾರಿಗಾದೀತು. ಅತಿ ಪಾಪಿಯಾದರೂ ಅವಸಾನಕಾಲದಲ್ಲಿ ಹರಿಸ್ಮರಣೆ ಮಾಡಿದರೆ ನಿಶ್ಚಯವಾಗಿಯೂ ವೈಕುಂಠವನ್ನು ಹೊಂದುವನು. ಪುಣ್ಯವು ಹೆಚ್ಚಿದಾಗ ಮನುಷ್ಯರ ಬುದ್ಧಿಯು ಶ್ರೇಯಸ್ಸಿನಲ್ಲಿಯೂ, ಪಾಪವು ಹೆಚ್ಚಿದಾಗ ಕೆಟ್ಟುದರಲ್ಲಿಯೂ ಪ್ರವರ್ತಿಸುವುದು. ಧರ್ಮದಿಂದ ಮೂರುಲೋಕವನ್ನು ಕಾಪಾಡುವವನೂ,

CC-0. Jangamwadi Math Collection. Digitized by eGangotri

ಮುಕ್ತ್ಯರ್ಥಮರ್ಚಯಂತೀಹ ಸಂಶಯಸ್ತತ್ರ ನೋ ಹಿತಃ ।
ಸಹಸ್ರನಾಮತತ್ತುಲ್ಯಂ ರಾಮನಾಮೇತಿ ಗೀಯತೇ ॥ ೭೨ ॥
ತಸ್ಮಿನ್ನನಿಶ್ಚಯಂ ಕೃತ್ವಾ ಕಥಂ ಸಿದ್ಧಿರ್ಭವೇದಿಹ ।
ಮಮ ಜನ್ಮ ಕೃತಾತ್ಪುಣ್ಯಾದಭಿಜ್ಞಾನಂ ದದೌ ಹರಿಃ ॥ ೭೩ ॥
ಪಾಖಂಡಾದ್ಯತ್ಕೃತಂ ಪಾಪಂ ಮೃಷ್ಟಂ ತದ್ವಃ ಪ್ರಣಾಮತಃ ।
ಪ್ರಸೀದಂತು ಭವಂತಶ್ಚ ತ್ಯಕ್ತ್ವಾ ಕ್ರೋಧಂ ಮಮಾಧುನಾ ॥ ೭೪ ॥

ಬ್ರಾಹ್ಮಣಾ ಊಚುಃ:—

ರಾಜನ್ಧರ್ಮೋವಿಲುಪ್ತಸ್ತೇ ಸ್ಥಾಪಿತಾನಾಂ ತಥಾ ಪುನಃ ।
ಅವಶ್ಯಂ ಭಾವಿನೋ ಭಾವಾ ಭವಂತಿ ಮಹತಾಮಪಿ ॥ ೭೫ ॥
ನಗ್ನತ್ವಂ ನೀಲಕಂಠಸ್ಯ ಮಹಾಹಿಶಯನಂ ಹರೇಃ ।
ಏತದ್ದೈವಕೃತಂ ಸರ್ವಂ ಪ್ರಭುರ್ಯಃ ಸುಖದುಃಖಯೋಃ ॥ ೭೬ ॥
ಸತ್ಯಪ್ರತಿಜ್ಞಾಸ್ತ್ರೈವಿದ್ಯಾ ಭಜಂತು ರಾಮಶಾಸನಂ ।
ಅಸ್ಮಾಕಂ ತು ಪರಂ ದೇಹಿ ಸ್ಥಾನಂ ಯತ್ರ ವಸಾಮಹೇ ॥ ೭೭ ॥
ತೇಷಾಂ ತು ವಚನಂ ಶ್ರುತ್ವಾ ಸುಖಮಿಚ್ಛುರ್ದ್ವಿಜನ್ಮನಾಂ ।
ತೇಷಾಂ ಸ್ಥಾನಂ ತು ದತ್ತಂ ವೈ ಸುಖವಾಸಂ ತು ನಾಮತಃ ॥ ೭೮ ॥

---

ಸಕಲ ಪ್ರಾಣಿಗಳ ಅಂತರಾತ್ಮನೂ ಆಗಿರುವ ಆ ರಾಮನಲ್ಲಿ ಸಂಶಯಪಡುವುದು ಹಿತಕರವಲ್ಲ. ಇಂದ್ರಾದಿ ದೇವತೆಗಳೂ, ಸನಕಾದಿ ಮುನೀಶ್ವರರೂ ಮುಕ್ತಿಗಾಗಿ ಶ್ರೀರಾಮನನ್ನು ಅರ್ಚಿಸುತ್ತಾರೆ. ಅವನಲ್ಲಿ ಸಂಶಯಪಡುವುದು ಹಿತಕರವಲ್ಲ. ರಾಮನಾಮವು ಸಹಸ್ರನಾಮಕ್ಕೆ ಸಮಾನವಾದುದು. ಆ ರಾಮನಲ್ಲಿ ದೃಢ ಭಕ್ತಿಮಾಡದಿದ್ದರೆ ಕಾರ್ಯಸಿದ್ಧಿಯಾಗುವುದು ಹೇಗೆ? ನನ್ನ ಹಿಂದಿನ ಪುಣ್ಯ ಪ್ರಭಾವದಿಂದ ಹನುಮಂತನು ಅಭಿಜ್ಞಾನವನ್ನಿತ್ತನು. ಪಾಷಂಡತನದಿಂದ ಮಾಡಿದ ಪಾಪವು ನಿಮ್ಮ ವಂದನೆಯಿಂದ ಪರಿಹೃತವಾಯಿತು. ನೀವು ಕೋಪ ವನ್ನು ಬಿಟ್ಟು ನನ್ನಲ್ಲಿ ಪ್ರಸನ್ನರಾಗಿರಿ.''

೭೫. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನೀನು ಲುಪ್ತವಾದ ಧರ್ಮವನ್ನು ತಿರುಗಿ ಉದ್ಧಾರಮಾಡಿರುವೆ. ಅವಶ್ಯವಾಗಿ ಆಗತಕ್ಕುದು ಮಹಾತ್ಮರಿಗೂ ಆಗಿಯೇ ಆಗುತ್ತದೆ.

೭೬. ಸುಖದುಃಖಗಳಿಗೆ ಕಾರಣವಾದ ದೈವದ ವಶದಿಂದ ಮಹೇಶ್ವರನು ಬತ್ತಲೆಯಾದನು. ವಿಷ್ಣುವು ಸರ್ಪಶಯನನಾದನು.

೭೭. ಸತ್ಯವಾದ ಪ್ರತಿಜ್ಞೆಯುಳ್ಳ ತ್ರೈವಿದ್ಯಬ್ರಾಹ್ಮಣರು ರಾಮನ ಶಾಸನ ವನ್ನು ಪಡೆಯಲಿ. ನಮಗೂ ವಾಸಕ್ಕೆ ಉತ್ತಮವಾದ ಸ್ಥಳವನ್ನು ಕೊಡು.

೭೮. ದೊರೆಯು ಆ ಬ್ರಾಹ್ಮಣರ ಮಾತನ್ನು ಕೇಳಿ ಅವರಿಗೆ ಸುಖವನ್ನು ಬಯಸಿ ಸುಖವಾಸವೆಂಬ ಸ್ಥಳವನ್ನು ಅವರಿಗೆ ಏರ್ಪಡಿಸಿಕೊಟ್ಟನು..

CC-0. Jangamwadi Math Collection. Digitized by eGangotri

ಹಿರಣ್ಯಂ ಪುಷ್ಪವಾಸಾಂಸಿ ಗಾವಃ ಕಾಮದುಘಾ ನೃಪ ।
ಸ್ವರ್ಣಾಽಲಂಕರಣಂ ಸರ್ವಂ ನಾನಾವಸ್ತುಚಯಂ ತಥಾ ॥ ೭೯ ॥
ಶ್ರದ್ಧಯಾ ಪರಯಾ ದತ್ವಾ ಮುದಂ ಲೇಭೇ ನರಾಽಧಿಪಃ ।
ತ್ರಯೀವಿದ್ಯಾಸ್ತು ತೇ ಜ್ಞೇಯಾಃ ಸ್ಥಾಪಿತಾ ಯೇ ತ್ರಿಮೂರ್ತಿಭಿಃ ॥೮೦॥
ಚತುರ್ಥೇನೈವ ಭೂಪೇನ ಸ್ಥಾಪಿತಾಃ ಸುಖವಾಸನೇ ।
ತೇ ಬಭೂವುರ್ದ್ವಿಜಶ್ರೇಷ್ಠಾಶ್ಚಾತುರ್ವಿದ್ಯಾಃ ಕಲೌ ಯುಗೇ ॥ ೮೧ ॥
ಚಾತುರ್ವಿದ್ಯಾಶ್ಚ ತೇ ಸರ್ವೇ ಧರ್ಮಾಽರಣ್ಯೇ ಪ್ರತಿಷ್ಠಿತಾಃ ।
ವೇದೋಕ್ತಾ ಆಶಿಷೋ ದತ್ವಾ ತಸ್ಮೈ ರಾಜ್ಞೇ ಮಹಾತ್ಮನೇ ॥ ೮೨ ॥
ರಥೈರಶ್ವೈರುಹ್ಯಮಾನಾಃ ಕೃತಕೃತ್ಯಾ ದ್ವಿಜಾತಯಃ ।
ಮಹತ್ಪ್ರಮೋದಯುಕ್ತಾಸ್ತೇ ಪ್ರಾಪುರ್ಮೋಹೇರಕಂ ಮಹತ್ ॥ ೮೩ ॥
ಪೌಷಶುಕ್ಲ ತ್ರಯೋದಶ್ಯಾಂ ಲಬ್ಧಂ ಶಾಸನಕಂ ದ್ವಿಜೈಃ ।
ಬಲಿಪ್ರದಾನಂ ತು ಕೃತಮುದ್ದಿಶ್ಯ ಕುಲದೇವತಾಂ ॥ ೮೪ ॥
ವರ್ಷೇ ವರ್ಷೇ ಪ್ರಕರ್ತವ್ಯಂ ಬಲಿದಾನಂ ಯಥಾವಿಧಿ ।
ಕಾರ್ಯಂ ಚ ಮಂಗಲಸ್ನಾನಂ ಪುರುಷೇಣ ಮಹಾತ್ಮನಾ ॥ ೮೫ ॥
ಗೀತಂ ನೃತ್ಯಂ ತಥಾ ವಾದ್ಯಂ ಕುರ್ವೀತ ತದ್ದಿನೇ ಧ್ರುವಂ ।
ತನ್ಮಾಸೇ ತದ್ದಿನೇ ನೈವ ವೃತ್ತಿನಾಶೋ ಭವೇದ್ಯಥಾ ॥ ೮೬ ॥

---

೭೯–೮೦. ಚಿನ್ನ, ಪುಷ್ಪ, ವಸ್ತ್ರ, ಇಷ್ಟಾರ್ಥವನ್ನು ಕರೆಯುವ ಗೋವುಗಳು, ಸ್ವರ್ಣಾಭರಣಗಳು, ಅನೇಕ ವಸ್ತುಗಳ ಸಮೂಹ ಇವುಗಳನ್ನು ಅತಿ ಶ್ರದ್ಧೆಯಿಂದಿತ್ತು ಸಂತೋಷಗೊಂಡನು. ಹೀಗೆ ತ್ರಿಮೂರ್ತಿಗಳಿಂದ ಸ್ಥಾಪಿತರಾದ ಆ ಬ್ರಾಹ್ಮಣರು ತ್ರೈವಿದ್ಯರೆನಿಸಿಕೊಂಡರು.

೮೧. ಕಲಿಯುಗದಲ್ಲಿ ನಾಲ್ಕನೆಯವನಾದ ಕುಮಾರಪಾಲ ರಾಜನಿಂದ ಸುಖವಾಸನದಲ್ಲಿ ಸ್ಥಾಪಿತರಾದ ದ್ವಿಜರು ಚಾತುರ್ವಿದ್ಯರೆಂದು ಪ್ರಖ್ಯಾತಿಗೊಂಡರು.

೮೨–೮೪. ಧರ್ಮಾರಣ್ಯದಲ್ಲಿ ಸ್ಥಾಪಿಸಲ್ಪಟ್ಟ ಆ ಚಾತುರ್ವಿದ್ಯರು ಮಹಾತ್ಮನಾದ ಆ ರಾಜನಿಗೆ ವೇದೋಕ್ತಾಶೀರ್ವಾದಗಳನ್ನು ಮಾಡಿ ಧನ್ಯರಾಗಿ ರಥ, ಕುದುರೆ ಇವುಗಳನ್ನೇರಿ ಅತಿ ಸಂತೋಷದಿಂದ ಮೋಹೇರಕಪುರವನ್ನು ಸೇರಿದರು. ಪುಷ್ಯಶುಕ್ಲ ತ್ರಯೋದಶಿಯ ದಿನ ಬ್ರಾಹ್ಮಣರು ಶಾಸನವನ್ನು ಪಡೆದು ಕುಲದೇವತೆಯನ್ನುದ್ದೇಶಿಸಿ ಬಲಿಯನ್ನು ಕೊಟ್ಟರು.

೮೫. ಹಾಗೆಯೇ ಪುರುಷನು ಪ್ರತಿವರ್ಷವೂ ವಿಧಿಯಂತೆ ಬಲಿದಾನ ಮಾಡಿ ಮಂಗಳಸ್ನಾನಗೈಯಬೇಕು.

೮೬. ಆ ತಿಂಗಳ ಆ ದಿನದಲ್ಲಿ ವೃತ್ತಿಯು ಹಾಳಾಗದಂತೆ ಕುಲದೇವತಾ ಸನ್ನಿಧಿಯಲ್ಲಿ ಸಂಗೀತ, ನೃತ್ಯ, ವಾದ್ಯಗಳನ್ನು ಮಾಡಿಸಬೇಕು.

CC-0. Jangamwadi Math Collection. Digitized by eGangotri

ದೈವಾದತೀತಕಾಲೇ ಚೇತ್ ವೃದ್ಧಿರಾಪದ್ಯತೇ ಯದಾ ।
ತದಾ ಪ್ರಥಮತಃ ಕೃತ್ವಾ ಪಶ್ಚಾದ್ವೃದ್ಧಿರ್ವಿಧೀಯತೇ ॥ ೮೭ ॥
ಯೇ ಚ ಭಿನ್ನಪ್ರಪಾಪ್ರಾಯಾಸ್ತ್ರೈವಿದ್ಯಾ ಮೋಢವಂಶಜಾಃ ।
ತಥಾ ಚಾತುರ್ವೇದಿನಶ್ಚ ಕುರ್ವಂತಿ ಗೋತ್ರಪೂಜನಂ ॥ ೮೮ ॥
ವರ್ಷಮಧ್ಯೇ ಪ್ರಕುರ್ವೀತ ತಥಾ ಸುಪ್ತೇ ಜನಾರ್ದನೇ ।
ಪೌಷೇ ಚ ಲುಪ್ತಂ ಕೃತ್ವಾ ಚ ಶ್ರೌತಂ ಸ್ಮಾರ್ತಂ ಕರೋತಿ ಯಃ ॥ ೮೯ ॥
ತತ್ರ ಕ್ರೋಧಸಮಾವಿಷ್ಟಾ ನಿಘ್ನಂತಿ ಕುಲದೇವತಾಃ ।
ವಿವಾಹೋತ್ಸವಕಾಲೇ ಚ ಮೌಂಜೀಬಂಧಾದಿ ಕರ್ಮಣಿ ॥ ೯೦ ॥
ಮುಹೂರ್ತಂ ಗಣನಾಥಸ್ಯ ತತಃ ಪ್ರಭೃತಿ ಶೋಭನಂ ॥ ೯೧ ॥
ನಿರ್ವಾಸಿತಾಸ್ತು ಯೇ ವಿಪ್ರಾ ಆಮರಾಜ್ಞಾ ಸ್ವಶಾಸನಾತ್ ।
ಪಂಚದಶ ಸಹಸ್ರಾಣಿ ಯಯುಸ್ತೇ ಸುಖವಾಸಕಂ ॥ ೯೨ ॥
ಪಂಚ ಪಂಚಾಶತೋ ಗ್ರಾಮಾನ್ದದೌ ರಾಮಃ ಪುರಾ ಸ್ವಯಂ ।
ತತ್ರಸ್ಥಾವಣಿಜಶ್ಚೈವ ತೇಷಾಂ ವೃತ್ತಿಮಕಲ್ಪಯನ್ ॥ ೯೩ ॥

---

೮೭. ಒಂದು ವೇಳೆ ತ್ರಯೋದಶಿಯು ವೃದ್ಧಿಯಾಗಿ ಮರುದಿನವೂ ವ್ಯಾಪಿಸಿದರೆ ಆಗ ಮೊದಲನೆಯ ದಿನವೇ ಕುಲದೇವತಾಪೂಜೆ, ಬಲಿಸಮರ್ಪಣ, ಗೀತ ನೃತ್ಯ ನಿವೇದನಾದಿ ಕಾರ್ಯಗಳನ್ನು ನೆರವೇರಿಸಬೇಕು.

೮೮. ಹಾಳಾದ ಅರವಟ್ಟಿಗೆಯಂತಿರುವ ಮೋಢವಂಶದ ತ್ರೈವಿದ್ಯ ಬ್ರಾಹ್ಮಣರೂ, ಚಾತುರ್ವಿದ್ಯಬ್ರಾಹ್ಮಣರೂ ಗೋತ್ರದೇವತೆಯ ಪೂಜೆಯನ್ನು ಮಾಡಬೇಕು.

೮೯–೯೧. ವರ್ಷ ಮಧ್ಯದಲ್ಲಿಯೂ, ಚಾತುರ್ಮಾಸ್ಯದಲ್ಲಿಯೂ ಗೋತ್ರ ದೇವತೆಯನ್ನು ಆರಾಧಿಸಬೇಕು. ಪುಷ್ಯ ಶುಕ್ಲ ತ್ರಯೋದಶಿಯಲ್ಲಿ ಕುಲ ದೇವತೆಯನ್ನು ಆರಾಧಿಸದೆ ಶ್ರೌತ ಸ್ಮಾರ್ತ ಕರ್ಮಗಳನ್ನಾಚರಿಸಿದ ನರನನ್ನು ಕುಪಿತರಾದ ಕುಲದೇವತೆಯರು ವಧಿಸುವರು. ಮದುವೆ, ಉಪನಯನ ಮೊದಲಾದ ಶುಭಕಾರ್ಯಗಳಲ್ಲಿ ಮುಹೂರ್ತಕಾಲ ಗಣನಾಥನನ್ನು ಪೂಜಿಸಿದರೆ ಅದು ಮೊದಲ್ಗೊಂಡು ಶುಭವಾಗುವುದು. ಆದುದರಿಂದ ಪುಷ್ಯಶುಕ್ಲ ತ್ರಯೋದಶಿ ಯಲ್ಲಿಯೇ ಕುಲದೇವತಾ ಪೂಜೆಯನ್ನು ಮಾಡತಕ್ಕುದು.

೯೨. ಆ ತರುವಾಯ ಆಮರಾಜನು ವೃತ್ತಿಹೀನರನ್ನಾಗಿಸಿ ತ್ರೈವಿದ್ಯ ವಿಪ್ರ ರಿಂದ ಸಂಬಂಧವನ್ನು ತೊರೆಯಿಸಿ ಹೊರಡಿಸಿದ ಆ ಹದಿನೈದುಸಾವಿರ ಮಂದಿ ಬ್ರಾಹ್ಮಣರು ಸುಖವಾಸನಸ್ಥಾನಕ್ಕೆ ಹೋದರು.

೯೩–೯೮. ರಾಮನು ಅವರಿಗೆ ಹಿಂದೆ ಐವತ್ತೈದು ಗ್ರಾಮಗಳನ್ನು ಕೊಟ್ಟಿ ದ್ದನು. ಅಲ್ಲಿರುವ ಅಡಾಲಜ, ಮಾಂಡಲೀಯ, ಗೋಭೂಜ ಎಂಬ ತ್ರಿವಿಧ

CC-0. Jangamwadi Math Collection. Digitized by eGangotri

ಅಡಾಲಜಾ ಮಾಂಡಲೀಯಾ ಗೋಭೂಜಾಶ್ಚ ಪವಿತ್ರಕಾಃ ।
ಬ್ರಾಹ್ಮಣಾನಾಂ ವೃತ್ತಿದಾಸ್ತೇ ಬ್ರಹ್ಮಸೇವಾಸು ತತ್ಪರಾಃ ॥ ೯೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ
"ಬ್ರಾಹ್ಮಣಾನಾಂ ಶಾಸನವೃತ್ತಿಪ್ರಾಪ್ತಿವರ್ಣನಂ"ನಾಮಾಷ್ಟತ್ರಿಂಶೋಽಧ್ಯಾಯಃ

---

ಪವಿತ್ರ ವೈಶ್ಯವಂಶದವರು ಬ್ರಾಹ್ಮಣರ ಸೇವೆಯಲ್ಲಿ ನಿರತರಾಗಿ ಅವರ ವೃತ್ತಿಯನ್ನು ನೋಡಿಕೊಳ್ಳುತ್ತಿದ್ದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ
ಮಾಹಾತ್ಮ್ಯದಲ್ಲಿ "ಬ್ರಾಹ್ಮಣಶಾಸನವೃತ್ತಿಪ್ರಾಪ್ತಿವರ್ಣನ"ವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಜ್ಞಾತಿಭೇದವರ್ಣನ

ಬ್ರಹ್ಮೋವಾಚ :—

ಶೃಣು ಪುತ್ರ ಪ್ರವಕ್ಷ್ಯಾಮಿ ರಹಸ್ಯಂ ಪರಮಂ ಮತಂ ।
ಏತೇ ಬ್ರಹ್ಮವಿದಃ ಪ್ರೋಕ್ತಾಶ್ಚಾತುರ್ವಿದ್ಯಾ ಮಹಾದ್ವಿಜಾಃ ॥ ೧ ॥
ಸ್ವಾಧ್ಯಾಯಾಶ್ಚ ವಷಟ್ಕಾರಾಃ ಸ್ವಧಾಕಾರಾಶ್ಚ ನಿತ್ಯಶಃ ।
ರಾಮಾಜ್ಞಾಪಾಲಕಾಶ್ಚೈವ ಹನುಮದ್ಭಕ್ತಿತತ್ಪರಾಃ ॥ ೨ ॥
ಏಕದಾ ತು ತತೋ ದೇವಾ ಬ್ರಹ್ಮಾಣಂ ಸಮುಪಾಗತಾಃ ।
ಬ್ರಾಹ್ಮಣಾನ್ದ್ರಷ್ಟುಕಾಮಾಸ್ತೇ ಬ್ರಹ್ಮವಿಷ್ಣುಪುರೋಗಮಾಃ ॥ ೩ ॥
ತಾನ್ದೇವಾನಾಗತಾನ್ದೃಷ್ಟ್ವಾ ಸ್ವಾಸ್ಥಾನಾಚ್ಚಲಿತಾಸ್ತು ತೇ ।
ಅರ್ಘ್ಯಪಾದ್ಯಂ ಪುರಸ್ಕೃತ್ಯ ಮಧುಪರ್ಕಂ ತಥೈವ ಚ ॥ ೪ ॥
ಪೂಜಯಿತ್ವಾ ತತೋ ವಿಪ್ರಾ ದೇವಾನ್ಬ್ರಹ್ಮ ಪುರೋಗಮಾನ್ ।
ಬ್ರಹ್ಮಾಽಗ್ರ ಉಪವಿಷ್ಟಾಸ್ತೇ ವೇದಾನುಚ್ಚಾರಯಂತಿ ಹಿ ॥ ೫ ॥
ಸಂಹಿತಾಂ ಚ ಪದಂ ಚೈವ ಕ್ರಮಂ ಘನಂ ತಥೈವ ಚ ।
ಉಚ್ಚೈಃ ಸ್ವರೇಣ ಕುರ್ವೀತ ಋಚಾನ್ಋಗ್ವೇದಸಂಹಿತಾಂ ॥ ೬ ॥

---

## ಕನ್ನಡದ ಅನುವಾದ

### ಜ್ಞಾತಿಭೇದವರ್ಣನ

೧–೨. ಬ್ರಹ್ಮನು ಹೇಳುತ್ತಾನೆ:—ಮಗು! ಕೇಳು. ಉತ್ತಮವಾದ ರಹಸ್ಯವನ್ನು ನಿನಗೆ ಹೇಳುವೆನು. ಈ ಚಾತುರ್ವಿದ್ಯಬ್ರಾಹ್ಮಣರು ವೇದಾಧ್ಯಯನ, ಯಜ್ಞ, ಶ್ರಾದ್ಧಗಳನ್ನು ಮಾಡುತ್ತ ರಾಮನ ಆಜ್ಞೆಯನ್ನು ಪಾಲಿಸುವವರೂ, ಹನುಮಂತನಲ್ಲಿ ಭಕ್ತಿಯುಳ್ಳವರೂ ಆಗಿ ಬ್ರಹ್ಮಜ್ಞಾನಿಗಳೆನಿಸಿಕೊಂಡರು.

೩. ತರುವಾಯ ಒಂದಾನೊಂದು ಸಮಯದಲ್ಲಿ ದೇವತೆಗಳು ತ್ರಿಮೂರ್ತಿಗಳೊಡನೆ ಆ ಬ್ರಾಹ್ಮಣರನ್ನು ನೋಡಲೋಸುಗ ಅವರ ಬಳಿಗೆ ಬಂದರು.

೪–೫. ಆ ಬ್ರಾಹ್ಮಣರು ಹೀಗೆ ಬಂದಿರುವ ದೇವತೆಗಳನ್ನು ಕಂಡು ತಮ್ಮ ಸ್ಥಳದಿಂದ ಹೊರಟು ಅರ್ಘ್ಯಪಾದ್ಯಾದಿಗಳಿಂದ ಆ ಬ್ರಹ್ಮಾದಿ ದೇವತೆಗಳನ್ನು ಆರಾಧಿಸಿ ಬ್ರಹ್ಮನಮುಂದೆ ಕುಳಿತು ವೇದಾಧ್ಯಯನಮಾಡಿದರು.

೬. ಋಕ್ಶಾಖೆಯವರು ಸಂಹಿತೆ, ಪದ, ಕ್ರಮ, ಘನಗಳನ್ನು ಉಚ್ಚಸ್ವರದಿಂದ ಪಠಿಸಿದರು.

CC-0. Jangamwadi Math Collection. Digitized by eGangotri

ಸಾಮಗಾಶ್ಚ ಪ್ರಕುರ್ವಂತಿ ಸ್ತೋತ್ರಾಣಿ ವಿವಿಧಾನಿ ಚ ।
ಶಾಸ್ತ್ರಾಣಿ ಚ ತಥಾ ಯಾಜ್ಯಾ ಪುರೋಽನುವಾಕ್ಯಾಸ್ತಥಾ ॥ ೭ ॥
ಚತುರಕ್ಷರಂ ಪರಂ ಚೈವ ಚತುರಕ್ಷರಮೇವ ಚ ।
ದ್ವ್ಯಕ್ಷರಂ ಚ ತಥಾ ಪಂಚಾಕ್ಷರಂ ದ್ವ್ಯಕ್ಷರ ಮೇವ ಚ ।
ಏತದ್ಯಜ್ಞಸ್ವರೂಪಂ ಚ ಯೋ ಜಪೇತ್ ಜ್ಞಾನಪೂರ್ವಕಂ ॥ ೮ ॥
ಅಂತೇ ಬ್ರಹ್ಮಪದಪ್ರಾಪ್ತಿಃ ಸತ್ಯಂ ಸತ್ಯಂ ವದಾಮ್ಯಹಂ ।
ಏಕಾಗ್ರಮಾನಸಾಃ ಸರ್ವೇ ವೇದಪಾಠರತಾ ದ್ವಿಜಾಃ ॥ ೯ ॥
ತೇಷಾಮಂಗಣದೇಶೇಷು ಕಂಡೂಯಂತೇ ಕಚಾನ್ಮೃಗಾಃ ।
ಬ್ರಾಹ್ಮಣಾ ವೇದಮಾತಾಂ ಚ ಜಪಂತಿ ವಿಧಿಪೂರ್ವಕಂ ॥ ೧೦ ॥
ಹಸ್ತೇ ಧೃತಾಂಶ್ಚ ತೈರ್ದರ್ಭಾನ್ಭಕ್ಷಂತೇ ಮೃಗಪೋತಕಾಃ ।
ನಿರ್ವೈರಂ ತಂ ತದಾ ದೃಷ್ಟ್ವಾ ಆಶ್ರಮಂ ಗೃಹಮೇಧಿನಾಂ ॥ ೧೧ ॥
ತುತುಷುಃ ಪರಮಂ ದೇವಾ ಊಚುಸ್ತೇ ಚ ಪರಸ್ಪರಂ ।
ತ್ರೇತಾಯುಗಮಿದಾನೀಂ ಚ ಸರ್ವೇ ಧರ್ಮಪರಾಯಣಾಃ ॥ ೧೨ ॥
ಕಲಿರ್ದುಷ್ಟಸ್ತಥಾ ಪ್ರೋಕ್ತಃ ಕಿಂ ಕರಿಷ್ಯತಿ ಪಾಪಕಃ ।
ಚಾತುರ್ವಿದ್ಯಾನ್ಸಮಾಹೂಯ ಊಚುಸ್ತೇ ತ್ರಯ ಏವ ಚ ॥ ೧೩ ॥
ವೃತ್ತ್ಯರ್ಥಂ ಭವತಾಂ ಚೈವ ತ್ರೈವಿದ್ಯಾನಾಂ ತಥೈವ ಚ ।
ವಿಭಾಗಂ ವಃ ಪ್ರದಾಸ್ಯಾಮೋ ಯಥಾವತ್ಪ್ರತಿಪಾಲ್ಯತಾಂ ॥ ೧೪ ॥

---

೭–೯. ಸಾಮವೇದಿಗಳು ಸ್ತೋತ್ರಗಳನ್ನೂ, ವಿವಿಧ ಶಾಸ್ತ್ರಗಳನ್ನೂ, ಯಾಜ್ಯಪುರೋಽನುವಾಕ್ಯಗಳನ್ನೂ, ಜ್ಞಾನಪೂರ್ವಕವಾಗಿ ಜಪಿಸಿದರು; ಬ್ರಹ್ಮಪದ ವನ್ನು ಕೊಡುವ ಯಜ್ಞಸಂಬಂಧವಾದ ಯಜಾಮಹೇ, ಅಸ್ತುಶ್ರೌಷಟ್, ಯಜ, ಯಜಾಮಹೇ, ವೌಷಟ್ ಎಂಬ ಎರಡು ಚತುರಕ್ಷರ, ದ್ವ್ಯಕ್ಷರ, ಪಂಚಾಕ್ಷರ, ವಾಕ್ಯಗಳನ್ನೂ ಒಮ್ಮನಸ್ಸಿನಿಂದ ಪಠಿಸಿದರು.

೧೦–೧೪. ಅವರ ಅಂಗಣಗಳಲ್ಲಿ ಮೃಗಗಳು ಕೂದಲುಗಳನ್ನು ತುರಿಸಿ ಕೊಳ್ಳುತ್ತಿದ್ದುವು. ಬ್ರಾಹ್ಮಣರು ವಿಧಿಯಂತೆ ವೇದಮಂತ್ರಗಳನ್ನು ಜಪಿಸಿದರು. ಅವರು ಕೈಯಲ್ಲಿ ಹಿಡಿದ ದರ್ಭೆಗಳನ್ನು ಜಿಂಕೆ ಮರಿಗಳು ತಿನ್ನುತ್ತಿದ್ದುವು. ಹೀಗೆ ವೈರವಿಲ್ಲದ ಆ ಗೃಹಸ್ಥರ ಆಶ್ರಮಗಳನ್ನು ಕಂಡು ದೇವತೆಗಳು ಹರ್ಷಗೊಂಡು "ಇವರೆಲ್ಲರೂ ಧರ್ಮನಿರತರಾದುದರಿಂದ ಈಗಲೇ ತ್ರೇತಾಯುಗವೆಂದು ಹೇಳ ಬೇಕು. ಕಲಿಯು ದುಷ್ಟನಾದರೂ ಪಾಪಿಯಾದ ಅವನು ಏನುಮಾಡಬಲ್ಲನು?" ಹೀಗೆಂದು ಪರಸ್ಪರ ಮಾತನಾಡಿಕೊಂಡರು. ಆ ತ್ರಿಮೂರ್ತಿಗಳು ಚಾತುರ್ವಿದ್ಯ ರನ್ನು ಕರೆದು, "ನಿಮ್ಮ ಮತ್ತು ತ್ರೈವಿದ್ಯರ ವೃತ್ತಿಯನ್ನು ವಿಭಾಗಮಾಡುವೆವು. ನೀವು ಅದರಂತೆ ನಿಮ್ಮನಿಮ್ಮ ವೃತ್ತಿಗಳನ್ನು ರಕ್ಷಿಸಬೇಕು.

CC-0. Jangamwadi Math Collection. Digitized by eGangotri

ಯೇ ವಣಿಜಃ ಪುರಾ ಪ್ರೋಕ್ತಾಃ ಷಟ್ತ್ರಿಂಶಚ್ಚ ಸಹಸ್ರಕಾಃ ।
ತ್ರಿಸಹಸ್ರಾಸ್ತು ತ್ರೈವಿದ್ಯಾ ದಶಪಂಚಸಹಸ್ರಕಾಃ ॥ ೧೫ ॥
ಚಾತುರ್ವಿದ್ಯಾಸ್ತಥಾ ಪ್ರೋಕ್ತಾ ಅನ್ಯೋನ್ಯಂ ವೃತ್ತಿಮಾಶ್ರಿತಾಃ ।
ಸತ್ರಿಭಾಗಾಸ್ತು ತ್ರೈವಿದ್ಯಾಶ್ಚತುರ್ಭಾಗಾಸ್ತು ಚಾತ್ರಿಣಃ ॥ ೧೬ ॥
ವಣಿಜಾಂ ಗೃಹಮಾಗತ್ಯ ಪೌರೋಹಿತ್ಯಸ್ಯ ನಿತ್ಯಶಃ ।
ಭಾಗಂ ವಿಭಜ್ಯ ಸಂಪ್ರಾಪುಃ ಕಾಜೇಶೇನ ವಿನಿರ್ಮಿತಾಃ ॥ ೧೭ ॥
ಪರಸ್ಪರಂ ನ ವಿವಾಹಶ್ಚಾತುರ್ವಿದ್ಯ ತ್ರಿವಿದ್ಯಯೋಃ ।
ಚಾತುರ್ವಿದ್ಯಾ ಮಯಾ ಪ್ರೋಕ್ತಾಸ್ತ್ರಿವಿದ್ಯಾಸ್ತು ತಥೈವ ಚ ॥ ೧೮ ॥
ತ್ರೈವಿಭಾಗೇನ ತ್ರೈವಿದ್ಯಾಶ್ಚತುರ್ಭಾಗೇನ ಚಾತ್ರಿಣಃ ।
ಏವಂ ಜ್ಞಾತಿವಿಭಾಗಸ್ತು ಕಾಜೇಶೇನ ವಿನಿರ್ಮಿತಃ ॥ ೧೯ ॥
ಕೃತಕೃತ್ಯಾಸ್ತು ತೇ ವಿಪ್ರಾಃ ಪ್ರಣೇಮುಸ್ತಾನ್ಸುರೋತ್ತಮಾನ್ ।
ವೃತ್ತಿಂ ದತ್ವಾ ತತೋ ದೇವಾಃ ಸ್ವಸ್ಥಾನಂ ಚ ಪ್ರತಸ್ಥಿರೇ ॥ ೨೦ ॥
ಪಂಚ ಪಂಚಾಶದ್ಗ್ರಾಮಾಣಾಂ ತೇ ದ್ವಿಜಾಶ್ಚ ನಿವಾಸಿನಃ ।
ಚತುರ್ವಿದ್ಯಾಸ್ತು ತೇ ಪ್ರೋಕ್ತಾಸ್ತದಾದಿತು ತ್ರಿವಿದ್ಯಕಾಃ ॥ ೨೧ ॥
ಚಾತುರ್ವಿದ್ಯಸ್ಯ ಗೋತ್ರಾಣಿ ದಶಪಂಚ ತಥೈವ ಚ ।
ಭಾರದ್ವಾಜಸ್ತಥಾ ವತ್ಸಃ ಕೌಶಿಕಃ ೩ ಕುಶ ಏವ ಚ ॥ ೨೨ ॥
ಶಾಂಡಿಲ್ಯಃ ೫ ಕಶ್ಯಪಶ್ಚೈವ ಗೌತಮಶ್ಛಾದನ ಸ್ತಥಾ ೮ ।
ಜಾತೂಕರ್ಣ್ಯಸ್ತಥಾಕುಂತೋ ವಸಿಷ್ಠೋ ೧೧ ಧಾರಣ ಸ್ತಥಾ ॥ ೨೩ ॥

---

೧೫–೧೭. ಹಿಂದೆ ಹೇಳಿದ ಮೂವತ್ತಾರು ಸಾವಿರ ವರ್ತಕರೂ, ಮೂರು ಸಾವಿರ ತ್ರೈವಿದ್ಯರೂ, ಹದಿನೈದು ಸಾವಿರ ಚಾತುರ್ವಿದ್ಯರೂ ಆದ ನೀವು ಪರಸ್ಪರ ವೃತ್ತಿಯನ್ನಾಶ್ರಯಿಸಿದ್ದೀರಿ. ತ್ರಿಮೂರ್ತಿಗಳಿಂದ ನಿರ್ಮಿತರಾದ ನಿಮ್ಮಲ್ಲಿ ಮೂರು ಭಾಗದ ತ್ರೈವಿದ್ಯರೂ, ನಾಲ್ಕು ಭಾಗದ ಚಾತುರ್ವಿದ್ಯರೂ ವೈಶ್ಯರ ಮನೆಯ ಪೌರೋಹಿತ್ಯವನ್ನು ವಿಭಾಗಿಸಿ ಅನುಭವಿಸಬೇಕು.

೧೮–೧೯. ಮೂರು ಭಾಗದ ತ್ರೈವಿದ್ಯರಿಗೂ, ನಾಲ್ಕು ಭಾಗದ ಚಾತುರ್ವಿದ್ಯರಿಗೂ ಪರಸ್ಪರ ವಿವಾಹವು ಕೂಡದು.''

೨೦. ಕೃತಕೃತ್ಯರಾದ ಬ್ರಾಹ್ಮಣರು ಆ ದೇವತೆಗಳನ್ನು ನಮಸ್ಕರಿಸಿದರು. ದೇವತೆಗಳು ಹೀಗೆ ವೃತ್ತಿವಿಭಾಗಮಾಡಿ ತಮ್ಮ ಸ್ಥಾನಕ್ಕೆ ತೆರಳಿದರು.

೨೧. ಅದು ಮೊದಲ್ಗೊಂಡು ಐವತ್ತೈದು ಗ್ರಾಮಗಳಲ್ಲಿ ತ್ರೈವಿದ್ಯರೂ ಚಾತುರ್ವಿದ್ಯರೂ ವಾಸಮಾಡಿಕೊಂಡಿದ್ದರು.

೨೨–೨೮. ಚಾತುರ್ವಿದ್ಯರು ಹದಿನೈದು ಗೋತ್ರವುಳ್ಳವರು. ಆ ಗೋತ್ರಗಳು :—ಭಾರದ್ವಾಜ, ವತ್ಸ, ಕೌಶಿಕ, ಕುಶ, ಶಾಂಡಿಲ್ಯ, ಕಶ್ಯಪ, ಗೌತಮ,

CC-0. Jangamwadi Math Collection. Digitized by eGangotri

ಆತ್ರೇಯೋಮಾರ್ಂಡಿಲಶ್ಚೈವ ೧೪ ಲೌಗಾಕ್ಷಶ್ಚ ೧೫ ತತಃ ಪರಂ ।
ಸ್ವಸ್ಥಾನಾನಾಂ ಚ ನಾಮಾನಿ ಪ್ರವಕ್ಷ್ಯಾಮ್ಯನುಪೂರ್ವಶಃ ॥ ೨೪ ॥
ಸೀತಾಪುರಂ ಚ ಶ್ರೀಕ್ಷೇತ್ರಂ ೨ ಮಗೋಡೀ ಚ ೩ ತಥಾ ಸ್ಮೃತಾ ।
ಜ್ಯೇಠಲೋಜಸ್ತಥಾ ಚೈವ ಶೇರಥಾ ಚ ತತಃ ಪರಂ ॥ ೨೫ ॥
ಭೇದೇ ತಾಲೀ ವನೋಡೀ ಚ ಗೋವ್ಯಂದಲೀ ತಥೈವ ಚ ।
ಕಂಟಾ ಚೋಷಲೀ ಚೈವ ಕೋಹೇ ಚಂ ಚಂದನಸ್ತಥಾ ॥ ೨೬ ॥
ಥಲಗ್ರಾಮಶ್ಚ ಸೋಹಂ ಚ ಹಾಥಂಜಂ ಕಪಡವಾಣಕಂ ।
ವ್ರಜನ್ಹೋರೀ ಚ ವನೋಢೀ ಚ ಫೀಣಾಂ ವಗೋಲಂ ದೃಣ ಸ್ತಥಾ ॥ ೨೭ ॥
ಥಲಜಾ ಚಾರಣಂ ಸಿದ್ಧಾ ಭಾಲಜಾಶ್ಚ ತತಃ ಪರಂ ।
ಮಹೋವೀ ಆಈಯಾ ಮಲೀಆ ಗೋಧರೀ ಆಮತಃ ಪರಂ ॥ ೨೮ ॥
ವಾಠಸುಹಾಲೀ ತಥಾ ಚೈವ ಮಾಣಜಾಸಾನದೀಯಾ ಸ್ತಥಾ ।
ಆನಂದೀಯಾ ಪಾಟಡೀ ಅಟೇಕೋಲೀಯಾ ತತಃ ಪರಂ ॥ ೨೯ ॥
ಗಂಭೀ ಧಣೀ ಆಮಾತ್ರಾಚ ನಾತವೋರಾಸ್ತಥೈವ ಚ ।
ವಲೋಲಾ ರಾಂತ್ಯಜಾಶ್ಚೈವ ರೂಪೋಲಾ ಬೋಧಣೀ ಚ ವೈ ॥ ೩೦ ॥
ಛತ್ರೋಟಾ ಅಲು ಏವಾ ಚ ವಾಸತಡೀ ಆಮತಃ ಪರಂ ।
ಜಾಷಾಸಣಾ ಗೋತೀಯಾ ಚ ಚರಣೀಯಾ ದುಧೀಯಾಸ್ತಥಾ ॥ ೩೧ ॥
ಹಾಲೋಲಾ ವೈಹೋಲಾ ಚ ಅಸಾಲಾ ನಾಲಾಡಾಸ್ತಥಾ ।
ದೇಹೋಲೋ ಸೌಹಾಸೀಯಾ ಚ ಸಂಹಾಲೀಯಾ ಸ್ತಥೈವ ಚ ॥ ೩೨ ॥

---

ಛಾದನ, ಜಾತೂಕರ್ಣ್ಯ, ಕುಂತ, ವಸಿಷ್ಠ, ಧಾರಣ, ಆತ್ರೇಯ, ಮಾಂಡಿಲ, ಲೌಗಾಕ್ಷ ಎಂಬವು. ಸ್ವಸ್ಥಾನಗಳ ಹೆಸರುಗಳನ್ನು ಕ್ರಮವಾಗಿ ಹೇಳುವೆನು.

೨೫–೩೩. ಸೀತಾಪುರ, ಶ್ರೀಕ್ಷೇತ್ರ, ಮಗೋಡೀ, ಜ್ಯೇಠಲೋಜ, ಶೇರಥಾ, ಭೇದೇ, ಗೋವ್ಯಂದಲೀ, ಕಂಟಾಚೋಷಲೀ, ಕೋಹೇಚ, ಚಂದನ, ಥಲಗ್ರಾಮ, ತಾಲೀ, ವನೋಡೀ, ಸೋಹ, ಹಾಥಂಜ, ಕಪಡವಾಣಕ, ವ್ರಜನ್ಹೋರೀ, ಫೀಣಾ, ವಗೋಲ, ದೃಣ, ಧಲಜಾ, ಚಾರಣ, ಸಿದ್ಧಾ, ಭಾಲಜಾ, ಮಹೋವೀ, ಆಈಯಾ, ಮಲೀಆ, ಗೋಧರೀ, ವಾಠಸುಹಾಲೀ, ಮಾಣಜಾ, ಸಾನದೀಯಾ, ಆನಂದೀಯಾ, ಪಾಟಡೀಅ, ಟೇಕೋಲೀಯಾ, ಗಂಭೀ, ಧಣೀಆ, ಮಾತ್ರ, ನಾತವೋರಾ, ವಲೋಲಾ, ರಾಂತ್ಯಜಾ, ರೂಪೋಲಾ, ಬೋಧಣೀ, ಛತ್ರೋಟಾ, ಅಲುಏವಾ, ವಾಸತಡೀ, ಜಾಷಾಸಣಾ, ಗೋತೀಯಾ, ಚರಣೀಯಾ, ದುಧೀಯಾ, ಹಾಲೋಲಾ, ವೈಹೋಲಾ, ಅಸಾಲಾ, ನಾಲಾಡಾ, ದೇಹೋಲೊ, ಸೌಹಾಸೀಯಾ, ಸಂಹಾಲೀಯಾ,

CC-0. Jangamwadi Math Collection. Digitized by eGangotri

ಸ್ವಸ್ಥಾನಂ ಪಂಚ ಪಂಚಾಶದ್ಗ್ರಾಮಾ ಏತೇಹ್ಯನುಕ್ರಮಾತ್ ।
ದತ್ತಾ ರಾಮೇಣ ವಿಧಿವತ್ಕೃತ್ವಾ ವಿಪ್ರೇಭ್ಯ ಏವ ಚ ॥ ೩೩ ॥
ಅತಃ ಪರಂ ಪ್ರವಕ್ಷ್ಯಾಮಿ ಸ್ವಸ್ಥಾನಸ್ಯ ಚ ಗೋತ್ರಜಾನ್ ।
ತಥಾ ಹಿ ಪ್ರವರಾಂಶ್ಚೈವ ಯಥಾವದ್ವಿಧಿಪೂರ್ವಕಂ ॥ ೩೪ ॥
ಜ್ಞಾತ್ವಾ ತು ಗೋತ್ರದೇವೀಂ ಚ ತಥಾ ಪ್ರವರ ಮೇವ ಚ ।
ಸ್ವಸ್ಥಾನಂ ಜಾಯತೇ ಚೈವ ದ್ವಿಜಾಃ ಸ್ವಸ್ಥಾನವಾಸಿನಃ ॥ ೩೫ ॥

ನಾರದ ಉವಾಚ :—

ಕಥಂ ಚ ಜಾಯತೇ ಗೋತ್ರಂ ಕಥಂ ತು ಜ್ಞಾಯತೇ ಕುಲಂ ।
ಕಥಂ ವಾ ಜ್ಞಾಯತೇ ದೇವೀ ತದ್ವದಸ್ವ ಯಥಾರ್ಥತಃ ॥ ೩೬ ॥

ಬ್ರಹ್ಮೋವಾಚ :—

ಸೀತಾಪುರಂ ತು ಪ್ರಥಮಂ ಪ್ರವರದ್ವಯಮೇವ ಚ ।
ಕುಶವತ್ಸೌ ತಥಾ ಚಾತ್ರ ಮಯಾ ತೇ ಪರಿಕೀರ್ತಿತೌ ॥ ೩೭ ॥
೧ ಶ್ರೀಕ್ಷೇತ್ರೇ ದ್ವಿತೀಯಂ ಚೈವ ಗೋತ್ರಾಣಾಂ ತ್ರಯಮೇವ ಚ ।
ಭಾಂದನಸಸ್ತಥಾವತ್ಸಸ್ತೃತೀಯಂ ಕುಶಮೇವ ಚ ॥ ೩೮ ॥
ತೃತೀಯಂ ಮುದ್ಗಲಂ ಚೈವ ಕುಶಭಾರದ್ವಾಜಮೇವ ಚ ೩ ।
ಶೋಹೋಲೀಚ ಚತುರ್ಥಂ ವೈ ಕುಶಪ್ರವರಮೇವ ಚ ॥ ೩೯ ॥

---

ಸಂಹಾಲೀಯಾ, ಎಂಬ ಐವತ್ತೈದುಗ್ರಾಮಗಳನ್ನು ರಾಮನು ಬ್ರಾಹ್ಮಣರಿಗೆ ಕೊಟ್ಟನು.

೩೪. ಇನ್ನು ಮುಂದೆ ಆ ಸ್ಥಾನದ ಬ್ರಾಹ್ಮಣರ ಗೋತ್ರಜರನ್ನೂ, ಪ್ರವರಗಳನ್ನೂ ಕ್ರಮದಂತೆ ಹೇಳುವೆನು.

೩೫. ಗೋತ್ರದೇವಿಯನ್ನೂ, ಪ್ರವರವನ್ನೂ ತಿಳಿದುಕೊಂಡರೆ ಬ್ರಾಹ್ಮಣರು ಸ್ವಸ್ಥಾನವಾಸಿಗಳಾಗುವರು.

೩೬. ನಾರದನು ಹೇಳುತ್ತಾನೆ:—ಗೋತ್ರ, ಕುಲ, ಗೋತ್ರದೇವಿ ಇವರನ್ನು ತಿಳಿದುಕೊಳ್ಳುವ ಬಗೆ ಹೇಗೆ? ಅದನ್ನು ಯಥಾರ್ಥವಾಗಿ ಹೇಳು.

೩೭. ಬ್ರಹ್ಮನು ಹೇಳುತ್ತಾನೆ:—ಮೊದಲನೆ ಸೀತಾಪುರಕ್ಕೆ ಕುಶ, ವತ್ಸ ಎಂಬ ಎರಡು ಪ್ರವರಗಳು.

೩೮. ಎರಡನೆ ಶ್ರೀ ಕ್ಷೇತ್ರಕ್ಕೆ ಭಾಂದನಸ, ವತ್ಸ, ಕುಶ ಎಂಬ ಮೂರು ಪ್ರವರಗಳು.

೩೯. ಮೂರನೆ ಕ್ಷೇತ್ರಕ್ಕೆ ಮುದ್ಗಲ, ಕುಶ, ಭಾರದ್ವಾಜ ಪ್ರವರಗಳು. ಶೋಹೋಲೀ ಎಂಬ ನಾಲ್ಕನೇ ಕ್ಷೇತ್ರಕ್ಕೆ ಕುಶ ಎಂಬ ಪ್ರವರವು.

CC-0. Jangamwadi Math Collection. Digitized by eGangotri

ಜ್ಯೇಷ್ಠಲಾ ಪಂಚಮುಶ್ಚೈವ ವತ್ಸಕುಶೌ ಪ್ರಕೀರ್ತಿತೌ ೫।
ಶ್ರೇಯಸ್ಥಾನಂ ಹಿ ಷಷ್ಠಂ ವೈ ಭಾರದ್ವಾಜಃ ಕುಶಸ್ತಥಾ ॥ ೪೦ ॥
ದಂತಾಲೀ ಸಪ್ತಮುಂ ಚೈವ ಭಾರದ್ವಾಜಃ ಕುಶಸ್ತಥಾ ೧।
ವಟಸ್ಥಾನಮುಷ್ಟಮುಂ ಚ ನಿಬೋಧ ಸುತಸತ್ತಮ ॥ ೪೧ ॥
ತತ್ರ ಗೋತ್ರಂ ಕುಶಂ ಕುತ್ಸಂ ಭಾರದ್ವಾಜಸ್ತಥೈವ ಚ।
ರಾಜ್ಞಃ ಪುರಂ ನವಮುಂ ಚ ಭಾರದ್ವಾಜಪ್ರವರಮೇವ ಚ ೯ ॥ ೪೨ ॥
ಕೃಷ್ಣವಾಟಂ ದಶಮುಂ ಚೈವ ಕುಶಪ್ರವರಮೇವ ಚ।
ದಹಲೋಡಮೇಕಾದಶಂ ವತ್ಸಪ್ರವರಮೇವ ಹಿ ॥ ೪೩ ॥
ಚೇಖಲೀ ದ್ವಾದಶಂ ಪೌಕಕುಶಪ್ರವರಮೇವ ಚ ॥ ೪೪ ॥
ಚಾಂಚೋದಖೇ ೧೨ ದೇಹೊಲೋಡೀ ಆತ್ರೇಯಶ್ಚ ವತ್ಸಕುತ್ಸಕಶ್ಚೈವ।
ಭಾರದ್ವಾಜೀ ಕೋಣಾಯಾ ಚ ಭಾರದ್ವಾಜ ಗೋಲಂ ದೃಣಾಶಕುಸ್ತಥಾ ॥
ಥಲತ್ಯಜಾದ್ವಯೇ ಚೈವ ಕುಶಧಾರಣಮೇವ ಚ।
ನಾರಣಸಿದ್ಧಾ ಚ ಸ್ವಸ್ಥಾನಂ ಕುತ್ಸಂ ಗೋತ್ರಂ ಪ್ರಕೀರ್ತಿತಂ ॥ ೪೬ ॥
ಭಾಲಜಾಂ ಕುತ್ಸವತ್ಸೌ ಚ ಮೋಹೋವೀ ಆಕುಶಸ್ತಥಾ।
ಈಯಾಶ್ಲೀಆ ಶಾಂಡಿಲಶ್ಚ ಗೋಧರೀ ಪಾತ್ರಮೇವ ಚ ॥ ೪೭ ॥

---

೪೦. ಐದನೆ ಜ್ಯೇಷ್ಠಲಾಕ್ಷೇತ್ರಕ್ಕೆ ವತ್ಸ, ಕುಶ ಪ್ರವರಗಳು. ಶ್ರೇಯ ಸ್ಥಾನವೆಂಬ ಆರನೆ ಕ್ಷೇತ್ರಕ್ಕೆ ಭಾರದ್ವಾಜ, ಕುಶ ಪ್ರವರಗಳು.

೪೧–೪೨. ಏಳನೆ ದಂತಾಲೀ ಕ್ಷೇತ್ರಕ್ಕೆ ಭಾರದ್ವಾಜ, ಕುಶ ಪ್ರವರಗಳು. ಎಂಟನೆ ವಟಸ್ಥಾನಕ್ಕೆ ಕುಶ, ಕುತ್ಸ, ಭಾರದ್ವಾಜ ಪ್ರವರಗಳು. ಒಂಬತ್ತನೆ ರಾಜಪುರಕ್ಕೆ ಭಾರದ್ವಾಜ ಪ್ರವರವು.

೪೩. ಹತ್ತನೆ ಕೃಷ್ಣವಾಟಕ್ಷೇತ್ರಕ್ಕೆ ಕುಶಪ್ರವರವು. ದಹಲೋಡವೆಂಬ ಹನ್ನೊಂದನೆ ಕ್ಷೇತ್ರಕ್ಕೆ ವತ್ಸಪ್ರವರವು.

೪೪. ಹನ್ನೆರಡನೆ ಚೇಖಲೀ ಕ್ಷೇತ್ರಕ್ಕೆ ಪೌಕಕುಶಪ್ರವರವು.

೪೫–೪೬. ಚಾಂಚೋದಖಕ್ಷೇತ್ರಕ್ಕೆ ಆತ್ರೇಯ ಪ್ರವರವು. ದೇಹೊಲೋಡೀ ಕ್ಷೇತ್ರಕ್ಕೆ ವತ್ಸಕುತ್ಸಕಪ್ರವರವು, ಭಾರದ್ವಾಜೀ ಕೋಣಾಕ್ಷೇತ್ರಕ್ಕೆ ಭಾರದ್ವಾಜ, ಗೋಲಂದೃಣ, ಆಕುಶ ಪ್ರವರಗಳು, ಥಲತ್ಯಜಾ ಕ್ಷೇತ್ರಗಳಿಗೆ ಕುಶಧಾರಣ ಪ್ರವರಗಳು. ನಾರಣ ಸಿದ್ಧಾಕ್ಷೇತ್ರಕ್ಕೆ ಕುತ್ಸಪ್ರವರವು.

೪೭. ಭಾಲಜಾಕ್ಷೇತ್ರಕ್ಕೆ ಕುತ್ಸವತ್ಸ ಪ್ರವರಗಳು, ಮೋಹೋವೀ ಕ್ಷೇತ್ರಕ್ಕೆ ಆಕುಶಪ್ರವರವು. ಈ ಯಾಶ್ಲೀಆಕ್ಷೇತ್ರಕ್ಕೆ ಶಾಂಡಿಲಪ್ರವರವು. ಗೋಧರಿಗೆ ಪಾತ್ರಪ್ರವರವು.

CC-0. Jangamwadi Math Collection. Digitized by eGangotri

ಆನಂದೀಯಾ ಕ್ಷೇ ಚೈವ ಭಾರದ್ವಾಜ ।
ಶಾಂಡಿಲಶ್ಚೈವ ಪಾಟಡೀಅ ಕುಶಮೇವ ಚ ॥ ೪೮ ॥
ವಾಸಂಡೀಅಶ್ಚೈವ ಜಾಸ್ವಾ ಕೌತ್ಸಮಣಾ ।
ವತ್ಸ ಆತ್ರೇಯಔ ಗೀತಾ ಆಕುಶ ಗೌತಮೌ ॥ ೪೯ ॥
ಚರಣೀ ಆ ಭಾರದ್ವಾಜಃ ದುಧೀಆಧಾರಣಸಾ ಹಿ ।
ಆಹೋ ಸೋನ್ನಾಮಾಂಡಿಲ್ಯ ಸ್ತಥಾ ॥ ೫೦ ॥
ವೈಲೋಲಾ ಹುಶಶ್ಚೈವಾ ಅಸಾಲಾ ।
ಕುಶಶ್ಚೈವ ಧಾರಣಾ ಚ ದ್ವಿತೀಯಕಂ ॥ ೫೧ ॥
ನಾಲೋಲಾ ವತ್ಸಧಾರಣೀಯಾ ಚ ದೇಲೋಲಾ ಕುತ್ಸಮೇವ ಚ ।
ಸೋಹಾಸೀಯಾ ಭಾರದ್ವಾಜ ಕುಶವತ್ಸಮೇವ ಚ ॥ ೫೨ ॥
ಸುಹಾಲೀ ಆ ವತ್ಸಂ ವೈ ಪ್ರೋಕ್ತಂ ಗೋತ್ರಾಣಿ ಯಥಾಕ್ರಮಂ ।
ಮಯಾ ಪ್ರೋಕ್ತಾನಿ ಚೈವಾತ್ರ ಸ್ವಸ್ಥಾನಾನಿ ಯಥಾಕ್ರಮಂ ॥ ೫೩ ॥
ಶೀತವಾಡಿಯಾ ಯೇ ಪ್ರೋಕ್ತಾಃ ಕುಶೋ ವತ್ಸಸ್ತಥೈವ ಚ ।
ವಿಶ್ವಾಮಿತ್ರೋ ದೇವರಾತಸ್ತೃತೀಯೋ ದಲಮೇವ ಚ ॥ ೫೪ ॥
ಭಾರ್ಗವಚ್ಯಾವನಾಪ್ನವಾನೌರ್ವಜಮದಗ್ನಿರೇವ ಹಿ ।
ವಚಾದ್ರ್ವಶೇಷಾವುಟಲಾ ಗೋತ್ರದೇವ್ಯಃ ಪ್ರಕೀರ್ತಿತಾಃ ॥ ೫೫ ॥

॥ ಇತಿ ಪ್ರಥಮಂ ಗೋತ್ರಂ ॥

---

೪೮. ಆನಂದೀಯಾ ಕ್ಷೇತ್ರಕ್ಕೆ ಭಾರದ್ವಾಜ, ಶಾಂಡಿಲ ಪ್ರವರಗಳು, ಪಾಟಡೀಯಾ ಕ್ಷೇತ್ರಕ್ಕೆ ಕುಶಪ್ರವರವು.

೪೯. ವಾಸಂಡಿಯಾ, ಜಾಸ್ವಾ, ಕೌತ್ಸಮಣಾ ಕ್ಷೇತ್ರಗಳಿಗೆ ವತ್ಸ, ಆತ್ರೇಯ, ಕುಶ ಗೌತಮ ಪ್ರವರಗಳು.

೫೦. ಚರಣೀಯಾ ಕ್ಷೇತ್ರಕ್ಕೆ ಭಾರದ್ವಾಜಪ್ರವರವು, ದುಧೀ ಕ್ಷೇತ್ರಕ್ಕೆ ಆಧಾರಣಸಾ ಪ್ರವರವು ಸೊನ್ನಾ ಕ್ಷೇತ್ರಕ್ಕೆ ಮಾಂಡಿಲ್ಯ ಪ್ರವರವು.

೫೧. ವೈಲೋಲಾ ಕ್ಷೇತ್ರಕ್ಕೆ ಹುಶಪ್ರವರವು, ಅಸಾಲಾಕ್ಷೇತ್ರಕ್ಕೆ ಕುಶ, ಧಾರಣಾ ಪ್ರವರಗಳು.

೫೨. ನಾಲೋಲಾ ಕ್ಷೇತ್ರಕ್ಕೆ ವತ್ಸಧಾರಣೀಯಾ ಪ್ರವರಗಳು, ದೇಲೋಲಾಕ್ಷೇತ್ರಕ್ಕೆ ಕುತ್ಸಪ್ರವರವು. ಸೋಹಾಸೀಯಾ ಕ್ಷೇತ್ರಕ್ಕೆ ಭಾರದ್ವಾಜ, ಕುಶ, ವತ್ಸ ಪ್ರವರಗಳು.

೫೩. ಸುಹಾಲೀಯಾ ಕ್ಷೇತ್ರಕ್ಕೆ ವತ್ಸಪ್ರವರವು. ಹೀಗೆ ಕ್ರಮವಾಗಿ ಸ್ಥಾನಪ್ರವರಗಳನ್ನು ಹೇಳಿರುವೆನು.

೫೪–೫೫. ಶೀತವಾಡಿಯಕ್ಕೆ ಕುಶ, ವತ್ಸ, ವಿಶ್ವಾಮಿತ್ರ, ದೇವರಾತ,

CC-0. Jangamwadi Math Collection. Digitized by eGangotri

ಶ್ರೀಕ್ಷೇತ್ರಂ ದ್ವಿತೀಯಂ ಪ್ರೋಕ್ತಂ ಗೋತ್ರ ದ್ವಿತಯಮೇವ ಚ ।
ಛಾಂದನಸಸ್ತಥಾ ವತ್ಸಂ ದೇವೀ ದ್ವಿತಯಮೇವ ಚ ॥ ೫೬ ॥
ಆಂಗಿರಸಾಂಬರೀಷಶ್ಚ ಯೌವನಾಶ್ವಸ್ತಥೈವ ಚ ।
ಭೃಗುಚ್ಯವನ ಆಪ್ನವಾನೌರ್ವ ಜಮದಗ್ನಿ ಮೇವ ಚ ॥ ೫೭ ॥
ದೇವೀ ಭಟ್ಟಾರಿಕಾ ಪ್ರೋಕ್ತಾ ದ್ವಿತೀಯಾ ಶೇಪಲಾ ತಥಾ ।
ಏತದ್ವಂಶೋದ್ಭವಾ ಯೇ ಚ ಶೃಣುತಾನ್ಮುನಿಸತ್ತಮ ॥ ೫೮ ॥
ಸಕ್ರೋಧನಾಃ ಸದಾಚಾರಾಃ ಶ್ರೌತಸ್ಮಾರ್ತಕ್ರಿಯಾಪರಾಃ ।
ಪಂಚಯಜ್ಞರತಾ ನಿತ್ಯಂ ಸಂಬಂಧಂ ಚ ಸಮಾಶ್ರಿತಾಃ ।
ಕ್ಷತಜ್ಞಾಃ ಕ್ರತುಜಾಶ್ಚೈವ ತೇ ಸರ್ವೇ ನೃಪಸತ್ತಮಾಃ ॥ ೫೯ ॥

॥ ಇತಿ ದ್ವಿತೀಯಂ ಗೋತ್ರಂ ॥

ತೃತೀಯಂ ಮಗೋಡೋ ಆ ವೈ ಗೋತ್ರ ದ್ವಿತಯಮೇವ ಚ ।
ಭಾರದ್ವಾಜಸ್ತಥಾ ಕುತ್ಸಂ ದೇವೀ ದ್ವಿತಯಮೇವ ಚ ॥ ೬೦ ॥
ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜಸ್ತಥೈವ ಚ ।
ವಿಶ್ವಾಮಿತ್ರ ದೇವರಾತೌ ಪ್ರವರತ್ರಯಮೇವ ಚ ॥ ೬೧ ॥

---

ಔದಲ, ಭಾರ್ಗವ, ಚ್ಯಾವನ, ಆಪ್ನವಾನ, ಔರ್ವ, ಜಮದಗ್ನಿ ಎಂಬ ಗೋತ್ರಗಳು, ವರ್ಚಾ, ಅರ್ದ್ಧಶೇಷಾ, ಉಟಲಾ ಎಂಬವರು ಗೋತ್ರದೇವಿಯರು. ಇಲ್ಲಿಗೆ ಮೊದಲನೆ ಗೋತ್ರವು ಮುಗಿಯಿತು.

೫೬–೫೭. ಎರಡನೆ ಶ್ರೀಕ್ಷೇತ್ರಕ್ಕೆ ಛಾಂದನಸ, ವತ್ಸ ಗೋತ್ರಗಳು. ಆಂಗಿರಸ, ಆಂಬರೀಷ, ಯೌವನಾಶ್ವ, ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿ ಪ್ರವರಗಳು.

೫೮. ಭಟ್ಟಾರಿಕಾ, ಶೇಪಲಾ ಇವರು ಕುಲದೇವಿಯರು. ಈ ವಂಶದಲ್ಲಿ ಜನಿಸಿದವರನ್ನು ಹೇಳುವೆನು ಕೇಳು.

೫೯. ಈ ವಂಶದವರು ಸಿಟ್ಟುಳ್ಳವರೂ, ಸದಾಚಾರಸಂಪನ್ನರೂ, ಶ್ರೌತ ಸ್ಮಾರ್ತ ಕರ್ಮನಿರತರೂ, ಪಂಚಯಜ್ಞದಲ್ಲಾಸಕ್ತರೂ, ಪರಸ್ಪರ ಸಂಬಂಧವುಳ್ಳವರೂ, ಹಿಂಸೆಯನ್ನರಿತವರೂ, ಯಜ್ಞೋದ್ಭವರೂ, ನೃಪೋತ್ತಮರೂ ಆಗಿರುವರು. ಇಲ್ಲಿಗೆ ಎರಡನೆಯ ಗೋತ್ರ ಮುಗಿಯಿತು.

೬೦. ಮೂರನೆ ಮಗೋಡಕ್ಕೆ ಭಾರದ್ವಾಜ, ಕುತ್ಸಗಳೆಂಬ ಎರಡು ಗೋತ್ರಗಳೂ, ಇಬ್ಬರು ದೇವಿಯರೂ ಇರುವರು.

೬೧. ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ, ವಿಶ್ವಾಮಿತ್ರ, ದೇವರಾತಗಳು ಪ್ರವರಗಳು.

CC-0. Jangamwadi Math Collection. Digitized by eGangotri

ಶೇಷಲಾ ಬುಧಲಾ ಪ್ರೋಕ್ತಾ ಧಾರಶಾಂತಿಸ್ತಥೈವ ಚ ।
ಅಸ್ಮಿನ್ಗ್ರಾಮೇ ಚ ಯೇ ಜಾತಾ ಬ್ರಾಹ್ಮಣಾಃ ಸತ್ಯವಾದಿನಃ ॥ ೬೨ ॥
ದ್ವಿಜಪೂಜಾ ಕ್ರಿಯಾಯುಕ್ತಾ ನಾನಾಯಜ್ಞಕ್ರಿಯಾಪರಾಃ ।
ಅಸ್ಮಿನ್ಗೋತ್ರೇ ಸಮುತ್ಪನ್ನಾ ದ್ವಿಜಾಃ ಸರ್ವೇ ಮುನೀಶ್ವರಾಃ ॥ ೬೩ ॥

॥ ಇತಿ ತೃತೀಯಂ ಗೋತ್ರಂ ॥

ಚತುರ್ಥಂ ಶೀಹೋಲೀಯಾಗ್ರಾಮಂ ಗೋತ್ರದ್ವಿತಯಮೇವ ಚ ।
ವಿಶ್ವಾಮಿತ್ರದೇವರಾತ ತೃತೀಯೌದಲಮೇವ ಚ ॥ ೬೪ ॥
ದೇವೀ ಚಚಾಈ ವೈ ತೇಷಾಂ ಗೋತ್ರದೇವೀ ಪ್ರಕೀರ್ತಿತಾ ।
ಅಸ್ಮಿನ್ಗೋತ್ರೇ ತು ಯೇ ಜಾತಾ ದುರ್ಬಲಾ ದೀನಮಾನಸಾಃ ॥ ೬೫ ॥
ಅಸತ್ಯಭಾಷಿಣೋ ವಿಪ್ರಾ ಲೋಭಿನೋ ನೃಪಸತ್ತಮ ।
ಸರ್ವವಿದ್ಯಾ ಪ್ರವೀಣಾಶ್ಚ ಬ್ರಾಹ್ಮಣಾ ಬ್ರಹ್ಮಸತ್ತಮ ॥ ೬೬ ॥

॥ ಇತಿ ಚತುರ್ಥಂ ಸ್ಥಾನಂ ॥

ಜ್ಯೇಷ್ಠಲೋಜಾ ಪಂಚಮಂ ಚ ಸ್ವಸ್ಥಾನಂ ಪ್ರತಿಕೀರ್ತಿತಂ ।
ವತ್ಸಶೀಯಾ ಕುತ್ಸಶೀಯಾ ಪ್ರವರದ್ವಿತಯಂ ಸ್ಮೃತಂ ॥ ೬೭ ॥
ಆವರಿವ್ರವಾಪ್ರಃ ಯೌವನಾಶ್ವ ಭೃಗುಚ್ಯವನ
ಆಪ್ನೋರ್ವ ಜಮದಗ್ನಿ ಸ್ತಥೈವ ಹಿ ॥ ೬೮ ॥
ಚಚಾಈ ವತ್ಸಗೋತ್ರಸ್ಯ ಶಾಂತಾ ಚ ಕುತ್ಸಗೋತ್ರಜಾ ।
ಏತೈಸ್ತ್ರಿಭಿಃ ಪಂಚಭಿಶ್ಚ ದ್ವಿಜಾ ಬ್ರಹ್ಮಸ್ವರೂಪಿಣಃ ॥ ೬೯ ॥

---

೬೨–೬೩. ಶೇಷಲಾ, ಬುಧಲಾ, ಧಾರಶಾಂತಿಯರು ಕುಲದೇವಿಯರು. ಈ ಗ್ರಾಮದಲ್ಲಿ ಜನಿಸಿದ ಬ್ರಾಹ್ಮಣರು ಸತ್ಯವಾದಿಗಳೂ, ಬ್ರಾಹ್ಮಣಪೂಜಾ ನಿರತರೂ, ಅನೇಕ ಯಜ್ಞಗಳನ್ನೆಸಗುವವರೂ, ಮುನಿವರ್ಯರೂ ಆಗಿರುವರು. ಇಲ್ಲಿಗೆ ಮೂರನೆಯ ಗೋತ್ರವು ಮುಗಿಯಿತು.

೬೪. ನಾಲ್ಕನೆಯ ಶೀಹೋಲಿಯಾಗ್ರಾಮಕ್ಕೆ ಎರಡು ಗೋತ್ರಗಳು. ವಿಶ್ವಾಮಿತ್ರ, ದೇವರಾತ, ಔದಲಗಳು ಪ್ರವರಗಳು.

೬೫–೬೬. ಚಚಾಈಯು ಗೋತ್ರದೇವಿಯು. ಈ ಗೋತ್ರದ ಬ್ರಾಹ್ಮಣರು ಅಶಕ್ತರೂ, ದೈನ್ಯವುಳ್ಳವರೂ, ಸುಳ್ಳಾಡುವವರೂ, ಅತ್ಯಾಶೆಯುಳ್ಳವರೂ, ಸಮಸ್ತವಿದ್ಯೆಗಳಲ್ಲಿ ಕುಶಲರೂ ಆಗಿರುವರು. ಇಲ್ಲಿಗೆ ನಾಲ್ಕನೆ ಸ್ಥಾನವು ಮುಗಿಯಿತು.

೬೭–೬೯. ಐದನೆಯ ಜ್ಯೇಷ್ಠಲೋಜಾಗ್ರಾಮಕ್ಕೆ ವತ್ಸ, ಕುತ್ಸಗೋತ್ರಗಳು, ಆವಾರಿವ್ರವ, ಆಪ್ರ, ಯೌವನಾಶ್ವ, ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿಗಳು ಪ್ರವರಗಳು, ವತ್ಸಗೋತ್ರಕ್ಕೆ ಚಚಾಈಯೂ, ಕುತ್ಸಗೋತ್ರಕ್ಕೆ ಶಾಂತೆಯೂ ಗೋತ್ರದೇವಿಯರು.

CC-0. Jangamwadi Math Collection. Digitized by eGangotri

ಶಾಂತಾ ದಾಂತಾಃ ಸುಶೀಲಾಶ್ಚ ಧನಪುತ್ರೈಶ್ಚ ಸಂಯುತಾಃ ।
ವೇದಾಧ್ಯಯನಹೀನಾಶ್ಚ ಕುಶಲಾಃ ಸರ್ವಕರ್ಮಸು ॥ ೭೦ ॥
ಸುರೂಪಾಶ್ಚ ಸದಾಚಾರಾಃ ಸರ್ವಧರ್ಮೇಷು ನಿಷ್ಠಿತಾಃ ।
ದಾನಧರ್ಮರತಾಃ ಸರ್ವೇ ಅತ್ರಜಾ ಜಲದಾ ದ್ವಿಜಾಃ ॥ ೭೧ ॥
॥ ಇತಿ ಪಂಚಮಂ ಸ್ಥಾನಂ ॥
ಶೇರಥಾಗ್ರಾಮೇಷು ವೈ ಜಾತಾಃ ಪ್ರವರದ್ವಯಸಂಯುತಾಃ ।
ಕುಶಭಾರದ್ವಾಜಾಶ್ಚೈವ ದೇವೀದ್ವಯಂ ತಥೈವ ಚ ॥ ೭೨ ॥
ವಿಶ್ವಾಮಿತ್ರೋ ದೇವರಾತಸ್ತೃತೀಯೋ ದಲ ಏವ ಚ ।
ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜಾಸ್ತಥೈವ ಚ ॥ ೭೩ ॥
ಕಮಲಾ ಚ ಮಹಾಲಕ್ಷ್ಮೀರ್ದ್ವಿತೀಯಾ ಯಕ್ಷಿಣೀ ತಥಾ ।
ಅಸ್ಮಿನ್ಗೋತ್ರೇ ಚ ಯೇ ಜಾತಾಃ ಶ್ರೌತಸ್ಮಾರ್ತರತಾ ಬುಧಾಃ ॥ ೭೪ ॥
ವೇದಾಽಧ್ಯಯನಶೀಲಾಶ್ಚ ತಾಪಸಾಶ್ಚಾಽರಿಮರ್ದನಾಃ ।
ರೋಷಿಣೋ ಲೋಭಿನೋ ದುಷ್ಟಾ ಯಜನೇ ಯಾಜನೇ ರತಾಃ ।
ಬ್ರಹ್ಮಕ್ರಿಯಾಪರಾಃ ಸರ್ವೇ ಬ್ರಾಹ್ಮಣಾಸ್ತೇ ಮಯೋದಿತಾಃ ॥ ೭೫ ॥
॥ ಇತಿ ಷಷ್ಠಂ ಸ್ಥಾನಂ ॥
ದಂತಾಲೀಯಾ ಭಾರದ್ವಾಜ ಕುತ್ಸಶಾಯಾಸ್ತಥೈವ ಚ ।
ಆಂಗಿರಸಬಾರ್ಹಸ್ಪತ್ಯ ಭಾರದ್ವಾಜಾಸ್ತಥೈವ ಚ ॥ ೭೬ ॥

---

೭೦–೭೧. ಈ ಗೋತ್ರದ ಬ್ರಾಹ್ಮಣರು ಶಾಂತರೂ, ಜಿತೇಂದ್ರಿಯರೂ, ಒಳ್ಳೆಯ ನಡತೆಯುಳ್ಳವರೂ, ಧನಪುತ್ರರಿಂದ ಕೂಡಿದವರೂ, ವೇದಾಧ್ಯಯನ ರಹಿತರೂ, ಸಕಲ ಕಾರ್ಯಗಳಲ್ಲಿ ಕುಶಲರೂ, ಸುಂದರರೂ, ಸದಾಚಾರಿಗಳೂ, ಸಕಲಧರ್ಮನಿರತರೂ, ದಾನಾಸಕ್ತರೂ, ಜಲದಾನಮಾಡುವವರೂ ಆಗಿರುವರು. ಇಲ್ಲಿಗೆ ಐದನೆಯ ಸ್ಥಾನವು ಮುಗಿದುದು.

೭೨–೭೫. ಶೇರಥಾಗ್ರಾಮಜರಿಗೆ ಕುಶ, ಭಾರದ್ವಾಜ ಮಹಾಲಕ್ಷ್ಮೀ ಯಕ್ಷಿಣೀ ಎಂಬ ಇಬ್ಬರು ಕುಲದೇವಿಯರು, ವಿಶ್ವಾಮಿತ್ರ, ದೇವರಾತ, ಔದಲ, ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಈ ಗೋತ್ರದ ಬ್ರಾಹ್ಮಣರು ಶ್ರೌತ ಸ್ಮಾರ್ತಕರ್ಮನಿರತರೂ, ವೇದಾಧ್ಯಯನಶೀಲರೂ, ಮುನಿಗಳೂ, ಶತ್ರುನಾಶಕರೂ, ಕೋಪಿಷ್ಠರೂ, ಲೋಭಿಗಳೂ, ದುಷ್ಟರೂ, ಯಜನ ಯಾಜನನಿರತರೂ, ಬ್ರಾಹ್ಮಣ ಕರ್ಮಾಸಕ್ತರೂ ಆಗಿರುವರು. ಇಲ್ಲಿಗೆ ಆರನೆಯ ಸ್ಥಾನವು ಮುಗಿದುದು.

೭೬–೭೮. ದಂತಾಲೀಗ್ರಾಮದವರಿಗೆ ಭಾರದ್ವಾಜ ಕುತ್ಸಗೋತ್ರಗಳು. ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಯಕ್ಷಿಣೀ ಕಮಲೆ

CC-0. Jangamwadi Math Collection. Digitized by eGangotri

ದೇವೀ ಚ ಯಕ್ಷಿಣೀ ಪ್ರೋಕ್ತಾ ದ್ವಿತೀಯಾ ಕಮಲಾ ತಥಾ ।
ಅಸ್ಮಿನ್ಗೋತ್ರೇ ಚ ಯೇ ಜಾತಾ ವಾಡವಾ ಧನಿನಃ ಶುಭಾಃ ॥ ೭೭ ॥
ವಸ್ತ್ರಾಲಂಕರಣೋಪೇತಾ ದ್ವಿಜಭಕ್ತಿಪರಾಯಣಾಃ ।
ಬ್ರಹ್ಮಭೋಜ್ಯಪರಾಃ ಸರ್ವೇ ಸರ್ವೇ ಧರ್ಮಪರಾಯಣಾಃ ॥ ೭೮ ॥

॥ ಇತಿ ಸಪ್ತಮಂ ಸ್ಥಾನಂ ॥

ವಡೋದ್ರೀಯಾನ್ವಯೇ ಜಾತಾಶ್ಚತ್ವಾರಃ ಪ್ರವರಾಃ ಸ್ಮೃತಾಃ ।
ಕುಶಃ ಕುತ್ಸಶ್ಚ ವತ್ಸಶ್ಚ ಭಾರದ್ವಾಜಸ್ತಥೈವ ಚ ॥ ೭೯ ॥
ತತ್ಪ್ರವರಾಣ್ಯಹಂ ವಕ್ಷ್ಯೇ ತಥಾ ಗೋತ್ರಾಣ್ಯನುಕ್ರಮಾತ್ ।
ವಿಶ್ವಾಮಿತ್ರೋ ದೇವರಾತಸ್ತೃತೀಯಔದಲ ಏವ ಚ ॥ ೮೦ ॥
ಆಂಗಿರಸಾಂಬರೀಷಶ್ಚ ಯೌವನಾಶ್ವಸ್ತೃತೀಯಕಃ ।
ಭಾರ್ಗವಚ್ಯಾವನಾಪ್ನವಾನೌರ್ವಜಮದಗ್ನಿಸ್ತಥೈವ ಚ ॥ ೮೧ ॥
ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜಾಸ್ತಥೈವ ಚ ।
ಕಮಲಾ ಕ್ಷೇಮಲಾ ಚೈವ ಧಾರಭಟ್ಟಾರಿಕಾ ತಥಾ ॥ ೮೨ ॥
ಚತುರ್ಥೀ ಕ್ಷೇಮಲಾ ಪ್ರೋಕ್ತಾ ಗೋತ್ರಮಾತಾ ಅನುಕ್ರಮಾತ್ ।
ಅಸ್ಮಿನ್ಗೋತ್ರೇ ತು ಯೇ ಜಾತಾಃ ಪಂಚಯಜ್ಞರತಾಃ ಸದಾ ॥ ೮೩ ॥
ಲೋಭಿನಃ ಕ್ರೋಧಿನಶ್ಚೈವ ಪ್ರಜಾಯಂತೇ ಬಹುಪ್ರಜಾಃ ।
ಸ್ನಾನದಾನಾದಿನಿರತಾಃ ಸದಾವಿನಿರ್ಜಿತೇಂದ್ರಿಯಾಃ ॥ ೮೪ ॥

---

ಯರು ಗೋತ್ರದೇವಿಯರು. ಈ ಗೋತ್ರದ ಬ್ರಾಹ್ಮಣರು ಹಣಗಾರರೂ, ವಸ್ತ್ರಾಲಂಕಾರ ಸಹಿತರೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಬ್ರಾಹ್ಮಣರಿಗೆ ಭೋಜನಮಾಡಿಸುವುದರಲ್ಲಿ ಆಸಕ್ತರೂ, ಧರ್ಮನಿರತರೂ ಆಗಿರುವರು. ಇಲ್ಲಿಗೆ ಏಳನೆಯ ಸ್ಥಾನವು ಮುಗಿದುದು.

೭೯–೮೫. ವಡೋದ್ರೀಯ ವಂಶದವರಿಗೆ ಕುಶ, ಕುತ್ಸ, ವತ್ಸ, ಭಾರದ್ವಾಜ ಎಂಬ ನಾಲ್ಕು ಗೋತ್ರಗಳು. ವಿಶ್ವಾಮಿತ್ರ, ದೇವರಾತ, ಔದಲ, ಆಂಗಿರಸ, ಅಂಬರೀಷ, ಯೌವನಾಶ್ವ, ಭಾರ್ಗವ, ಚ್ಯಾವನ, ಆಪ್ನವಾನ, ಔರ್ವ, ಜಮದಗ್ನಿ, ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಕಮಲಾ, ಕ್ಷೇಮಲಾ, ಧಾರಭಟ್ಟಾರಿಕಾ, ಕ್ಷೇಮಲಾ ಎಂಬವರು ಗೋತ್ರಮಾತೆಯರು. ಈ ಗೋತ್ರದ ದ್ವಿಜರು ಪಂಚಮಹಾಯಜ್ಞನಿರತರೂ, ಲೋಭಿಗಳೂ, ಕೋಪಿಷ್ಠರೂ, ಬಹುಮಂದಿ ಮಕ್ಕಳುಳ್ಳವರೂ, ಸ್ನಾನದಾನಾದಿಗಳಲ್ಲಾಸಕ್ತರೂ, ಜಿತೇಂದ್ರಿಯರೂ, ಬಾವಿ, ಕೆರೆ ಮೊದಲಾದುವುಗಳನ್ನು ನಿರ್ಮಾಣಮಾಡುವವರೂ, ನಿಯಮಶೀಲರೂ, ಗುಣಜ್ಞರೂ,

CC-0. Jangamwadi Math Collection. Digitized by eGangotri

ವಾಪೀಕೂಪತಡಾಗಾನಾಂ ಕರ್ತಾರಶ್ಚ ಸಹಸ್ರಶಃ ।
ವ್ರತಶೀಲಾ ಗುಣಜ್ಞಾಶ್ಚ ಮೂರ್ಖಾ ವೇದವಿವರ್ಜಿತಾಃ ॥ ೮೫ ॥
॥ ಇತ್ಯಷ್ಟಮಂ ಸ್ಥಾನಂ ॥
ಗೋದಣೀಯಾಭಿಧೇ ಗ್ರಾಮೇ ಗೋತ್ರೌ ದ್ವೌ ತತ್ರ ಸಂಸ್ಥಿತೌ ।
ವತ್ಸಗೋತ್ರಂ ಪ್ರಥಮಕಂ ಭಾರದ್ವಾಜಂ ದ್ವಿತೀಯಕಂ ॥ ೮೬ ॥
ಭೃಗುಚ್ಯವನಾಪ್ನವಾನೌರ್ವಪುರೋಧಸಮೇವ ಚ ।
ಶ್ರೀಹರೀ ಪ್ರಥಮಾ ಜ್ಞೇಯಾ ದ್ವಿತೀಯಾ ಯಕ್ಷಣೀ ತಥಾ ॥ ೮೭ ॥
ಅಸ್ಮಿನ್ಗೋತ್ರೋದ್ಭವಾ ವಿಪ್ರಾ ಧನಧಾನ್ಯಸಮನ್ವಿತಾಃ ।
ಸಾಮರ್ಷಾ ಲೌಲ್ಯಹೀನಾಶ್ಚ ದ್ವೇಷಿಣಃ ಕುಟಿಲಾಸ್ತಥಾ ॥ ೮೮ ॥
ಹಿಂಸಿನೋ ಧನಲುಬ್ಧಾಶ್ಚ ಮಯಾ ಪ್ರೋಕ್ತಾಸ್ತು ಭೂಪತೇ ॥ ೮೯ ॥
॥ ಇತಿ ನವಮಂ ಸ್ಥಾನಂ ॥
ಕಂಟವಾಡೀಆ ಗ್ರಾಮೇ ವಿಪ್ರಾಃ ಕುಶಗೋತ್ರಸಮುದ್ಭವಾಃ ।
ಪ್ರವರಂ ತಸ್ಯ ವಕ್ಷ್ಯಾಮಿ ಶೃಣು ತ್ವಂ ಚ ನೃಪೋತ್ತಮ ॥ ೯೦ ॥
ವಿಶ್ವಾಮಿತ್ರೋ ದೇವರಾತ ಉದಲಶ್ಚ ತ್ರಯಃ ಸ್ಮೃತಾಃ ।
ಚಚಾಈ ದೇವೀ ಸಾಪ್ರೋಕ್ತಾ ಶೃಣುತ್ವಂ ನೃಪಸತ್ತಮ ॥ ೯೧ ॥
ಯಜಂತೇ ಕ್ರತುಭಿಸ್ತತ್ರ ಹೃಷ್ಟಚಿತ್ತೈಕಮಾನಸಾಃ ।
ಸರ್ವವಿದ್ಯಾಸು ಕುಶಲಾ ಬ್ರಾಹ್ಮಣಾಃ ಸತ್ಯವಾದಿನಃ ॥ ೯೨ ॥
॥ ಇತಿ ದಶಮಂ ಸ್ಥಾನಂ ॥

---

ಮೂರ್ಖರೂ, ವೇದಬಾಹ್ಯರೂ ಆಗಿರುವರು. ಇಲ್ಲಿಗೆ ಎಂಟನೆಯ ಸ್ಥಾನವು ಮುಗಿದುದು.

೮೬–೮೭. ಗೋದಣೀಯ ಗ್ರಾಮದವರಿಗೆ ವತ್ಸ ಭಾರದ್ವಾಜಗೋತ್ರಗಳು. ಭೃಗುಚ್ಯವನ, ಆಪ್ನುವಾನ, ಔರ್ವ, ಪುರೋಧಸ ಪ್ರವರಗಳು. ಶ್ರೀಹರೀ ಯಕ್ಷಿಣೀ ಇವರು ಗೋತ್ರದೇವಿಯರು.

೮೮–೮೯. ಈ ಗೋತ್ರದ ಬ್ರಾಹ್ಮಣರು ಧನಧಾನ್ಯಸಹಿತರೂ, ಸಿಟ್ಟುಳ್ಳವರೂ, ಸ್ಥಿರಚಿತ್ತರೂ, ದ್ವೇಷವುಳ್ಳವರೂ, ವಕ್ರಸ್ವಭಾವದವರೂ, ಹಿಂಸಕರೂ, ಹಣದಾಸೆಯುಳ್ಳವರೂ ಆಗಿರುವರು. ಇಲ್ಲಿಗೆ ಒಂಬತ್ತನೆಯ ಸ್ಥಾನವು ಮುಗಿದುದು.

೯೦–೯೨. ಕಂಟವಾಡೀಯಾ ಗ್ರಾಮದವರಿಗೆ ಕುಶಗೋತ್ರ, ವಿಶ್ವಾಮಿತ್ರ, ದೇವರಾತ, ಉದಲಪ್ರವರಗಳು. ಚಚಾಈ ಗೋತ್ರದೇವಿಯು, ಈ ಗೋತ್ರದ ಬ್ರಾಹ್ಮಣರು ಯಾಗಮಾಡುವವರೂ, ಸಂತುಷ್ಟಚಿತ್ತರೂ, ಸಕಲ ವಿದ್ಯಾನಿಪುಣರೂ, ಸತ್ಯವಂತರೂ ಆಗಿರುವರು. ಇಲ್ಲಿಗೆ ಹತ್ತನೆಯ ಸ್ಥಾನವು ಮುಗಿದುದು.

CC-0. Jangamwadi Math Collection. Digitized by eGangotri

ವೇಖಲೋಯಾ ಮಯಾ ಪ್ರೋಕ್ತಾ ಕುತ್ಸವಂಶೇ ಸಮುದ್ಭವಾಃ ।
ಪ್ರವರತ್ರಯಸಂಯುಕ್ತಾಃ ಶೃಣು ತ್ವಂ ಚ ನೃಪೋತ್ತಮ ॥ ೯೩ ॥
ವಿಶ್ವಾಮಿತ್ರೋ ದೇವರಾಜಔದಲಶ್ಚೇತಿ ತ್ರಯಃ ಸ್ಮೃತಾಃ ।
ಚಚಾಈ ದೇವೀ ತೇಷಾಂ ವೈ ಕುಲರಕ್ಷಾಕರೀ ಸ್ಮೃತಾ ॥ ೯೪ ॥
ಬ್ರಾಹ್ಮಣಾಶ್ಚ ಮಹಾತ್ಮಾನಃ ಸತ್ವವಂತೋ ಗುಣಾನ್ವಿತಾಃ ।
ತಪಸ್ವಿಯೋಗಿನಶ್ಚೈವ ವೇದವೇದಾಂಗಪಾರಗಾಃ ॥ ೯೫ ॥
ಸಾಧವಶ್ಚ ಸದಾಚಾರಾ ವಿಷ್ಣುಭಕ್ತಿಪರಾಯಣಾಃ ।
ಸ್ನಾನಸಂಧ್ಯಾಪರಾ ನಿತ್ಯಂ ಬ್ರಹ್ಮಭೋಜ್ಯಪರಾಯಣಾಃ ॥ ೯೬ ॥
ಅಸ್ಮಿನ್ವಂಶೇ ಮಯಾಪ್ರೋಕ್ತಾಃ ಶೃಣುತ್ವಂ ಚ ಅತಃಪರಂ ॥ ೯೭ ॥

॥ ಇತ್ಯೇಕಾದಶಂ ಸ್ಥಾನಂ ॥

ದೇಹಲೋಡೀಆ ಯೇ ಪ್ರೋಕ್ತಾಃ ಕುತ್ಸಪ್ರವರ ಸಂಯುತಾಃ ।
ಆಂಗಿರಸ ಆಂಬರೀಷೋ ಯುವನಾಶ್ವಸ್ತೃತೀಯಕಃ ॥ ೯೮ ॥
ಗೋತ್ರದೇವೀ ಮಯಾಪ್ರೋಕ್ತಾ ಶ್ರೀಶೇಷದುರ್ಬಲೇತಿ ಚ ।
ಕುತ್ಸವಂಶೇ ಚ ಯೇ ಜಾತಾಃ ಸದ್ವೃತ್ತಾಃ ಸತ್ಯಭಾಷಿಣಃ ॥ ೯೯ ॥
ವೇದಾಧ್ಯಯನ ಶೀಲಾಶ್ಚ ಪರಚ್ಛಿದ್ರೈಕದರ್ಶಿನಃ ।
ಸಾಮರ್ಷಾ ಲೌಲ್ಯತೋ ಹೀನಾ ದ್ವೇಷಿಣಃ ಕುಟಿಲಾಸ್ತಥಾ ॥ ೧೦೦ ॥
ಹಿಂಸಿನೋ ಧನಲುಬ್ಧಾಶ್ಚ ಯೇ ಚ ಕುತ್ಸಸಮುದ್ಭವಾಃ ॥ ೧೦೧ ॥

॥ ಇತಿ ದ್ವಾದಶಂ ಸ್ಥಾನಂ ॥

---

೯೩–೯೪. ವೇಖಲೋಯಾ ಗ್ರಾಮದವರು ಕುತ್ಸಗೋತ್ರರು. ವಿಶ್ವಾಮಿತ್ರ, ದೇವರಾಜ, ಔದಲ ಎಂಬ ಪ್ರವರಗಳು. ಚಚಾಈಯು ಕುಲದೇವಿಯು.

೯೫–೯೭. ಈ ಗೋತ್ರದ ಬ್ರಾಹ್ಮಣರು ಮಹಾತ್ಮರೂ, ಬಲಶಾಲಿಗಳೂ, ಗುಣವಂತರೂ. ತಪಸ್ವಿಗಳೂ, ಯೋಗಿಗಳೂ, ವೇದವೇದಾಂಗ ಪಾರಂಗತರೂ, ಸಜ್ಜನರೂ, ಸದಾಚಾರಿಗಳೂ, ವಿಷ್ಣುಭಕ್ತಿನಿರತರೂ, ಸ್ನಾನಸಂಧ್ಯಾವಂದನಾಸಕ್ತರೂ, ಬ್ರಾಹ್ಮಣರನ್ನು ಭೋಜನಮಾಡಿಸುವವರೂ ಆಗಿರುವರು. ಇಲ್ಲಿಗೆ ಹನ್ನೊಂದನೆಯ ಸ್ಥಾನವು ಮುಗಿಯಿತು.

೯೮–೧೦೧. ದೇಹಲೋಡಿಆ ಗ್ರಾಮದವರಿಗೆ ಕುತ್ಸಗೋತ್ರವು. ಆಂಗಿರಸ, ಆಂಬರೀಷ, ಯುವನಾಶ್ವ ಪ್ರವರಗಳು, ಶ್ರೀಶೇಷದುರ್ಬಲೆಯು ಗೋತ್ರದೇವಿಯು, ಈ ಕುತ್ಸವಂಶದ ದ್ವಿಜರು ಒಳ್ಳೆಯ ನಡತೆಯುಳ್ಳವರೂ, ಸತ್ಯವಂತರೂ, ವೇದಾಧ್ಯಯನಶೀಲರೂ, ಇತರರ ದೋಷಗಳಲ್ಲಿ ದೃಷ್ಟಿಯುಳ್ಳವರೂ, ಕೋಪಿಷ್ಠರೂ, ಸ್ಥಿರಚಿತ್ತರೂ, ದ್ವೇಷವುಳ್ಳವರೂ, ವಕ್ರ

CC-0. Jangamwadi Math Collection. Digitized by eGangotri

ಕೋಹೇಚ ಬ್ರಾಹ್ಮಣಾಃ ಪ್ರೋಕ್ತಾ ಗೋತ್ರತ್ರಿತಯ ಸಂಯುತಾಃ ।
ಭಾರದ್ವಾಜಸ್ತಥಾವತ್ಸಸ್ತೃತೀಯಃ ಕುಶ ಏವಚ ॥ ೧೦೨ ॥
ಪ್ರವರಾಣ್ಯಹಂ ತಥಾವಕ್ಷ್ಯೇ ಯಥಾ ಗೋತ್ರಕ್ರಮೇಣ ಹಿ ।
ಭಾರ್ಗವಚ್ಯವನಾಪ್ನವಾನೌರ್ವ ಜಮದಗ್ನಿಸ್ತಥೈವ ಚ ॥ ೧೦೩ ॥
ಕುಶಪ್ರವರಂ ತೃತೀಯಂ ತು ಪ್ರವರ ತ್ರಯಮೇವ ಚ ।
ವಿಶ್ವಾಮಿತ್ರೋ ದೇವರಾತಸ್ತೃತೀಯಔದಲಮೇವ ಚ ॥ ೧೦೪ ॥
ಯಕ್ಷಿಣೀ ಪ್ರಥಮಾ ಪ್ರೋಕ್ತಾ ದ್ವಿತೀಯಾ ಶೀಹುರೀ ತಥಾ ।
ತೃತೀಯಾ ಚಚಾಈ ಪ್ರೋಕ್ತಾ ಯಥಾನುಕ್ರಮಗೋತ್ರಜಾ ॥ ೧೦೫ ॥
ಅಸ್ಮಿನ್ಗೋತ್ರೇ ಭವಾ ವಿಪ್ರಾಃ ಶ್ರೌತಸ್ಮಾರ್ತರತಾ ಬುಧಾಃ ।
ವೇದಾಽಧ್ಯಯನ ಶೀಲಾಶ್ಚ ತಾಪಸಾಶ್ಚಾರಿಮರ್ದನಾಃ ॥ ೧೦೬ ॥
ರೋಷಿಣೋ ಲೋಭಿನೋ ದುಷ್ಟಾ ಯಜನೇ ಯಾಜನೇ ರತಾಃ ।
ಬ್ರಹ್ಮಕರ್ಮಪರಾಃ ಸರ್ವೇ ಮಯಾ ಪ್ರೋಕ್ತಾ ದ್ವಿಜೋತ್ತಮಾಃ ॥೧೦೭॥

॥ ಇತಿ ತ್ರಯೋದಶಂ ಸ್ಥಾನಂ ॥

ಚಾಂದಣಖೇಡೇ ಯೇ ಜಾತಾ ಭಾರದ್ವಾಜಸಮುದ್ಭವಾಃ ।
ಆಂಗಿರಸೋ ಬಾರ್ಹಸ್ಪತ್ಯ ಸ್ತೃತೀಯೋ ಭಾರದ್ವಾಜಸ್ತಥಾ ॥ ೧೦೮ ॥
ಯಕ್ಷಿಣೀ ಚಾಸ್ಯ ವೈ ದೇವೀ ಪ್ರೋಕ್ತಾ ವ್ಯಾಸೇನ ಧೀಮತಾ ।
ಭಾರದ್ವಾಜಾಸ್ತು ಯೇ ಜಾತಾ ದ್ವಿಜಾ ಬ್ರಹ್ಮಸ್ವರೂಪಿಣಃ ॥ ೧೦೯ ॥

---

ಸ್ವಭಾವದವರೂ, ಹಿಂಸಕರೂ, ಹಣದಾಶೆಯುಳ್ಳವರೂ ಆಗಿರುವರು. ಇಲ್ಲಿಗೆ ಹನ್ನೆರಡನೆಯ ಸ್ಥಾನವು ಮುಗಿದುದು.

೧೦೨–೧೦೫. ಕೋಹಗ್ರಾಮದ ಬ್ರಾಹ್ಮಣರಿಗೆ ಭಾರದ್ವಾಜ, ವತ್ಸ, ಕುಶ ಎಂಬ ಗೋತ್ರಗಳು. ಭಾರ್ಗವ, ಚ್ಯವನ, ಆಪ್ನವಾನ, ಔರ್ವ, ಜಮದಗ್ನಿ, ಕುಶ, ವಿಶ್ವಾಮಿತ್ರ, ದೇವರಾತ, ಔದಲಪ್ರವರಗಳು. ಯಕ್ಷಿಣಿ, ಶೀಹುರೀ, ಚಚಾಈ ಎಂದು ಮೂರುಜನ ಗೋತ್ರದೇವಿಯರು.

೧೦೬–೧೦೭. ಈ ಗೋತ್ರದ ಬ್ರಾಹ್ಮಣರು ಶ್ರೌತಸ್ಮಾರ್ತಕರ್ಮನಿರತರೂ, ವೇದಾಧ್ಯಯಶೀಲರೂ, ತಪಸ್ವಿಗಳೂ, ಶತ್ರುನಾಶಕರೂ, ಕೋಪಿಷ್ಠರೂ, ಲೋಭಿಗಳೂ, ದುಷ್ಟರೂ, ಯಜನಯಾಜನಾಸಕ್ತರೂ, ಬ್ರಾಹ್ಮಕರ್ಮಗಳಲ್ಲಿ ನಿರತರೂ ಆಗಿರುವರು. ಇಲ್ಲಿಗೆ ಹದಿಮೂರನೆಯ ಸ್ಥಾನವು ಮುಗಿದುದು.

೧೦೮. ಚಾಂದಣಖೇಡಗ್ರಾಮದವರಿಗೆ ಭಾರದ್ವಾಜಗೋತ್ರ, ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು.

೧೦೯–೧೧೧. ಯಕ್ಷಿಣಿಯು ಗೋತ್ರದೇವಿಯು. ಭಾರದ್ವಾಜಗೋತ್ರದ

CC-0. Jangamwadi Math Collection. Digitized by eGangotri

ಶಾಂತಾ ದಾಂತಾಃ ಸುಶೀಲಾಶ್ಚ ಧನಪುತ್ರಸಮನ್ವಿತಾಃ ।
ಧರ್ಮಾರಣ್ಯೇ ದ್ವಿಜಾಃ ಶ್ರೇಷ್ಠಾಃ ಕ್ರತುಕರ್ಮಣಿ ಕೋವಿದಾಃ ॥ ೧೧೦ ॥
ಗುರುಭಕ್ತಿರತಾಃ ಸರ್ವೇ ಭಾಸಯಂತಿ ಸ್ವಕಂ ಕುಲಂ ॥ ೧೧೧ ॥

॥ ಇತಿ ಚತುರ್ದಶಂ ಸ್ಥಾನಂ ॥

ಥಲಗ್ರಾಮೇ ಚ ಯೇ ಜಾತಾ ಭಾರದ್ವಾಜ ಸಮುದ್ಭವಾಃ ।
ಆಂಗಿರಸೋ ಬಾರ್ಹಸ್ಪತ್ಯೋ ಭಾರದ್ವಾಜಸ್ತೃತೀಯಕಃ ॥ ೧೧೨ ॥
ಅಸ್ಮಿನ್ಗೋತ್ರೇ ಚ ಯೇ ಜಾತಾ ವಾಡವಾ ಧನಿನಃ ಶುಭಾಃ ।
ವಸ್ತ್ರಾಲಂಕರಣೋಪೇತಾ ದ್ವಿಜಭಕ್ತಿಪರಾಯಣಾಃ ॥ ೧೧೩ ॥
ಬ್ರಹ್ಮಭೋಜ್ಯಪರಾಃ ಸರ್ವೇ ಸರ್ವೇ ಧರ್ಮಪರಾಯಣಾಃ ।
ಗೋತ್ರದೇವೀ ಮಯಾ ಖ್ಯಾತಾ ಯಕ್ಷಿಣೀ ನಾಮರಕ್ಷಿಣೀ ॥ ೧೧೪ ॥

॥ ಇತಿ ಪಂಚದಶಂ ಸ್ಥಾನಂ ॥

ಮೋಊತ್ರೀಯಾಶ್ಚ ಯೇ ಜಾತಾ ದ್ವೌ ಗೋತ್ರೌ ತತ್ರ ಕೀರ್ತಿತೌ ।
ಭಾರದ್ವಾಜಃ ಕಶ್ಯಪಶ್ಚ ದೇವೀದ್ವಿತಯಮೇವ ಚ ॥ ೧೧೫ ॥
ಚಾಮುಂಡಾ ಯಕ್ಷಿಣೀ ಚೈವ ದೇವೀ ಚಾತ್ರ ಪ್ರಕೀರ್ತಿತಾ ।
ಕಶ್ಯಪಾಽವತ್ಸಾರಶ್ಚೈವ ನೈಧ್ರುವಶ್ಚ ತೃತೀಯಕಃ ॥ ೧೧೬ ॥
ಆಂಗಿರಸೋ ಬಾರ್ಹಸ್ಪತ್ಯೋ ಭಾರದ್ವಾಜಸ್ತೃತೀಯಕಃ ।
ಪ್ರಿಯವಾಕ್ಯಾ ಮಹಾದಕ್ಷಾ ಗುರುಭಕ್ತಿರತಾಃ ಸದಾ ॥ ೧೧೭ ॥

---

ದ್ವಿಜರು ಬ್ರಹ್ಮರೂಪರೂ, ಶಾಂತರೂ, ಜಿತೇಂದ್ರಿಯರೂ, ಒಳ್ಳೆಯ ನಡತೆಯುಳ್ಳವರೂ, ಹಣ, ಮಕ್ಕಳು ಇವರಿಂದ ಕೂಡಿದವರೂ, ಯಜ್ಞಕರ್ಮದಲ್ಲಿ ಚತುರರೂ, ಗುರುಭಕ್ತಿಯುಕ್ತರೂ ಆಗಿ ತಮ್ಮ ವಂಶವನ್ನು ಪ್ರಕಾಶಗೊಳಿಸುವರು. ಇಲ್ಲಿಗೆ ಹದಿನಾಲ್ಕನೆಯ ಸ್ಥಾನವು ಮುಗಿದುದು.

೧೧೨. ಥಲಗ್ರಾಮದಲ್ಲಿ ಜನಿಸಿದವರಿಗೆ ಭಾರದ್ವಾಜ ಗೋತ್ರವು. ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು.

೧೧೩-೧೧೪. ಈ ಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣರು ಹಣಗಾರರೂ, ವಸ್ತ್ರಾಲಂಕಾರಗಳಿಂದ ಸಹಿತರೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಬ್ರಹ್ಮಭೋಜ್ಯದಲ್ಲಾಸಕ್ತರೂ, ಧರ್ಮನಿರತರೂ ಆಗಿರುವರು. ಇವರಿಗೆ ಯಕ್ಷಿಣೀ ಎಂಬ ಗೋತ್ರದೇವಿಯು ರಕ್ಷಕಳಾಗಿರುವಳು. ಇಲ್ಲಿಗೆ ಹದಿನೈದನೆಯ ಸ್ಥಾನವು ಮುಗಿದುದು.

೧೧೫-೧೨೧. ಮೋಲೂತ್ರೀಯ ಗ್ರಾಮದಲ್ಲಿ ಹುಟ್ಟಿದ ಬ್ರಾಹ್ಮಣರಿಗೆ ಭಾರದ್ವಾಜ, ಕಶ್ಯಪ ಎಂಬ ಎರಡು ಗೋತ್ರಗಳು. ಚಾಮುಂಡಾ, ಯಕ್ಷಿಣೀ ಇವರಿಬ್ಬರು ಗೋತ್ರದೇವಿಯರು. ಕಶ್ಯಪ, ಅವತ್ಸಾರ, ನೈಧ್ರುವ, ಆಂಗಿರಸ,

CC-0. Jangamwadi Math Collection. Digitized by eGangotri

ಸದಾ ಪ್ರತಿಷ್ಠಾವಂತಶ್ಚ ಸರ್ವಭೂತಹಿತೇ ರತಾಃ ।
ಯಜಂತಿ ತೇ ಮಹಾಯಜ್ಞಾನ್ಕಾಶ್ಯಪಾ ಯೇ ದ್ವಿಜಾತಯಃ ॥ ೧೧೮ ॥
ಸರ್ವೇಷಾಂ ಯಾಜನಕರಾ ಯಾಜ್ಞಿಕಾಃ ಪರಮಾಃ ಸ್ಮೃತಾಃ ॥ ೧೧೯ ॥

॥ ಇತಿ ಷೋಡಶಂ ಸ್ಥಾನಂ ॥

ಹಾಥೀಜಣೇ ಚ ಯೇ ಜಾತಾ ವತ್ಸಾ ಭಾರದ್ವಾಜಾಸ್ತಥಾ ।
ಜ್ಞಾನಜಾ ಯಕ್ಷಿಣೀ ಚೈವ ಗೋತ್ರದೇವ್ಯೌ ಪ್ರಕೀರ್ತಿತೇ ॥ ೧೨೦ ॥
ಅಸ್ಮಿನ್ಗೋತ್ರೇ ಚ ಯೇ ಜಾತಾಃ ಪಂಚಯಜ್ಞರತಾಃ ಸದಾ ।
ಲೋಭಿನಃ ಕ್ರೋಧಿನಶ್ಚೈವ ಪ್ರಜಾವಂತೋ ಬಹುಶ್ರುತಾಃ ॥ ೧೨೧ ॥
ಸ್ನಾನದಾನಾದಿನಿರತಾ ವಿಷ್ಣುಭಕ್ತಿಪರಾಯಣಾಃ ।
ವ್ರತಶೀಲಾ ಗುಣಜ್ಞಾ ನ ಮೂರ್ಖಾ ವೇದವಿವರ್ಜಿತಾಃ ॥ ೧೨೨ ॥

॥ ಇತಿ ಸಪ್ತದಶಂ ಸ್ಥಾನಂ ॥

ಕಪಡ್ವಾಣಜಾ ಬ್ರಾಹ್ಮಣಾಸ್ತು ಭಾರದ್ವಾಜಾಃ ಕುಶಾಸ್ತಥಾ ।
ದೇವೀ ಚ ಯಕ್ಷಿಣೀ ಪ್ರೋಕ್ತಾ ದ್ವಿತೀಯಾ ಚಚಾಈ ತಥಾ ॥ ೧೨೩ ॥
ಆಂಗಿರಸ ಬಾರ್ಹಸ್ಪತ್ಯೌ ಭಾರದ್ವಾಜಸ್ತೃತೀಯಕಃ ।
ವಿಶ್ವಾಮಿತ್ರೋ ದೇವರಾತಸ್ತೃತೀಯೌದಲಮೇವ ಚ ॥ ೧೨೪ ॥

---

ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಈ ಬ್ರಾಹ್ಮಣರು ಹಿತವಾದ ಮಾತುಳ್ಳವರೂ, ಅತ್ಯಂತ ಕುಶಲರೂ, ಗುರುಗಳಲ್ಲಿ ಭಕ್ತಿಯುಳ್ಳವರೂ, ಯಾವಾಗಲೂ ಕೀರ್ತಿವಂತರೂ, ಸಕಲಪ್ರಾಣಿಗಳಿಗೂ ಹಿತವನ್ನುಂಟುಮಾಡುವುದರಲ್ಲಿ ಆಸಕ್ತರೂ, ಮಹಾ ಯಜ್ಞಕರ್ತರೂ, ಸಕಲರಿಂದಲೂ ಯಾಗವನ್ನು ಮಾಡಿಸುವವರೂ ಆಗಿರುವರು. ಇಲ್ಲಿಗೆ ಹದಿನಾರನೆಯ ಸ್ಥಾನವು ಮುಗಿದುದು.

೧೨೦–೧೨೨. ಹಾಥೀಜಣ ಗ್ರಾಮದಲ್ಲಿರುವವರಿಗೆ ವತ್ಸ ಭಾರದ್ವಾಜ ಗೋತ್ರಗಳು. ಜ್ಞಾನಜ ಯಕ್ಷಿಣಿಯರು ಗೋತ್ರದೇವಿಯರು. ಈ ಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣರು ಪಂಚಯಜ್ಞನಿರತರೂ, ಲೋಭಿಗಳೂ, ಕೋಪಿಷ್ಠರೂ, ಮಕ್ಕಳುಳ್ಳವರೂ, ಅತ್ಯಂತ ವಿದ್ಯಾವಂತರೂ, ಸ್ನಾನದಾನಾದಿಗಳಲ್ಲಿ ಆಸಕ್ತರೂ, ವಿಷ್ಣುಭಕ್ತಿಯುಳ್ಳವರೂ, ವ್ರತಶೀಲರೂ, ಗುಣಜ್ಞಾನವಿಲ್ಲದವರೂ, ವೇದಬಾಹ್ಯರೂ ಆಗಿರುವವರು. ಇಲ್ಲಿಗೆ ಹದಿನೇಳನೆಯ ಸ್ಥಾನವು ಮುಗಿದುದು.

೧೨೩–೧೨೪. ಕಪಡ್ವಾಣ ಗ್ರಾಮದವರಿಗೆ ಭಾರದ್ವಾಜ, ಕುಶಗೋತ್ರಗಳು. ಯಕ್ಷಿಣೀ, ಚಚಾಈ ಕುಲದೇವತೆಗಳು. ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ, ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು.

CC-0. Jangamwadi Math Collection. Digitized by eGangotri

ಅಸ್ಮಿನ್ಗೋತ್ರೇ ಚ ಯೇ ಜಾತಾಃ ಸತ್ಯವಾದೀ ಜಿತವ್ರತಾಃ ।
ಜಿತೇಂದ್ರಿಯಾಃ ಸುರೂಪಾಶ್ಚ ಅಲ್ಪಾಹಾರಾಃ ಶುಭಾನನಾಃ ॥ ೧೨೫ ॥
ಸದೋದ್ಯತಾಃ ಪುರಾಣಜ್ಞಾ ಮಹಾದಾನಪರಾಯಣಾಃ ।
ನಿರ್ದ್ವೇಷಿಣೋ ಲೋಭಯುತಾ ವೇದಾಽಧ್ಯಯನ ತತ್ಪರಾಃ ॥ ೧೨೬ ॥
ದೀರ್ಘದರ್ಶಿನೋ ಮಹಾತೇಜಾ ಮಹಾಮಾಯಾವಿಮೋಹಿತಾಃ ॥೧೨೭॥

॥ ಇತ್ಯಷ್ಟಾದಶಂ ಸ್ಥಾನಂ ॥

ಜನ್ಹೋರೀ ವಾಡವಾಃ ಪ್ರೋಕ್ತಾಃ ಕುಶಪ್ರವರ ಸಂಯುತಾಃ ।
ವಿಶ್ವಾಮಿತ್ರೋ ದೇವರಾತ ಸ್ತೃತೀಯಔದಲ ಏವ ಚ ॥ ೧೨೮ ॥
ತಾರಣೀ ಚ ಮಹಾಮಾಯಾ ಗೋತ್ರದೇವೀ ಪ್ರಕೀರ್ತಿತಾ ।
ಅಸ್ಮಿನ್ವಂಶೇ ಸಮುತ್ಪನ್ನಾ ವಾಡವಾ ದುಃಸಹಾ ನೃಪ ॥ ೧೨೯ ॥
ಮಹೋತ್ಕಟಾ ಮಹಾಕಾಯಾಃ ಪ್ರಲಂಬಾಶ್ಚ ಮಹೋದ್ಧತಾಃ ।
ಕ್ಲೇಶರೂಪಾಃ ಕೃಷ್ಣವರ್ಣಾಃ ಸರ್ವಶಾಸ್ತ್ರವಿಶಾರದಾಃ ॥ ೧೩೦ ॥
ಬಹುಭುಗ್ಧನಿನೋ ದಕ್ಷಾ ದ್ವೇಷಪಾಪವಿವರ್ಜಿತಾಃ ।
ಸುವಸ್ತ್ರಭೂಷಾ ವೈರೂಪಾ ಬ್ರಾಹ್ಮಣಾ ಬ್ರಹ್ಮವಾದಿನಃ ॥ ೧೩೧ ॥

---

೧೨೫–೧೨೭. ಈ ಗೋತ್ರದ ವಿಪ್ರರು ಸತ್ಯವಂತರೂ, ವ್ರತಿಗಳೂ, ಜಿತೇಂದ್ರಿಯರೂ, ಸುಂದರರೂ, ಸ್ವಲ್ಪಾಹಾರವನ್ನು ತಿನ್ನುವವರೂ, ಸುಂದರ ವಾದ ಮುಖವುಳ್ಳವರೂ, ಯಾವಾಗಲೂ ಕಾರ್ಯೋದ್ಯುಕ್ತರೂ, ಪುರಾಣ ಗಳನ್ನರಿತವರೂ, ಅತಿಶಯವಾಗಿ ದಾನಮಾಡುವವರೂ, ದ್ವೇಷವಿಲ್ಲದವರೂ, ಲೋಭಿಗಳೂ, ವೇದಾಧ್ಯಯನ ನಿರತರೂ, ದೂರಾಲೋಚನೆಯುಳ್ಳವರೂ, ಅತ್ಯಂತ ತೇಜಸ್ವಿಗಳೂ, ಮಾಯೆಯಿಂದ ಮೂಢರೂ ಆಗಿರುವರು. ಇಲ್ಲಿಗೆ ಹದಿನೆಂಟನೆಯ ಸ್ಥಾನವು ಮುಗಿದುದು.

೧೨೮–೧೩೧. ಜನ್ಹೋರೀ ಗ್ರಾಮದವರಿಗೆ ಕುಶಗೋತ್ರವು, ವಿಶ್ವಾಮಿತ್ರ, ದೇವರಾತ, ಔದಲಪ್ರವರಗಳು. ತಾರಣೀ ಮಹಾಮಾಯೆಯರು ಗೋತ್ರ ದೇವಿಯರು. ಈ ವಂಶದ ಬ್ರಾಹ್ಮಣರು ಸಹಿಸಲಾಗದವರೂ, ಅತಿಭಯಂ ಕರರೂ, ದೊಡ್ಡದೇಹವುಳ್ಳವರೂ, ಉದ್ದವಾದವರೂ, ಅತ್ಯಂತೋದ್ಧತರೂ, ಕಷ್ಟಪಡುವವರೂ, ಕರಿಬಣ್ಣದವರೂ, ಸಮಸ್ತಶಾಸ್ತ್ರಪಂಡಿತರೂ, ಹೆಚ್ಚು ತಿನ್ನುವವರೂ, ಹಣಗಾರರೂ, ಕುಶಲರೂ, ದ್ವೇಷಪಾಪಗಳಿಲ್ಲದವರೂ, ಒಳ್ಳೆಯ ಬಟ್ಟೆಗಳನ್ನುಡುವವರೂ, ವಿಕಾರರೂಪರೂ, ಬ್ರಹ್ಮಜ್ಞಾನಿಗಳೂ ಆಗಿರುವರು. ಇಲ್ಲಿಗೆ ಹತ್ತೊಂಭತ್ತನೆಯ ಸ್ಥಾನವು ಮುಗಿದುದು.

CC-0. Jangamwadi Math Collection. Digitized by eGangotri

॥ ಇತ್ಯೇಕೋನವಿಂಶತಿತಮಂ ಸ್ಥಾನಂ ॥

ವನೋಡೀಯಾಶ್ಚ ಯೇ ಜಾತಾ ಗೋತ್ರಾಣಾಂ ತ್ರಯಮೇವ ಚ ।
ಕುಶಕುತ್ಸೌ ಚ ಪ್ರವರೌ ತೃತೀಯೋ ಭಾರದ್ವಾಜ ಸ್ತಥಾ ॥ ೧೩೨ ॥
ವಿಶ್ವಾಮಿತ್ರೋ ದೇವರಾತಸ್ತೃತೀಯಔದಲಮೇವ ಚ ।
ಆಂಗಿರಸ ಅಂಬರೀಷೋ ಯುವನಾಶ್ವಸ್ತೃತೀಯಕಃ ॥ ೧೩೩ ॥
ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜಾಸ್ತಥೈವ ಚ ।
ಶೇಷಲಾ ಪ್ರಥಮಾ ಪ್ರೋಕ್ತಾ ತಥಾ ಶಾಂತಾ ದ್ವಿತೀಯಕಾ ॥ ೧೩೪ ॥
ತೃತೀಯಾ ಧಾರಶಾಂತಿಶ್ಚ ಗೋತ್ರದೇವ್ಯೋಽಹ್ಯನುಕ್ರಮಾತ್ ।
ಅಸ್ಮಿನ್ಗೋತ್ರೇ ತು ಯೇ ಜಾತಾ ದುರ್ಬಲಾ ದೀನಮಾನಸಾಃ ॥ ೧೩೫ ॥
ಅಸತ್ಯಭಾಷಿಣೋ ವಿಪ್ರಾ ಲೋಭಿನೋ ನೃಪಸತ್ತಮ ।
ಸರ್ವವಿದ್ಯಾಕುಶಲಿನೋ ಬ್ರಾಹ್ಮಣಾ ಬ್ರಹ್ಮವಿತ್ತಮಾಃ ॥ ೧೩೬ ॥

॥ ಇತಿ ವಿಂಶತಿತಮಂ ಸ್ಥಾನಂ ॥

ಕೀಣಾವಾಚನಕಂ ಸ್ಥಾನಂ ಯದೇಕಾಽಧಿಕವಿಂಶತಿ ।
ಭಾರದ್ವಾಜಾಶ್ಚ ವಿಪ್ರೇಂದ್ರಾಃ ಕಥಿತಾ ಬ್ರಾಹ್ಮಣಾಃ ಶುಭಾಃ ॥ ೧೩೭ ॥
ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜಾಸ್ತಥೈವ ಚ ।
ಯಕ್ಷಿಣೀ ಚ ತಥಾ ದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೧೩೮ ॥
ಅಸ್ಮಿನ್ಗೋತ್ರೇ ಚ ಯೇ ಜಾತಾ ವಾಡವಾ ಧನಿನಃ ಶುಭಾಃ ।
ವಸ್ತ್ರಾಽಲಂಕರಣೋಪೇತಾ ದ್ವಿಜಭಕ್ತಿಪರಾಯಣಾಃ ॥ ೧೩೯ ॥
ಬ್ರಹ್ಮಭೋಜ್ಯಪರಾಃ ಸರ್ವೇ ಸರ್ವೇ ಧರ್ಮಪರಾಯಣಾಃ ॥ ೧೪೦ ॥

॥ ಇತ್ಯೇಕವಿಂಶತಿತಮಂ ಸ್ಥಾನಂ ॥

---

೧೩೨–೧೩೬. ವನೋಡಿಯಾ ಗ್ರಾಮದವರಿಗೆ ಕುಶ, ಕುತ್ಸ, ಭಾರದ್ವಾಜ ಗೋತ್ರಗಳು. ಕ್ರಮವಾಗಿ ವಿಶ್ವಾಮಿತ್ರ, ದೇವರಾತ, ಔದಲ, ಆಂಗಿರಸ, ಅಂಬರೀಷ, ಯುವನಾಶ್ವ ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಶೇಷಲಾ, ಶಾಂತಾ, ದಾರಶಾಂತಿ ಯೆಂಬವರು ಗೋತ್ರದೇವಿಯರು. ಈ ಗೋತ್ರದ ಬ್ರಾಹ್ಮಣರು ಅಶಕ್ತರೂ, ದೈನ್ಯವುಳ್ಳವರೂ, ಸುಳ್ಳಾಡುವವರೂ, ಲೋಭಿಗಳೂ, ಸಕಲವಿದ್ಯೆಗಳಲ್ಲಿ ನಿಪುಣರೂ, ಬ್ರಹ್ಮಜ್ಞಾನಿಗಳೂ ಆಗಿರುವರು. ಇಲ್ಲಿಗೆ ಇಪ್ಪತ್ತನೆಯ ಸ್ಥಾನವು ಮುಗಿದುದು.

೧೩೭–೧೪೦. ಕೀಣಾವಾಚನಕಸ್ಥಾನದವರಿಗೆ ಭಾರದ್ವಾಜಗೋತ್ರವು. ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಯಕ್ಷಿಣಿಯು ಗೋತ್ರ ದೇವಿಯು. ಈ ಗೋತ್ರದ ಬ್ರಾಹ್ಮಣರು ಹಣಗಾರರೂ, ವಸ್ತ್ರಾಲಂಕಾರ ಭೂಷಿತರೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರೂ, ಬ್ರಾಹ್ಮಣ ಭೋಜನದಲ್ಲಿ



CC-0. Jangamwadi Math Collection. Digitized by eGangotri

ಗೋವಿಂದಣಾಚ ಸ್ವಸ್ಥಾನೇ ಯೇ ಜಾತಾ ಬ್ರಹ್ಮಸತ್ತಮಾಃ ।
ಕುಶಗೋತ್ರಂ ಚ ವೈ ಪ್ರೋಕ್ತಂ ಪ್ರವರತ್ರಯಮೇವ ಚ ॥ ೧೪೧ ॥
ವಿಶ್ವಾಮಿತ್ರೋ ದೇವರಾತಾ ಔದಲಪ್ರವರಮೇವ ಚ ।
ಚಚಾಈ ಚ ಮಹಾದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೧೪೨ ॥
ಅಸ್ಮಿನ್ಗೋತ್ರೇ ಚ ಯೇ ಜಾತಾ ಬ್ರಾಹ್ಮಣಾ ಬ್ರಹ್ಮವೇದಿನಃ ।
ಯಜಂತೇ ಕ್ರತುಭಿಸ್ತತ್ರ ಹೃಷ್ಟಚಿತ್ತೈಕಮಾನಸಾಃ ॥ ೧೪೩ ॥
ಸರ್ವವಿದ್ಯಾಸು ಕುಶಲಾ ಬ್ರಹ್ಮಣ್ಯಾ ಬ್ರಹ್ಮವಿತ್ತಮಾಃ ॥ ೧೪೪ ॥

॥ ಇತಿ ದ್ವಾವಿಂಶತಿತಮಂ ಸ್ಥಾನಂ ॥

ಥಲತ್ಯಜಾಹಿ ವಿಪ್ರೇಂದ್ರಾ ದ್ವೌ ಗೋತ್ರೌ ಚಾಽಪ್ಯಧಿಷ್ಠಿತೌ ।
ಧಾರಣಂ ಸಂಕುಶಂ ಚೈವ ಗೋತ್ರದ್ವಿತಯಮೇವ ಚ ॥ ೧೪೫ ॥
ಅಗಸ್ತ್ಯೋ ದಾರ್ಢ್ಯಚ್ಯುತಶ್ಚ ರಥ್ಯವಾಹನಮೇವ ಚ ।
ವಿಶ್ವಾಮಿತ್ರೋ ದೇವರಾತಸ್ತೃತೀಯಔದಲ ಏವ ಚ । ॥ ೧೪೬ ॥
ದೇವೀ ಚ ಛತ್ರಜಾ ಪ್ರೋಕ್ತಾ ದ್ವಿತೀಯಾ ಥಲಜಾ ತಥಾ ।
ಧಾರಣಸ ಗೋತ್ರೇ ಯೇ ಜಾತಾ ಬ್ರಹ್ಮಣ್ಯಾ ಬ್ರಹ್ಮವಿತ್ತಮಾಃ ॥ ೧೪೭ ॥
ತ್ರಿಪ್ರವರಾಶ್ಚೈವ ವಿಖ್ಯಾತಾ ಸತ್ತ್ವವಂತೋ ಗುಣಾನ್ವಿತಾಃ ।
ತದನ್ವಯೇ ಚ ಯೇ ಜಾತಾ ಧರ್ಮಕರ್ಮಸಮಾಶ್ರಿತಾಃ ॥ ೧೪೮ ॥

---

ನಿರತರೂ, ಧರ್ಮಾಸಕ್ತರೂ ಆಗಿರುವರು. ಇಲ್ಲಿಗೆ ಇಪ್ಪತ್ತೊಂದನೆಯ ಸ್ಥಾನವು ಮುಗಿದುದು.

೧೪೧–೧೪೨. ಗೋವಿಂದಣಾಸ್ಥಾನದ ಬ್ರಾಹ್ಮಣರಿಗೆ ಕುಶಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು, ಚಚಾಈಯು ಗೋತ್ರ ದೇವಿಯು.

೧೪೩–೧೪೪. ಈ ಗೋತ್ರದ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೂ, ಯಾಗ ಮಾಡುವವರೂ, ಸಂತುಷ್ಟಚಿತ್ತರೂ, ಒಮ್ಮನಸ್ಸುಳ್ಳವರೂ, ಸಕಲವಿದ್ಯಾದಕ್ಷರೂ, ಬ್ರಾಹ್ಮಣಪ್ರಿಯರೂ, ಬ್ರಹ್ಮಜ್ಞಾನಿಗಳೂ ಆಗಿರುವರು. ಇಲ್ಲಿಗೆ ಇಪ್ಪತ್ತೆರಡನೆಯ ಸ್ಥಾನವು ಮುಗಿದುದು.

೧೪೫–೧೪೬. ಥಲತ್ಯಜಾ ಗ್ರಾಮದವರಿಗೆ ಧಾರಣ, ಸಂಕುಶಗೋತ್ರಗಳು. ಅಗಸ್ತ್ಯ, ದಾರ್ಢ್ಯಚ್ಯುತ, ರಥ್ಯವಾಹನ, ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು.

೧೪೭–೧೪೯. ಛತ್ರಜಾ, ಥಲಜೆಯರು ಗೋತ್ರದೇವಿಯರು; ಈ ಗೋತ್ರದ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೂ, ಬಲವುಳ್ಳವರೂ, ಧರ್ಮಕರ್ಮ

CC-0. Jangamwadi Math Collection. Digitized by eGangotri

ಧನಿನೋ ಜ್ಞಾನನಿಷ್ಠಾಶ್ಚ ತಪೋಯಜ್ಞಕ್ರಿಯಾದಿಷು ।
ತ್ರಯೋವಿಂಶಂ ಪ್ರೋಕ್ತಮೇತತ್ಸ್ಥಾನಂ ಮೋಢಕಜ್ಞಾತಿನಾಂ ॥ ೧೪೯ ॥
॥ ಇತಿ ತ್ರಯೋವಿಂಶತಿತಮಂ ಸ್ಥಾನಂ ॥
ವಾರಣಸಿದ್ಧಾಢ್ಯ ಯೇ ಪ್ರೋಕ್ತಾ ಬ್ರಾಹ್ಮಣಾ ಜ್ಞಾನಪವಿತ್ರಮಾಃ ।
ಅಸ್ಮಿನ್ಗೋತ್ರೇ ಚ ಯೇ ವಿಪ್ರಾಃ ಸತ್ಯವಾದಿಜಿತವ್ರತಾಃ ॥ ೧೫೦ ॥
ಜಿತೇಂದ್ರಿಯಾಃ ಸುರೂಪಾಶ್ಚ ಅಲ್ಪಾಹಾರಾಃ ಶುಭಾನನಾಃ ।
ಸದೋದ್ಯತಾಃ ಪುರಾಣಜ್ಞಾ ಮಹಾದಾನಪರಾಯಣಾಃ ॥ ೧೫೧ ॥
ನಿರ್ದ್ವೇಷಿಣೋಽಲೋಭಯುತಾ ವೇದಾಽಧ್ಯಯನತತ್ಪರಾಃ ।
ದೀರ್ಘದರ್ಶಿನೋ ಮಹಾತೇಜಾ ಮಹಾಮಾಯಾವಿಮೋಹಿತಾಃ ॥
ಚತುರ್ವಿಂಶತಿತಮಂ ಪ್ರೋಕ್ತಂ ಸ್ವಸ್ಥಾನಂ ಪರಮಂ ಮತಂ ॥ ೧೫೨ ॥
॥ ಇತಿ ಚತುರ್ವಿಂಶತಿತಮಂ ಸ್ಥಾನಂ ॥
ಭಾಲಜಾಶ್ಚಾತ್ರ ವೈ ಪ್ರೋಕ್ತಾ ಬ್ರಾಹ್ಮಣಾಃ ಸತ್ಯವಾದಿನಃ ॥ ೧೫೪ ॥
ವತ್ಸಗೋತ್ರಂ ಕುಶಂ ಚೈವ ಗೋತ್ರ ದ್ವಿತಯಮೇವ ಚ ।
ತೇಷಾಂ ಪ್ರವರಾಣ್ಯಹಂ ವಕ್ಷ್ಯೇ ಪಂಚತ್ರಿತಯಮೇವ ಚ ।
ಭೃಗುಚ್ಯವನಾಪ್ನವಾನೌರ್ವಜಮದಗ್ನಿಸ್ತಥೈವ ಚ ॥ ೧೫೫ ॥
ಆಂಗಿರಸಾಂಬರೀಷೌ ಚ ಯೌವನಾಶ್ವಸ್ತ್ರುತೀಯಕಃ ।
ಶಾಂತಾ ಚ ಶೇಷಲಾ ಚಾಽತ್ರ ದೇವೀದ್ವಿತಯಮೇವ ಚ ॥ ೧೫೬ ॥

---

ನಿರತರೂ, ಹಣವಂತರೂ, ತಪಸ್ಸು ಮತ್ತು ಯಜ್ಞಕ್ರಿಯೆಗಳಲ್ಲಿ ಆಸಕ್ತರೂ ಆಗಿರುವರು. ಇಲ್ಲಿಗೆ ಇಪ್ಪತ್ತಮೂರನೆಯ ಸ್ಥಾನವು ಮುಗಿದುದು.

೧೫೦–೧೫೩. ವಾರಣಸಿದ್ಧ ಗ್ರಾಮದವರು ಜ್ಞಾನಿಗಳೂ, ಸತ್ಯವಂತರೂ, ವ್ರತಿಗಳೂ, ಜಿತೇಂದ್ರಿಯರೂ, ಸುಂದರರೂ, ಸ್ವಲ್ಪಾಹಾರವುಳ್ಳವರೂ, ಒಳ್ಳೆಯ ಮುಖದವರೂ, ಯಾವಾಗಲೂ ಉದ್ಯಮಿಗಳೂ, ಪುರಾಣವನ್ನರಿತವರೂ, ಅತ್ಯಂತದಾನಾಸಕ್ತರೂ, ದ್ವೇಷವಿಲ್ಲದವರೂ, ಆಶೆಯಿಲ್ಲದವರೂ, ವೇದಾಧ್ಯಯನನಿರತರೂ, ದೂರಾಲೋಚನೆಯುಳ್ಳವರೂ, ಅತ್ಯಂತ ತೇಜಸ್ವಿಗಳೂ, ಮಾಯೆಯಿಂದ ಮೋಹಗೊಂಡವರೂ ಆಗಿರುವರು. ಇಲ್ಲಿಗೆ ಇಪ್ಪತ್ತನಾಲ್ಕನೆಯ ಸ್ಥಾನವು ಮುಗಿದುದು.

೧೫೪–೧೫೬. ಭಾಲಜಗ್ರಾಮದವರಿಗೆ ವತ್ಸ, ಕುಶಗೋತ್ರಗಳು. ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿ, ಆಂಗಿರಸ, ಅಂಬರೀಷ, ಯೌವನಾಶ್ವ ಎಂಬ ಐದು ಮತ್ತು ಮೂರು ಪ್ರವರಗಳು. ಶಾಂತಾ, ಶೇಷಲಾ ಎಂಬವರು ಗೋತ್ರದೇವಿಯರು.

CC-0. Jangamwadi Math Collection. Digitized by eGangotri

ಅಸ್ಮಿನ್ವಂಶೇ ಸಮುತ್ಪನ್ನಾಃ ಸದ್ವೃತ್ತಾಃ ಸತ್ಯಭಾಷಿಣಃ ।
ಶಾಂತಾಶ್ಚ ಭಿನ್ನವರ್ಣಾಶ್ಚ ನಿರ್ಧನಾಶ್ಚ ಕುಚೈಲಿನಃ ॥ ೧೫೭ ॥
ಸಗರ್ವಾ ಲೌಲ್ಯಯುಕ್ತಾಶ್ಚ ವೇದಶಾಸ್ತ್ರೇಷು ನಿಶ್ಚಲಾಃ ।
ಪಂಚವಿಂಶತಿಮಂ ಪ್ರೋಕ್ತಂ ಸ್ವಸ್ಥಾನಂ ಮೋಢಜ್ಞಾತಿನಾಂ ॥ ೧೫೮ ॥

॥ ಇತಿ ಪಂಚವಿಂಶತಿತಮಂ ಸ್ಥಾನಂ ॥

ಮಹೋವೀಆಶ್ಚ ಯೇ ಸಂತಿ ಬ್ರಾಹ್ಮಣಾ ಬ್ರಹ್ಮವಿತ್ತಮಾಃ ।
ಏಕಮೇವ ಚ ವೈ ಗೋತ್ರಂ ಕುಶಸಂಜ್ಞಂ ಪವಿತ್ರಕಂ ॥ ೧೫೯ ॥
ವಿಶ್ವಾಮಿತ್ರೋ ದೇವರಾತಸ್ತೃತೀಯಔದಲ ಏವ ಚ ।
ದೇವೀ ಚವಾಈ ಚೈವಾತ್ರ ರಕ್ಷಾರೂಪಾ ವ್ಯವಸ್ಥಿತಾ ॥ ೧೬೦ ॥
ಅಸ್ಮಿನ್ಗೋತ್ರೇ ಚ ಯೇ ಜಾತಾಃ ಸತ್ಯವಾದಿಜಿತೇಂದ್ರಿಯಾಃ ।
ಸತ್ಯವ್ರತಾಃ ಸುರೂಪಾಶ್ಚ ಅಲ್ಪಾಹಾರಾಃ ಶುಭಾನನಾಃ ॥ ೧೬೧ ॥
ದಯಾಲವಃ ಕೃಪಾಲವಃ ಸರ್ವಭೂತಹಿತೇ ರತಾಃ ।
ಷಡ್ವಿಂಶತಿತಮಂ ಪ್ರೋಕ್ತಂ ಸ್ವಸ್ಥಾನಂ ಬ್ರಹ್ಮವಾದಿನಾಂ ॥ ೧೬೨ ॥
ರಾಮೇಣ ಸಂಸ್ತುತಾಶ್ಚೈವ ಸಾಽನುಜೇನ ತಥೈವ ಚ ॥ ೧೬೩ ॥

॥ ಇತಿ ಷಡ್ವಿಂಶತಿತಮಂ ಸ್ಥಾನಂ ॥

ತಿಯಾಶ್ರೀಯಾಮಥೋ ವಕ್ಷ್ಯೇ ಸ್ವಸ್ಥಾನಂ ಸಪ್ತವಿಂಶಕಂ ।
ಅಸ್ಮಿನ್ಸ್ಥಾನೇ ಚ ಯೇ ಜಾತಾ ಬ್ರಾಹ್ಮಣಾ ವೇದಪಾರಗಾಃ ॥ ೧೬೪ ॥

---

೧೫೭–೧೫೮. ಈ ವಂಶದ ಬ್ರಾಹ್ಮಣರು ಸಚ್ಚರಿತರೂ, ಸತ್ಯವಾದಿಗಳೂ, ಶಾಂತರೂ, ಬೇರೆ ಬೇರೆ ಬಣ್ಣದವರೂ, ಬಡವರೂ, ಕೊಳಕುಬಟ್ಟೆಯುಳ್ಳವರೂ, ಅಹಂಕಾರಿಗಳೂ, ಚಂಚಲರೂ, ವೇದಶಾಸ್ತ್ರಗಳಲ್ಲಿ ದೃಢನಂಬಿಕೆಯುಳ್ಳವರೂ ಆಗಿರುವರು. ಇಲ್ಲಿಗೆ ಇಪ್ಪತ್ತೈದನೆಯ ಸ್ಥಾನವು ಮುಗಿದುದು.

೧೫೯–೧೬೦. ಮಹೋವೀಆ ಗ್ರಾಮದವರಿಗೆ ಕುಶಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು. ಚವಾಈಯು ರಕ್ಷಿಸುವ ಗೋತ್ರದೇವಿಯು.

೧೬೧–೧೬೩. ಈ ಗೋತ್ರದ ಬ್ರಾಹ್ಮಣರು ಸತ್ಯವಂತರೂ, ಜಿತೇಂದ್ರಿಯರೂ, ವ್ರತಿಗಳೂ, ಸುಂದರರೂ, ಸ್ವಲ್ಪಾಹಾರವುಳ್ಳವರೂ, ಒಳ್ಳೆಯ ಮುಖವುಳ್ಳವರೂ, ದಯಾಳುಗಳೂ, ಸಕಲಪ್ರಾಣಿಗಳಿಗೆ ಹಿತವನ್ನುಂಟುಮಾಡುವವರೂ ಆಗಿರುವರು. ರಾಮಲಕ್ಷ್ಮಣರು ಸ್ತೋತ್ರಮಾಡಿರುವ ಇವರ ಸ್ಥಾನವು ಇಪ್ಪತ್ತಾರನೆಯದಾಗಿರುವುದು. ಇಲ್ಲಿಗೆ ಇಪ್ಪತ್ತಾರನೆಯ ಸ್ಥಾನವು ಮುಗಿದುದು.

೧೬೪–೧೬೯. ತಿಯಾಶ್ರೀಯಾ ಗ್ರಾಮದವರಿಗೆ ಶಾಂಡಿಲ್ಯಗೋತ್ರವು.

CC-0. Jangamwadi Math Collection. Digitized by eGangotri

ಶಾಂಡಿಲ್ಯಗೋತ್ರಂ ಚೈವಾಽತ್ರ ಕಥಿತಂ ವೇದಸತ್ತಮೈಃ ।
ಪಂಚಪ್ರವರಮಥೋ ಪ್ರೋಕ್ತಂ ಜ್ಞಾನಜಾ ಚಾತ್ರ ದೇವತಾ ॥ ೧೬೫ ॥
ಕಾಶ್ಯಪಾಽವತ್ಸಾರಶ್ಚೈವ ಶಾಂಡಿಲೋಽಸಿತ ಏವ ಚ ।
ಪಂಚಮೋ ದೇವಲಶ್ಚೈವ ಪ್ರವರಾಣಿ ತಥಾ ಕ್ರಮಾತ್ ।
ಜ್ಞಾನಜಾ ಚ ತಥಾ ದೇವೀ ಕಥಿತಾ ಸ್ಥಾನದೇವತಾ ॥ ೧೬೬ ॥
ಅಸ್ಮಿನ್ನಂಶೇ ಚ ಯೇ ಜಾತಾಸ್ತೇ ದ್ವಿಜಾಃ ಸೂರ್ಯವರ್ಚಸಃ ।
ಚಂದ್ರವಚ್ಛೀತಲಾಃ ಸರ್ವೇ ಧರ್ಮಾರಣ್ಯೇ ವ್ಯವಸ್ಥಿತಾಃ ॥ ೧೬೭ ॥
ಸದಾಚಾರಾ ಮಹಾರಾಜ ವೇದಶಾಸ್ತ್ರ ಪರಾಯಣಾಃ ।
ಯಾಜ್ಞಿಕಾಶ್ಚ ಶುಭಾಚಾರಾಃ ಸತ್ಯಶೌಚಪರಾಯಣಾಃ ॥ ೧೬೮ ॥
ಧರ್ಮಜ್ಞಾ ದಾನಶೀಲಾಶ್ಚ ನಿರ್ಮಲಾ ಹಿ ಮದೋತ್ಸುಕಾಃ ।
ತಪಃ ಸ್ವಾಧ್ಯಾಯನಿರತಾ ನ್ಯಾಯಧರ್ಮಪರಾಯಣಾಃ ।
ಸಪ್ತವಿಂಶತಿತಮಂ ಸ್ಥಾನಂ ಕಥಿತಂ ಬ್ರಹ್ಮವಿತ್ತಮೈಃ ॥ ೧೬೯ ॥

॥ ಇತಿ ಸಪ್ತವಿಂಶಂ ಸ್ಥಾನಂ ॥

ಗೋಧರೀಯಾಶ್ಚ ಯೇ ಜಾತಾ ಬ್ರಾಹ್ಮಣಾ ಜ್ಞಾನಸತ್ತಮಾಃ ।
ಗೋತ್ರತ್ರಯಮಥೋ ವಕ್ಷ್ಯೇ ಯಥಾ ಚೈವಾಽಪ್ಯನುಕ್ರಮಾತ್ ॥೧೭೦॥
ಪ್ರಥಮಂ ಧಾರಣಸಂ ಚೈವ ಜಾತೂಕರ್ಣಂ ದ್ವಿತೀಯಕಂ ।
ತೃತೀಯಂ ಕೌಶಿಕಂ ಚೈವ ಯಥಾ ಚೈವಾಪ್ಯನುಕ್ರಮಾತ್ ॥ ೧೭೧ ॥
ಧಾರಣಸ ಗೋತ್ರೇ ಯೇ ಜಾತಾಃ ಪ್ರವರತ್ರಯ ಸಂಯುತಾಃ ।
ಅಗಸ್ತಿಶ್ಚ ದಾರ್ಢಚ್ಯುತ ಇಧ್ಮವಾಹನಸಂಜ್ಞಕಃ ॥ ೧೭೨ ॥
ವಸಿಷ್ಠಶ್ಚ ತಥಾತ್ರೇಯೋ ಜಾತೂಕರ್ಣಸ್ತೃತೀಯಕಃ ।
ವಿಶ್ವಾಮಿತ್ರೋ ಮಾಧುಶ್ಛಂದಸ ಅಘಮರ್ಷಣಸ್ತೃತೀಯಕಃ ॥ ೧೭೩ ॥

---

ಕಾಶ್ಯಪ, ಅವತ್ಸಾರ, ಶಾಂಡಿಲ, ಅಸಿತ, ದೇವಲ ಪ್ರವರಗಳು. ಜ್ಞಾನಜೆಯು ಗೋತ್ರದೇವಿಯು. ಈ ಗೋತ್ರದ ಬ್ರಾಹ್ಮಣರು ವೇದಪಾರಂಗತರೂ, ಸೂರ್ಯನಂತೆ ತೇಜಸ್ವಿಗಳೂ, ಚಂದ್ರನಂತೆ ಶಾಂತರಾಗಿರುವವರೂ, ಸದಾಚಾರ ಸಂಪನ್ನರೂ, ಶಾಸ್ತ್ರಜ್ಞರೂ, ಯಜ್ಞಮಾಡುವವರೂ, ಸತ್ಯಶೌಚಗಳಲ್ಲಿ ನಿರತರೂ, ಧರ್ಮಗಳನ್ನರಿತವರೂ, ದಾನಶೀಲರೂ, ನಿರ್ಮಲರೂ, ಮತ್ತರೂ, ತಪಸ್ಸು ಮತ್ತು ವೇದಾಧ್ಯಯನಗಳಲ್ಲಿ ನಿರತರೂ, ನ್ಯಾಯಾಸಕ್ತರೂ ಆಗಿರುವರು. ಇದನ್ನು ಇಪ್ಪತ್ತೇಳನೆಯ ಸ್ಥಾನವೆಂದು ಹೇಳುತ್ತಾರೆ. ಇಲ್ಲಿಗೆ ಇಪ್ಪತ್ತೇಳನೆಯ ಸ್ಥಾನವು ಮುಗಿದುದು.

೧೭೦–೧೭೪. ಗೋಧರೀ ಗ್ರಾಮದವರಿಗೆ ಧಾರಣಸ, ಜಾತೂಕರ್ಣ, ಕೌಶಿಕವೆಂಬ ಮೂರು ಗೋತ್ರಗಳು. ಇವರಿಗೆ ಕ್ರಮವಾಗಿ ಅಗಸ್ತಿ, ದಾರ್ಢಚ್ಯುತ, ಇಧ್ಮವಾಹನ, ವಸಿಷ್ಠ, ಆತ್ರೇಯ, ಜಾತೂಕರ್ಣ, ವಿಶ್ವಾಮಿತ್ರ, ಮಾಧುಚ್ಛಂದಸ,

CC-0. Jangamwadi Math Collection. Digitized by eGangotri

ಮಹಾಬಲಾ ಚ ಮಾಲೇಯಾ ದ್ವಿತೀಯಾ ಚೈವ ಯಕ್ಷಿಣೀ ।
ತೃತೀಯಾ ಚ ಮಹಾಯೋಗೀ ಗೋತ್ರದೇವ್ಯಃ ಪ್ರಕೀರ್ತಿತಾಃ ॥ ೧೭೪ ॥
ಅಸ್ಮಿನ್ವಂಶೇ ಚ ಯೇ ಜಾತಾ ಬ್ರಾಹ್ಮಣಾಃ ಸತ್ಯವಾದಿನಃ ।
ಅಲೌಲ್ಯಾಶ್ಚ ಮಹಾಯಜ್ಞಾ ವೇದಾಜ್ಞಾಪ್ರತಿಪಾಲಕಾಃ ॥ ೧೭೫ ॥

॥ ಇತ್ಯಷ್ಟಾವಿಂಶಂ ಸ್ಥಾನಂ ॥

ವಾಟಸ್ರಹಾಲೇ ಯೇ ಜಾತಾ ಗೋತ್ರತ್ರಿತಯಮೇವ ಚ ।
ಧಾರಣಂ ಪ್ರಥಮಂ ಜ್ಞೇಯಂ ವತ್ಸಸಂಜ್ಞಂ ದ್ವಿತೀಯಕಂ ॥ ೧೭೬ ॥
ತೃತೀಯಂ ಕುತ್ಸಸಂಜ್ಞಂ ಚ ಗೋತ್ರದೇವ್ಯಸ್ತಥೈವ ಚ ।
ಪ್ರಥಮಂ ಧಾರಣಸಗೋತ್ರಂ ಪ್ರವರತ್ರಯಮೇವ ಚ ॥ ೧೭೭ ॥
ಅಗಸ್ತಿರ್ದಾರ್ಢ್ಯಚ್ಯುತಶ್ಚೈವ ಇಧ್ಮವಾಹನ ಏವ ಚ ।
ದ್ವಿತೀಯಂ ವತ್ಸಸಂಜ್ಞಂ ಹಿ ಪ್ರವರಾಣಿ ಚ ಪಂಚ ವೈ ॥ ೧೭೮ ॥
ಭೃಗುಚ್ಯವನಾಪ್ನವಾನೌರ್ವಜಮದಗ್ನಿಸ್ತಥೈವ ಚ ।
ತೃತೀಯಂ ಕುತ್ಸಸಂಜ್ಞಂ ಹಿ ಪ್ರವರತ್ರಯಮೇವ ಚ ॥ ೧೭೯ ॥
ಆಂಗಿರಸಾಂಬರೀಷೌ ಚ ಯೌವನಾಶ್ವಸ್ತೃತೀಯಕಃ ।
ದೇವೀ ಚ ಛತ್ರಜಾ ಚೈವ ದ್ವಿತೀಯಾ ಶೇಷಲಾ ತಥಾ ॥ ೧೮೦ ॥
ಜ್ಞಾನಜಾ ಚೈವ ದೇವೀ ಚ ಗೋತ್ರದೇವ್ಯೋ ಹ್ಯನುಕ್ರಮಾತ್ ।
ಅಸ್ಮಿನ್ಗೋತ್ರೇ ಚ ಯೇ ವಿಪ್ರಾಃ ಸತ್ಯವಾದಿಜಿತೇಂದ್ರಿಯಾಃ ॥ ೧೮೧ ॥
ಸುರೂಪಾಶ್ಚಾಽಲ್ಪಾಹಾರಾಶ್ಚ ಮಹಾದಾನಪರಾಯಣಾಃ ।
ನಿರ್ದ್ವೇಷಿಣೋ ಲೋಭಯುತಾ ವೇದಾಽಧ್ಯಯನತತ್ಪರಾಃ ॥ ೧೮೨ ॥

---

ಅಘಮರ್ಷಣ ಎಂಬ ಪ್ರವರಗಳು. ಮಾಲೇಯಾ, ಯಕ್ಷಿಣೀ, ಮಹಾಯೋಗಿ ಎಂಬ ಈ ಮೂವರೂ ಗೋತ್ರದೇವಿಯರು.

೧೭೫. ಈ ವಂಶದ ಬ್ರಾಹ್ಮಣರು ಸತ್ಯವಂತರೂ, ಸ್ಥಿರಚಿತ್ತರೂ, ಮಹಾ ಯಜ್ಞಗಳನ್ನು ಮಾಡುವವರೂ, ವೇದದಲ್ಲಿ ಹೇಳಿದಂತೆ ನಡೆಯುವವರೂ ಆಗಿರುವರು. ಇಲ್ಲಿಗೆ ಇಪ್ಪತ್ತೆಂಟನೆಯ ಸ್ಥಾನವು ಮುಗಿದುದು.

೧೭೬–೧೮೩. ವಾಟಸ್ರಹಾಲ ಗ್ರಾಮದವರಿಗೆ ಧಾರಣ, ವತ್ಸ, ಕುತ್ಸ ಎಂಬ ಮೂರು ಗೋತ್ರಗಳು. ಮೊದಲನೆಯ ಧಾರಣಸ ಗೋತ್ರದವರಿಗೆ ಅಗಸ್ತಿ, ದಾರ್ಢಚ್ಯುತ, ಇಧ್ಮವಾಹನ ಪ್ರವರಗಳು. ಎರಡನೆಯ ವತ್ಸಗೋತ್ರದವರಿಗೆ ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿ ಪ್ರವರಗಳು. ಮೂರನೆಯ ಕುತ್ಸಗೋತ್ರದವರಿಗೆ ಆಂಗಿರಸ, ಆಂಬರೀಷ, ಯೌವನಾಶ್ವ ಪ್ರವರಗಳು. ಕ್ರಮವಾಗಿ ಛತ್ರಜಾ, ಶೇಷಲಾ, ಜ್ಞಾನಜಾ ಎಂಬವರು ಗೋತ್ರದೇವಿಯರು. ಈ ಗೋತ್ರದ ಬ್ರಾಹ್ಮಣರು ಸತ್ಯವಂತರೂ, ಜಿತೇಂದ್ರಿಯರೂ, ಸುಂದರರೂ,

CC-0. Jangamwadi Math Collection. Digitized by eGangotri

ದೀರ್ಘದರ್ಶಿನೋ ಮಹಾತೇಜಾ ಮಹೋತ್ಕಾಃ ಸತ್ಯವಾದಿನಃ ॥ ೧೮೩ ॥

॥ ಇತ್ಯೇಕೋನತ್ರಿಂಶತ್ ಸ್ಥಾನಂ ॥

ಮಾಣಜಾ ಚ ಮಹಾಸ್ಥಾನಂ ಗೋತ್ರದ್ವಿತಯಮೇವ ಚ ।
ಶಾಂಡಿಲ್ಯಶ್ಚ ಕುಶಶ್ಚೈವ ಗೋತ್ರದ್ವಯ ಮಿತೀರಿತಂ ॥ ೧೮೪ ॥
ಕಾಶ್ಯಪೋಽವತ್ಸಾರಶ್ಚ ಶಾಂಡಿಲ್ಯೋಽಸಿತ ಏವ ಚ ।
ಪಂಚಮೋ ದೇವಲಶ್ಚೈವ ಏಕಗೋತ್ರಂ ಪ್ರಕೀರ್ತಿತಂ ॥ ೧೮೫ ॥
ಜ್ಞಾನಜಾ ಚ ತಥಾ ದೇವೀ ಕಥಿತಾ ಚಾಽತ್ರ ಸೈವ ಚ ।
ದ್ವಿತೀಯಂ ಚ ಕುಶಂ ಗೋತ್ರಂ ಪ್ರವರತ್ರಯಮೇವ ಚ ॥ ೧೮೬ ॥
ವಿಶ್ವಾಮಿತ್ರೋ ದೇವರಾಜಸ್ತೃತೀಯೌದಲಮೇವ ಚ ।
ಜ್ಞಾನದಾ ಚಾಽತ್ರ ವೈ ದೇವೀ ದ್ವಿತೀಯಾ ಸಂಪ್ರಕೀರ್ತಿತಾ ॥ ೧೮೭ ॥
ಅಸ್ಮಿನ್ಗೋತ್ರೇ ತು ಯೇ ಜಾತಾ ದುರ್ಬಲಾ ದೀನಮಾನಸಾಃ ।
ಅಸತ್ಯಭಾಷಿಣೋ ವಿಪ್ರಾ ಲೋಭಿನೋ ನೃಪಸತ್ತಮ ॥ ೧೮೮ ॥
ಸರ್ವವಿದ್ಯಾಕುಶಲಿನೋ ಬ್ರಾಹ್ಮಣಾ ಬ್ರಹ್ಮಸತ್ತಮಾಃ ॥ ೧೮೯ ॥

॥ ಇತಿ ತ್ರಿಂಶಂ ಸ್ಥಾನಂ ॥

ಸಾಣದಾ ಚ ಪರಂ ಸ್ಥಾನಂ ಪವಿತ್ರಂ ಪರಮಂ ಮತಂ ।
ಕುಶಪ್ರವರಜಾ ವಿಪ್ರಾಸ್ತತ್ರಸ್ಥಾಃ ಪಾವನಾಃ ಸ್ಮೃತಾಃ ॥ ೧೯೦ ॥
ವಿಶ್ವಾಮಿತ್ರೋ ದೇವರಾತಸ್ತೃತೀಯೌದಲ ಏವ ಚ ।
ಜ್ಞಾನದಾ ಚ ಮಹಾದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೧೯೧ ॥

---

ಸ್ವಲ್ಪಾಹಾರವುಳ್ಳವರೂ, ಅತ್ಯಂತದಾನಾಸಕ್ತರೂ, ದ್ವೇಷವಿಲ್ಲದವರೂ, ಲೋಭಿಗಳೂ, ವೇದಾಧ್ಯಯನನಿರತರೂ, ದೂರಾಲೋಚನೆಯುಳ್ಳವರೂ, ಮಹಾತೇಜಸ್ವಿಗಳೂ, ಅತ್ಯುತ್ಸುಕರೂ ಆಗಿರುವರು. ಇಲ್ಲಿಗೆ ಇಪ್ಪತ್ತೊಂಬತ್ತನೆಯ ಸ್ಥಾನವು ಮುಗಿದುದು.

೧೮೪–೧೮೯. ಮಾಣಜಾಸ್ಥಾನದವರಿಗೆ ಶಾಂಡಿಲ್ಯ ಕುಶವೆಂಬ ಎರಡು ಗೋತ್ರಗಳು. ಶಾಂಡಿಲ್ಯಗೋತ್ರದವರಿಗೆ ಕಾಶ್ಯಪ, ಅವತ್ಸಾರ, ಶಾಂಡಿಲ್ಯ, ಅಸಿತ, ದೇವಲ ಎಂಬ ಪ್ರವರಗಳು. ಜ್ಞಾನಜಾ ಗೋತ್ರದೇವಿಯು. ಕುಶ ಗೋತ್ರದವರಿಗೆ ವಿಶ್ವಾಮಿತ್ರ, ದೇವರಾಜ, ಔದಲಪ್ರವರಗಳು. ಜ್ಞಾನದಾ ಗೋತ್ರದೇವಿಯು. ಈ ಗೋತ್ರದವರು ಅಶಕ್ತರೂ, ದೈನ್ಯವುಳ್ಳವರೂ, ಸುಳ್ಳಾಡುವವರೂ, ಲೋಭಿಗಳೂ, ಸರ್ವವಿದ್ಯಾಕುಶಲರೂ ಆಗಿರುವರು. ಇಲ್ಲಿಗೆ ಮೂವತ್ತನೆ ಸ್ಥಾನವು ಮುಗಿದುದು.

೧೯೦–೧೯೩. ಪವಿತ್ರವಾದ ಸಾಣದಾಸ್ಥಾನದಲ್ಲಿರುವವರಿಗೆ ಕುಶ ಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಎಂಬ ಮೂರು ಪ್ರವರಗಳು.

CC-0. Jangamwadi Math Collection. Digitized by eGangotri

ಅಸ್ಮಿನ್ಗೋತ್ರೇ ತು ಯೇ ಜಾತಾ ದುರ್ಬಲಾ ದೀನಮಾನಸಾಃ ।
ಅಸತ್ಯಭಾಷಿಣೋ ವಿಪ್ರಾ ಲೋಭಿನೋ ನೃಪಸತ್ತಮ ॥ ೧೯೨ ॥
ಸರ್ವವಿದ್ಯಾ ಕುಶಲಿನೋ ಬ್ರಾಹ್ಮಣಾ ಬ್ರಹ್ಮವಿತ್ತಮಾಃ ॥ ೧೯೩ ॥
॥ ಇತ್ಯೇಕತ್ರಿಂಶಂ ಸ್ಥಾನಂ ॥

ಆನಂದೀಯಾ ಚ ಸಂಸ್ಥಾನಂ ಗೋತ್ರದ್ವಿತಯಮೇವ ಚ ।
ಭಾರದ್ವಾಜಂ ನಾಮಚೈಕಂ ಶಾಂಡಿಲ್ಯಂ ಚ ದ್ವಿತೀಯಕಂ ॥ ೧೯೪ ॥
ಆಂಗಿರಸೋ ಬಾರ್ಹಸ್ಪತ್ಯೋ ಭಾರದ್ವಾಜಸ್ತೃತೀಯಕಃ ।
ಚಚಾಈ ಚಾತ್ರಯಾ ದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೧೯೫ ॥
ಕಾಶ್ಯಪಾಽವತ್ಸಾರಶ್ಚ ಶಾಂಡಿಲ್ಯೋಽಸಿತ ಏವ ಚ ।
ಪಂಚಮೋ ದೇವಲಶ್ಚೈವ ಪ್ರವರಾಣಿ ಯಥಾಕ್ರಮಂ ॥ ೧೯೬ ॥
ಜ್ಞಾನಜಾ ಚ ತಥಾ ದೇವೀ ಕಥಿತಾ ಗೋತ್ರದೇವತಾ ।
ಅಸ್ಮಿನ್ಗೋತ್ರೇ ಚ ಯೇ ಜಾತಾ ನಿರ್ಲೋಭಾಃ ಶುದ್ಧಮಾನಸಾಃ ॥ ೧೯೭ ॥
ಯದೃಚ್ಛಾಲಾಭಸಂತುಷ್ಟಾ ಬ್ರಾಹ್ಮಣಾ ಬ್ರಹ್ಮವಿತ್ತಮಾಃ ॥ ೧೯೮ ॥
॥ ಇತಿ ದ್ವಾತ್ರಿಂಶಂ ಸ್ಥಾನಂ ॥

ಪಾಟಡೀಯಾ ಪರಂ ಸ್ಥಾನಂ ಪವಿತ್ರಂ ಪರಿಕೀರ್ತಿತಂ ।
ಕುಶಗೋತ್ರಂ ಭವೇದತ್ರ ಪ್ರವರತ್ರಯಸಂಯುತಂ ॥ ೧೯೯ ॥
ವಿಶ್ವಾಮಿತ್ರೋ ದೇವರಾತಸ್ತೃತೀಯಔದಲಮೇವ ಹಿ ।
ಅಸ್ಮಿನ್ಗೋತ್ರೇ ಚ ಯೇ ಜಾತಾ ವೇದಶಾಸ್ತ್ರಪರಾಯಣಾಃ ॥ ೨೦೦ ॥
ಮದೋದ್ಧುರಾಶ್ಚ ತೇ ವಿಪ್ರಾ ನ್ಯಾಯಮಾರ್ಗಪ್ರವರ್ತಕಾಃ ॥ ೨೦೧ ॥
॥ ಇತಿ ತ್ರಯಸ್ತ್ರಿಂಶಂ ಸ್ಥಾನಂ ॥

---

ಜ್ಞಾನದೆಯು ಗೋತ್ರದೇವಿಯು. ಈ ಗೋತ್ರದಲ್ಲಿ ಜನಿಸಿದವರು ಅಶಕ್ತರೂ, ದೀನರೂ, ಸುಳ್ಳಾಡುವವರೂ, ಲೋಭಿಗಳೂ, ಸಮಸ್ತವಿದ್ಯೆಗಳಲ್ಲಿಯೂ ದಕ್ಷರೂ, ಜ್ಞಾನಿಗಳೂ ಆಗಿರುವರು. ಇಲ್ಲಿಗೆ ಮೂವತ್ತೊಂದನೆ ಸ್ಥಾನವು ಮುಗಿದುದು.

೧೯೪–೧೯೮. ಆನಂದಾಸ್ಥಾನದವರಿಗೆ ಭಾರದ್ವಾಜ, ಶಾಂಡಲ್ಯ ಗೋತ್ರಗಳು. ಭಾರದ್ವಾಜಗೋತ್ರದವರಿಗೆ ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಚಚಾಈ ಗೋತ್ರದೇವಿಯು. ಶಾಂಡಿಲ್ಯಗೋತ್ರದವರಿಗೆ ಕಾಶ್ಯಪ, ಅವತ್ಸಾರ, ಶಾಂಡಿಲ್ಯ, ಅಸಿತ, ದೇವಲ ಎಂದು ಐದು ಪ್ರವರಗಳು. ಜ್ಞಾನಜಾ ಗೋತ್ರದೇವಿಯು. ಈ ಗೋತ್ರದಲ್ಲಿ ಜನಿಸಿದವರು ಉದಾರರೂ, ಶುದ್ಧಚಿತ್ತರೂ, ಸಿಕ್ಕಿದಷ್ಟರಿಂದ ತೃಪ್ತಿಗೊಳ್ಳುವವರೂ, ಬ್ರಾಹ್ಮಜ್ಞಾನಿಗಳೂ ಆಗಿರುವರು. ಇಲ್ಲಿಗೆ ಮೂವತ್ತೆರಡನೆ ಸ್ಥಾನವು ಮುಗಿದುದು.

೧೯೯–೨೦೧. ಪವಿತ್ರವಾದ ಪಾಟಡೀಯಾಸ್ಥಾನದವರಿಗೆ ಕುಶ ಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು. ಈ ಗೋತ್ರದವರೂ ವೇದ

CC-0. Jangamwadi Math Collection. Digitized by eGangotri

ಟೇಕೋಲಿಯಾ ಪರಂ ಸ್ಥಾನಂ ಕುಶಗೋತ್ರಂ ತಥೈವ ಚ ।
ವಿಶ್ವಾಮಿತ್ರೋ ದೇವರಾತಸ್ತೃತೀಯೌದಲನೇವ ಚ ॥ ೨೦೨ ॥
ಚಚಾಈ ಚಾಽತ್ರ ವೈ ದೇವೀ ಗೋತ್ರದೇವೀ ಪ್ರಕೀರ್ತಿತಾ ।
ಅಸ್ಮಿನ್ಗೋತ್ರೇ ಭವಾ ವಿಪ್ರಾಃ ಶ್ರುತಿಸ್ಮೃತಿಪರಾಯಣಾಃ ॥ ೨೦೩ ॥
ರೋಗಿಣೋ ಲೋಭಿನೋ ದುಷ್ಟಾ ಯಜನೇ ಯಾಜನೇ ರತಾಃ ।
ಬ್ರಹ್ಮಕ್ರಿಯಾಪರಾಃ ಸರ್ವೇ ಮೋಢಾಃ ಪ್ರೋಕ್ತಾ ಮಯಾಽತ್ರವೈಃ ॥
॥ ಇತಿ ಚತುಸ್ತ್ರಿಂಶಂ ಸ್ಥಾನಂ ॥

ಗವಿಾಧಾಣೀಯಂ ಪರಮಂ ಸ್ಥಾನಂ ಪ್ರೋಕ್ತಂ ವೈ ಪಂಚತ್ರಿಂಶಕಂ ।
ಗೋತ್ರಂ ಧಾರಣಸಂ ಚೈವ ದೇವೀ ಚಾಽತ್ರ ಮಹಾಬಲಾ ॥ ೨೦೪ ॥
ಅಗಸ್ತಿದಾರ್ಢಚ್ಯುತ ಇಧ್ಮವಾಹನ ಸಂಜ್ಞಕಾಃ ।
ಅಸ್ಮಿನ್ವಂಶೇ ಚ ಯೇ ಜಾತಾ ಬ್ರಾಹ್ಮಣಾ ಬ್ರಹ್ಮತತ್ಪರಾಃ ॥ ೨೦೫ ॥
ಅಲೌಲ್ಯಾಶ್ಚ ಮಹಾಪ್ರಾಜ್ಞಾ ವೇದಾಜ್ಞಾ ಪ್ರತಿಪಾಲಕಾಃ ॥ ೨೦೬ ॥
॥ ಇತಿ ಪಂಚತ್ರಿಂಶಂ ಸ್ಥಾನಂ ॥

ಮಾತ್ರಾ ಚ ಪರಮಂ ಸ್ಥಾನಂ ಪವಿತ್ರಂ ಸರ್ವದೇಹಿನಾಂ ।
ಕುಶಗೋತ್ರಂ ಪವಿತ್ರಂ ತು ಪರಮಂ ಚಾಽತ್ರ ಧಿಷ್ಠಿತಂ ॥ ೨೦೭ ॥

---

ಶಾಸ್ತ್ರನಿರತರೂ, ಮತ್ತರೂ, ನ್ಯಾಯಮಾರ್ಗದಲ್ಲಾಸಕ್ತರೂ ಆಗಿರುವರು. ಇಲ್ಲಿಗೆ ಮೂವತ್ತಮೂರನೆಯ ಸ್ಥಾನವು ಮುಗಿದುದು.

೨೦೨–೨೦೪. ಟೇಕೋಲಿಯಾಸ್ಥಾನದವರಿಗೆ ಕುಶಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲಪ್ರವರಗಳು. ಚಚಾಈಯು ಗೋತ್ರದೇವಿಯು. ಈ ಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣರು ಶ್ರುತಿಸ್ಮೃತಿನಿರತರೂ, ರೋಗಿಗಳೂ, ಲೋಭಿಗಳೂ, ದುಷ್ಟರೂ, ಯಾಗ ಮಾಡುವುದರಲ್ಲಿಯೂ ಮಾಡಿಸುವುದರಲ್ಲಿಯೂ ಅಸಕ್ತರೂ, ಬ್ರಾಹ್ಮಣ ಕರ್ಮದಲ್ಲಿ ನಿರತರೂ ಆಗಿರುವರು. ಇಲ್ಲಿಗೆ ಮೂವತ್ತನಾಲ್ಕನೆಯ ಸ್ಥಾನವು ಮುಗಿದುದು.

೨೦೫–೨೦೭. ಮೂವತ್ತೈದನೆಯ ಗವಿಾಧಾಣೀಯಸ್ಥಾನದವರಿಗೆ ಧಾರಣಸಗೋತ್ರವು. ಮಹಾಬಲಾ ಗೋತ್ರದೇವಿಯು. ಅಗಸ್ತಿ, ದಾರ್ಢಚ್ಯುತ, ಇಧ್ಮವಾಹನ ಪ್ರವರಗಳು. ಈ ವಂಶದ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೂ, ಸ್ಥಿರಚಿತ್ತರೂ, ಅತ್ಯಂತ ಬುದ್ಧಿವಂತರೂ, ವೇದದಲ್ಲಿ ಹೇಳಿದಂತೆ ನಡೆಯುವವರೂ ಆಗಿರುವರು. ಇಲ್ಲಿಗೆ ಮೂವತ್ತೈದನೆಯ ಸ್ಥಾನವು ಮುಗಿದುದು.

೨೦೮–೨೦೯. ಪವಿತ್ರವಾದ ಮಾತ್ರಾಸ್ಥಾನದವರಿಗೆ ಕುಶಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು. ಸಮಸ್ತ ಲೋಕರಕ್ಷಕಳಾದ ಜ್ಞಾನದೇಯು ಗೋತ್ರದೇವಿಯು.


CC-0. Jangamwadi Math Collection. Digitized by eGangotri

ವಿಶ್ವಾಮಿತ್ರೋ ದೇವರಾತೋದಲಶ್ಚೈವ ತೃತೀಯಕಃ ।
ಜ್ಞಾನದಾಚ ಮಹಾದೇವೀ ಸರ್ವಲೋಕೈಕರಕ್ಷಿಣೀ ॥ ೨೦೯ ॥
ಅಸ್ಮಿನ್ವಂಶೇ ಸಮುದ್ಭೂತಾ ಬ್ರಾಹ್ಮಣಾ ದೇವತತ್ಪರಾಃ ।
ಸಸ್ವಾಧ್ಯಾಯವಷಟ್ಕಾರಾ ವೇದಶಾಸ್ತ್ರಪ್ರವರ್ತಕಾಃ ॥ ೨೧೦ ॥

॥ ಇತಿ ಷಟ್ತ್ರಿಂಶಂ ಸ್ಥಾನಂ ॥

ನಾತವೋರಾ ಪರಂ ಸ್ಥಾನಂ ಪವಿತ್ರಂ ಪರಮಂ ಶುಭಂ ।
ಕುಶಗೋತ್ರಂ ಚ ತತ್ರಾಽಸ್ತಿ ಪ್ರವರತ್ರಯಸಂಯುತಂ ॥ ೨೧೧ ॥
ವಿಶ್ವಾಮಿತ್ರೋ ದೇವರಾತ ಸ್ತೃತೀಯಔದಲಮೇವ ಚ ।
ಜ್ಞಾನಜಾ ಚಾಽತ್ರ ವೈ ದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೨೧೨ ॥
ಅಸ್ಮಿನ್ವಂಶೇ ಭವಾ ಯೇ ಚ ಬ್ರಾಹ್ಮಣಾ ಬ್ರಹ್ಮವಿತ್ತಮಾಃ ।
ಧರ್ಮಜ್ಞಾಃ ಸತ್ಯವಕ್ತಾರೋ ವ್ರತದಾನಪರಾಯಣಾಃ ॥ ೨೧೩ ॥

॥ ಇತಿ ಸಪ್ತತ್ರಿಂಶಂ ಸ್ಥಾನಂ ॥

ಬಲೋಲಾ ಚ ಮಹಾಸ್ಥಾನಂ ಪವಿತ್ರಂ ಪರಮಾದ್ಭುತಂ ।
ಕುಶಗೋತ್ರಂ ಸಮಾಖ್ಯಾತಂ ಪ್ರವರತ್ರಯಮೇವ ಚ ॥ ೨೧೪ ॥
ಪೂರ್ವೋಕ್ತಂ ಪ್ರವರಂ ಚೈವ ದೇವೀ ಚೈವಾಽತ್ರಮಾನದಾ ।
ವಂಶೇಽಸ್ಮಿನ್ಪರಮಾಃ ಪ್ರೋಕ್ತಾಃ ಕಾಜೇಶೇನ ವಿನಿರ್ಮಿತಾಃ ॥ ೨೧೫ ॥
ಅಸತ್ಯಭಾಷಿಣೋ ವಿಪ್ರಾ ಲೋಭಿನೋ ನೃಪಸತ್ತಮ ।
ಸರ್ವವಿದ್ಯಾಕುಶಲಿನೋ ಬ್ರಾಹ್ಮಣಾ ಬ್ರಹ್ಮಸತ್ತಮಾಃ ॥ ೨೧೬ ॥

॥ ಇತ್ಯಷ್ಟತ್ರಿಂಶಂ ಸ್ಥಾನಂ ॥

---

೨೧೦. ಈ ವಂಶದಲ್ಲಿ ಜನಿಸಿದ ಬ್ರಾಹ್ಮಣರು ದೈವಭಕ್ತರೂ, ಶ್ರಾದ್ಧ ಯಜ್ಞಕಾರ್ಯಗಳಲ್ಲಿ ನಿರತರೂ, ವೇದಶಾಸ್ತ್ರಪ್ರವರ್ತಕರೂ ಆಗಿರುವರು. ಇಲ್ಲಿಗೆ ಮೂವತ್ತಾರನೆಯ ಸ್ಥಾನವು ಮುಗಿದುದು.

೨೧೧-೨೧೨. ನಾತವೋರಾಸ್ಥಾನದವರಿಗೆ ಕುಶಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು. ಜ್ಞಾನಜಾ ಗೋತ್ರದೇವಿಯು.

೨೧೩. ಈ ವಂಶದ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೂ, ಧರ್ಮಜ್ಞರೂ, ಸತ್ಯವಾದಿಗಳೂ, ವ್ರತ ಮತ್ತು ದಾನಗಳಲ್ಲಿ ಆಸಕ್ತರೂ ಆಗಿರುವರು. ಇಲ್ಲಿಗೆ ಮೂವತ್ತೇಳನೆಯ ಸ್ಥಾನವು ಮುಗಿದುದು.

೨೧೪-೨೧೬. ಬಲೋಲಾಸ್ಥಾನದವರಿಗೆ ಕುಶಗೋತ್ರವು. ಹಿಂದೆ ಹೇಳಿದ ಕುಶಗೋತ್ರದ ಪ್ರವರಗಳೆ ಆಗಿರುವುವು. ಮಾನದಾ ಗೋತ್ರದೇವಿಯು. ಬ್ರಹ್ಮಾದಿಗಳಿಂದ ನಿರ್ಮಿತರಾದ ಈ ವಂಶದ ಬ್ರಾಹ್ಮಣರು ಸುಳ್ಳಾಡುವವರೂ,

CC-0. Jangamwadi Math Collection. Digitized by eGangotri

ರಾಜ್ಯಜಾ ಚ ಮಹಾಸ್ಥಾನಂ ಲೌಗಾಕ್ಷಿಪ್ರವರಂ ತಥಾ ।
ಕಾಶ್ಯಪಾಽವತ್ಸಾರವಾಸಿಷ್ಠಂ ಪ್ರವರತ್ರಯಮೇವ ಚ ॥ ೨೧೭ ॥
ಭದ್ರಾಚ ಯೋಗಿನೀ ಚೈವ ಗೋತ್ರದೇವೀ ಪ್ರಕೀರ್ತಿತಾ ।
ಅಸ್ಮಿನ್ವಂಶೇ ಸಮುದ್ಭೂತಾ ಬ್ರಾಹ್ಮಣಾ ವೇದತತ್ಪರಾಃ ॥ ೨೧೮ ॥
ನಿತ್ಯಸ್ನಾನನಿತ್ಯಹೋಮ ನಿತ್ಯದಾನಪರಾಯಣಾಃ ।
ನಿತ್ಯಧರ್ಮರತಾಶ್ಚೈವ ನಿತ್ಯನೈಮಿತ್ತತತ್ಪರಾಃ ॥ ೨೧೯ ॥

॥ ಇತ್ಯೇಕೋನಚತ್ವಾರಿಂಶಂ ಸ್ಥಾನಂ ॥

ರೂಪೋಲಾ ಪರಮಂಸ್ಥಾನಂ ಪವಿತ್ರಮತಿ ಪುಣ್ಯದಂ ।
ಅಸ್ಮಿನ್ಗೋತ್ರತ್ರಯೇ ಚೈವ ದೇವೀ ತ್ರಿತಯಮೇವ ಚ ॥ ೨೨೦ ॥
ಪ್ರಥಮಂ ಕುತ್ಸವತ್ಸಾಖ್ಯೌ ಭಾರದ್ವಾಜ ಸ್ತೃತೀಯಕಃ ।
ಆಂಗಿರಸೋಽಂಬರೀಷಶ್ಚ ಯೌವನಾಶ್ವಸ್ತೃತೀಯಕಃ ॥ ೨೨೧ ॥
ಭೃಗುಚ್ಯವನಾಪ್ನವಾನೌರ್ವ ಜಮದಗ್ನಿ ಸ್ತಥೈವ ಚ ।
ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜಸ್ತಥೈವ ಚ ॥ ೨೨೨ ॥
ಕ್ಷೇಮಲಾ ಚೈವ ವೈ ದೇವೀ ಧಾರಭಟ್ಟಾರಿಕಾ ತಥಾ ।
ತೃತೀಯಾ ಕ್ಷೇಮಲಾ ಪ್ರೋಕ್ತಾ ಗೋತ್ರಮಾತಾಹ್ಯನುಕ್ರಮಾತ್ ॥ ೨೨೩ ॥

---

ಲೋಭಿಗಳೂ, ಸರ್ವವಿದ್ಯಾಕುಶಲರೂ, ಬ್ರಾಹ್ಮಣಶ್ರೇಷ್ಠರೂ ಆಗಿರುವರು. ಇಲ್ಲಿಗೆ ಮುವತ್ತೆಂಟನೆಯ ಸ್ಥಾನವು ಮುಗಿದುದು.

೨೧೭–೨೧೯. ರಾಜ್ಯಜಾಸ್ಥಾನದವರಿಗೆ ಲೌಗಾಕ್ಷಿಗೋತ್ರವು. ಕಾಶ್ಯಪ, ಅವತ್ಸಾರ, ವಸಿಷ್ಠ ಪ್ರವರಗಳು. ಭದ್ರೆಯು ಗೋತ್ರದೇವಿಯು. ಈ ವಂಶದಲ್ಲಿ ಜನಿಸಿದ ಬ್ರಾಹ್ಮಣರು ವೇದದಲ್ಲಿ ಆಸಕ್ತರೂ, ನಿತ್ಯವೂ ಸ್ನಾನ, ಹೋಮ, ದಾನ ಧರ್ಮಗಳಲ್ಲಿ ನಿರತರೂ, ನಿತ್ಯ ನೈಮಿತ್ತಿಕ ಕರ್ಮಾಸಕ್ತರೂ ಆಗಿರುವರು. ಇಲ್ಲಿಗೆ ಮೂವತ್ತೊಂಬತ್ತನೆಯ ಸ್ಥಾನವು ಮುಗಿದುದು.

೨೨೦–೨೨೩. ಅತಿಪುಣ್ಯಕರವಾದ ರೂಪೋಲಾ ಸ್ಥಾನದವರಿಗೆ ಕುತ್ಸ, ವತ್ಸ, ಭಾರದ್ವಾಜವೆಂಬ ಮೂರು ಗೋತ್ರಗಳು. ಕುತ್ಸಗೋತ್ರದವರಿಗೆ ಆಂಗಿರಸ, ಆಂಬರೀಷ, ಯೌವನಾಶ್ವಪ್ರವರಗಳು. ವತ್ಸಗೋತ್ರದವರಿಗೆ ಭೃಗು, ಚ್ಯವನ, ಆಪ್ನವಾನ, ಔರ್ವ, ಜಮದಗ್ನಿ ಪ್ರವರಗಳು. ಭಾರದ್ವಾಜ ಗೋತ್ರದವರಿಗೆ ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಕ್ರಮವಾಗಿ ಕ್ಷೇಮಲಾ, ಧಾರಭಟ್ಟಾರಿಕಾ, ಕ್ಷೇಮಲಾ ಎಂಬವರು ಗೋತ್ರ ಮಾತೆಯರು.

CC-0. Jangamwadi Math Collection. Digitized by eGangotri

ಅಸ್ಮಿನ್ಗೋತ್ರೇ ಚ ಯೇ ಜಾತಾ ಪಂಚಯಜ್ಞರತಾಃ ಸದಾ ।
ಲೋಭಿನಃ ಕ್ರೋಧಿನಶ್ಚೈವ ಪ್ರಜಾಯಂತೇ ಬಹುಪ್ರಜಾಃ ॥ ೨೨೪ ॥
ಸ್ನಾನದಾನಾದಿ ನಿರತಾಃ ಸದಾ ಚ ವಿಜಿತೇಂದ್ರಿಯಾಃ ।
ವಾಪೀಕೂಪತಡಾಗಾನಾಂ ಕರ್ತಾರಶ್ಚ ಸಹಸ್ರಶಃ ॥ ೨೨೫ ॥

॥ ಇತಿ ಚತ್ವಾರಿಂಶಂ ಸ್ಥಾನಂ ॥

ಬೋಧಣೀ ಪರಮಂ ಸ್ಥಾನಂ ಪವಿತ್ರಂ ಪಾಪನಾಶನಂ ।
ಕುಶಂ ಚ ಕೌಶಿಕಂ ಚೈವ ಗೋತ್ರದ್ವಿತಯಮೇವ ಚ ॥ ೨೨೬ ॥
ವಿಶ್ವಾಮಿತ್ರಶ್ಚ ಪ್ರಥಮೋ ದೇವರಾತೌದಲೇತಿ ಚ ।
ವಿಶ್ವಾಮಿತ್ರಾಘಮರ್ಷಣಕೌಶಿಕೇತಿ ತಥೈವ ಚ ॥ ೨೨೭ ॥
ಯಕ್ಷಿಣೀ ಪ್ರಥಮಾ ಚೈವ ದ್ವಿತೀಯಾ ತಾರಣೀ ತಥಾ ।
ಅಸ್ಮಿನ್ಗೋತ್ರೇ ತು ಯೇ ಜಾತಾ ದುರ್ಬಲಾ ದೀನಮಾನಸಾಃ ॥ ೨೨೮ ॥
ಅಸತ್ಯಭಾಷಿಣೋ ವಿಪ್ರಾ ಲೋಭಿನೋ ನೃಪಸತ್ತಮ ।
ಸರ್ವವಿದ್ಯಾಕುಶಲಿನೋ ಬ್ರಾಹ್ಮಣಾ ಬ್ರಹ್ಮಸತ್ತಮಾಃ ॥ ೨೨೯ ॥

॥ ಇತ್ಯೇಕಚತ್ವಾರಿಂಶಂ ಸ್ಥಾನಂ ॥

ಛತ್ರೋಟಾ ಚ ಪರಂ ಸ್ಥಾನಂ ಸರ್ವಲೋಕೈಕಪೂಜಿತಂ ।
ಕುಶಗೋತ್ರಂ ಸಮಾಖ್ಯಾತಂ ಪ್ರವರತ್ರಯಮೇವ ಹಿ ॥ ೨೩೦ ॥
ವಿಶ್ವಾಮಿತ್ರೋ ದೇವರಾತಸ್ತೃತೀಯೋದಲಮೇವ ವೈ ।
ಚಚಾಈ ಚಾತ್ರ ವೈ ದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೨೩೧ ॥

---

೨೨೪–೨೨೫. ಈ ಗೋತ್ರದಲ್ಲಿ ಜನಿಸಿದವರು ಪಂಚಯಜ್ಞನಿರತರೂ, ಲೋಭಿಗಳೂ, ಕೋಪಿಷ್ಠರೂ, ಬಹಳಮಂದಿಮಕ್ಕಳುಳ್ಳವರೂ, ಸ್ನಾನ ದಾನಾದಿಗಳಲ್ಲಿ ಆಸಕ್ತರೂ, ಜಿತೇಂದ್ರಿಯರೂ, ಬಾವಿ, ಕೆರೆ ಮೊದಲಾದುವುಗಳನ್ನು ನಿರ್ಮಿಸುವವರೂ ಆಗಿರುವರು. ಇಲ್ಲಿಗೆ ನಲವತ್ತನೆಯ ಸ್ಥಾನವು ಮುಗಿದುದು.

೨೨೬–೨೨೯. ಬೋಧಣೀ ಎಂಬ ಸ್ಥಾನದಲ್ಲಿರುವವರಿಗೆ ಕುಶ, ಕೌಶಿಕ ಎಂಬ ಎರಡು ಗೋತ್ರಗಳು. ಕುಶಗೋತ್ರದವರಿಗೆ ವಿಶ್ವಾಮಿತ್ರ, ದೇವರಾತ, ಔದಲ ಎಂಬ ಮೂರು ಪ್ರವರಗಳು. ಕೌಶಿಕ ಗೋತ್ರದವರಿಗೆ ವಿಶ್ವಾಮಿತ್ರ, ಅಘಮರ್ಷಣ, ಕೌಶಿಕ ಎಂಬ ಮೂರು ಪ್ರವರಗಳು. ಯಕ್ಷಿಣೀ, ತಾರಣೀ ಎಂಬವರು ಗೋತ್ರದೇವಿಯರು. ಈ ಗೋತ್ರದಲ್ಲಿ ಹುಟ್ಟಿದವರು ಅಶಕ್ತರೂ, ದೀನರೂ, ಸುಳ್ಳಾಡುವವರೂ, ಲೋಭಿಗಳೂ, ಸಮಸ್ತ ವಿದ್ಯೆಗಳಲ್ಲಿ ಕುಶಲರೂ ಆಗಿರುವರು. ಇಲ್ಲಿಗೆ ನಲವತ್ತೊಂದನೆ ಸ್ಥಾನವು ಮುಗಿದದು.

೨೩೦–೨೩೧. ಛತ್ರೋಟಾಸ್ಥಾನದವರಿಗೆ ಕುಶಗೋತ್ರವು. ವಿಶ್ವಾಮಿತ್ರ, ದೇವರಾತ, ಔಡಲ ಪ್ರವರಗಳು. ಚಚಾಈಯು ಗೋತ್ರದೇವಿಯು.

CC-0. Jangamwadi Math Collection. Digitized by eGangotri

ಅಸ್ಮಿನ್ವಂಶೇ ಭವಾಶ್ಚೈವ ವೇದಶಾಸ್ತ್ರಪರಾಯಣಾಃ ।
ಮಹೋದಯಾಶ್ಚ ತೇ ವಿಪ್ರಾ ನ್ಯಾಯಮಾರ್ಗಪ್ರವರ್ತಕಾಃ ॥ ೨೩೨ ॥

॥ ಇತಿ ದ್ವಿಚತ್ವಾರಿಂಶಂ ಸ್ಥಾನಂ ॥

ಖಲ ಏವಾಽತ್ರ ಸಂಸ್ಥಾನಂ ತ್ರಯಶ್ಚತ್ವಾರಿಂಶಮೇವ ಹಿ ।
ವತ್ಸಗೋತ್ರೋದ್ಭವಾ ವಿಪ್ರಾಃ ಕೃಷಿಕರ್ಮಪ್ರವರ್ತಕಾಃ ॥ ೨೩೩ ॥
ಗೋತ್ರಜಾ ಜ್ಞಾನಜಾ ದೇವೀ ಪ್ರವರಾಃ ಪಂಚ ಏವ ಹಿ ।
ಭಾರ್ಗವಚ್ಯಾವನಾಪ್ನವಾನೌರ್ವ ಜಾಮದಗ್ನ್ಯೇತಿ ಚೈವ ಹಿ ॥ ೨೩೪ ॥
ಅಸ್ಮಿನ್ಗೋತ್ರೇ ಭವಾ ವಿಪ್ರಾಃ ಶ್ರೌತಾಽಗ್ನಿಸುನಿಷೇವಕಾಃ ।
ವೇದಾಽಧ್ಯಯನಶೀಲಾಶ್ಚ ತಾಪಸಾಶ್ಚಾಽರಿಮರ್ದನಾಃ ॥ ೨೩೫ ॥
ರೋಷಿಣೋ ಲೋಭಿನೋ ಹೃಷ್ಟಾ ಯಜನೇ ಯಾಜನೇ ರತಾಃ ।
ಸರ್ವಭೂತದಯಾವಿಷ್ಟಾಸ್ತಥಾ ಪರೋಪಕಾರಿಣಃ ॥ ೨೩೬ ॥

॥ ಇತಿ ತ್ರಯಶ್ಚತ್ವಾರಿಂಶಂ ಸ್ಥಾನಂ ॥

ವಾಸಂತಡ್ಯಾಂ ಚ ವಿಪ್ರಾಣಾಂ ಕುಶಗೋತ್ರ ಮುದಾಹೃತಂ ।
ವಿಶ್ವಾಮಿತ್ರೋ ದೇವರಾತಸ್ತೃತೀಯೌದಲಮೇವ ಹಿ ॥ ೨೩೭ ॥
ಚಚಾಈ ಚಾಽತ್ರ ವೈ ದೇವೀ ಗೋತ್ರದೇವೀ ಪ್ರಕೀರ್ತಿತಾ ।
ಅಸ್ಮಿನ್ವಂಶೇ ಚ ಯೇ ಜಾತಾಃ ಪೂರ್ವೋಕ್ತಾ ಬ್ರಹ್ಮತತ್ಪರಾಃ ॥ ೨೩೮ ॥

---

೨೩೨. ಈ ವಂಶದವರು ವೇದಶಾಸ್ತ್ರನಿರತರೂ, ಮಹೋದಯರೂ, ನ್ಯಾಯಮಾರ್ಗದಲ್ಲಿ ನಡೆಯುವವರೂ ಆಗಿರುವರು. ಇಲ್ಲಿಗೆ ನಲವತ್ತೆರಡನೆಯ ಸ್ಥಾನವು ಮುಗಿದುದು.

೨೩೩–೨೩೪. ಖಲಸ್ಥಾನದವರಿಗೆ ವತ್ಸ ಗೋತ್ರವು. ಜ್ಞಾನಜಾ ಗೋತ್ರ ದೇವಿಯು. ಭಾರ್ಗವ, ಚ್ಯಾವನ, ಆಪ್ನವಾನ, ಔರ್ವ, ಜಾಮದಗ್ನ್ಯ ಪ್ರವರಗಳು.

೨೩೫–೨೩೬. ಈ ಗೋತ್ರದವರು ಕೃಷಿಯಲ್ಲಾಸಕ್ತರೂ, ಶ್ರೌತಾಗ್ನಿ ಸೇವಕರೂ, ವೇದಾಧ್ಯಯನಶೀಲರೂ, ಮುನಿಗಳೂ, ಶತ್ರುನಾಶಕರೂ, ಕೋಪಿಷ್ಠರೂ, ಲೋಭಿಗಳೂ, ಸಂತುಷ್ಟರೂ, ಯಾಗದಲ್ಲಿಯೂ ಯಾಗಮಾಡಿಸುವುದರಲ್ಲಿಯೂ ಆಸಕ್ತರೂ, ಸಕಲ ಪ್ರಾಣಿಗಳಲ್ಲಿ ದಯೆಯುಳ್ಳವರೂ, ಪರೋಪಕಾರಿಗಳೂ ಆಗಿರುವರು. ಇಲ್ಲಿಗೆ ನಲವತ್ತಮೂರನೆಯ ಸ್ಥಾನವು ಮುಗಿದುದು.

೨೩೭–೨೩೮. ವಾಸಂತಡೀ ಗ್ರಾಮದ ಬ್ರಾಹ್ಮಣರಿಗೆ ಕುಶ ಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು. ಚಚಾಈಯು ಗೋತ್ರ ದೇವಿಯು. ಈ ಗೋತ್ರದಲ್ಲಿ ಹುಟ್ಟಿದವರು ಬ್ರಹ್ಮನಿಷ್ಠರೂ, ಪರೋಪಕಾರಿ

CC-0. Jangamwadi Math Collection. Digitized by eGangotri

ಪರೋಪಕಾರಿಣಶ್ಚೈವ ಪರಚಿತ್ತಾನುವರ್ತಿನಃ ।
ಪರಸ್ವವಿಮುಖಾಶ್ಚೈವ ಪರಮಾರ್ಗ ಪ್ರವರ್ತಕಾಃ ॥ ೨೩೯ ॥
॥ ಇತಿ ಚತುಶ್ಚತ್ವಾರಿಂಶಂ ಸ್ಥಾನಂ ॥
ಅತಃ ಪರಂ ಚ ಸಂಸ್ಥಾನಂ ಜಾಖಾಸಣಮುದಾಹೃತಂ ।
ಗೋತ್ರಂ ವೈ ವಾತ್ಸ್ಯಸಂಜ್ಞಂ ತು ಗೋತ್ರಜಾ ಶೀಹುರೀ ತಥಾ ।
ಪ್ರವರಾಣಿ ಚ ಪಂಚೈವ ಮಯಾ ತವ ಪ್ರಕಾಶಿತಂ ॥ ೨೪೦ ॥
ಭಾರ್ಗವಚ್ಯಾವನಾಪ್ನವಾನೌರ್ವಪುರೋಧಸಃ ಸ್ಮೃತಃ ।
ಅಸ್ಮಿನ್ವಂಶೇ ಚ ಯೇ ಜಾತಾ ವಾಡವಾಃ ಸುಖವಾಸಿನಃ ।
ವಿಪ್ರಾಃ ಸ್ಥೂಲಾಶ್ಚ ಜ್ಞಾತಾರಃ ಸರ್ವಕರ್ಮರತಾಶ್ಚ ವೈ ॥ ೨೪೧ ॥
ಸರ್ವೇ ಧರ್ಮೈಕವಿಶ್ವಾಸಾಃ ಸರ್ವಲೋಕೈಕಪೂಜಿತಾಃ ।
ವೇದಶಾಸ್ತ್ರಾರ್ಥನಿಪುಣಾ ಯಜನೇ ಯಾಜನೇ ರತಾಃ ॥ ೨೪೨ ॥
ಸದಾಚಾರಾಃ ಸುರೂಪಾಶ್ಚ ತುಂದಿಲಾ ದೀರ್ಘದರ್ಶಿನಃ ।
ಶೀಹುರೀ ಚಾತ್ರ ವೈ ದೇವೀ ಕುಲದೇವೀ ಪ್ರಕೀರ್ತಿತಾ ॥ ೨೪೩ ॥
॥ ಇತಿ ಪಂಚಚತ್ವಾರಿಂಶಂ ಸ್ಥಾನಂ ॥
ಷಟ್ಚತ್ವಾರಿಂಶಕಂ ಸ್ಥಾನಂ ಮೋಡಾನಾಂ ತು ಪ್ರಕಾಶಿತಂ ।
ಗೋತೀಆನಾಮ ಸಂಜ್ಞಾ ತು ಕುಶಗೋತ್ರಮಿಹಾಸ್ತಿ ಚ ॥ ೨೪೪ ॥
ವಿಶ್ವಾಮಿತ್ರಂ ಪ್ರಥಮಂ ಚೈವ ದ್ವಿತೀಯಂ ದೇವರಾತಕಂ ।
ತೃತೀಯಮೌದಲಂ ಚೈವ ಪ್ರವರತ್ರಿತಯಂತ್ವಿದಂ ॥ ೨೪೫ ॥

---

ಗಳೂ, ಇತರರ ಮನಸ್ಸನ್ನು ಅನುಸರಿಸುವವರೂ, ಮತ್ತೊಬ್ಬರ ಸ್ವತ್ತನ್ನು ತೆಗೆದುಕೊಳ್ಳದವರೂ, ಇತರರ ಮಾರ್ಗವನ್ನವಲಂಬಿಸುವವರೂ ಆಗಿರುವರು. ಇಲ್ಲಿಗೆ ನಲವತ್ತನಾಲ್ಕನೆಯ ಸ್ಥಾನವು ಮುಗಿದುದು.

೨೪೦–೨೪೩. ಜಾಖಾಣಸ್ಥಾನದವರಿಗೆ ವಾತ್ಸ್ಯಗೋತ್ರವು. ಶೀಹುರೀಯು ಗೋತ್ರದೇವಿಯು. ಭಾರ್ಗವ, ಚ್ಯಾವನ, ಆಪ್ನವಾನ, ಔರ್ವ, ಪುರೋಧಾಃ ಪ್ರವರಗಳು. ಈ ವಂಶದ ಬ್ರಾಹ್ಮಣರು ಸುಖವಾಗಿ ವಾಸಿಸುವವರೂ, ದಪ್ಪವಾಗಿರುವರೂ, ಜ್ಞಾನಿಗಳೂ, ಸಕಲಕರ್ಮಗಳಲ್ಲಾಸಕ್ತರೂ, ಧರ್ಮದಲ್ಲಿ ನಂಬಿಕೆಯುಳ್ಳವರೂ, ಸಕಲಲೋಕಗಳಲ್ಲಿ ಪೂಜ್ಯರೂ ವೇದಶಾಸ್ತ್ರಾರ್ಥಗಳಲ್ಲಿ ಕುಶಲರೂ, ಯಜನ ಯಾಜನಗಳಲ್ಲಿ ಆಸಕ್ತರೂ, ಸದಾಚಾರಿಗಳೂ, ಸುಂದರರೂ, ದೊಡ್ಡ ಹೊಟ್ಟೆಯುವರೂ, ದೂರಾಲೋಚನೆಯುಳ್ಳವರೂ ಆಗಿರುವರು. ಇಲ್ಲಿಗೆ ನಲವತ್ತೈದನೆಯ ಸ್ಥಾನವು ಮುಗಿದುದು.

೨೪೪–೨೪೭. ಗೋತೀಆ ಸ್ಥಾನದವರಿಗೆ ಕುಶ ಗೋತ್ರವು. ವಿಶ್ವಾಮಿತ್ರ, ದೇವರಾತ, ಔದಲ ಪ್ರವರಗಳು. ರಾಕ್ಷಸರನ್ನು ಕೊಲ್ಲುವ ಯಕ್ಷಿಣಿಯು

CC-0. Jangamwadi Math Collection. Digitized by eGangotri

ಯಕ್ಷಿಣೀ ಚಾತ್ರ ವೈ ದೇವೀ ರಾಕ್ಷಸಾನಾಂ ಪ್ರಭಂಜನೀ ।
ಅಸ್ಮಿನ್ವಂಶೇ ಚ ಯೇ ಜಾತಾ ಬ್ರಾಹ್ಮಣಾ ಬ್ರಹ್ಮತತ್ಪರಾಃ ॥ ೨೪೬ ॥
ಧರ್ಮೇ ಮತಿಪ್ರವೃತ್ತಾಶ್ಚ ಧರ್ಮಶಾಸ್ತ್ರೇಷು ನಿಷ್ಠಿತಾಃ ॥ ೨೪೭ ॥
॥ ಇತಿ ಷಟ್ಚತ್ವಾರಿಂಶಂ ಸ್ಥಾನಂ ॥
ಸಪ್ತಚತ್ವಾರಿಂಶಕಂ ಚ ಸಂಸ್ಥಾನಂ ಪರಿಕೀರ್ತಿತಂ ।
ವರಲೀಯಾಖ್ಯಸಂಸ್ಥಾನಂ ಪವಿತ್ರಂ ಪರಮಂ ಮತಂ ॥ ೨೪೮ ॥
ಭಾರದ್ವಾಜಂ ತಥಾಗೋತ್ರಂ ಪ್ರವರಾಣಿ ತಥೈವ ಚ ।
ಯಕ್ಷಿಣೀ ಚಾತ್ರ ವೈ ದೇವೀ ಕುಲದೇವೀ ಪ್ರಕೀರ್ತಿತಾ ॥ ೨೪೯ ॥
ಆಂಗಿರಸಂ ಬಾರ್ಹಸ್ಪತ್ಯಂ ಭಾರದ್ವಾಜಂ ತೃತೀಯಕಂ ।
ಅಸ್ಮಿನ್ವಂಶೇ ಚ ಯೇ ಜಾತಾ ಬ್ರಾಹ್ಮಣಾಃ ಪೂತಮೂರ್ತಯಃ ॥ ೨೫೦ ॥
ಯೇಷಾಂ ವಾಕ್ಯೋದಕೇನೈವ ಶುಧ್ಯಂತಿ ಪಾಪಿನೋ ನರಾಃ ॥ ೨೫೧ ॥
॥ ಇತಿ ಸಪ್ತಚತ್ವಾರಿಂಶಕಂ ಸ್ಥಾನಂ ॥
ದುಧೀಯಾಖ್ಯಂ ಪರಂ ಸ್ಥಾನಂ ಗೋತ್ರದ್ವಿತಯಮೇವ ಚ ।
ಧಾರಣಸಂ ತಥಾ ಗೋತ್ರಮಾಂಗಿರಸಕಮೇವ ಚ ॥ ೨೫೨ ॥
ಅಗಸ್ತಿದಾರ್ಢಚ್ಯುತ ಇಧ್ಮವಾಹನ ಸಂಜ್ಞಕಂ ।
ಛತ್ರಾಈ ಚ ಮಹಾದೇವೀ ದ್ವಿತೀಯಂ ಪ್ರವರಂ ಶೃಣು ॥ ೨೫೩ ॥
ಆಂಗಿರಸಾಂಬರೀಷೌ ಚ ಯೌವನಾಶ್ವಸ್ತೃತೀಯಕಃ ।
ಜ್ಞಾನದಾ ಶೇಷಲಾಚೈವ ಜ್ಞಾನದಾ ಸರ್ವದೇಹಿನಾಂ ॥ ೨೫೪ ॥

---

ಗೋತ್ರದೇವಿಯು. ಈ ವಂಶದ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೂ, ಧರ್ಮನಿರತರೂ, ಧರ್ಮಶಾಸ್ತ್ರಗಳಲ್ಲಿ ಪಂಡಿತರೂ ಆಗಿರುವರು. ಇಲ್ಲಿಗೆ ನಲವತ್ತಾರನೆಯ ಸ್ಥಾನವು ಮುಗಿದುದು.

೨೪೮-೨೫೧. ವರಲೀಯಾ ಎಂಬ ನಲವತ್ತೇಳನೆ ಸ್ಥಾನದವರಿಗೆ ಭಾರದ್ವಾಜ ಗೋತ್ರವು. ಯಕ್ಷಿಣಿಯು ಕುಲದೇವಿಯು. ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ ಪ್ರವರಗಳು. ಈ ವಂಶದ ಬ್ರಾಹ್ಮಣರು ಪವಿತ್ರರೂ, ಮಾತೆಂಬ ನೀರಿನಿಂದಲೇ ಪಾಪಿಗಳನ್ನು ಪವಿತ್ರಗೊಳಿಸುವವರೂ ಆಗಿರುವರು. ಇಲ್ಲಿಗೆ ನಲವತ್ತೇಳನೆಯ ಸ್ಥಾನವು ಮುಗಿದುದು.

೨೫೨-೨೫೪. ದುದೀಯ ಎಂಬ ಸ್ಥಾನದವರಿಗೆ ಧಾರಣಸ, ಆಂಗಿರಸ ಗೋತ್ರಗಳು. ಧಾರಣಸ ಗೋತ್ರದವರಿಗೆ ಅಗಸ್ತಿ, ದಾರ್ಢಚ್ಯುತ, ಇಧ್ಮವಾಹನ ಪ್ರವರಗಳು. ಛತ್ರಾಈಯು ಗೋತ್ರದೇವಿಯು. ಆಂಗಿರಸ ಗೋತ್ರದವರಿಗೆ ಆಂಗಿರಸ, ಅಂಬರೀಷ, ಯೌವನಾಶ್ವಪ್ರವರಗಳು. ಸಕಲರಿಗೂ ಜ್ಞಾನವನ್ನೀಯುವ ಶೇಷಲಾ ಎಂಬವಳು ಗೋತ್ರದೇವಿಯು.

CC-0. Jangamwadi Math Collection. Digitized by eGangotri

ಅಸ್ಮಿನ್ವಂಶೇ ಸಮುತ್ಪನ್ನಾ ನಾಡವಾ ದುಃಸಹಾ ನೃಪ ।
ಮದೋತ್ಕಟಾ ಮಹಾಕಾಯಾಃ ಪ್ರಲಂಬಾಶ್ಚ ಮಹೋದ್ಧತಾಃ ॥ ೨೫೫ ॥
ಕ್ಲೇಶರೂಪಾಃ ಕೃಷ್ಣವರ್ಣಾಃ ಸರ್ವಶಾಸ್ತ್ರವಿಶಾರದಾಃ ।
ಬಹುಭುಗ್ಧನಿನೋ ದಕ್ಷಾ ದ್ವೇಷಪಾಪವಿವರ್ಜಿತಾಃ ॥ ೨೫೬ ॥

॥ ಇತ್ಯಷ್ಟಾಚತ್ವಾರಿಂಶಕಂ ಸ್ಥಾನಂ ॥

ಹಾಸೋಲಾಸಂ ಪ್ರವಕ್ಷ್ಯಾಮಿ ಸ್ವಸ್ಥಾನಂ ಚಾತ್ರ ಸಂಶ್ರುತಂ ।
ಶಾಂಡಿಲ್ಯಗೋತ್ರಂ ಚೈವಾತ್ರ ಪ್ರವರೈಃ ಪಂಚಭಿರ್ಯುತಂ ॥ ೨೫೭ ॥
ಭಾರ್ಗವಚ್ಯಾವನಾಪ್ನವಾನೌರ್ವಂ ವೈ ಜಾಮದಗ್ನ್ಯಕಂ ।
ಯಕ್ಷಿಣೀ ಚಾತ್ರ ವೈ ದೇವೀ ಪವಿತ್ರಾ ಪಾಪನಾಶಿನೀ ॥ ೨೫೮ ॥
ಅಸ್ಮಿನ್ವಂಶೇ ಚ ಯೇ ಜಾತಾ ಬ್ರಾಹ್ಮಣಾಃ ಸ್ಥೂಲದೇಹಿನಃ ।
ಲಂಬೋದರಾ ಲಂಬಕರ್ಣಾ ಲಂಬಹಸ್ತಾ ಮಹಾದ್ವಿಜಾಃ ॥ ೨೫೯ ॥
ಅರೋಗಿಣಃ ಸದಾ ದೇವಾಃ ಸತ್ಯವ್ರತಪರಾಯಣಾಃ ॥ ೨೬೦ ॥

॥ ಇತ್ಯೇಕೋನಪಂಚಾಶತ್ತಮಂ ಸ್ಥಾನಂ ॥

ವೈಹಾಲಾಖ್ಯಂ ಚ ಸಂಸ್ಥಾನಂ ಪಂಚಾಶತ್ತಮಮೇವ ಹಿ ।
ಕುಶಗೋತ್ರಂ ತಥಾ ಚೈವ ದೇವೀ ಚಾತ್ರ ಮಹಾಬಲಾ ॥ ೨೬೧ ॥
ಅಸ್ಮಿನ್ಗೋತ್ರೇ ಭವಾ ವಿಪ್ರಾ ದುಷ್ಟಾಃ ಕುಟಿಲಗಾಮಿನಃ ।
ಧನಿನೋ ಧರ್ಮನಿಷ್ಠಾಶ್ಚ ವೇದವೇದಾಂಗಪಾರಗಾಃ ॥ ೨೬೨ ॥

---

೨೫೫-೨೫೬. ಈ ವಂಶದಲ್ಲಿ ಹುಟ್ಟಿದ ಬ್ರಾಹ್ಮಣರು ಸಹಿಸಲಶಕ್ಯರೂ, ಮತ್ತರೂ, ದೊಡ್ಡ ದೇಹವುಳ್ಳವರೂ, ಉದ್ದವಾದವರೂ, ಕಷ್ಟಪಡುವವರೂ, ಕರಿಬಣ್ಣದವರೂ, ಸಕಲಶಾಸ್ತ್ರಕುಶಲರೂ, ಬಹಳ ತಿನ್ನುವವರೂ, ಹಣಗಾರರೂ, ಕುಶಲರೂ, ದ್ವೇಷಪಾಪಗಳಿಲ್ಲದವರೂ ಆಗಿರುವರು. ಇಲ್ಲಿಗೆ ನಲವತ್ತೆಂಟನೆಯ ಸ್ಥಾನವು ಮುಗಿದುದು.

೨೫೭-೨೫೮. ಹಾಸೋಲಾಸ ಸ್ಥಾನದವರಿಗೆ ಶಾಂಡಿಲ್ಯ ಗೋತ್ರವು. ಭಾರ್ಗವ, ಚ್ಯಾವನ, ಆಪ್ನವಾನ, ಔರ್ವ, ಜಾಮದಗ್ನ್ಯ ಪ್ರವರಗಳು. ಪವಿತ್ರಳಾದ ಯಕ್ಷಿಣಿಯು ಗೋತ್ರದೇವಿಯು.

೨೫೯-೨೬೦. ಈ ವಂಶದಲ್ಲಿ ಜನಿಸಿದ ಬ್ರಾಹ್ಮಣರು ಸ್ಥೂಲದೇಹರೂ, ಜೋಲು ಹೊಟ್ಟೆಯವರೂ, ಜೋಲು ಕಿವಿಯುಳ್ಳವರೂ, ಉದ್ದವಾದ ಕೈಯುಳ್ಳವರೂ, ರೋಗವಿಲ್ಲದವರೂ, ಸತ್ಯನಿರತರೂ ಆಗಿರುವರು. ಇಲ್ಲಿಗೆ ನಲವತ್ತೊಂಬತ್ತನೆಯ ಸ್ಥಾನವು ಮುಗಿದುದು.

೨೬೧-೨೬೨. ವೈಹಾಲಾ ಸ್ಥಾನದವರಿಗೆ ಕುಶಗೋತ್ರವು. ಮಹಾಬಲೆಯು ಗೋತ್ರದೇವಿಯು. ಈ ಗೋತ್ರದ ಬ್ರಾಹ್ಮಣರು ದುಷ್ಟರೂ, ವಕ್ರಸ್ವಭಾವ

CC-0. Jangamwadi Math Collection. Digitized by eGangotri

ದಾನಭೋಗರತಾಃ ಸರ್ವೇ ಶ್ರೌತೇ ಚ ಕೃತಬುದ್ಧಯಃ ॥ ೨೬೩ ॥

॥ ಇತಿ ಪಂಚಾಶತ್ತಮಂ ಸ್ಥಾನಂ ॥

ಅಸಾಲಾ ಪರಮಂ ಸ್ಥಾನಂ ಪ್ರವರದ್ವಯಮೇವ ಹಿ ।
ಕುಶಂ ಚ ಧಾರಣಂ ಚೈವ ಪ್ರವರಾಣಿ ಕ್ರಮೇಣ ತು ॥ ೨೬೪ ॥
ವಿಶ್ವಾಮಿತ್ರೋ ದೇವರಾತೋ ದೇವಲಸ್ತು ತೃತೀಯಕಃ ।
ಜ್ಞಾನಜಾ ಚ ತಥಾ ದೇವೀ ಗೋತ್ರದೇವೀ ಪ್ರಕೀರ್ತಿತಾ ॥ ೨೬೫ ॥

॥ ಇತ್ಯೇಕಪಂಚಾಶತ್ತಮಂ ಸ್ಥಾನಂ ॥

ನಾಲೋಲಾ ಪರಮಂ ಸ್ಥಾನಂ ದ್ವಿಪಂಚಾಶತ್ತಮಂ ಕಿಲ ।
ವತ್ಸಗೋತ್ರಂ ತಥಾ ಖ್ಯಾತಂ ದ್ವಿತೀಯಂ ಧಾರಣಸಂ ತಥಾ ॥ ೨೬೬ ॥
ಪ್ರವರಾಶ್ಚೈವ ಪೂರ್ವೋಕ್ತಾ ದೇವ್ಯುಕ್ತಾ ಪೂರ್ವಮೇವ ಹಿ ।
ಅಸ್ಮಿನ್ವಂಶೇ ಚ ಯೇ ಜಾತಾಃ ಪವಿತ್ರಾಃ ಪರಮಾ ಮತಾಃ ॥ ೨೬೭ ॥
ಬಹುನೋಕ್ತೇನ ಕಿಂ ವಿಪ್ರಾಃ ಸರ್ವ ಏವಾತ್ರ ಸತ್ತಮಾಃ ।
ಸರ್ವೇ ಶುದ್ಧಾ ಮಹಾತ್ಮಾನಃ ಸರ್ವೇ ಕುಲಪರಂಪರಾಃ ॥ ೨೬೮ ॥

॥ ಇತಿ ದ್ವಿಪಂಚಾಶತ್ತಮಂ ಸ್ಥಾನಂ ॥

ದೇಹೋಲಂ ಪರಮಂ ಸ್ಥಾನಂ ಬ್ರಾಹ್ಮಣಾನಾಂ ಪರಂತಪ ।
ಕುಶವಂಶೋದ್ಭವಾ ವಿಪ್ರಾಸ್ತತ್ರ ಜಾತಾ ನೃಸತ್ತಮ ।
ಪೂರ್ವೋಕ್ತಪ್ರವರಾಣ್ಯೇವ ದೇವೀ ಪೂರ್ವೋದಿತಾ ಮಯಾ ॥ ೨೬೯ ॥
ತಸ್ಮಿನ್ಗೋತ್ರೇ ದ್ವಿಜಾ ಜಾತಾಃ ಪೂರ್ವೋಕ್ತಗುಣಶಾಲಿನಃ ॥ ೨೭೦ ॥

॥ ಇತಿ ತ್ರಿಪಂಚಾಶತ್ತಮಂ ಸ್ಥಾನಂ ॥

---

ದವರೂ, ಹಣವಂತರೂ, ಧರ್ಮಿಷ್ಠರೂ, ವೇದವೇದಾಂಗನಿಷ್ಣಾತರೂ, ದಾನ ಮತ್ತು ಸುಖಾನುಭವಗಳಲ್ಲಿ ಆಸಕ್ತರೂ, ಶ್ರೌತಕರ್ಮದಲ್ಲಿ ಕುಶಲರೂ ಆಗಿರುವರು. ಇಲ್ಲಿಗೆ ಐವತ್ತನೆಯ ಸ್ಥಾನವು ಮುಗಿದುದು.

೨೬೪–೨೬೫. ಅಸಾಲಾ ಸ್ಥಾನದವರಿಗೆ ಕುಶ ಧಾರಣ ಗೋತ್ರಗಳು. ವಿಶ್ವಾಮಿತ್ರ, ದೇವರಾತ, ದೇವಲ ಪ್ರವರಗಳು. ಜ್ಞಾನಜೆಯು ಗೋತ್ರ ದೇವಿಯು. ಇಲ್ಲಿಗೆ ಐವತ್ತೊಂದನೆಯ ಸ್ಥಾನವು ಮುಗಿದುದು.

೨೬೬–೨೬೮. ನಾಲೋಲಾ ಸ್ಥಾನದವರಿಗೆ ವತ್ಸ ಧಾರಣರ ಗೋತ್ರಗಳು ಪ್ರವರ ಮತ್ತು ದೇವಿಯರು ಹಿಂದೆ ಹೇಳಿದವರೆ. ಈ ವಂಶದ ಬ್ರಾಹ್ಮಣರು ಅತ್ಯಂತ ಶುದ್ಧರೂ, ಸಾಧುಗಳೂ, ವಂಶಪಾರಂಪರ್ಯದಿಂದಲೂ ಮಹಾತ್ಮರೂ ಆಗಿರುವರು. ಇಲ್ಲಿಗೆ ಐವತ್ತೆರಡನೆಯ ಸ್ಥಾನವು ಮುಗಿದುದು.

೨೬೯–೨೭೦. ದೇಹೋಲ ಸ್ಥಾನದವರಿಗೆ ಕುಶವಂಶವು. ಪ್ರವರ ಮತ್ತು



CC-0. Jangamwadi Math Collection. Digitized by eGangotri

ಸೋಹಾಸೀಯಾಪುರಂ ಸ್ಥಾನಂ ಗೋತ್ರತ್ರಿತಯಮೇವ ಹಿ ।
ಭಾರದ್ವಾಜ ಸ್ತಥಾಖ್ಯಾತಂ ಗೋತ್ರಂ ವತ್ಸಂ ತಥೈವ ಚ ॥ ೨೭೧ ॥
ಯಕ್ಷಿಣೀ ಜ್ಞಾನಜಾ ಚೈವ ಸಿಹೋಲೀ ಚ ಯಥಾಕ್ರಮಂ ।
ಏತದ್ವಂಶಪರೀಕ್ಷಾ ಚ ಪೂರ್ವೋಕ್ತಾ ನೃಪಸತ್ತಮ ॥ ೨೭೨ ॥

॥ ಇತಿ ಚತುಃಪಂಚಾಶತ್ತಮಂ ಸ್ಥಾನಂ ॥

ಪಂಚ ಪಂಚಾಶಕಂ ಸ್ಥಾನಂ ಪ್ರವಕ್ಷ್ಯಾಮಿ ತವಾಽಧುನಾ ।
ನಾಮ್ನಾಸಂಹಾಲಿಯಾಸ್ಥಾನಂ ದತ್ತಂ ರಾಮೇಣ ವೈ ಪುರಾ ॥ ೨೭೩ ॥
ತತ್ರ ವೈ ಕುತ್ಸಗೋತ್ರಸ್ಥಾ ಬ್ರಾಹ್ಮಣಾ ಬ್ರಹ್ಮವರ್ಚಸಃ ।
ಸ್ವಧರ್ಮ ನಿರತಾ ನಿತ್ಯಾಃ ಸ್ವಕರ್ಮನಿರತಾಶ್ಚ ತೇ ॥ ೨೭೪ ॥
ಆಂಗಿರಸಾಽಂಬರೀಷೇ ಚ ಯೌವನಾಶ್ವಮತಃ ಪರಂ ।
ಶಾಂತಾ ಚೈವಾಽತ್ರ ವೈ ದೇವೀ ಶಾಂತಿಕರ್ಮಣಿ ಶಾಂತಿದಾ ॥ ೨೭೫ ॥

॥ ಇತಿ ಪಂಚಪಂಚಾಶತ್ತಮಂ ಸ್ಥಾನಂ ॥

ಏವಂ ಮಯಾ ತೇ ಗೋತ್ರಾಣಿ ಸ್ಥಾನಾನ್ಯಪಿ ತಥೈವ ಚ ।
ಪ್ರವರಾಣಿ ತಥೈವಾಽತ್ರ ಬ್ರಾಹ್ಮಣಾನಾಂ ಪರಂತಪ ॥ ೨೭೬ ॥
ಅತಃ ಪರಂ ಪ್ರವಕ್ಷ್ಯಾಮಿ ತ್ರೈವಿದ್ಯಾನಾಂ ಪರಂತಪ ।
ಸ್ವಸ್ಥಾನಂ ಚ ಮಯಾಪ್ರೋಕ್ತಂ ಯಥಾಽನುಕ್ರಮಣೇನ ತು ॥ ೨೭೭ ॥

---

ದೇವಿಯು ಹಿಂದೆ ಹೇಳಿದವರೇ. ಈ ಗೋತ್ರದ ಬ್ರಾಹ್ಮಣರು ಹಿಂದೆ ಹೇಳಿದ ಗುಣವುಳ್ಳವರೆ. ಇಲ್ಲಿಗೆ ಐವತ್ತಮೂರನೆಯ ಸ್ಥಾನವು ಮುಗಿದುದು.

೨೭೧–೨೭೨. ಸೋಹಾಸೀಯ ಸ್ಥಾನದವರಿಗೆ ಭಾರದ್ವಾಜ, ಕುತ್ಸ, ವತ್ಸ ಎಂಬ ಮೂರು ಗೋತ್ರಗಳು. ಯಕ್ಷಿಣೀ, ಜ್ಞಾನಜಾ, ಸಿಹೋಲೀ ಗೋತ್ರ ದೇವಿಯರು. ಈ ವಂಶದ ಜನರು ಹಿಂದೆ ಹೇಳಿದಂತೆಯೇ ಆಗಿರುವರು. ಇಲ್ಲಿಗೆ ಐವತ್ತಮೂರನೆಯ ಸ್ಥಾನವು ಮುಗಿದುದು.

೨೭೩–೨೭೫. ಈಗ ಐವತ್ತೈದನೆಯ ಸ್ಥಾನವನ್ನು ಹೇಳುವೆನು. ರಾಮನಿತ್ತ ಸಂಹಾಲಿಯಾ ಸ್ಥಾನದವರಿಗೆ ಕುತ್ಸ ಗೋತ್ರವು. ಆಂಗಿರಸ, ಆಂಬರಿಷ, ಯೌವನಾಶ್ವ ಪ್ರವರಗಳು. ಶಾಂತಿ ಕರ್ಮದಲ್ಲಿ ಶಾನ್ತಿಯನ್ನೀಯುವ ಶಾಂತೆಯು ಗೋತ್ರದೇವಿಯು. ಈ ಗೋತ್ರದ ಬ್ರಾಹ್ಮಣರು ಬಹ್ಮವರ್ಚಸ್ಸುಳ್ಳವರೂ, ಸ್ವಧರ್ಮ ಸ್ವಕರ್ಮಗಳಲ್ಲಿ ನಿರತರೂ ಆಗಿರುವರು. ಇಲ್ಲಿಗೆ ಐವತ್ತೈದನೆಯ ಸ್ಥಾನವು ಮುಗಿದುದು.

೨೭೬. ಹೀಗೆ ಬ್ರಾಹ್ಮಣರ ಗೋತ್ರ, ಸ್ಥಾನ, ಪ್ರವರಗಳನ್ನು ಹೇಳಿರುವೆನು.

೨೭೭. ಇನ್ನು ಮುಂದೆ ತ್ರೈವಿದ್ಯಬ್ರಾಹ್ಮಣರ ಸ್ವಸ್ಥಾನಗಳನ್ನು ಕ್ರಮವಾಗಿ ಹೇಳುವೆನು.

CC-0. Jangamwadi Math Collection. Digitized by eGangotri

ಶೀಲಾಯಾಃ ಪ್ರಥಮಂ ಸ್ಥಾನಂ ಮಂಡೋರಾ ಚ ದ್ವಿತೀಯಕಂ ।
ಏವಡೀ ಚ ತೃತೀಯಂ ಹಿ ಗುಂಧರಾಣಾ ಚತುರ್ಥಕಂ ॥ ೨೭೮ ॥
ಪಂಚಮಂ ಕಲ್ಯಾಣೀಯಾ ದೇಗಾವಾ ಷಷ್ಠಕಂ ತಥಾ ।
ನಾಯಕಪುರಾ ಸಪ್ತಮಂ ಚ ಡಲೀಲಿ ಚಾಽಷ್ಟಮಂ ತಥಾ ॥ ೨೭೯ ॥
ಕಡೋವ್ಯಾ ನವಮಂ ಚೈವ ಕೋಹಾಟೋಯಾ ದಶಂ ತಥಾ ।
ಹರಡೀಯ್ಯೈಕಾದಶಂ ಚೈವ ಭದುಕೀಯಾ ದ್ವಾದಶಂ ತಥಾ ॥ ೨೮೦ ॥
ಸಂಪ್ರಾಣಾವಾ ತಥಾಚಾಽತ್ರ ಕಂದರಾವಾ ಪ್ರಕೀರ್ತಿತಂ ।
ವಾಸರೋವಾ ತ್ರಯೋದಶಂ ಶರಂಡವಾ ಚತುರ್ದಶಂ ॥ ೨೮೧ ॥
ಲೋಲಾಸಣಾ ಪಂಚದಶಂ ವಾರೋಲಾ ಷೋಡಶಂ ತಥಾ ।
ನಾಗಲಪುರಾ ಮಯಾಚಾಽತ್ರ ಉಕ್ತಂ ಸಪ್ತದಶಂ ತಥಾ ॥ ೨೮೨ ॥

ಬ್ರಹ್ಮೋವಾಚ :—

ಚಾತುರ್ವಿದ್ಯಾಸ್ತು ಯೇ ವಿಪ್ರಾನಾಗತಾಃ ಪುನರಾಗತಾಃ ।
ವಸಂತಿ ತತ್ರ ರಮ್ಯೇ ಚ ಚಕ್ರಿರೇ ತೇ ದ್ವಿಜೋತ್ತಮಾಃ ॥ ೨೮೩ ॥
ಚತುರ್ವಿಂಶತಿ ಸಂಖ್ಯಾಕಾ ರಾಮಶಾಸನಲಿಪ್ಸಯಾ ।
ಹನೂಮಂತಂ ಪ್ರತಿಗತಾ ವ್ಯಾವೃತ್ತಾಃ ಪುನರಾಗತಾಃ ॥ ೨೮೪ ॥
ತೇಷಾಂ ದೋಷಾತ್ಸಮುತ್ಪನ್ನಾಸ್ತೇ ಸ್ಥಾನಭ್ರಂಶತ್ವಮಾಗತಾಃ ।
ಕಿಯತ್ಕಾಲೇ ಗತೇ ತೇಷಾಂ ವಿರೋಧಃ ಸಮುಪದ್ಯತ ॥ ೨೮೫ ॥
ಭಿನ್ನಾಚಾರಾ ಭಿನ್ನಭಾಷಾವೇಶ ಸಂಶಯಮಾಗತಾಃ ।
ಪಂಚದಶಸಹಸ್ರಾಣಿ ಮಧ್ಯೇ ಯೇ ಕೇಚ ವಾಡವಾಃ ॥ ೨೮೬ ॥

---

೨೭೮–೨೮೨. ಶೀಲಾ, ಮಡೋರಾ, ಏವಡೀ, ಗುಂದರಾಣಾ, ಕಲ್ಯಾಣೀಯಾ, ದೇಗಾವಾ, ನಾಯಕಪುರಾ, ಡಲೀಲಿ, ಕಂಡೋವ್ಯಾ, ಕೋಹಾಟೋಯಾ, ಹರಡೀಯಾ, ಭದುಕೀಯಾ, ವಾಸರೋವಾ, ಶರಂಡಾವಾ, ಲೋಲಾಸಣಾ, ವಾರೋಲಾ, ನಾಗಲಪುರಾ ಹೀಗೆ ಹದಿನೇಳು ಸ್ಥಾನಗಳು.

೨೮೩. ಬ್ರಹ್ಮನು ಹೇಳುತ್ತಾನೆ:—ಸ್ಥಾನಭ್ರಷ್ಟರಾಗಿದ್ದ ಚಾತುರ್ವಿದ್ಯರು ತಿರುಗಿ ಬಂದು ಆ ಕ್ಷೇತ್ರದಲ್ಲಿ ಮನೋಹರವಾದ ವಾಸಸ್ಥಳಗಳನ್ನು ಕಲ್ಪಿಸಿಕೊಂಡು ವಾಸವಾಗಿದ್ದರು.

೨೮೪–೨೮೫. ಹನುಮಂತನ ಅನುಗ್ರಹದಿಂದ ರಾಮಶಾಸನವನ್ನು ತಿರುಗಿ ಪಡೆದ ತ್ರೈವಿದ್ಯಬ್ರಾಹ್ಮಣರ ದೋಷದಿಂದ ಚಾತುರ್ವಿದ್ಯರು ಸ್ಥಾನಭ್ರಷ್ಟರಾಗಿದ್ದರು. ಕೆಲವು ಕಾಲದ ಮೇಲೆ ಆ ಎರಡು ಪಂಗಡದವರಿಗೆ ಪರಸ್ಪರ ದ್ವೇಷವುಂಟಾಯಿತು.

೨೮೬–೨೯೦. ಆ ಹದಿನೈದು ಸಾವಿರ ಮಂದಿ ಚಾತುರ್ವಿದ್ಯರು ಬೇರೆ ಬೇರೆ ಆಚಾರವುಳ್ಳವರಾಗಿಯೂ, ನಾನಾ ಭಾಷೆಗಳನ್ನಾಡುವವರಾಗಿಯೂ

CC-0. Jangamwadi Math Collection. Digitized by eGangotri

ಕೃಷಿಕರ್ಮರತಾ ಆಸನ್ಕೇಚಿದ್ಯಜ್ಞಪರಾಯಣಾಃ ।
ಕೇಚಿನ್ಮಲ್ಲಾಶ್ಚ ಸಂಜಾತಾಃ ಕೇಚಿದ್ವೈ ವೇದಪಾಠಕಾಃ ॥ ೨೮೭ ॥
ಆಯುರ್ವೇದರತಾಃ ಕೇಚಿತ್ಕೇಚಿದ್ರಜಕಯಾಜಕಾಃ ।
ಸಂಧ್ಯಾಸ್ನಾನಪರಾಃ ಕೇಚಿನ್ನೀಲೀಕರ್ತೃ ಪ್ರಯಾಜಕಾಃ ॥ ೨೮೮ ॥
ತಂ ತು ಕೃದಾಚನರತಾಸ್ತಂತುವಾಯಾದಿ ಯಾಜಕಾಃ ।
ಕಲೌ ಪ್ರಾಪ್ತೇ ದ್ವಿಜಾ ಭ್ರಷ್ಟಾ ಭವಿಷ್ಯಂತಿ ನ ಸಂಶಯಃ ॥ ೨೮೯ ॥
ಶೂದ್ರೇಷು ಜಾತಿಭೇದಃ ಸ್ಯಾತ್ಕಲೌ ಪ್ರಾಪ್ತೇ ನರಾಧಿಪ ।
ಭ್ರಷ್ಟಾಚಾರಾಃ ಪರಂ ಜ್ಞಾತ್ವಾ ಜ್ಞಾತಿಬಂಧೇನ ಪೀಡಿತಾಃ ॥ ೨೯೦ ॥
ಭೋಜನಾಚ್ಛಾದನೇ ರಾಜನ್ಪರಿತ್ಯಕ್ತಾ ನಿಜೈರ್ಜನೈಃ ।
ನ ಕೋಽಪಿ ಕನ್ಯಾಂ ವಿವಹೇತ್ಸಂಸರ್ಗೇಣ ಕದಾಚನ ।
ತತಸ್ತೇ ವಣಿಜೋ ರಾಜಂಸ್ತೈಲಕಾರಾಃ ಕಲೌ ಕಿಲ ॥ ೨೯೧ ॥
ಕೇಚಿಚ್ಚ ಕಲಕಾರಾಶ್ಚ ಕೇಚಿತ್ತಂದುಲಕಾರಿಣಃ ।
ರಾಜಪುತ್ರಾಶ್ರಿತಾಃ ಕೇಚಿನ್ನಾನಾವರ್ಣಸಮಾಶ್ರಿತಾಃ ।
ಕಲೌ ಪ್ರಾಪ್ತೇ ತು ವಣಿಜಃ ಭ್ರಷ್ಟಾಃ ಕೋಽಪಿ ಮಹೀತಲೇ ॥ ೨೯೨ ॥
ತೇಷಾಂ ತು ಪೃಥಗಾಚಾರಾಃ ಸಂಬಂಧಾಶ್ಚ ಪೃಥಕ್ಕೃತಾಃ ।
ಸೀತಾಪುರೇ ಚ ವಸತಿಃ ಕೇಷಾಂಚಿತ್ಸಮಜಾಯತ ॥ ೨೯೩ ॥

---

ಉಡುಪಿನಿಂದ ಬ್ರಾಹ್ಮಣರೊ ಅಲ್ಲವೊ ಎಂಬ ಸಂಶಯಕ್ಕಾಸ್ಪದರಾದರು. ಅವರಲ್ಲಿ ಕೆಲವರು ಕೃಷಿಯನ್ನು ಮಾಡತೊಡಗಿದರು. ಕೆಲವರು ಯಜ್ಞನಿರತರಾದರು. ಕೆಲವರು ಜಟ್ಟಿಗಳೂ, ಕೆಲವರು ವೇದಾಧ್ಯಯನ ನಿರತರು, ಕೆಲವರು ಆಯುರ್ವೇದದಲ್ಲಿ ಆಸಕ್ತರೂ, ಕೆಲವರು ಅಗಸರಿಂದ ಯಾಗಮಾಡಿಸುವವರೂ, ಕೆಲವರು ಸ್ನಾನ ಸಂಧ್ಯಾವಂದನೆಗಳಲ್ಲಿ ನಿರತರೂ, ಕೆಲವರು ನೀಲಿಯನ್ನು ನಿರ್ಮಿಸುವವರಿಂದ ಯಾಗಮಾಡಿಸುವವರೂ, ನೂಲು ಮಾಡುವವರನ್ನೂ, ನೇಯ್ಗೆಯವರನ್ನೂ ಬೇಡುವವರೂ ಆದರು. ಕಲಿಯುಗದಲ್ಲಿ ಬ್ರಾಹ್ಮಣರು ಹೀಗೆ ಕರ್ಮಭ್ರಷ್ಟರಾಗುವರು. ಶೂದ್ರರಲ್ಲಿ ಬೇರೆಬೇರೆ ಜಾತಿಗಳಾದುವು. ಹೀಗೆ ಭ್ರಷ್ಟರಾದುದನ್ನು ತಿಳಿದು ಇವರನ್ನು ಜ್ಞಾತಿಗಳು ಪೀಡಿಸಿದರು.

೨೯೧–೨೯೨. ಬಂಧುಗಳು ಊಟ, ವಸ್ತ್ರಗಳನ್ನು ಕೊಡಲಿಲ್ಲ. ಕನ್ಯೆಯನ್ನಿತ್ತು ವಿವಾಹ ಸಂಬಂಧವನ್ನು ಬೆಳೆಯಿಸಲಿಲ್ಲ. ಬಳಿಕ ವರ್ತಕರಲ್ಲಿ ಕೆಲವರು ಗಾಣಿಗರೂ, ಕೆಲವರು ಸಂಗೀತಗಾರರೂ, ಕೆಲವರು ಅಕ್ಕಿಮಾಡುವವರೂ, ಕೆಲವರು ರಾಜಕುಮಾರರನ್ನು ಆಶ್ರಯಿಸಿದವರೂ, ಕೆಲವರು ನಾನಾ ಜಾತಿಯವರನ್ನು ಆಶ್ರಯಿಸಿದವರೂ ಆಗಿ ಭ್ರಷ್ಟರಾದರು.

೨೯೩. ಅವರ ಆಚಾರಗಳೂ, ಸಂಬಂಧಗಳೂ ಬೇರೆಯಾದವು. ಕೆಲವರು ಸೀತಾಪುರದಲ್ಲಿ ವಾಸಿಸಿದರು.

CC-0. Jangamwadi Math Collection. Digitized by eGangotri

ಸಾಭ್ರಮತ್ಯಾಸ್ತಟೇ ಕೇಚಿದ್ಯತ್ರ ಕುತ್ರ ವ್ಯವಸ್ಥಿತಾಃ ।
ಸೀತಾಪುರಾತ್ತು ಯೇ ಪೂರ್ವಂ ಭಯಭೀತಾಃ ಸಮಾಗತಾಃ ॥ ೨೯೪ ॥
ಸಾಭ್ರಮತ್ಯುತ್ತರೇ ಕೂಲೇ ಶ್ರೀಕ್ಷೇತ್ರೇ ಯೇ ವ್ಯವಸ್ಥಿತಾಃ ।
ಯದಾ ತೇಷಾಂ ಪದಂ ಸ್ಥಾನಂ ದತ್ತಂ ವೈ ಸುಖವಾಸಕಂ ॥ ೨೯೫ ॥
ಪುನಸ್ತೇಽಪಿ ಗತಾಃ ಸದ್ಯಃ ತಸ್ಮಿನ್ಸೀತಾಪುರೇ ಸ್ವಯಂ ।
ಪಂಚಪಂಚಾಶದ್ಗ್ರಾಮಾಶ್ಚ ದತ್ತಾಸ್ತು ಪುನರಾಗಮೇ ॥ ೨೯೬ ॥
ರಾಮೇಣ ಮೋಢವಿಪ್ರಾಣಾಂ ನಿವಾಸಾಂಸ್ತೇಷು ಚಕ್ರಿರೇ ।
ವೃತ್ತಿಬಾಹ್ಯಾಸ್ತು ಯೇ ವಿಪ್ರಾ ಧರ್ಮಾರಣ್ಯಾಂತರಸ್ಥಿತಾಃ ॥ ೨೯೭ ॥
ನಾಽಸ್ಮಾಕಂ ವಣಿಜಾಂ ವೃತ್ತೌ ಗ್ರಾಮವೃತ್ತೌ ನ ಕಿಂಚನ ।
ಪ್ರಯೋಜನಂ ಹಿ ವಿಪ್ರೇಂದ್ರಾ ವಾಸೋಽಸ್ಮಾಕಂ ತು ರೋಚತೇ ॥ ೨೯೮ ॥
ಇತ್ಯುಕ್ತೇ ಸಮನುಜ್ಞಾತಾಸ್ತ್ರೈವಿದ್ಯೈಸ್ತ್ರೈದ್ವಿಜೋತ್ತಮೈಃ ।
ತೇಷು ಗ್ರಾಮೇಷು ತೇ ವಿಪ್ರಾಶ್ಚಾತುರ್ವಿದ್ಯಾ ದ್ವಿಜೋತ್ತಮಾಃ ॥ ೨೯೯ ॥
ಸ್ವಕರ್ಮ ನಿರತಾಃ ಶಾಂತಾಃ ಕೃಷಿಕರ್ಮಪರಾಯಣಾಃ ।
ಧರ್ಮಾಽರಣ್ಯಾನ್ನಾಽತಿದೂರೇ ಧೇನೂಃ ಸಂಚಾರಯಂತಿ ತೇ ॥ ೩೦೦ ॥
ಬಹವಸ್ತತ್ರ ಗೋಪಾಲಾ ಬಭೂವುರ್ದ್ವಿಜಬಾಲಕಾಃ ।
ಚಾತುರ್ವಿದ್ಯಾಸ್ತು ಶಿಶವಸ್ತೇಸಾಂ ಧೇನೂರಚಾರಯನ್ ।
ತೇಷಾಂ ಭೋಜನಕಾಮಾಯ ಅನ್ನಪಾನಾದಿ ಸತ್ಕೃತಂ ॥ ೩೦೧ ॥

---

೨೯೪–೩೦೦. ಕೆಲವರು ಸಾಭ್ರಮತಿಯ ದಡದಲ್ಲಿ ಎಲ್ಲೆಲ್ಲಿಯೋ ವಾಸಿಸಿದರು. ಹಿಂದೆ ಸೀತಾಪುರದಿಂದ ಹೆದರಿ ಬಂದು ಸಾಭ್ರಮತಿಯ ಉತ್ತರದಡದಲ್ಲಿರುವ ಶ್ರೀಕ್ಷೇತ್ರದಲ್ಲಿ ನೆಲಸಿದ್ದ ಚಾತುರ್ವಿದ್ಯ ಬ್ರಾಹ್ಮಣರಿಗೆ ಕುಮಾರಪಾಲನು ಸುಖವಾಸಕಸ್ಥಾನವನ್ನು ಕೊಡಲು ಅವರು ತಿರುಗಿ ಸೀತಾಪುರಕ್ಕೇ ತೆರಳಿದರು. ಮೋಢಬ್ರಾಹ್ಮಣರು ರಾಮನಿತ್ತ ಐವತ್ತೈದು ಗ್ರಾಮಗಳಲ್ಲಿ ವಾಸಮಾಡುತ್ತಿದ್ದರು. ಧರ್ಮಾರಣ್ಯದ ವೃತ್ತಿಗಳಿಲ್ಲದ ಬ್ರಾಹ್ಮಣರು 'ನಮಗೆ ವರ್ತಕವೃತ್ತಿಯಿಂದಲೂ, ಗ್ರಾಮವೃತ್ತಿಯಿಂದಲೂ ಪ್ರಯೋಜನವಿಲ್ಲ. ದ್ವಿಜರೆ! ನಮಗೆ ವಾಸಕ್ಕೆ ಸ್ಥಳವನ್ನು ಕೊಡಿರಿ' ಎಂದು ತ್ರೈವಿದ್ಯರನ್ನು ಪ್ರಾರ್ಥಿಸಲು ಅವರೂ ಅನುಮೋದಿಸಿದರು. ಅದರಂತೆ ಆ ಬ್ರಾಹ್ಮಣರು ಆ ಗ್ರಾಮಗಳಲ್ಲಿಯೇ ವಾಸಿಸುತ್ತ ತಮ್ಮ ಕರ್ಮಗಳಲ್ಲಿ ಆಸಕ್ತರೂ, ಶಾಂತರೂ, ಕೃಷಿಕರ್ಮನಿರತರೂ ಆಗಿ ಧರ್ಮಾರಣ್ಯದ ಸಮೀಪದಲ್ಲಿ ದನಗಳನ್ನು ಕಾಯುತ್ತಿದ್ದರು.

೩೦೧–೩೦೨. ಚಾತುರ್ವಿದ್ಯರ ಅನೇಕಮಂದಿ ಬಾಲಕರು ಗೋಪಾಲಕ

CC-0. Jangamwadi Math Collection. Digitized by eGangotri

ಅನಯನ್ಸೈ ಯುವತಯಃ ವಿಧವಾ ಅಪಿ ಬಾಲಕಾಃ ॥ ೩೦೨ ॥
ಕಾಲೇನ ಕಿಯತಾ ರಾಜಂಸ್ತೇಷಾಂ ಪ್ರೀತಿರಭೂನ್ಮಿಥಃ ।
ಗೋಪಾಲಾ ಬುಭುಜುಃ ಪ್ರೇಮ್ಣಾ ಕುಮಾರ್ಯೋ ದ್ವಿಜಬಾಲಿಕಾಃ॥ ೩೦೩॥
ಜಾತಾಃ ಸಗರ್ಭಾಸ್ತಾಃ ಸರ್ವಾ ದೃಷ್ಟ್ವಾಸ್ತ್ರೈರ್ದ್ವಿಜಸತ್ತಮೈಃ ।
ಪರಿತ್ಯಕ್ತಾಶ್ಚ ಸದನಾದ್ಧಿಕ್ಕೃತಾಃ ಪಾಪಕರ್ಮಣಾ ॥ ೩೦೪ ॥
ತೇಭ್ಯೋ ಜಾತಾ ಕುಮಾರಾ ಯೇ ಕಾತೀಭಾ ಗೋಳಕಾಸ್ತಥಾ ।
ಧೇನುಜಾಸ್ತೇ ಧರಾಲೋಕೇ ಖ್ಯಾತಿಂ ಜಗ್ಮುರ್ದ್ವಿಜೋತ್ತಮಾಃ ॥ ೩೦೫ ॥
ವೃತ್ತಿಬಾಹ್ಯಾಸ್ತುತೇ ವಿಪ್ರಾ ಭಿಕ್ಷಾಂ ಕುರ್ವಂತಿ ನಿತ್ಯಶಃ ।
ಅನ್ಯಚ್ಚ ಶ್ರೂಯತಾಂ ರಾಜಂಸ್ತ್ರೈವಿದ್ಯಾನಾಂ ದ್ವಿಜನ್ಮನಾಂ ॥ ೩೦೬ ॥
ಕುಷ್ಠೀ ಕೋऽಪಿ ತಥಾ ಪಂಗುರ್ಮೂರ್ಖೋ ವಾ ಬಧಿರೋऽಪಿ ವಾ ।
ಕಾಣೋ ವಾऽಪ್ಯಥ ಕುಬ್ಜೋವಾ ಬದ್ಧವಾಗಥವಾ ಪುನಃ ॥ ೩೦೭ ॥
ಅಪ್ರಾಪ್ತಕನ್ಯಕಾಹ್ಯೇತೇ ಚಾತುರ್ವಿದ್ಯಾನ್ಸಮಾಶ್ರಿತಾಃ ।
ವಿತ್ತೇನ ಮಹತಾ ರಾಜನ್ಸುತಾಂಸ್ತೇಷಾಂ ಕುಮಾರಿಕಾಃ ॥ ೩೦೮ ॥
ಉದ್ವಾಹಿತಾಸ್ತದಾ ರಾಜಂಸ್ತಸ್ಮಾಜ್ಜಾತಾಃ ರ್ಭಕಾಸ್ತು ಯೇ ।
ತ್ರಿದಳಜಾಸ್ತೇ ವಿಖ್ಯಾತಾಃ ಕ್ಷಿತಿಲೋಕೇऽಭವಂ ಸ್ತತಃ ॥ ೩೦೯ ॥
ವೃತ್ತಿಂ ಚಕ್ರುರ್ಬ್ರಾಹ್ಮಣಾಸ್ತೇऽನ್ಯೋನ್ಯಮಿಶ್ರಸಮುದ್ಭವಾಃ ।
ಅನ್ಯಚ್ಚ ಶ್ರೂಯತಾಂ ರಾಜಂಸ್ತ್ರೈವಿದ್ಯಾನಾಂ ದ್ವಿಜನ್ಮನಾಂ ॥ ೩೧೦ ॥

---

ರಾಗಿ ತ್ರೈವಿದ್ಯರ ದನಗಳನ್ನು ಮೇಯಿಸುತ್ತಿದ್ದರು. ತ್ರೈವಿದ್ಯರ ಯುವತಿಯರೂ, ವಿಧವೆಯರೂ ಆ ಬಾಲಕರಿಗೆ ಅನ್ನ ನೀರನ್ನು ಕೊಟ್ಟು ಸತ್ಕರಿಸುತ್ತಿದ್ದರು.

೩೦೩. ಕೆಲವು ಕಾಲದ ಮೇಲೆ ಈ ಗೋಪಾಲಕರು ತ್ರೈವಿದ್ಯರ ಕುಮಾರಿಯರಲ್ಲಿ ಪ್ರಣಯವನ್ನು ಬೆಳೆಯಿಸಿದರು.

೩೦೪. ಅವರಿಂದ ಗರ್ಭಿಣಿಯರಾದ ತಮ್ಮ ಮಕ್ಕಳನ್ನು ನೋಡಿ ದ್ವಿಜೋತ್ತಮರು ಅವರನ್ನು ಬೈದು ಮನೆಯಿಂದ ಹೊರಡಿಸಿದರು.

೩೦೫. ಆ ಗೋಪಾಲಕರಿಂದ ಹುಟ್ಟಿದ ಕುಮಾರರು ಕಾತೀಭ, ಗೋಲಕ, ಧೇನುಜರೆಂದು ಲೋಕದಲ್ಲಿ ಪ್ರಸಿದ್ಧರಾದರು.

೩೦೬–೩೦೯. ವೃತ್ತಿಯಿಲ್ಲದ ಅವರು ನಿತ್ಯವೂ ಭಿಕ್ಷೆಬೇಡಿದರು. ತ್ರೈವಿದ್ಯಬ್ರಾಹ್ಮಣರ ಕುಷ್ಠರೋಗವುಳ್ಳವರೂ, ಕುಂಟರೂ, ಮೂರ್ಖರೂ, ಕಿವುಡರೂ, ಕುರುಡರೂ, ಗೂನುಬೆನ್ನಿನವರೂ, ಮೂಕರೂ ಆದ ಕುಮಾರರು ತಮ್ಮವರಲ್ಲಿ ಕನ್ಯೆಯರು ಸಿಕ್ಕದೆ ಇರುವುದರಿಂದ ಬಹಳ ಹಣವನ್ನು ಕೊಟ್ಟು ಚಾತುರ್ವಿದ್ಯರ ಕನ್ಯೆಯರನ್ನು ಪಡೆದು ಮದುವೆಯಾದರು. ಅವರಲ್ಲಿ ಜನಿಸಿದ ಮಕ್ಕಳು ತ್ರಿದಲರೆಂದು ಪ್ರಪಂಚದಲ್ಲಿ ವಿಖ್ಯಾತರಾದರು.

೩೧೦. ಆ ಮಿಶ್ರಜಾತಿಯ ಬ್ರಾಹ್ಮಣರು ಪರಸ್ಪರಸೇರಿ ಜೀವನವನ್ನು

CC-0. Jangamwadi Math Collection. Digitized by eGangotri

ರಾಮದತ್ತೇನ ಗ್ರಾಮೇಣ ಕರಗ್ರಹಣಹೇತವೇ ।
ಏಕೀಭೂಯ ದ್ವಿಜೈಃ ಸರ್ವೈರ್ಗ್ರಾಮಂ ಪ್ರದಾಯ ತಂ ಬಲಿಂ ॥ ೩೧೧ ॥
ಅರ್ಧಂ ನಿವೇದಯಾಮಾಸುರರ್ಧಂ ಚೈವೋಪರಕ್ಷಿತಂ ।
ಏತಲ್ಲಬ್ಧಂ ಹಿ ಮನ್ವಾನಾಸ್ತೇ ದ್ವಿಜಾ ಲೌಲ್ಯಭಾಗಿನಃ ॥ ೩೧೨ ॥
ಮಹಾಸ್ಥಾನಗತಾ ಯೇ ಚ ತೇ ಹಿ ವಿಸ್ಮಯಮಾಯಯುಃ ।
ತನ್ಮಧ್ಯೇ ಕೋಽಪಿ ವಿಪ್ರಸ್ತಾನುವಾಚ ಕುಪಿತೋ ವಚಃ ॥ ೩೧೩ ॥

ವಿಪ್ರ ಉವಾಚ:—

ಅನೃತಂ ಚೈವ ಭಾಷಂತೇ ಲೌಲ್ಯೇನ ಮಹತಾ ವೃತಾಃ ।
ಪುತ್ರಪೌತ್ರವಿನಾಶಾಯ ಬ್ರಹ್ಮಸ್ವೇಷ್ವತಿಲೋಲುಪಾಃ ॥ ೩೧೪ ॥
ನ ವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ ।
ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರಪೌತ್ರಕಂ ॥ ೩೧೫ ॥
ಬ್ರಹ್ಮಸ್ವೇನ ಚ ದಗ್ಧೇಷು ಪುತ್ರದಾರಗೃಹಾದಿಷು ।
ನ ಚ ತೇಽಪಿಚ ತಿಷ್ಠಂತಿ ಬ್ರಹ್ಮಸ್ವೇನ ವಿನಾಶಿತಾಃ ॥ ೩೧೬ ॥
ನ ನಾಕಂ ಲಭತೇ ಸೋಽಥ ಸದಾ ಬ್ರಹ್ಮಸ್ವಹಾರಕಃ ।
ಯದಾ ವರಾಟಿಕಾಂ ಚೈವ ಬ್ರಾಹ್ಮಣಸ್ಯ ಹರಂತಿ ಯೇ ॥ ೩೧೭ ॥

---

ಮಾಡುತ್ತಿದ್ದರು. ಮಹಾರಾಜ! ತ್ರೈವಿದ್ಯರ ಮತ್ತೊಂದು ವೃತ್ತಾಂತವನ್ನು ಹೇಳುವೆನು, ಕೇಳು.

೩೧೧-೩೧೩. ಈ ತ್ರೈವಿದ್ಯರು ಒಟ್ಟು ಸೇರಿ ಕಂದಾಯಕ್ಕಾಗಿ ರಾಮನು ಕೊಟ್ಟ ಗ್ರಾಮಗಳಲ್ಲಿ ಅರ್ಧಭಾಗವನ್ನುಮಾರಿ ಅರ್ಧವನ್ನುಳಿಸಿಕೊಂಡರು. ಚಂಚಲರಾದ ಮಹಾಸ್ಥಾನದ ಬ್ರಾಹ್ಮಣರು ಇದನ್ನು ಕೊಂಡುಕೊಂಡು ವಿಸ್ಮಿತರಾದರು. ಆಗ ಅವರಲ್ಲೊಬ್ಬ ಬ್ರಾಹ್ಮಣನು ಅವರನ್ನು ಕುರಿತು ಹೀಗೆಂದನು.

೩೧೪. ಬ್ರಾಹ್ಮಣನು ಹೇಳುತ್ತಾನೆ:—ಪುತ್ರ ಪೌತ್ರರ ನಾಶಕ್ಕಾಗಿ ಬ್ರಾಹ್ಮಣರ ಸ್ವತ್ತಿನಲ್ಲಿ ಆಶೆಯುಳ್ಳವರಾಗಿ ಸುಳ್ಳನ್ನು ಹೇಳುತ್ತಿದ್ದೀರಿ.

೩೧೫. ವಿಷವು ವಿಷವಲ್ಲ. ಬ್ರಾಹ್ಮಣರ ಸ್ವತ್ತು ವಿಷವೆನ್ನಿಸಿಕೊಳ್ಳುವುದು. ವಿಷವು ಒಬ್ಬನನ್ನುಮಾತ್ರ ಕೊಲ್ಲುವುದು. ಬ್ರಾಹ್ಮಣರ ಸ್ವತ್ತು ಮಕ್ಕಳು ಮೊಮ್ಮಕ್ಕಳನ್ನೂ ಕೊಲ್ಲುವುದು.

೩೧೬. ಬ್ರಹ್ಮಸ್ವದಿಂದ ಮಕ್ಕಳು, ಹೆಂಡತಿ, ಮನೆ ಮೊದಲಾದುವು ಸುಟ್ಟುಹೋಗಲು ಬ್ರಹ್ಮಸ್ವಾಪಹಾರಕನೂ ಸಾಯುವನು.

೩೧೭. ಕವಡೆಯಷ್ಟು ಬ್ರಾಹ್ಮಣನ ಸ್ವತ್ತನ್ನು ಅಪಹರಿಸಿದವನೂ ಸ್ವರ್ಗವನ್ನು ಹೊಂದುವುದಿಲ್ಲ.

CC-0. Jangamwadi Math Collection. Digitized by eGangotri

ತತೋ ಜನ್ಮತ್ರಯಾಣ್ಯೇವ ಹರ್ತಾ ನಿರಯಮಾವ್ರಜೇತ್ ।
ಪೂರ್ವಜಾ ನೋಪಭುಂಜಂತಿ ತತ್ಪ್ರದತ್ತಂ ಜಲಂ ಕ್ವಚಿತ್ ॥ ೩೧೮ ॥
ಕ್ಷಯಾಹೇ ನೋಪಭುಂಜಂತಿ ತಸ್ಯ ಪಿಂಡೋದಕಕ್ರಿಯಾಃ ।
ಸಂತತಿಂ ನೈವ ಲಭತೇ ಲಭ್ಯಮಾನಾ ನ ಜೀವತಿ ॥ ೩೧೯ ॥
ಯದಿ ಜೀವತಿ ದೈವಾಚ್ಚೇದ್ಭ್ರಷ್ಟಾಚಾರಾ ಭವೇದಿತಿ ॥ ೩೨೦ ॥

ಏಕಾದಶ ವಿಪ್ರಾ ಊಚುಃ:—

ನಾಽಸತ್ಯಂ ಭಾಷಿತಂ ವಿಪ್ರಾಃ ಕಥಂ ದೂಷಯಸೇ ಹಿ ನಃ ।
ಅಪರಾಧಂ ವಿನಾ ಕಸ್ಯ ಕಟೂಕ್ತಿರ್ಯುಜ್ಯತೇ ಕಿಲ ॥ ೩೨೧ ॥
ತಚ್ಛ್ರುತ್ವಾ ತೈರ್ದ್ವಿಜೈಃ ಸಾರ್ಧಂ ಗ್ರಾಮಗ್ರಾಹಯಿತಾ ವಣಿಕ್ ।
ಪರಿಪೃಷ್ಟಃ ಸ ತತ್ಸರ್ವಂ ಕಥಯಾಮಾಸ ಕಾರಣಂ ॥ ೩೨೨ ॥
ವಣಿಜೈರೇವ ಮೇ ದತ್ತೋ ಬಲಿಶ್ಚ ದ್ವಿಜಸತ್ತಮಾಃ ।
ತತ್ಸರ್ವಂ ಶುದ್ಧಭಾವೇನ ಕಥಿತಂ ತು ದ್ವಿಜನ್ಮಸು ॥ ೩೨೩ ॥
ತತೋಽರ್ಧದಲಂ ಜ್ಞಾತ್ವಾ ತೇ ಕುಪಿತಾ ದ್ವಿಜಪುತ್ರಕಾಃ ।
ವೃತ್ತೇರ್ಬಹಿಷ್ಕೃತಾಸ್ತೇವೈ ಏಕಾದಶ ದ್ವಿಜಾಸ್ತತಃ ॥ ೩೨೪ ॥

---

೩೧೮. ಬ್ರಹ್ಮಸ್ವವನ್ನು ಅಪಹರಿಸಿದವನು ಮೂರು ಜನ್ಮದಲ್ಲಿಯೂ ನರಕವಾಸಿಯಾಗುವನು. ಪಿತೃಗಳು ಅವನು ಕೊಟ್ಟ ತರ್ಪಣದ ನೀರನ್ನು ಕುಡಿಯುವುದಿಲ್ಲ.

೩೧೯. ಉತ್ತರ ಕ್ರಿಯೆಯಲ್ಲಿ ಅವನು ಕೊಟ್ಟ ಪಿಂಡಾದಿಗಳನ್ನು ಪಿತೃಗಳು ಪರಿಗ್ರಹಿಸುವುದಿಲ್ಲ. ಅವನಿಗೆ ಸಂತತಿಯಾಗುವುದಿಲ್ಲ. ಆದರೂ ಆ ಸಂತತಿಯು ಬದುಕುವುದಿಲ್ಲ.

೩೨೦–೩೨೧. ದೈವವಶದಿಂದ ಬದುಕಿದರೂ ಆ ಮಕ್ಕಳು ಆಚಾರಭ್ರಷ್ಟರಾಗುವರು. ಹನ್ನೊಂದು ಜನ ಬ್ರಾಹ್ಮಣರು ಹೇಳುತ್ತಾರೆ:—ದ್ವಿಜನೆ! ನಾವು ಸುಳ್ಳನ್ನು ಹೇಳಲಿಲ್ಲ. ನಮ್ಮನ್ನು ಏತಕ್ಕೆ ನಿಂದಿಸುವೆ? ತಪ್ಪಿಲ್ಲದವನನ್ನು ಕುರಿತು ಇಂಥ ಕಠಿನವಾದ ಮಾತುಗಳನ್ನಾಡಬಾರದಷ್ಟೆ.

೩೨೨. ಅದನ್ನು ಕೇಳಿ ಆ ಬ್ರಾಹ್ಮಣರು ಗ್ರಾಮವನ್ನು ಕೊಡಿಸಿದ ವರ್ತಕನನ್ನು ಕೇಳಲು ಅವನು ಕಾರಣವನ್ನೆಲ್ಲ ಹೇಳಿದನು.

೩೨೩. ಬ್ರಾಹ್ಮಣರೆ! ವರ್ತಕರೆ ನನಗೆ ಕಂದಾಯಕ್ಕಾಗಿ ಗ್ರಾಮವನ್ನು ಕೊಟ್ಟರು. ಎಂದು ಎಲ್ಲವನ್ನು ಬ್ರಾಹ್ಮಣರಿಗೆ ಹೇಳಿದನು.

೩೨೪. ಬಳಿಕ ಆ ಬ್ರಾಹ್ಮಣರ ಮಕ್ಕಳು ಗ್ರಾಮದ ಅರ್ಧಭಾಗವು ನಷ್ಟವಾದುದನ್ನು ತಿಳಿದು ಆ ಹನ್ನೊಂದುಜನ ಬ್ರಾಹ್ಮಣರನ್ನು ವೃತ್ತಿಬಾಹ್ಯರನ್ನಾಗಿ ಮಾಡಿದರು.

CC-0. Jangamwadi Math Collection. Digitized by eGangotri

ಏಕಾದಶಸಮಾಜ್ಞಾತಿರ್ವಿಖ್ಯಾತಾ ಭುವನತ್ರಯೇ ।
ನ ತೇಷಾಂ ಸಹ ಸಂಬಂಧೋ ನ ವಿವಾಹಶ್ಚ ಜಾಯತೇ ॥ ೩೭೫ ॥
ಏಕಾದಶಸಮಾ ಯೇ ಚ ಬಹಿರ್ಗ್ರಾಮೇ ವಸಂತಿ ತೇ ।
ಏವಂ ಭೇದಾಃ ಸಮುಭವನ್ನಾನಾಮೋಢದ್ವಿಜನ್ಮನಾಂ ।
ಯುಗಾಽನುಸಾರಾತ್ಕಾಲೇನ ಜ್ಞಾತೀನಾಂ ಚ ವೃಷಸ್ಯವಾ ॥ ೩೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾಽರಣ್ಯಮಾಹಾತ್ಮ್ಯೇ "ಜ್ಞಾತಿಭೇದ ವರ್ಣನಂ" ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

೩೭೫. ಬಳಿಕ ಲೋಕದಲ್ಲಿ ಏಕಾದಶಸಮಾ ಎಂಬ ಜಾತಿಯು ಪ್ರಸಿದ್ಧಿಗೊಂಡಿತು. ಆ ಜಾತಿಯವರೊಡನೆ ವಿವಾಹಾದಿ ಸಂಬಂಧವನ್ನು ಇತರ ಬ್ರಾಹ್ಮಣರು ಬೆಳೆಯಿಸಲಿಲ್ಲ.

೩೭೬. ಈ ಏಕಾದಶ ಸಮುಜಾತಿಯವರು ಗ್ರಾಮದ ಹೊರಗೆ ವಾಸಿಸಿದರು. ಹೀಗೆ ಕಾಲಕ್ರಮದಿಂದ ಯುಗಾನುಸಾರವಾಗಿ ಮೋಢಬ್ರಾಹ್ಮಣರ ಜ್ಞಾತಿಗಳೂ ಧರ್ಮಗಳೂ ಬಗೆ ಬಗೆಯಾದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಜ್ಞಾತಿಭೇದವರ್ಣನ"ವೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಚತ್ವಾರಿಂಶೋಽಧ್ಯಾಯಃ

### ಧರ್ಮಾರಣ್ಯನಿವಾಸಿ ವ್ಯವಸ್ಥಾಪನ ಪೂರ್ವಕ ಧರ್ಮಾರಣ್ಯ ಪುರಾಣಶ್ರವಣಮಾಹಾತ್ಮ್ಯವರ್ಣನಂ

ನಾರದ ಉವಾಚ :—

ಜ್ಞಾತಿಭೇದೇ ತು ಸಂಜಾತೇ ತಸ್ಮಿನ್ಮೋಹೇರಕೇ ಪುರೇ ।
ತ್ರೈವಿದ್ಯೈಃ ಕಿಂ ಕೃತಂ ಬ್ರಹ್ಮಂಸ್ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

ಬ್ರಹ್ಮೋವಾಚ :—

ಸ್ವಸ್ಥಾನೇ ವಾಡವಾಃ ಸರ್ವೇ ಹರ್ಷನಿರ್ಭರಮಾನಸಾಃ ।
ಅಗ್ನಿಹೋತ್ರಪರಾಃ ಕೇಽಪಿ ಕೇಽಪಿ ಯಜ್ಞಪರಾಯಣಾಃ ॥ ೨ ॥
ಕೇಽಪಿ ಚಾಗ್ನಿಸಮಾಧಾನಾಃ ಕೇಽಪಿ ಸ್ಮಾರ್ತಾ ನಿರಂತರಂ ।
ಪುರಾಣನ್ಯಾಯವೇತ್ತಾರೋ ವೇದವೇದಾಂಗವಾದಿನಃ ॥ ೩ ॥
ಸುಖೇನ ಸ್ವಾನ್ಸದಾಚಾರಾನ್ಕುರ್ವಂತೋ ಬ್ರಹ್ಮವಾದಿನಃ ।
ಏವಂ ಧರ್ಮಸಮಾಚಾರಾನ್ಕುರ್ವತಾಂ ಕುಶಲಾತ್ಮನಾಂ ॥ ೪ ॥
ಸ್ಥಾನಾಚಾರಾನ್ಕುಲಾಚಾರಾನಧಿದೇವ್ಯಾಶ್ಚ ಭಾಷಿತಾನ್ ।
ಧರ್ಮಶಾಸ್ತ್ರಸ್ಥಿತಂ ಸರ್ವಂ ಕಾಜೇಶೈರುದಿತಂ ಚ ಯತ್ ॥ ೫ ॥
ಪರಂಪರಾಗತಂ ಧರ್ಮಮೂಚುಸ್ತೇ ವಾಡವೋತ್ತಮಾಃ ॥ ೬ ॥

---

### ಕನ್ನಡದ ಅನುವಾದ

#### ಧರ್ಮಾರಣ್ಯ ಪುರಾಣಶ್ರವಣ ಮಾಹಾತ್ಮ್ಯವರ್ಣನ

೧. ನಾರದನು ಹೇಳುತ್ತಾನೆ:—ಪಿತಾಮಹ! ಹೀಗೆ ಜ್ಞಾತಿಭೇದ ವುಂಟಾಗಲು ಆ ಮೋಹೇರಕ ಪುರದಲ್ಲಿ ತ್ರೈವಿದ್ಯ ಬ್ರಾಹ್ಮಣರು ಏನನ್ನುಮಾಡಿದ ರೆಂಬುದನ್ನು ನನಗೆ ಹೇಳು.

೨-೩. ಬ್ರಹ್ಮನು ಹೇಳುತ್ತಾನೆ:—ಬ್ರಾಹ್ಮಣರೆಲ್ಲರೂ ಸಂತೋಷದಿಂದ ತಮ್ಮ ಸ್ಥಳಗಳಲ್ಲಿ ವಾಸಿಸುತ್ತಿದ್ದರು. ಅವರಲ್ಲಿ ಕೆಲವರು ಅಗ್ನಿಹೋತ್ರ ನಿರತರೂ, ಕೆಲವರು ಯಜ್ಞಾಸಕ್ತರೂ, ಕೆಲವರು ಅಗ್ನ್ಯಾಧಾನಪರರೂ, ಕೆಲವರು ಸ್ಮೃತ್ಯುಕ್ತಕರ್ಮನಿರತರೂ, ಪುರಾಣ, ನ್ಯಾಯಶಾಸ್ತ್ರಗಳನ್ನು ತಿಳಿದವರೂ, ವೇದವೇದಾಂಗಗಳನ್ನು ಹೇಳುವವರೂ ಆಗಿದ್ದರು.

೪-೬. ಹೀಗೆ ಸದಾಚಾರ ಸಂಪನ್ನರಾಗಿ ಕುಶಲರಾದ ಆ ಬ್ರಾಹ್ಮಣರು ಬ್ರಹ್ಮಾದಿಗಳು ಹೇಳಿದ ಕುಲಕ್ರಮದಿಂದ ಬಂದ ಸ್ಥಾನಾಚಾರಗಳನ್ನೂ, ಕುಲಾಚಾರಗಳನ್ನೂ, ಗೋತ್ರದೇವತೆಯ ಮಾತುಗಳನ್ನೂ, ಧರ್ಮಶಾಸ್ತ್ರದಲ್ಲಿ ಹೇಳಿದ ಧರ್ಮಗಳನ್ನೂ ಹೇಳಿದರು.

CC-0. Jangamwadi Math Collection. Digitized by eGangotri

ಬ್ರಾಹ್ಮಣಾ ಊಚುಃ:—

ಉಪಾಸ್ತೇ ಯಶ್ಚ ಲಿಖಿತಂ ರಕ್ತಪಾದೈಸ್ತು ವಾಡವಾಃ ।
ಜ್ಞಾತಿಶ್ರೇಷ್ಠಃ ಸ ವಿಜ್ಞೇಯೋ ಬಲಿರ್ದೇಯಸ್ತತಃ ಪರಂ ॥ ೭ ॥
ರಕ್ತಚಂದನಂ ಪ್ರಸಾಧ್ಯಾಽಥ ಪ್ರಸಿದ್ಧಂ ಸ್ವಕುಲಂ ತಥಾ ।
ಕುಂಕುಮಾರಕ್ತಪಾದ್ಯೈಸ್ತೈರ್ಗಂಧಪುಷ್ಪಾದಿ ಚರ್ಚಿತೈಃ ॥ ೮ ॥
ಸಂಭೂಯ ಲಿಖಿತಂ ತಚ್ಚ ರಕ್ತಪಾದಂ ತದುಚ್ಯತೇ ।
ರಾಮಸ್ಯ ಲೇಖ್ಯಂ ತೇ ಸರ್ವೇ ಪೂಜಯಂತು ಸಮಾಹಿತಾಃ ॥ ೯ ॥
ರಾಮಸ್ಯ ಕರಮುದ್ರಾಂ ಚ ಪೂಜಯಂತು ದ್ವಿಜಾಃ ಸದಾ ।
ಯೇಷಾಂ ದೋಷಾಃ ಸದಾಚಾರೇ ವ್ಯಭಿಚಾರಾದಯೋ ಯದಿ ॥ ೧೦ ॥
ತೇಷಾಂ ದಂಡೋ ವಿಧೇಯಸ್ತು ಯ ಉಕ್ತೋ ವಿಧಿವದ್ದ್ವಿಜೈಃ ।
ಚಿಹ್ನಂ ನ ರಾಮಮುದ್ರಾಯಾ ಯಾವದ್ದಂಡಂ ದದಾತಿ ನ ॥ ೧೧ ॥
ವಿನಾ ದಂಡಪ್ರದಾನೇನ ಮುದ್ರಾಚಿಹ್ನಂ ನಧಾರ್ಯತೇ ।
ಮುದ್ರಾಹಸ್ತಾಶ್ಚ ವಿಜ್ಞೇಯಾ ವಾಡವಾ ನೃಪಸತ್ತಮ ॥ ೧೨ ॥
ಪುತ್ರೇ ಜಾತೇ ಪಿತಾ ದದ್ಯಾಚ್ಛ್ರೀಮಾತ್ರೇ ತು ಬಲಿಂ ಸದಾ ।
ಫಲಾನಿವಿಂಶತಿಃ ಸರ್ಪಿರ್ಗುಡಃ ಪಂಚಪಲಾನಿ ಚ ॥ ೧೩ ॥
ಕುಂಕುಮಾದಿಭಿರಭ್ಯರ್ಚ್ಯ ಜಾತಮಾತ್ರಃ ಸುತಸ್ತದಾ ।
ಷಷ್ಠೇ ಚ ದಿವಸೇ ರಾಜನ್ಷಷ್ಠೀಂ ಪೂಜಯತೇ ಸದಾ ॥ ೧೪ ॥

---

೭. ಬ್ರಾಹ್ಮಣರು ಹೇಳುತ್ತಾರೆ:—ರಕ್ತಪಾದಗಳಿಂದ ಬರೆಯಲ್ಪಟ್ಟ ಕುಲದೇವತೆಯನ್ನು ಉಪಾಸನೆಮಾಡಿ ಬಲಿಯನ್ನೀಯುವ ಬ್ರಾಹ್ಮಣರು ಜ್ಞಾತಿ ಶ್ರೇಷ್ಠರೆನಿಸಿಕೊಳ್ಳುವರು.

೮–೧೨. ಪಾದಗಳಿಗೆ ಕುಂಕುಮದ ಕೆಂಪು ಗಂಧಗಳನ್ನು ಬಳಿದು ಹೂವುಗಳನ್ನಲಂಕರಿಸಿ ಬರೆದ ಪ್ರಸಿದ್ಧವಾದ ಸ್ವಕುಲದೇವತೆಯು ರಕ್ತಪಾದವೆನ್ನಿಸಿಕೊಳ್ಳುವುದು. ಆ ಬ್ರಾಹ್ಮಣರು ರಾಮನ ಶಾಸನವನ್ನೂ, ಅವನ ಉಂಗುರವನ್ನೂ ಯಾವಾಗಲೂ ಪೂಜಿಸಬೇಕು. ಅವರ ಸದಾಚಾರದಲ್ಲಿ ವ್ಯಭಿಚಾರಾದಿ ದೋಷಗಳು ಕಂಡರೆ ಅವರಿಗೆ ಬ್ರಾಹ್ಮಣರು ಶಾಸ್ತ್ರದಲ್ಲಿ ಹೇಳಿದ ದಂಡವನ್ನು ವಿಧಿಸಬೇಕು. ರಾಮಮುದ್ರೆಯ ಚಿಹ್ನೆಯನ್ನು ಧರಿಸದೆಯೂ, ದಂಡವನ್ನು ಕೊಡದೆಯೂ ಇರುವ ಬ್ರಾಹ್ಮಣರು ಮುದ್ರಾಹಸ್ತರೆನ್ನಿಸಿಕೊಳ್ಳುವರು.

೧೩–೧೬. ಪುತ್ರನು ಜನಿಸಿದಕೂಡಲೆ ತಂದೆಯು ಶ್ರೀಮಾತೆಯನ್ನು ಕುಂಕುಮಾದಿಗಳಿಂದ ಪೂಜಿಸಿ ಇಪ್ಪತ್ತು ಹಣ್ಣುಗಳು, ಹದಿನೈದು ತೊಲೆ ತುಪ್ಪ ಬೆಲ್ಲ ಇವುಗಳನ್ನು ನೈವೇದ್ಯಮಾಡಬೇಕು. ಆರನೆ ದಿನ ಶ್ರೀಮಾತೆಯನ್ನು

CC-0. Jangamwadi Math Collection. Digitized by eGangotri

ದದ್ಯಾತ್ತತ್ರಬಲಿಂ ಸಾಜ್ಯಂ ಕುರ್ಯಾದ್ಧಿ ಬಲಿಪಂಚಕಂ ।
ಪಂಚಪ್ರಸ್ಥಾನ್ಸ್ಥಲೀನ್ದದ್ಯಾತ್ಸ ವಸ್ತ್ರಾಂಭ್ರೀಫಲೈರ್ಯುತಾನ್ ॥ ೧೫ ॥
ಕುಂಕುಮಾದಿಭಿರಭ್ಯರ್ಚ್ಯ ಶ್ರೀಮಾತ್ರೇ ಭಕ್ತಿಪೂರ್ವಕಂ ।
ವಿತ್ತಶಾಠ್ಯಂ ನ ಕುರ್ವೀತ ಕುಲೇ ಸಂತತಿವೃದ್ಧಯೇ ॥ ೧೬ ॥
ತದ್ಧಿ ಚಾಽರ್ಪಯತಾ ದ್ರವ್ಯಂ ವೃದ್ಧೌ ಯದ್ಧ್ರೀಣಿತಂ ಪುನಃ ।
ಜನ್ಮನೋಽನಂತರಂ ಕಾರ್ಯಂ ಜಾತಕರ್ಮ ಯಥಾವಿಧಿ ॥ ೧೭ ॥
ವಿಪ್ರಾಽನುಕೀರ್ತಿತಾ ಯಾಽತ್ರ ವೃತ್ತಿಃ ಸಾಽಪಿ ವಿಭಜ್ಯತೇ
ಪ್ರಥಮಾ ಲಭ್ಯಮಾನಾ ಚ ವೃತ್ತಿರ್ನೃ ಯಾವತೀ ಪುನಃ ॥ ೧೮ ॥
ತಸ್ಯಾವೃತ್ತೇರರ್ಧಭಾಗೋ ಗೋತ್ರ ದೇವ್ಯೈ ತು ಕಲ್ಪ್ಯತಾಂ ।
ದ್ವಿಗುಣಂ ವಣಿಜಾ ಚೈವ ಪುತ್ರೇ ಜಾತೇ ಭವೇದಿತಿ ॥ ೧೯ ॥
ಮಾಂಡಲೀಯಾಶ್ಚ ಯೇ ಶೂದ್ರಾಸ್ತೇಷಾಮರ್ಧಕರಂ ತ್ವಿದಂ ।
ಅಡಾಲಜಾನಾಂ ತ್ರಿಗುಣಂ ಗೋಭುಜಾನಾಂ ಚತುರ್ಗುಣಂ ॥ ೨೦ ॥
ಇತ್ಯೇತತ್ಕಥಿತಂ ಸರ್ವಮನ್ಯಚ್ಚ ಶೂದ್ರಜಾತಿಷು ।
ಯಸ್ಯ ದೋಷಸ್ತು ಹತ್ಯಾಯಾಃ ಸಮುದ್ಭೂತೋ ವಿಧೇರ್ವಶಾತ್ ॥೨೧॥
ದಂಡಸ್ತು ವಿಧಿವತ್ತಸ್ಯ ಕರ್ತವ್ಯೋ ವೇದಶಾಸ್ತ್ರಿಭಿಃ ।
ಅನ್ಯಾಯೋ ನ್ಯಾಯವಾದೀಸ್ಯಾನ್ನಿರ್ದೋಷೇ ದೋಷದಾಯಕಃ ॥ ೨೨ ॥

---

ಕುಂಕುಮಾದಿಗಳಿಂದ ಅರ್ಚಿಸಿ ಷಷ್ಠೀದೇವಿಯನ್ನು ವಸ್ತ್ರ, ಬಿಲ್ವಫಲ, ಐದು ಬಳ್ಳ ಧಾನ್ಯಗಳಿಂದ ತುಪ್ಪ ಸಹಿತವಾಗಿ ಐದು ಬಲಿಯನ್ನಿತ್ತು ಪೂಜಿಸಬೇಕು. ಸಂತಾನವೃದ್ಧಿಗಾಗಿ ದ್ರವ್ಯಲೋಭವಿಲ್ಲದೆ ಅರ್ಚಿಸಬೇಕು.

೧೭. ಸಂತತಿವೃದ್ಧಿಗಾಗಿ ವ್ಯಯಮಾಡಿದ ದ್ರವ್ಯವೇ ದ್ರವ್ಯವೆನ್ನಿಸಿಕೊಳ್ಳುವುದು. ಶಿಶುವು ಜನಿಸಿದ ಕೂಡಲೆ ಶಾಸ್ತ್ರರೀತಿಯಿಂದ ಜಾತಕರ್ಮವನ್ನು ಮಾಡಬೇಕು.

೧೮–೨೦. ಬ್ರಾಹ್ಮಣರು ತಮಗೆ ಕಲ್ಪಿತವಾದ ವೃತ್ತಿಯ ಅರ್ಧಭಾಗವನ್ನು ಜಾತಕರ್ಮದಲ್ಲಿ ಗೋತ್ರದೇವಿಗೆ ಒಪ್ಪಿಸಬೇಕು. ವೈಶ್ಯನು ಅದರ ಇಮ್ಮಡಿಯನ್ನೂ, ಮಾಂಡಲೀಯರೆಂಬ ಶೂದ್ರರು ಅದರ ಅರ್ಧಭಾಗವನ್ನೂ, ಅಡಾಲಜರು ಅದರ ಮುಮ್ಮಡಿಯನ್ನೂ, ಗೋಭುಜರು ಅದರ ಚತುರ್ಗುಣವನ್ನು ಒಪ್ಪಿಸಬೇಕು.

೨೧–೨೫. ಶೂದ್ರರು ಕೊಲೆಯನ್ನು ಮಾಡಿದರೆ ಅವರಿಗೆ ವೇದಶಾಸ್ತ್ರಜ್ಞರು ಶಾಸ್ತ್ರರೀತಿಯಿಂದ ದಂಡವನ್ನು ವಿಧಿಸಬೇಕು. ಅನ್ಯಾಯವನ್ನು ಮಾಡುವ ನ್ಯಾಯಾಧಿಪತಿಯೂ, ನಿರ್ದುಷ್ಟರಲ್ಲಿ ದೋಷಾರೋಪಮಾಡು

CC-0. Jangamwadi Math Collection. Digitized by eGangotri

ಪಂಕ್ತಿಭೇದಸ್ಯ ಕರ್ತಾ ಚ ಗೋಸಹಸ್ರವಧಃ ಸ್ಮೃತಃ ।
ವೃತ್ತಿಭಾಗವಿಭಜನಂ ತಥಾ ನ್ಯಾಯವಿಚಾರಣಂ ।
ಶ್ರೀರಾಮದೂತಕಸ್ಯಾಗ್ರೇ ಕರ್ತವ್ಯಮಿತಿ ನಿಶ್ಚಯಃ ॥ ೨೩ ॥
ತಸ್ಯ ಪೂಜಾಂ ಪ್ರಕುರ್ವೀತ ತದಾ ಕಾಲೇಽಥವಾ ಸದಾ ।
ತೈಲೇನ ಲೇಪಯೇತ್ತಸ್ಯ ದೇಹೇ ವೈ ವಿಘ್ನಶಾಂತಯೇ ॥ ೨೪ ॥
ಧೂಪಂ ದೀಪಂ ಫಲಂ ದದ್ಯಾತ್ಪುಷ್ಪೈರ್ನಾನಾವಿಧೈಃ ಕಿಲ ।
ಪೂಜಿತೋ ಹನುಮಾನೇವ ದದಾತಿ ತಸ್ಯ ವಾಂಛಿತಂ ॥ ೨೫ ॥
ಪ್ರತಿಪುತ್ರಂ ತು ತಸ್ಯಾಗ್ರೇ ಕುರ್ಯಾನ್ನಾಽನ್ಯತ್ರ ಕುತ್ರಚಿತ್ ।
ಶ್ರೀಮಾತಾ ಬಕುಲಸ್ವಾಮಿ ಭಾಗಧೇಯಂ ತು ಪೂರ್ವತಃ ॥ ೨೬ ॥
ಪಶ್ಚಾತ್ಪ್ರತಿಗ್ರಹಂ ವಿಪ್ರೈಃ ಕರ್ತವ್ಯಮಿತಿ ನಿಶ್ಚಿತಂ ।
ಸಮಾಗಮೇಷು ವಿಪ್ರಾಣಾಂ ನ್ಯಾಯಾಽನ್ಯಾಯ ವಿನಿರ್ಣಯೇ ॥ ೨೭ ॥
ನಿರ್ಣಯಂ ಹೃದಯೇ ಧೃತ್ವಾ ತತ್ರಸ್ಥಂ ಶ್ರಾವಯೇದ್ದ್ವಿಜಾನ್ ।
ಕೇವಲಂ ಧರ್ಮಬುದ್ಧ್ಯಾ ಚ ಪಕ್ಷಪಾತಂ ವಿವರ್ಜಯೇತ್ ॥ ೨೮ ॥
ಸರ್ವೇಷಾಂ ಸಂಮತಂ ಕಾರ್ಯಂ ತದ್ಧ್ಯವಿಕೃತಮೇವ ಚ ।
ಆಕಾರಿತಸ್ತತೋ ವಿಪ್ರಃ ಸಭಾಯಾಂ ಭಯಮೇತಿ ಚೇತ್ ॥ ೨೯ ॥

---

ವವನೂ, ಪಂಕ್ತಿಭೇದಮಾಡುವವನೂ ಸಾವಿರ ಗೋವುಗಳನ್ನು ವಧಿಸಿದಷ್ಟು ಪಾಪವುಳ್ಳವನಾಗುವನು. ವೃತ್ತಿ ವಿಭಾಗವನ್ನೂ ನ್ಯಾಯ ವಿಚಾರವನ್ನೂ ಹನುಮಂತನ ಮುಂದೆ ಮಾಡಬೇಕು.

೨೪–೨೫. ಆ ಸಮಯದಲ್ಲಿ ಅಥವಾ ಯಾವಾಗಲೂ ಆಂಜನೇಯನನ್ನು ಪೂಜಿಸಬೇಕು. ವಿಘ್ನಶಾಂತಿಗಾಗಿ ಅವನ ದೇಹಕ್ಕೆ ಎಣ್ಣೆಯನ್ನು ಹಚ್ಚಿ ಧೂಪ, ದೀಪ, ಫಲ, ಪುಷ್ಪಗಳಿಂದ ಪೂಜಿಸಿದರೆ ಆಂಜನೇಯನು ಇಷ್ಟಾರ್ಥವನ್ನೀಯುವನು.

೨೬. ಪ್ರತಿಯೊಬ್ಬ ಪುತ್ರನ ಜನನ ಕಾಲದಲ್ಲಿಯೂ ಆ ಆಂಜನೇಯನ ಮುಂದೆಯೇ ಜಾತಕರ್ಮವನ್ನು ಮಾಡಬೇಕು. ಹಿಂದೆ ಹೇಳಿದಂತೆ ಶ್ರೀಮಾತೆ ಬಕುಲಸ್ವಾಮಿಯರಿಗೆ ಮೊದಲು ಭಾಗವನ್ನೀಯಬೇಕು.

೨೭–೩೧. ಅನಂತರ ಬ್ರಾಹ್ಮಣರು ದಾನಸ್ವೀಕಾರಮಾಡಬೇಕು. ನ್ಯಾಯ ಮತ್ತು ಅನ್ಯಾಯಗಳ ನಿರ್ಣಯ ವಿಷಯದಲ್ಲಿ ಬ್ರಾಹ್ಮಣರ ಸಭೆಯನ್ನು ಸೇರಿಸಿ ಅವರಿಗೆ ವಿಷಯವನ್ನು ತಿಳಿಸಬೇಕು. ಪಕ್ಷಪಾತವನ್ನು ತ್ಯಜಿಸಿ ಕೇವಲ ಧರ್ಮ ಬುದ್ಧಿಯಿಂದ ಆ ಬ್ರಾಹ್ಮಣರ ಒಂದೇ ವಿಧವಾದ ಸಮ್ಮತಿಯನ್ನು ಪಡೆಯಬೇಕು. ಸಭೆಯಲ್ಲಿ ಕರೆದಾಗ ಬ್ರಾಹ್ಮಣನು ಭಯಕೊಂಡರೆ ನಿರ್ಣಯ ವಿಷಯದಲ್ಲಿ ಅವನ ಮಾತನ್ನು ಕೇಳಕೂಡದು. ಸಮಸ್ತ ದ್ವಿಜರು ಸೇರಿ ಬಹಿಷ್ಕರಿಸಿದವ

CC-0. Jangamwadi Math Collection. Digitized by eGangotri

ನ ತಸ್ಯ ವಾಕ್ಯಂ ಶ್ರೋತವ್ಯಂ ನಿರ್ಣೀತಾಽರ್ಥನಿವಾರಣೇ ।
ಯಸ್ಯ ವರ್ಜಸ್ತು ಕ್ರಿಯತೇ ಮಿಲಿತ್ವಾ ಸರ್ವವಾಡವೈಃ ॥ ೩೦ ॥
ಸ್ನಾನ ಪಾನಾದಿಕಂ ಸರ್ವಂ ಕಾರ್ಯಂ ತೇನ ವಿವರ್ಜಯೇತ್ ।
ತಸ್ಯ ಕನ್ಯಾ ನ ದಾತವ್ಯಾ ತತ್ಸಂಸರ್ಗೀ ಚ ತಾದೃಶಃ ॥ ೩೧ ॥
ತತೋ ದಂಡಂ ಪ್ರಕುರ್ವೀತ ಸರ್ವೈರೇವ ದ್ವಿಜೋತ್ತಮೈಃ ।
ಭೋಜನಂ ಕನ್ಯಕಾ ದಾನಮಿತಿ ದಾಶರಥೇರ್ಮತಂ ॥ ೩೨ ॥
ಯತ್ಕಿಂಚಿತ್ಕುರುತೇ ಪಾಪಂ ಲಬ್ಧಂ ಸ್ಥಲಮಥಾಽಪಿವಾ ।
ಶುಷ್ಕಾದ್ರ್ರಂ ವಸತೇ ಚಾಽನ್ನೇ ತಸ್ಮಾದನ್ನಂ ಪರಿತ್ಯಜೇತ್ ॥ ೩೩ ॥
ಕುರ್ವಂಸ್ತತ್ಪಾಪಭಾಗೀಸ್ಯಾತ್ತಸ್ಯ ದಂಡೋ ಯಥಾವಿಧಿ ।
ನ್ಯಾಯಂ ನ ಪಶ್ಯತೇ ಯಸ್ತು ಶಕ್ತೌ ಸತ್ಯಾಂ ಸದಾಯತಃ ॥ ೩೪ ॥
ಪಾಪಭಾಗೀ ಸ ವಿಜ್ಞೇಯ ಇತಿ ಸತ್ಯಂ ನ ಸಂಶಯಃ ।
ಉತ್ಕೋಚಂ ಯಸ್ತು ಗೃಹ್ಣಾತಿ ಪಾಪಿನಾಂ ದುಷ್ಟಕರ್ಮಿಣಾಂ ।
ಸಕಲಂ ಚ ಭವೇತ್ತಸ್ಯ ಪಾಪಂ ನೈವಾಽತ್ರ ಸಂಶಯಃ ॥ ೩೫ ॥
ತಸ್ಯಾಽನ್ನಂ ಗೃಹ್ಯತೇ ನೈವ ಕನ್ಯಾಽಪಿ ನ ಕದಾಚನ ।
ಹಿತಮಾಚರತೇ ಯಸ್ತು ಪುತ್ರಾಣಾಮಪಿ ವೈ ನರಃ ॥ ೩೬ ॥
ಸ ಏತಾನ್ನಿಯಮಾನ್ಸರ್ವಾನ್ಪಾಲಯೇನ್ನಾಽತ್ರ ಸಂಶಯಃ ।
ಏವಂ ಪತ್ರಂ ಲಿಖಿತ್ವಾ ತು ವಾಡವಾಸ್ತೇ ಪ್ರಹರ್ಷಿತಾಃ ॥ ೩೭ ॥

---

ನೊಡನೆ ಪಾನಾದಿ ಸಕಲಕಾರ್ಯಗಳನ್ನು ತ್ಯಜಿಸಬೇಕು. ಅವನಿಗೆ ಕನ್ಯೆಯನ್ನು ಕೊಡಬಾರದು. ಅವನೊಡನೆ ಸಂಬಂಧವನ್ನು ಮಾಡಿದವನೂ ಅವನಂತೆಯೇ ಆಗುವನು.

೩೨. ಆದುದರಿಂದ ಎಲ್ಲ ಬ್ರಾಹ್ಮಣರಿಗೂ ಸಮ್ಮತವಾದ ಶಿಕ್ಷೆಯನ್ನು ಮಾಡಿ ಅನಂತರ ಅವನಿಗೆ ಭೋಜನವನ್ನೂ ಕನ್ಯೆಯನ್ನೂ ಕೊಡಬಹುದು.

೩೩–೩೮. ಸ್ಥಳವನ್ನಾಗಲಿ, ಒಣಶುಂಠಿಯನ್ನಾಗಲಿ ಪಡೆಯಲು ಪಾಪ ಮಾಡಿದವನ ಅನ್ನವನ್ನು ತ್ಯಜಿಸಬೇಕು. ಹಾಗೆ ಅನ್ನವನ್ನು ಪರಿಗ್ರಹಿಸಿದರೆ ಅವನ ಪಾಪವು ಇವನಿಗೆ ಬರುವುದರಿಂದ ಇವನು ಶಾಸ್ತ್ರೋಕ್ತವಾದ ಶಿಕ್ಷೆಗೆ ಗುರಿಯಾಗುತ್ತಾನೆ. ಶಕ್ತಿಯಿದ್ದರೂ ನ್ಯಾಯವನ್ನು ವಿಮರ್ಶಿಸದಿರುವವನು ಪಾಪಿಷ್ಠನು. ದುಷ್ಕಾರ್ಯನಿರತರಾದ ಪಾಪಿಗಳಿಂದ ಲಂಚವನ್ನು ಪಡೆದರೆ ಪಾಪಿಗಳ ಪಾಪವು ಲಂಚವನ್ನು ತೆಗೆದುಕೊಂಡವರಿಗೆ ಸಂಭವಿಸುವುದು. ಅವನ ಅನ್ನವನ್ನೂ, ಕನ್ಯೆಯನ್ನೂ ತೆಗೆದುಕೊಳ್ಳಬಾರದು. ತಮ್ಮ ಮಕ್ಕಳಿಗೆ ಹಿತವನ್ನು ಬಯಸುವ ನರನು ಈ ನಿಯಮಗಳನ್ನು ಅವಶ್ಯವಾಗಿ ಪಾಲಿಸಬೇಕು. ಹೀಗೆ ಬ್ರಾಹ್ಮಣರು ನಿಯಮ ಪತ್ರವನ್ನು ಬರೆದು ಸಂತೋಷಗೊಂಡರು.

CC-0. Jangamwadi Math Collection. Digitized by eGangotri

ಪ್ರಾಪ್ತೇ ಕಲಿಯುಗೇ ಘೋರೇ ಯಥಾಪಾಪಂ ನ ಕುರ್ವತೇ ।
ಇತಿ ಜ್ಞಾತ್ವಾ ತು ಸರ್ವೇ ತೇ ನ್ಯಾಯಧರ್ಮಂ ಪ್ರಚಕ್ರಿರೇ ॥ ೩೮ ॥
ವ್ಯಾಸ ಉವಾಚ :—
ಕಲೌ ಪ್ರಾಪ್ತೇ ದ್ವಿಜಾಃ ಸರ್ವೇ ಸ್ಥಾನಭ್ರಷ್ಟಾ ಯತಸ್ತತಃ ।
ಪಕ್ಷಮುತ್ಕಲಂ ಗ್ರಹೀಷ್ಯಂತಿ ತಥಾಸ್ಯುಃ ಪಕ್ಷಪಾತಿನಃ ॥ ೩೯ ॥
ಭೋಕ್ಷ್ಯಂತೇ ಮ್ಲೇಚ್ಛಕಾನ್ಗ್ರಾಮಾನ್ಕೋಲಾವಿಧ್ವಂಸಿಭಿಃ ಕಿಲ ।
ವೇದಭ್ರಷ್ಟಾಶ್ಚ ತೇ ವಿಪ್ರಾ ಭವಿಷ್ಯಂತಿ ಕಲೌ ಯುಗೇ ॥ ೪೦ ॥
ಯುಧಿಷ್ಠಿರ ಉವಾಚ :—
ದೇಶೇ ದೇಶೇ ಗಮಿಷ್ಯಂತಿ ತೇ ವಿಪ್ರಾ ವಣಿಜಸ್ತಥಾ ।
ಕಥಂ ವೈ ಜ್ಞಾಯತೇ ಸರ್ವೈಃ ಕೇನ ಚಿಹ್ನೇನ ಮಾರಿಷ ॥ ೪೧ ॥
ಯಸ್ಮಿನ್ಗೋತ್ರೇ ಸಮುತ್ಪನ್ನಾ ವಾಡವಾ ಯೇ ಮಹಾಬಲಾಃ ॥ ೪೨ ॥
ವ್ಯಾಸ ಉವಾಚ :—
ಜ್ಞಾಯತೇ ಗೋತ್ರ ಸಂಜ್ಞಾಽಥ ಕೇಚಿಚ್ಚೈವ ಪರಾಕ್ರಮೈಃ ।
ಯಸ್ಯ ಯಸ್ಯ ಚ ಯತ್ಕರ್ಮ ತಸ್ಯ ತಸ್ಯಾಽವಟಂಕಕಃ ॥ ೪೩ ॥
ಅವಟಂಕೈರ್ಹಿ ಜ್ಞಾಯಂತೇ ನಾಽನ್ಯಥಾ ಜ್ಞಾಯತೇ ಕ್ವಚಿತ್ ।
ಗೋತ್ರೈಶ್ಚ ಪ್ರವರೈಶ್ಚೈವ ಅವಟಂಕೈ ರ್ನೃಪಾತ್ಮಜ ॥ ೪೪ ॥

---

ಘೋರ ಕಲಿಯುಗದಲ್ಲಿ ಜನರು ಪಾಪವನ್ನೆಸಗದಂತೆ ಆ ಬ್ರಾಹ್ಮಣರು ನ್ಯಾಯ ಧರ್ಮವನ್ನು ನಿರ್ಮಿಸಿದರು.

೩೯. ವ್ಯಾಸನು ಕೇಳುತ್ತಾನೆ:—ಕಲಿಯುಗದಲ್ಲಿ ಸಮಸ್ತ ಬ್ರಾಹ್ಮಣರು ಸ್ಥಾನಭ್ರಷ್ಟರೂ, ಪಕ್ಷಪಾತಿಗಳೂ ಆಗುವರು.

೪೦. ಮ್ಲೇಚ್ಛಗ್ರಾಮಗಳಲ್ಲಿ ಹಂದಿಗಳನ್ನು ಕೊಲ್ಲುವವರೊಡನೆ ವಾಸಿಸುತ್ತ ವೇದಭ್ರಷ್ಟರಾಗುವರು.

೪೧–೪೨. ಯುಧಿಷ್ಠಿರನು ಹೆಳುತ್ತಾನೆ:—ದೇಶದೇಶಕ್ಕೆ ತೆರಳುತ್ತಿರುವ ಬ್ರಾಹ್ಮಣರು ಯಾವ ಗೋತ್ರದಲ್ಲಿ ಜನಿಸಿದವರೆಂಬುದನ್ನು ಯಾವ ಚಿಹ್ನೆಗಳಿಂದ ಕಂಡುಹಿಡಿಯಬಹುದೆಂಬುದನ್ನು ತಿಳಿಸು.

೪೩. ಗೋತ್ರನಾಮವನ್ನು ಆಯಾ ಬ್ರಾಹ್ಮಣನ ಶಕ್ತಿಯಿಂದ ತಿಳಿಯಬಹುದು. ಯಾವನು ಯಾವ ಕೆಲಸವನ್ನು ಮಾಡುವನೊ ಅವನಿಗೆ ಅದೇ ಅವಟಂಕವು.

೪೪. ಮೋಥ ಬ್ರಾಹ್ಮಣರನ್ನು ಅವಟಂಕ, ಗೋತ್ರ, ಪ್ರವರಗಳಿಂದಲೇ ಗುರುತಿಸಬೇಕಾಗುತ್ತದೆ.

CC-0. Jangamwadi Math Collection. Digitized by eGangotri

ಜ್ಞಾಯಂತೇ ಹಿ ದ್ವಿಜಾ ರಾಜನ್ಸೋಽಥ ಬ್ರಾಹ್ಮಣ ಸತ್ತಮಾಃ ॥ ೪೫ ॥

ಯುಧಿಷ್ಠಿರ ಉವಾಚ :—

ಗೋತ್ರೈಶ್ಚ ಪ್ರವರೈಶ್ಚೈವ ಶ್ರುತಾ ಏತೇ ತವಾನನಾತ್ ।
ಕಾಂವಾ ಶಾಖಾಮಧೀಯಾನಾಸ್ತನ್ಮೇ ಬ್ರೂಹಿ ಪಿತಾಮಹ ॥ ೪೬ ॥

ವ್ಯಾಸ ಉವಾಚ :—

ಜ್ಞಾಯಂತೇ ಯತ್ರ ಯತ್ರಸ್ಥಾ ಮಾಧ್ಯಂದಿನೀಯಾ ಮಹಾಬಲಾಃ ।
ಕೌಥುಮಿಂ ಚ ಸಮಾಶ್ರಿತ್ಯ ಕೇಚಿದ್ವಿಪ್ರಾ ಗುಣಾನ್ವಿತಾಃ ॥ ೪೭ ॥
ಋಗಥರ್ವಣಜಾ ಶಾಖಾ ನಷ್ಟಾಸಾ ಚ ಮಹಾಮತೇ ।
ಏವಂ ವೈ ವರ್ತಮಾನಾಸ್ತೇ ವಾಡವಾ ಧರ್ಮಸಂಭವಾಃ ॥ ೪೮ ॥
ಧರ್ಮಾರಣ್ಯೇ ಮಹಾಭಾಗಾಃ ಪುತ್ರಪೌತ್ರಾಽನ್ವಿತಾಽಭವನ್ ।
ಶೂದ್ರಾಃ ಸರ್ವೇ ಮಹಾಭಾಗಾಃ ಪುತ್ರಪೌತ್ರ ಸಮಾವೃತಾಃ ॥ ೪೯ ॥
ಧರ್ಮಾರಣ್ಯೇ ಮಹಾತೀರ್ಥೇ ಸರ್ವೇ ತೇ ದ್ವಿಜಸೇವಕಾಃ ।
ಅಭವನ್ರಾಮಭಕ್ತಾಶ್ಚ ರಾಮಾಜ್ಞಾಂ ಪಾಲಯಂತಿ ಚ ॥ ೫೦ ॥
ಆಜ್ಞಾಮತ್ಯಾಽಽದರೇಣೇಹ ಹನೂಮಂತಶ್ಚ ವೀರ್ಯವಾನ್ ।
ಪಾಲಯೇತ್ಸೋಽಪಿ ಚೇದಾನೀಂ ಸಂಪ್ರಾಪ್ತೇ ವೈ ಕಲೌ ಯುಗೇ ॥ ೫೧ ॥
ಅದೃಷ್ಟರೂಪೀ ಹನುಮಾಂಸ್ತತ್ರಭ್ರಮತಿ ನಿತ್ಯಶಃ ।
ತ್ರೈವಿದ್ಯಾ ವಾಡವಾ ಯತ್ರ ಚಾತುರ್ವಿದ್ಯಾಸ್ತಥೈವ ಚ ॥ ೫೨ ॥

---

೪೫–೪೬. ಯುಧಿಷ್ಠಿರನು ಕೇಳುತ್ತಾನೆ:—ಪಿತಾಮಹ! ಈ ಬ್ರಾಹ್ಮಣರ ಗೋತ್ರಪ್ರವರಗಳನ್ನು ನಿನ್ನ ಮುಖದಿಂದ ಕೇಳಿದೆನು. ಇವರು ಯಾವ ಶಾಖೆಯನ್ನು ಅಧ್ಯಯನ ಮಾಡುತ್ತಾರೆಂಬುದನ್ನು ತಿಳಿಸು.

೪೭–೫೦. ವ್ಯಾಸನು ಹೇಳುತ್ತಾನೆ:—ಧರ್ಮಾರಣ್ಯದಲ್ಲಿರುವ ಬ್ರಾಹ್ಮಣರೆಲ್ಲ ಮಾಧ್ಯಂದಿನರೇ, ಕೆಲವರು ಮಾತ್ರ ಕೌಥಮಿ ಶಾಖಾವಲಂಬಿಗಳಾಗಿ ಪುತ್ರ ಪೌತ್ರಾದಿಗಳಿಂದ ಸಹಿತರಾದರು. ಋಗ್ವೇದ ಮತ್ತು ಅಥರ್ವಣ ವೇದಗಳಿಂದೊಡೆದ ಶಾಖೆಗಳು ನಷ್ಟವಾದುವು. ಶೂದ್ರರೆಲ್ಲ ಪುತ್ರ ಪೌತ್ರರೊಡನೆ ದ್ವಿಜಸೇವಕರೂ, ರಾಮಭಕ್ತರೂ ಆಗಿ ರಾಮನ ಆಜ್ಞೆಯನ್ನು ನಡೆಯಿಸುವರು.

೫೧. ಕಲಿಯುಗದಲ್ಲಿ ಹನುಮಂತನು ರಾಮನ ಅಪ್ಪಣೆಯಂತೆ ಶ್ರದ್ಧೆಯಿಂದ ಇವರನ್ನು ಕಾಪಾಡುತ್ತಾನೆ.

೫೨. ತ್ರೈವಿದ್ಯರೂ ಚಾತುರ್ವಿದ್ಯರೂ ಇರುವ ಸ್ಥಳದಲ್ಲಿ ಹನುಮಂತನು ಅದೃಶ್ಯನಾಗಿ ನಿತ್ಯವೂ ಸಂಚರಿಸುತ್ತಾನೆ.

CC-0. Jangamwadi Math Collection. Digitized by eGangotri

ಸಭಾಯಾಮುಪ ವಿಷ್ಟಾ ಯೇಽನ್ಯಾಯಾತ್ಪಾಪಂ ಪ್ರಕುರ್ವತೇ ।
ಜಯೋಹಿ ನ್ಯಾಯಕರ್ತೄಣಾಮಜಯೋಽನ್ಯಾಯಕಾರಿಣಾಂ ॥ ೫೩ ॥
ಸಾಪರಾಧೇ ಯಸ್ತು ಪುತ್ರೇ ತೇತೇ ಭ್ರಾತರಿ ಚಾಽಪಿ ವಾ ।
ಪಕ್ಷಪಾತಂ ಪ್ರಕುರ್ವೀತ ತಸ್ಯ ಕುಪ್ಯತಿ ವಾಯುಜಃ ॥ ೫೪ ॥
ಕುಪಿತೋ ಹನುಮಾನೇಷ ಧನನಾಶಂ ಕರೋತಿ ವೈ ।
ಪುತ್ರನಾಶಂ ಕರೋತ್ಯೇವ ಧಾಮನಾಶಂ ತಥೈವ ಚ ॥ ೫೫ ॥
ಸೇವಾರ್ಥಂ ನಿರ್ಮಿತಃ ಶೂದ್ರೋ ನ ವಿಪ್ರಾನ್ಪರಿಷೇವತೇ ।
ವೃತ್ತಿಂ ವಾ ನದದಾತ್ಯೇವ ಹನುಮಾಂಸ್ತಸ್ಯ ಕುಪ್ಯತಿ ॥ ೫೬ ॥
ಅರ್ಥನಾಶಂ ಪುತ್ರನಾಶಂ ಸ್ಥಾನನಾಶಂ ಮಹಾಭಯಂ ।
ಕುರುತೇ ವಾಯುಪುತ್ರೋ ಹಿ ರಾಮವಾಕ್ಯಮನುಸ್ಮರನ್ ॥ ೫೭ ॥
ಯತ್ರ ಕುತ್ರ ಸ್ಥಿತಾ ವಿಪ್ರಾಃ ಶೂದ್ರಾ ವಾ ನೃಪಸತ್ತಮ ।
ನ ನಿರ್ಧನಾ ಭವೇಯುಸ್ತೇ ಪ್ರಸಾದಾದ್ರಾಘವಸ್ಯ ಚ ॥ ೫೮ ॥
ಯೋ ಮೂಢಶ್ಚಾಽಪ್ಯಧರ್ಮಾತ್ಮಾ ಪಾಪಪಾಷಂಡಮಾಶ್ರಿತಃ ।
ನಿಜಾನ್ವಿಪ್ರಾನ್ಪರಿತ್ಯಜ್ಯ ಪರಜ್ಞಾತೀಂಶ್ಚ ಮನ್ಯತೇ ॥ ೫೯ ॥
ತಸ್ಯ ಪೂರ್ವಕೃತಂ ಪುಣ್ಯಂ ಭಸ್ಮೀಭವತಿ ನಾಽನ್ಯಥಾ ।
ಅನ್ಯೇಷಾಂ ದೀಯತೇ ದಾನಂ ಸ್ವಲ್ಪಂ ವಾ ಯದಿ ವಾ ಬಹು ॥ ೬೦ ॥

---

೫೩. ಸಭೆಯಲ್ಲಿ ಕುಳಿತವರು ಅನ್ಯಾಯದಿಂದ ಪಾಪವನ್ನು ಮಾಡಿದರೆ ಅವರಿಗೆ ಅಪಜಯವೂ, ನ್ಯಾಯಸ್ಥರಿಗೆ ಜಯವೂ ಲಭಿಸುವುದು.

೫೪. ತಪ್ಪುಮಾಡಿದ ಮಗ, ತಂದೆ, ಸಹೋದರರಲ್ಲಿಯೂ ಪಕ್ಷಪಾತ ಮಾಡಿದರೆ ವಾಯುಪುತ್ರನು ಅವನಲ್ಲಿ ಸಿಟ್ಟಾಗುವನು.

೫೫–೫೬. ಕೋಪಗೊಂಡ ಅವನು ಧನ, ಪುತ್ರ, ಭವನಗಳನ್ನು ಹಾಳು ಮಾಡುವನು. ಸೇವೆಗಾಗಿ ನಿರ್ಮಿತನಾದ ಶೂದ್ರನು ಬ್ರಾಹ್ಮಣರನ್ನು ಸೇವಿಸ ದಿದ್ದರೂ, ವೃತ್ತಿಯನ್ನು ಕೊಡದಿದ್ದರೂ ಹನುಮಂತನು ಅವನಲ್ಲಿ ಕೋಪ ಗೊಳ್ಳುವನು.

೫೭. ರಾಮನ ವಾಕ್ಯದಂತೆ ಧನ, ಪುತ್ರ, ಸ್ಥಾನಗಳನ್ನು ಹಾಳುಮಾಡಿ ಅತ್ಯಂತ ಭಯವನ್ನುಂಟುಮಾಡುವನು.

೫೮. ಆ ಧರ್ಮಾರಣ್ಯದವರು ಬ್ರಾಹ್ಮಣರಾಗಲಿ, ಶೂದ್ರರಾಗಲಿ ಅವರು ಎಲ್ಲಿದ್ದರೂ ರಾಘವನ ಅನುಗ್ರಹದಿಂದ ಬಡವರಾಗುವುದಿಲ್ಲ.

೫೯–೬೧. ಮೂಢನೂ, ಅಧರ್ಮಿಷ್ಠನೂ, ಪಾಪಿಯಾದ ಪಾಷಂಡನನ್ನು ಆಶ್ರಯಿಸಿದವನೂ ಆಗಿ ಬ್ರಾಹ್ಮಣನು ಬ್ರಾಹ್ಮಣರನ್ನು ಬಿಟ್ಟು ಪರರನ್ನು ಜ್ಞಾತಿಗಳನ್ನಾಗಿ ತಿಳಿದರೆ ಅವನು ಹಿಂದೆಮಾಡಿದ ಪುಣ್ಯವು ಬೂದಿಯಾಗು

CC-0. Jangamwadi Math Collection. Digitized by eGangotri

ಯಥಾ ಭವತಿ ವೈ ಪೂರ್ವಂ ಬ್ರಹ್ಮವಿಷ್ಣುಶಿವೈಃ ಕೃತಂ ।
ತಸ್ಯ ದೇವಾ ನ ಗೃಹ್ಣಂತಿ ಹವ್ಯಂ ಕವ್ಯಂ ಚ ಪೂರ್ವಜಾಃ ॥ ೬೧ ॥
ವಂಚಯಿತ್ವಾ ನಿಜಾನ್ವಿಪ್ರಾನನ್ಯೇಭ್ಯಃ ಪ್ರದದೇತು ಯಃ ।
ತಸ್ಯ ಜನ್ಮಾರ್ಜಿತಂ ಪುಣ್ಯಂ ಭಸ್ಮೀಭವತಿ ತತ್ಕ್ಷಣಾತ್ ॥ ೬೨ ॥
ಬ್ರಹ್ಮವಿಷ್ಣು ಶಿವೈಶ್ಚೈವ ಪೂಜಿತಾ ಯೇ ದ್ವಿಜೋತ್ತಮಾಃ ।
ತೇಷಾಂ ಯೇ ವಿಮುಖಾಃ ಶೂದ್ರಾ ರೌರವೇ ನಿವಸಂತಿ ತೇ ॥ ೬೩ ॥
ಯೋ ಲೌಲ್ಯಾಚ್ಚ ಕುಲಚಾರಂ ಗೋತ್ರಾಚಾರಂ ಪ್ರಲೋಪಯೇತ್ ।
ಸ್ವಾಚಾರಂ ಯೋ ನ ಕುರ್ವೀತ ಕದಾಚಿದ್ವೈ ವಿಮೋಹಿತಃ ॥ ೬೪ ॥
ಸರ್ವನಾಶೋ ಭವೇತ್ತಸ್ಯ ಭಸ್ಮೀ ಭವತಿ ತತ್ಕ್ಷಣಾತ್ ।
ತಸ್ಮಾತ್ಸರ್ವಃ ಕುಲಾಚಾರಃ ಸ್ಥಾನಾಚಾರ ಸ್ತಥೈವ ಚ ॥ ೬೫ ॥
ಗೋತ್ರಾಚಾರಃ ಪಾಲನೀಯೋ ಯಥಾ ವಿತ್ತಾಽನುಸಾರತಃ ।
ಏವಂ ತೇ ಕಥಿತಂ ರಾಜನ್ಧರ್ಮಾಽರಣ್ಯಂ ಪುರಾತನಂ ॥ ೬೬ ॥
ಸ್ಥಾಪಿತಂ ದೇವದೇವೈಶ್ಚ ಬ್ರಹ್ಮವಿಷ್ಣು ಶಿವಾದಿಭಿಃ ।
ಧರ್ಮಾಽರಣ್ಯಂ ಕೃತಯುಗೇ ತ್ರೇತಾಯಾಂ ಸತ್ಯಮಂದಿರಂ ।
ದ್ವಾಪರೇ ವೇದಭವನಂ ಕಲೌ ಮೋಹೇರಕಂ ಸ್ಮೃತಂ ॥ ೬೭ ॥

---

ವುದು. ಹಿಂದೆ ಬ್ರಹ್ಮಾದಿಗಳು ಮಾಡಿದ ನಿಯಮವನ್ನು ಬಿಟ್ಟು ಬೇರೆಯವರಿಗೆ ಸ್ವಲ್ಪವಾಗಲಿ ಹೆಚ್ಚಾಗಲಿ ದಾನವನ್ನುಮಾಡಿದರೆ ಅವನು ಕೊಟ್ಟ ಹವ್ಯ ಕವ್ಯಗಳನ್ನು ದೇವತೆಗಳೂ, ಪಿತೃಗಳೂ ಸ್ವೀಕರಿಸುವುದಿಲ್ಲ.

೬೨. ತಮ್ಮ ಬ್ರಾಹ್ಮಣರನ್ನು ಮೋಸಗೊಳಿಸಿ ಬೇರೆಯವರಿಗೆ ದಾನಮಾಡಿದವನ ಪುಣ್ಯವೆಲ್ಲ ಕೂಡಲೆ ಹಾಳಾಗುವುದು.

೬೩. ಬ್ರಹ್ಮವಿಷ್ಣುಶಿವರು ಪೂಜಿಸಿದ ಬ್ರಾಹ್ಮಣರಲ್ಲಿ ವಿಶ್ವಾಸಮಾಡದ ಶೂದ್ರರು ರೌರವ ನರಕದಲ್ಲಿ ವಾಸಿಸುವರು.

೬೪–೬೭. ಅತಿ ಚಾಪಲ್ಯದಿಂದ ಕುಲಾಚಾರವನ್ನೂ, ಗೋತ್ರಾಚಾರವನ್ನೂ, ಸ್ವಾಚಾರವನ್ನೂ ಕಾಪಾಡದ ಮನುಷ್ಯನ ಸಕಲವೂ ಕೂಡಲೆ ಬೂದಿಯಾಗುವುದು. ಆದುದರಿಂದ ತನ್ನ ಐಶ್ವರ್ಯಕ್ಕನುಸಾರವಾಗಿ ಪ್ರತಿಯೊಬ್ಬನೂ ಕುಲ, ಸ್ಥಾನ, ಗೋತ್ರಗಳ ಆಚಾರಗಳನ್ನು ಪಾಲಿಸಬೇಕು. ಮಹಾರಾಜ! ಬ್ರಹ್ಮಾದಿಗಳಿಂದ ಸ್ಥಾಪಿತವಾದ ಪುರಾತನವಾಗಿರುವ ಧರ್ಮಾರಣ್ಯದ ವಿಷಯವನ್ನು ನಿನಗೆ ತಿಳಿಸಿರುವೆನು. ಈ ಕ್ಷೇತ್ರವು ಕೃತಯುಗದಲ್ಲಿ ಧರ್ಮಾರಣ್ಯವೆಂದೂ, ತ್ರೇತಾಯುಗದಲ್ಲಿ ಸತ್ಯಮಂದಿರವೆಂದೂ, ದ್ವಾಪರಯುಗದಲ್ಲಿ ವೇದಭವನವೆಂದೂ, ಕಲಿಯುಗದಲ್ಲಿ ಮೋಹೇರಕಪುರವೆಂದೂ ಪ್ರಖ್ಯಾತವಾಯಿತು.

CC-0. Jangamwadi Math Collection. Digitized by eGangotri

ಬ್ರಹ್ಮೋವಾಚ :—

ಯ ಇದಂ ಶೃಣುಯಾತ್ಪುತ್ರ ಶ್ರದ್ಧಯಾ ಪರಯಾ ಯುತಃ ।
ಧರ್ಮಾರಣ್ಯಸ್ಯ ಮಾಹಾತ್ಮ್ಯಂ ಸರ್ವಕಿಲ್ಬಿಷನಾಶನಮ್ ॥ ೧೮ ॥
ಮನೋವಾಕ್ಕಾಯಜನಿತಂ ಪಾತಕಂ ತ್ರಿವಿಧಂ ಚ ಯತ್ ।
ತತ್ಸರ್ವಂ ನಾಶಮಾಯಾತಿ ಶ್ರವಣಾತ್ಕೀರ್ತನಾತ್ಸಕೃತ್ ॥ ೧೯ ॥
ಧನ್ಯಂ ಯಶಸ್ಯಮಾಯುಷ್ಯಂ ಸುಖಸಂತಾನದಾಯಕಂ ।
ಮಾಹಾತ್ಮ್ಯಂ ಶೃಣುಯಾದ್ವತ್ಸ ಸರ್ವಸೌಖ್ಯಾಪ್ತಯೇ ನರಃ ॥ ೨೦ ॥
ಸರ್ವತೀರ್ಥೇಷು ಯತ್ಪುಣ್ಯಂ ಸರ್ವಕ್ಷೇತ್ರೇಷು ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಧರ್ಮಾರಣ್ಯಸ್ಯ ಸೇವನಾತ್ ॥ ೨೧ ॥

ನಾರದ ಉವಾಚ :—

ಧರ್ಮಾರಣ್ಯಸ್ಯ ಮಾಹಾತ್ಮ್ಯಂ ಯಚ್ಛ್ರುತಂ ತ್ವನ್ಮುಖಾಂಬುಜಾತ್ ।
ಧರ್ಮವಾಪ್ಯಾಂ ಯತ್ರ ಧರ್ಮಸ್ತಪಸ್ತೇಪೇ ಸುದುಷ್ಕರಂ ॥ ೨೨ ॥
ತಸ್ಯ ಕ್ಷೇತ್ರಸ್ಯ ಮಹಿಮಾ ಮಯಾ ತ್ವತ್ತೋಽವಧಾರಿತಃ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಧರ್ಮಾರಣ್ಯ ದಿದೃಕ್ಷಯಾ ॥ ೨೩ ॥
ತವವಾಕ್ಯ ಜಲೌಘೇನ ಪಾವಿತೋಽಹಂ ಚತುರ್ಮುಖ ॥ ೨೪ ॥

---

೧೮–೨೦. ಬ್ರಹ್ಮನು ಹೇಳುತ್ತಾನೆ:—ಮಗು! ಸಕಲಪಾಪಗಳನ್ನು ನಾಶ ಮಾಡುವ ಧರ್ಮಾರಣ್ಯ ಮಾಹಾತ್ಮ್ಯವನ್ನು ಅತಿಶ್ರದ್ಧೆಯಿಂದ ಒಂದು ಸಲ ಕೇಳಿದವನ ಮತ್ತು ಹೇಳಿದವನ ಕಾಯಿಕ, ವಾಚಿಕ, ಮಾನಸಿಕವಾದ ಮೂರು ವಿಧವಾದ ಪಾಪವೆಲ್ಲ ನಾಶವಾಗುವುದು. ಮಾನವನು ಸಕಲ ಸೌಖ್ಯವನ್ನು ಪಡೆಯಲೋಸುಗ ಪುಣ್ಯಕರವೂ, ಯಶಸ್ಕರವೂ, ಸುಖಕರವೂ, ಸಂತಾನ ದಾಯಕವೂ ಆಗಿರುವ ಧರ್ಮಾರಣ್ಯದ ಮಾಹಾತ್ಮ್ಯವನ್ನು ಕೇಳಬೇಕು.

೨೧. ಮಾನವನು ಧರ್ಮಾರಣ್ಯವನ್ನು ಸೇವಿಸುವುದರಿಂದ ಸಕಲ ತೀರ್ಥ ಕ್ಷೇತ್ರಗಳನ್ನು ಸೇವಿಸಿದ ಪುಣ್ಯವನ್ನೂ, ಫಲವನ್ನೂ ಪಡೆಯುವನು.

೨೨. ನಾರದನು ಹೇಳುತ್ತಾನೆ:—ನಿನ್ನ ಮುಖದಿಂದ ಧರ್ಮಾರಣ್ಯದ ಮಾಹಾತ್ಮ್ಯವನ್ನು ಕೇಳಿದೆನು. ಆ ಧರ್ಮಾರಣ್ಯದಲ್ಲಿರುವ ಧರ್ಮವಾಪಿಯಲ್ಲಿ ಯಮಧರ್ಮನು ದುಷ್ಕರವಾದ ತಪಸ್ಸನ್ನು ಮಾಡಿರುತ್ತಾನೆ.

೨೩. ಆ ಕ್ಷೇತ್ರದ ಮಾಹಾತ್ಮ್ಯವನ್ನು ನಾನು ನಿನ್ನಿಂದ ತಿಳಿದುಕೊಂಡಿರುವುದರಿಂದ ಅದನ್ನು ನೋಡಲು ಅಲ್ಲಿಗೆ ಹೋಗುವೆನು. ನಿನಗೆ ಮಂಗಳವಾಗಲಿ.

೨೪. ಚತುರ್ಮುಖ! ನಾನು ನಿನ್ನ ಮಾತುಗಳೆಂಬ ನೀರಿನ ಪ್ರವಾಹದಿಂದ ಪವಿತ್ರನಾದೆನು.

CC-0. Jangamwadi Math Collection. Digitized by eGangotri

ವ್ಯಾಸ ಉವಾಚ:—
ಇದಮಾಖ್ಯಾನಕಂ ಸರ್ವಂ ಕಥಿತಂ ಪಾಂಡುನಂದನ ।
ಯಚ್ಛ್ರುತ್ವಾ ಗೋಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೭೫ ॥
ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಧನವಾನ್ಭವೇತ್ ।
ರೋಗೀ ರೋಗಾತ್ಪ್ರಮುಚ್ಯೇತ ಬದ್ಧೋ ಮುಚ್ಯೇತ ಬಂಧನಾತ್ ॥ ೭೬ ॥
ವಿದ್ಯಾರ್ಥೀ ಲಭತೇ ವಿದ್ಯಾಮುತ್ತಮಾಂ ಕರ್ಮಸಾಧನಾಂ ।
ತೀರ್ಥಯಾತ್ರಾಫಲಂ ತಸ್ಯ ಕೋಟಿಕನ್ಯಾಫಲಂ ಲಭೇತ್ ॥ ೭೭ ॥
ಯಃ ಶೃಣೋತಿ ನರೋ ಭಕ್ತ್ಯಾ ನಾರೀವಾಽಥ ನರೋತ್ತಮ ।
ನಿರಯಂ ನೈವ ಪಶ್ಯಂತಿ ಏಕೋತ್ತರಶತೈಃ ಸಹ ॥ ೭೮ ॥
ಶುಭೇ ದೇಶೇ ನಿವೇಶ್ಯಾಽಥ ಕ್ಷೌಮವಸ್ತ್ರಾದಿಭಿ ಸ್ತಥಾ ।
ಪುರಾಣಪುಸ್ತಕಂ ರಾಜನ್ಪ್ರಯತಃ ಶಿಷ್ಟಸಂಮತಃ ॥ ೭೯ ॥
ಅರ್ಚಯೇಚ್ಚ ಯಥಾ ನ್ಯಾಯಂ ಗಂಧಮಾಲ್ಯೈಃ ಪೃಥಕ್ಪೃಥಕ್ ।
ಸಮಾಪ್ತೌ ನೃಪಗ್ರಂಥಸ್ಯ ವಾಚಕಸ್ಯಾಽನುಪೂಜನಂ ॥ ೮೦ ॥
ದಾನಾದಿಭಿರ್ಯಥಾನ್ಯಾಯಂ ಸಂಪೂರ್ಣಫಲಹೇತವೇ ।
ಮುದ್ರಿಕಾಂ ಕುಂಡಲಂ ಚೈವ ಬ್ರಹ್ಮಸೂತ್ರಂ ಹಿರಣ್ಮಯಂ ॥ ೮೧ ॥

---

೭೫. ವ್ಯಾಸನು ಹೇಳುತ್ತಾನೆ:—ಪಾಂಡುತನಯ! ನಿನಗೆ ಈ ಕಥೆಯನ್ನೆಲ್ಲ ಹೇಳಿರುವೆನು. ಮಾನವನು ಇದನ್ನು ಕೇಳಿದರೆ ಸಹಸ್ರಗೋದಾನದ ಫಲವನ್ನು ಪಡೆಯುವನು.

೭೬. ಮಕ್ಕಳಿಲ್ಲದವನು ಮಕ್ಕಳನ್ನೂ, ಧನವಿಲ್ಲದವನು ಧನವನ್ನೂ ಹೊಂದುವನು. ರೋಗಿಯು ರೋಗದಿಂದಲೂ, ಬದ್ಧನಾದವನು ಬಂಧನದಿಂದಲೂ ಮುಕ್ತನಾಗುವನು.

೭೭. ವಿದ್ಯಾರ್ಥಿಯು ಕರ್ಮಸಾಧಕವಾದ ಉತ್ತಮ ವಿದ್ಯೆಯನ್ನು ಪಡೆಯುವನು. ಅಲ್ಲದೆ ಕೇಳಿದ ಮಾನವನು ಕೋಟಿ ಕನ್ಯಾದಾನದ ಫಲವನ್ನು ಹೊಂದುವನು.

೭೮. ಯುಧಿಷ್ಠಿರ! ಗಂಡಸಾಗಲಿ, ಹೆಂಗಸಾಗಲಿ ಈ ಉಪಾಖ್ಯಾನವನ್ನು ಭಕ್ತಿಯಿಂದ ಕೇಳಿದರೆ ಅವರೂ ಅವರ ನೂರೊಂದು ಕುಲದವರೂ ನರಕವನ್ನು ನೋಡುವುದಿಲ್ಲ.

೭೯–೮೨. ನರನು ಶುದ್ಧನೂ, ಶಿಷ್ಟಸಂಮತನೂ ಆಗಿ ಗ್ರಂಥ ಸಮಾಪ್ತಿಯಾದ ಮೇಲೆ ಈ ಪುರಾಣದ ಪುಸ್ತಕವನ್ನು ಒಳ್ಳೆಯ ಸ್ಥಳದಲ್ಲಿ ರೇಷ್ಮೆವಸ್ತ್ರಗಳೊಡನೆ ಇಟ್ಟು ವಿಧಿಯಂತೆ ಗಂಧಮಾಲ್ಯೆಗಳಿಂದ ಪೂಜಿಸಬೇಕು. ಅನಂತರ ಸಂಪೂರ್ಣಫಲದ ಲಾಭಕ್ಕಾಗಿ ಪುರಾಣಿಕನನ್ನು ಗಂಧ, ಮಾಲ್ಯ, ಲೇಪನ

CC-0. Jangamwadi Math Collection. Digitized by eGangotri

ವಸ್ತ್ರಾಣಿ ಚ ವಿಚಿತ್ರಾಣಿ ಗಂಧಮಾಲ್ಯಾನುಲೇಪನೈಃ ।
ದೇವವತ್ಪೂಜನಂ ಕೃತ್ವಾ ಗಾಂಚ ದದ್ಯಾತ್ಪಯಸ್ವಿನೀಂ ॥ ೮೨ ॥
ಏವಂ ವಿಧಾನತಃ ಶ್ರುತ್ವಾ ಧರ್ಮಾರಣ್ಯ ಕಥಾನಕಂ ।
ಧರ್ಮಾರಣ್ಯ ನಿವಾಸಸ್ಯ ಫಲಮಾಪ್ನೋತ್ಯಸಂಶಯಂ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ಪೂರ್ವಭಾಗೇ ಧರ್ಮಾರಣ್ಯಮಾಹಾತ್ಮ್ಯೇ "ಧರ್ಮಾರಣ್ಯ ನಿವಾಸಿ ವ್ಯವಸ್ಥಾಪನ ಪೂರ್ವಕ ಧರ್ಮಾರಣ್ಯ ಪುರಾಣಶ್ರವಣ ಮಾಹಾತ್ಮ್ಯವರ್ಣನಂ"ನಾಮ ಚತ್ವಾರಿಂಶೋಽಧ್ಯಾಯಃ

ಧರ್ಮಾರಣ್ಯಮಾಹಾತ್ಮ್ಯಂ ಸಮಾಪ್ತಂ

---

ವಸ್ತ್ರಗಳಿಂದ ದೇವರಂತೆ ಪೂಜಿಸಿ ಉಂಗುರ, ಕುಂಡಲ, ಚಿನ್ನದ ಜನಿವಾರ, ನಾನಾಬಗೆಯ ಬಟ್ಟೆ, ಹಾಲನ್ನು ಕರೆಯುವ ಹಸು ಇವುಗಳನ್ನು ದಾನಮಾಡಬೇಕು.

೮೩. ಹೀಗೆ ವಿಧಿಯಂತೆ ಧರ್ಮಾರಣ್ಯದ ಕಥೆಯನ್ನು ಕೇಳಿದ ಮನುಷ್ಯನು ನಿಶ್ಚಯವಾಗಿಯೂ ಅಲ್ಲಿ ವಾಸಮಾಡಿದ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಪೂರ್ವಭಾಗದ ಧರ್ಮಾರಣ್ಯ ಮಾಹಾತ್ಮ್ಯದಲ್ಲಿ "ಧರ್ಮಾರಣ್ಯ ಪುರಾಣಶ್ರವಣ ಮಾಹಾತ್ಮ್ಯವರ್ಣನ"ವೆಂಬ ನಲವತ್ತನೆಯ ಅಧ್ಯಾಯವು ಮುಗಿದುದು

ಇಲ್ಲಿಗೆ ಸ್ಕಾಂದಮಹಾಪುರಾಣದಲ್ಲಿ ಮೂರನೆ ಬ್ರಹ್ಮಖಂಡದಲ್ಲಿ ಧರ್ಮಾರಣ್ಯಮಾಹಾತ್ಮ್ಯವು ಮುಗಿದುದು

Acc No - 4729

SRI JAGADGURU VISHWARADHYA JNANA SIMHASAN JNANAMANDIR LIBRARY, Jangamwadi Math, VARANASI, Acc. No. 4729




CC-0. Jangamwadi Math Collection. Digitized by eGangotri

